ಭಾರತ ದರ್ಶನ ಪ್ರಕಾಶನ

# ಶ್ರೀಮದ್ಭಾಗವತ

(ಮೂಲದೊಡನೆ ಸರಳ ಕನ್ನಡಾನುವಾದ)

ಜನ್ಮಾದ್ಯಸ್ಯ ಯತೋಽನ್ವಯಾದಿತರತ-
ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ
ಮುಹ್ಯನ್ತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ
ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ
ಸತ್ಯಂ ಪರಂ ಧೀಮಹಿ ॥

**ಸಂಪುಟ 8**

*ಮುದ್ರಕರು:*
ಭಾರತ ದರ್ಶನ ಮುದ್ರಣಾಲಯ
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು – 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**



**ಸಂಪಾದಕ ಮಂಡಲಿ:**

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ದಯಾಮಯನಾದ ಪರಮಾತ್ಮನ ದಿವ್ಯಾನುಗ್ರಹದಿಂದಲೂ ಹೃತ್ಕಮಲದಲ್ಲಿ ಬೆಳಗುತ್ತಿರುವ ಸದ್ಗುರುವಿನ ದಿವ್ಯಾಶೀರ್ವಾದದಿಂದಲೂ ಸತ್ಪುರುಷರ ಸಹಕಾರ ಸದಾಶಯಗಳಿಂದಲೂ ಶ್ರೀಕೃಷ್ಣನ ದಿವ್ಯಚರಿತ್ರೆಗಳನ್ನೂ ದಿವ್ಯ ಗೀತೆಗಳನ್ನೂ ಒಳಗೊಂಡಿರುವ ಶ್ರೀಮದ್ಭಾಗವತದ ಎಂಟನೆಯ ಸುಂದರ ಪುಷ್ಪವನ್ನು ಜಗದಾನಂದಕಂದನ ದಿವ್ಯಪಾದಾರವಿಂದಗಳಲ್ಲಿ ಸಮರ್ಪಿಸಿ ಪ್ರಸಾದರೂಪವಾದ ಈ ಕುಸುಮವನ್ನು ಪ್ರಿಯಗ್ರಾಹಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಅಧ್ಯಾತ್ಮದ ಸೊಗಡಿನಿಂದ ತುಂಬಿರುವ ಈ ದಿವ್ಯ ಕುಸುಮವನ್ನು ಗ್ರಾಹಕರು ಭಕ್ತಿ-ಶ್ರದ್ಧೆಗಳಿಂದ ಸ್ವೀಕರಿಸಿ ಆಸ್ವಾದಿಸಬೇಕಾಗಿಯೂ ಕೃತಾರ್ಥರಾಗಬೇಕಾಗಿಯೂ ವಿನಂತಿಸುತ್ತೇವೆ.

ಭಾಗವತದ ಕರ್ತೃಗಳಾದ ವೇದವ್ಯಾಸರ ಉದ್ದೇಶ ಅಧ್ಯಾತ್ಮತತ್ತ್ವಗಳನ್ನು ಅರೆದರೆದು ಮಾನವಕೋಟಿಗೆ ಕುಡಿಸುವುದೇ ಆಗಿದೆ. ಭಾಗವತದಲ್ಲಿ ಅದರಲ್ಲಿಯೂ ಹನ್ನೊಂದನೆಯ ಸ್ಕಂಧದಲ್ಲಿ ಅಧ್ಯಾತ್ಮತತ್ತ್ವಗಳು ತುಂಬಿ ತುಳುಕುತ್ತವೆ. ಪ್ರಿಯಗ್ರಾಹಕರು ಭಾಗವತಧರ್ಮಗಳನ್ನು ಮನನಮಾಡಿಕೊಂಡು ಭಾಗವತರಾಗಿ ಬೆಳಗಬೇಕು. ಭವರೋಗಕ್ಕೆ ಭವ ಭಯಹರಣನಾದ ಗೋಪಾಲನ ದಿವ್ಯಪಾದಾರವಿಂದಗಳ ಸೇವನೆಯೇ ಪರಮೌಷಧ.

1972ನೆಯ ವರ್ಷದಲ್ಲಿ ಮಹಾಭಾರತದ ಸಂಪುಟಗಳನ್ನು ಪ್ರಕಾಶಿಸಲು ಪ್ರಾರಂಭಿಸಿದನಂತರ ಇದುವರೆಗೆ ಇಷ್ಟು ತಡವಾಗಿ ಯಾವ ಸಂಪುಟವನ್ನೂ ಹೊರತಂದಿರಲಿಲ್ಲ. ಒಂದು ಸಂಪುಟ ಪ್ರಕಾಶನಕ್ಕೂ ಮತ್ತೊಂದು ಸಂಪುಟದ ಪ್ರಕಾಕಶನಕ್ಕೂ ಅಂತರ ಹಲವಾರು ತಿಂಗಳುಗಳಿರುತ್ತಿದ್ದುವು. ಆದರೆ 7ನೇ ಸಂಪುಟವು 6-12-95ರಲ್ಲಿ ಪ್ರಕಟವಾಗಿದ್ದು ಈ ಎಂಟನೆಯ ಸಂಪುಟವು 22-12-96ರರಲ್ಲಿ ಪ್ರಕಾಶನವಾಗಿದೆ. ಈ ಸಂಪುಟವನ್ನು ಹೊರತರಲು ಒಂದು ವರ್ಷಕ್ಕಿಂತಲೂ ಹೆಚ್ಚು ಅವಧಿಯನ್ನು ತೆಗೆದುಕೊಳ್ಳಲಾಗಿದೆ. ಹೀಗೆ ಮಾಡಿ ನಾವು ಓದುಗರ ಸ್ಥೈರಣೆಯನ್ನು ಪರೀಕ್ಷಿಸಿದಂತಾಗಿದೆ. ಇಷ್ಟು ತಡವಾದುದಕ್ಕಾಗಿ ವಾಚಕರ ಕ್ಷಮೆಯನ್ನು ಹಲವಾರುಬಾರಿ ಯಾಚಿಸುತ್ತೇವೆ. ತಡವಾದುದಕ್ಕೆ ನಿರ್ದಿಷ್ಟವಾದ ಕಾರಣವನ್ನು ಸೂಚಿಸಲು ಸಾಧ್ಯವಿಲ್ಲ. ಕೆಲವು ಸಮಯಗಳಲ್ಲಿ ಅತಿಕ್ಷುಲ್ಲಕವಾದ ಕಾರಣಗಳೂ ಸಾವಕಾಶಕ್ಕೆ ಕಾರಣಗಳಾಗುತ್ತಿದ್ದುವು. ಬೇಗ ಹೊರತರಬೇಕೆಂಬುದರ ಕಾತರತೆ ನಮಗೂ

ಇದ್ದಿತು. ಆದರೂ ದೈವೇಚ್ಛೆ ಸಾವಕಾಶವಾಗಬೇಕೆಂದಿದ್ದಿತು. ಅವನ ಇಚ್ಛೆಯಂತೆ ಈ ಬಾರಿ ಸ್ವಲ್ಪ ಸಾವಕಾಶವಾಗಿ ಹೊರಬಂದಿದೆ. ಈ ಬಗೆಯಾಗಿ ಗ್ರಾಹಕರು ಭಾವಿಸಬೇಕಾಗಿ ವಿನಂತಿಸುತ್ತೇವೆ.

ಈ ಸಂಪುಟದಲ್ಲಿ ಹತ್ತನೆಯ ಸ್ಕಂಧವು ಮುಗಿದು ಹನ್ನೊಂದನೆಯ ಸ್ಕಂಧದಲ್ಲಿ ಹದಿನೇಳು ಅಧ್ಯಾಯಗಳು ಮುಗಿದಿವೆ. ಹನ್ನೊಂದನೆಯ ಸ್ಕಂಧ ದಲ್ಲಿ ಹದಿನಾಲ್ಕು ಅಧ್ಯಾಯಗಳೂ ಹನ್ನೆರಡನೆಯ ಸ್ಕಂಧದಲ್ಲಿ ಹದಿಮೂರು ಅಧ್ಯಾಯಗಳು ಉಳಿದಿದ್ದು ಒಂಬತ್ತನೆಯ ಸಂಪುಟದಲ್ಲಿ ಭಾಗವತವು ಮುಗಿಯುತ್ತದೆ. ಹತ್ತನೆಯ ಸಂಪುಟಕ್ಕೆ ಬದಲಾಗಿ ಗ್ರಾಹಕರೆಲ್ಲರಿಗೂ ಶ್ರೀಮದ್ಭಾಗವತ ಮಹಾಮಂಗಳ ಮಹೋತ್ಸವದಲ್ಲಿ ಹೊರತರಲಿರುವ ಶ್ರೀಕೃಷ್ಣಾಂಕವನ್ನು ಕೊಡಲು ನಿಶ್ಚಯಿಸಲಾಗಿದೆ.

1997ನೆಯ ಮೇ ತಿಂಗಳ ಮೊದಲನೆಯ ವಾರದಲ್ಲಿ ಶ್ರೀಮದ್ಭಾಗವತ ಮಹಾಮಂಗಳಮಹೋತ್ಸವವನ್ನು ನಡೆಸಲು ಸತ್ಸಂಕಲ್ಪಮಾಡಲಾಗಿದೆ. ಭಗವಂತನ ದಯೆಯಿಂದ ಸಂಪನ್ನವಾಗಬೇಕು. ಹಿಂದಿನಂತೆಯೇ ವೇದ ಪಾರಾಯಣ, ರಾಮಾಯಣಪಾರಾಯಣ, ಮಹಾಭಾರತಪಾರಾಯಣ, ಭಾಗವತಪಾರಾಯಣ, ಹರಿವಂಶಪಾರಾಯಣ, ಅಖಂಡ ಹರೇರಾಮ ಮಂತ್ರಜಪ, ಅಖಂಡ ವಿಷ್ಣುಸಹಸ್ರನಾಮ ಪಾರಾಯಣ ಇದಕ್ಕೆ ಸಂಬಂಧಿ ಸಿದಂತೆ ನವಗ್ರಹಪುರಸ್ಸರ ವಿಷ್ಣುಸಹಸ್ರನಾಮ-ಹರೇರಾಮ ಮಂತ್ರ ಹೋಮಗಳು, ಭಜನೆಗಳು, ಭಾಗವತಪ್ರವಚನ, ಸಮಾರಾಧನೆ–ಇತ್ಯಾದಿ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಲಾಗುವುದು. ನಮ್ಮ ಪ್ರಿಯಗ್ರಾಹಕರು ಈ ಮಹೋತ್ಸವವು ವಿಜೃಂಭಣೆಯಿಂದ ನಡೆಯುವಂತೆ ಸಹಕರಿಸ ಬೇಕು. ಮಹೋತ್ಸವವು ತಮ್ಮದೆಂದೇ ಭಾವಿಸಿಕೊಳ್ಳಬೇಕು. ಮೂರು ಗ್ರಂಥರತ್ನಗಳೂ ಕನ್ನಡ ಬಾಂಧವರಿಗೆ ಸುಲಭವಾಗಿ ದೊರೆಯಲು ಅನುಗ್ರಹಿ ಸಿದ ದಯಾಮಯನಾದ ಪರಮಾತ್ಮನಿಗೆ ಕೃತಜ್ಞತೆಯನ್ನು ಸಮರ್ಪಿಸಲು ಆಚರಿಸುತ್ತಿರುವ ಈ ಭವ್ಯಸಮಾರಂಭವು ಯಶಸ್ವಿಯಾಗಿ ನಡೆಯುವಂತೆ ಶರೀರ, ಮಾತು ಮತ್ತು ಮನಸ್ಸುಗಳಿಂದ ಗ್ರಾಹಕರೆಲ್ಲರೂ ಶ್ರಮಿಸಬೇಕು. ಗ್ರಾಹಕರೆಲ್ಲರೂ ತಮಗೆ ಸಾಧ್ಯವಾಗುವ ಸೇವೆಯಾವುದೆಂಬುದನ್ನು ಕಾರ್ಯಾಲಯಕ್ಕೆ ತಿಳಿಸಬೇಕು. ಯಾವುದಾದರೂ ರೂಪದಲ್ಲಿ ಗ್ರಾಹಕರು ಈ ಉತ್ಸವದಲ್ಲಿ ಅವಶ್ಯವಾಗಿ ಪಾಲ್ಗೊಳ್ಳಬೇಕು. ಇದು ಶ್ರೇಯಸ್ಕರ.

ಭಾಗವತಸಪ್ತಾಹಕಾರ್ಯಕ್ರಮವನ್ನು ವಿಧಿವತ್ತಾಗಿ ಆಚರಿಸುವ ಆಶಯವಿದೆ. ಇದಕ್ಕೂ ಗ್ರಾಹಕರ ಸಹಕಾರ ಅಗತ್ಯವಾಗಿ ಬೇಕಾಗುತ್ತದೆ.

ಏಳನೆಯ ಸಂಪುಟವು ಪ್ರಕಾಶನವಾದನಂತರ ಪುನರ್ಮುದ್ರಣ ಕಾರ್ಯವು ಸಮರ್ಪಕವಾಗಿಯೇ ನಡೆದಿದೆಯೆಂದು ಹೇಳಬಹುದು.

ಮಹಾಭಾರತದ 23 ಮತ್ತು 2ನೆಯ ಸಂಪುಟಗಳು ರಾಮಾಯಣದ ೮ನೆಯ ಸಂಪುಟವೂ ಭಾಗವತದ 2ನೆಯ ಸಂಪುಟವೂ ಪುನರ್ಮುದ್ರಣ ವಾದುವು. ಆದರೂ ಪುನರ್ಮುದ್ರಣವಾಗಬೇಕಾದ ಸಂಪುಟಗಳ ಸಂಖ್ಯೆಯು ಹೆಚ್ಚುತ್ತಲೇ ಇದೆ. ಮಹಾಭಾರತ 22, ರಾಮಾಯಣ 4, ಭಾಗವತ 2 ಒಟ್ಟು 26 ಸಂಪುಟಗಳ ಪುನರ್ಮುದ್ರಣವಾಗಬೇಕಾಗಿದೆ. ಹಿಂದಿನ ಸಂಪುಟದಲ್ಲಿ ತಿಳಿಸಿದ್ದಂತೆ ಭಾಗವತ ಮಹಾಮಂಗಳವಾದನಂತರ ನಾಲ್ಕಾರು ವರ್ಷಗಳು ಪುನರ್ಮುದ್ರಣವನ್ನೇ ಮಾಡಲಾಗುವುದು. ಎಲ್ಲವೂ ಪರಮಾತ್ಮನ ದಯೆ ಮತ್ತು ಸತ್ಪುರುಷರ ಸಹಕಾರಗಳಿಂದ ನಡೆಯ ಬೇಕಾಗಿದೆ.

## ಶ್ರೀಮದ್ಭಾಗವತದ ಏಳನೆಯ ಸಂಪುಟ ಪ್ರಕಾಶನ ಸಮಾರಂಭದ ವರದಿ

ಶ್ರೀಮದ್ಭಾಗವತದ 7ನೇ ಸಂಪುಟದ ಪ್ರಕಾಶನದ ಸಮಾರಂಭವು ಶ್ರೀಯುವ ಸಂವತ್ಸರದ ಮಾರ್ಗಶೀರ್ಷ ಹುಣ್ಣಿಮೆಯ (6-12-95) ದಿನ ದಂದು ಪ್ರದೋಷಕಾಲದಲ್ಲಿ ನಗರದ ಶ್ರೀ ನರಸಿಂಹರಾಜಾ ಕಾಲೋನಿಯ ಶ್ರೀರಾಮ ಮಂದಿರದಲ್ಲಿ ನಡೆಯಿತು. ವೇದಘೋಷವಾದ ಬಳಿಕ ಶ್ರೀಮತೀ ಎಸ್. ಎನ್. ಸುಶೀಲಾರವರು ಸ್ವಾಗತ ಪದ್ಯಮಾಲಿಕೆಯನ್ನು ವಾಚಿಸಿದರು.

## ಬೆಳದಿಂಗಳಿನಂತಿರುವ ಭಾರತ ದರ್ಶನ

ಅನಂತರ ಸ್ವಾಗತ ಹಾಗೂ ಪ್ರಾಸ್ತಾವಿಕಭಾಷಣ ಮಾಡಿದ ಭಾರತ ದರ್ಶನದ ಸಂಚಾಲಕ ತುರುವೇಕೆರೆ ಶ್ರೀ ಪ್ರಭಾಕರರವರು ಈ ಪ್ರಕಾಶನ ಸಂಸ್ಥೆಯ ಸಾರಸ್ವತ ತಪಸ್ಸಿನಿಂದಾಗಿ ಇಂದು 50ನೆಯ ಸಂಪುಟವು ಪ್ರಕಾಶನ ಗೊಳ್ಳುತ್ತಿರುವುದು ಹೆಮ್ಮೆಯ ವಿಷಯ. ಕಳೆದ 38 ವರ್ಷಗಳಿಂದ ಭಾರತ ದರ್ಶನವು ಹುಣ್ಣಿಮೆಯ ಬೆಳದಿಂಗಳಿನಂತೆ ಜನರಿಗೆ ಜೀವನದ ಬೆಳಕನ್ನು ನೀಡುತ್ತಿದ್ದು 1996ರ ಕೊನೆಯಲ್ಲಿ ಮಹಾಮಂಗಳ ಮಹೋತ್ಸವವನ್ನು ನಡೆಸಲು ಭಗವಂತನ ಪ್ರೇರಣೆಯಾಗಿದೆ–ಎಂದು ನುಡಿದು ಈ ಸಂಪುಟಗಳು

ಎಲ್ಲ ಕನ್ನಡಿಗರ ಮನೆಯಲ್ಲಿ ನೆಲೆಗೊಳ್ಳುವಂತೆ ಹಾಗೂ ಮಹಾಮಂಗಳವು ಯಶಸ್ವಿಯಾಗಿ ನಡೆಯಲು ಎಲ್ಲರೂ ಶಕ್ತಿಮೀರಿ ಪ್ರಯತ್ನಿಸಬೇಕೆಂದು ಸಭಾಸದರಲ್ಲಿ ಮನವಿಮಾಡಿದರು.

ಅನಂತರ ವೇದಘೋಷ ಹಾಗೂ ನಾಗಸ್ವರದ ಮಂಗಳವಾದ್ಯ ಘೋಷದ ಮಧ್ಯೆ ರಾಜರ್ಷಿ, ಧರ್ಮಸ್ಥಳದ-ಧರ್ಮಾಧಿಕಾರಿ ಶ್ರೀವೀರೇಂದ್ರ ಹೆಗ್ಗಡೆಯವರು ಭಾಗವತ ಸರಸ್ವತಿಯನ್ನು ಅರ್ಚಿಸಿ ಆರತಿ ಗೈದು 7ನೆಯ ಸಂಪುಟದ ಪ್ರಕಾಶನವನ್ನು ನೆರವೇರಿಸಿದರು. ಆ ಸುಮುಹೂರ್ತವನ್ನು ಇಡೀ ಸಭೆಯು ಪ್ರಚಂಡ ಕರತಾಡನದೊಂದಿಗೆ ಸ್ವಾಗತಿಸಿತು. ಶ್ರೀ ಶ್ರೀ ಶೇಷಮಹಾಗಣಪತಿ ಮಹಿಳಾಸಂಘದ ಸದಸ್ಯರಿಂದ ಭ್ರಮರಗೀತೆಯ ಸುಶ್ರಾವ್ಯ ವಾಚನವು ನಡೆಯಿತು.

## ಮಾಧ್ಯಮಗಳಿಂದ ಮಹಾಹಾನಿ

ಅನಂತರ ಸಭೆಯನ್ನು ಉದ್ದೇಶಿಸಿ ಮಾತನಾಡಿದ ಡಾ|| ವೀರೇಂದ್ರ ಹೆಗ್ಗಡೆಯವರು–"ಇಂದು ದೂರದರ್ಶನ, ಆಕಾಶವಾಣಿ, ಪತ್ರಿಕೆಗಳು ಮೊದಲಾದ ಮಾಧ್ಯಮಗಳು ಕೃತಕಜೀವನವನ್ನೇ ಬಹಳವಾಗಿ ಪ್ರತಿಬಿಂಬಿಸುತ್ತಿವೆ. ಇದರಿಂದ ಭಾರತೀಯಸಮಾಜಕ್ಕೆ ಮಹಾಹಾನಿಯಾಗಿದೆ. ಇಂತಹ ಹಿನ್ನೆಲೆಯಲ್ಲಿ ಭಾರತ ದರ್ಶನದಂಥ ಸಂಸ್ಥೆಗಳ ಕಾರ್ಯವು ಇನ್ನಷ್ಟು ಬೆಳೆಯಬೇಕು. ಭಾರತದಂತಹ ದೇಶದ ಸಾಧನೆಯನ್ನು ಕೇವಲ ಆರ್ಥಿಕ ಪ್ರಗತಿ ಹಾಗೂ ವಿದೇಶೀ ಬಂಡವಾಳದ ಮೂಲವನ್ನು ಮಾತ್ರ ಆಧರಿಸಿ ಅಳೆಯುವುದು ಸಾಧುವಲ್ಲ"–ಎಂದು ಅವರು ಹೇಳಿದರು. "ನಾವಿಂದು ಸ್ವಂತಿಕೆಗೆ ಹೊಂದದ ವ್ಯವಸ್ಥೆಯನ್ನು ಆಶ್ರಯಿಸಿರುವುದರಿಂದ ನಮ್ಮ ದೇಶದ ಸಮಸ್ಯೆಗಳು ಉಲ್ಬಣಗೊಳ್ಳುತ್ತಿದೆ. ಇದನ್ನು ಗಮನಿಸಿದಾಗ ಭಾಗವತದ ಗ್ರಂಥವು ಅಂದಿಗೂ, ಇಂದಿಗೂ, ಎಂದೆಂದಿಗೂ ಸಲ್ಲು ವಂಥದ್ದು"–ಎಂದು ಅವರು ನುಡಿದರು.

## ಮನು–ಚಾಣಕ್ಯರ ಸ್ಮರಣೆ

"ಮನು-ಚಾಣಕ್ಯ ಮೊದಲಾದವರು ಬರೆದಿರುವ ಗ್ರಂಥಗಳಲ್ಲಿ ನಮ್ಮ ದೇಶಕ್ಕೆ ಹೊಂದುವ ಆಡಳಿತ ವ್ಯವಸ್ಥೆಯ ಬಗ್ಗೆ ಉತ್ತಮ ವಿಚಾರಧಾರೆಯಿದೆ. ರಾಮಾಯಣ-ಮಹಾಭಾರತಗಳಲ್ಲೂ ಇಂತಹ ಸಂದೇಶಗಳು ಹೇರಳ

ವಾಗಿವೆ. ಅವುಗಳ ಪ್ರಾಮಾಣಿಕ ಅಧ್ಯಯನ ಅನುಷ್ಠಾನಕ್ಕಾಗಿ ಪ್ರಯತ್ನಗಳು ನಡೆಯುವಂತಹ ದಿನಗಳು ಇನ್ನು ಮುಂದಾದರೂ ಬರಬೇಕು. ಧರ್ಮವೆಂಬುದು ಎಲ್ಲ ಕ್ಷೇತ್ರದಲ್ಲಿಯೂ ಇರಬೇಕು. ರಾಜಕೀಯದಲ್ಲೂ ಧರ್ಮವಿರಬೇಕು. ಆದರೆ ಧರ್ಮದಲ್ಲಿ ರಾಜಕೀಯ ಇರಬಾರದು. ಇಂದಿನ ರಾಜಕೀಯವು ಧರ್ಮರಹಿತವಾಗಿರುವುದರಿಂದಲೇ ಸ್ವೇಚ್ಛಾಪ್ರವೃತ್ತಿಯು ತಲೆದೋರಿ ಸ್ವಾರ್ಥವು ಎಲ್ಲೆಡೆ ವ್ಯಾಪಿಸಿದೆ. ಇದರ ಬಗ್ಗೆ ಜನರು ನಮ್ಮ ರಾಷ್ಟ್ರೀಯ ಮಹಾಕಾವ್ಯಗಳ ಸಂದೇಶದ ಹಿನ್ನೆಲೆಯಲ್ಲಿ ಜಾಗೃತರಾಗಬೇಕು" ಎಂದರು.

## ಜನರ ಆಸಕ್ತಿಯೇ ಶುಭಲಕ್ಷಣ

"ಭಾರತದ ಪ್ರಾಚೀನ ಧರ್ಮಗ್ರಂಥಗಳ ಹಿಂದಿ ಅನುವಾದವು ಉತ್ತರ ಭಾರತದಲ್ಲಿ ಯೋಜಿತವಾಗಿ ನಡೆದಿದೆ ಕೋಟ್ಯಾಂತರ ಜನರು ಇದರಲ್ಲಿ ಆಸಕ್ತಿ ತೋರಿಸಿದ್ದಾರೆ. ಧನಿಕರು ಇಂತಹ ಕೆಲಸವನ್ನು ಅಲ್ಲಿ ಬಹಳವಾಗಿ ಬೆಂಬಲಿಸಿದ್ದಾರೆ. ಆದರೆ ಇಂತಹ ಸುಸ್ಥಿತಿಯು ಕನ್ನಡನಾಡಿನಲ್ಲಿ ಅಷ್ಟಾಗಿ ಇಲ್ಲದ್ದು ಶೋಚನೀಯ. ಆದರೂ ಕೂಡ ವಾಮನರೂಪದ ಭಾರತ ದರ್ಶನವು ತ್ರಿವಿಕ್ರಮ ಹೆಜ್ಜೆಯಿಟ್ಟಿರುವುದು ಅತ್ಯಂತ ಮೆಚ್ಚುಗೆಯ ವಿಷಯ ವಾಗಿದೆ. ಇಲ್ಲಿನ ಸಂಪುಟಗಳು ಮೂರು-ನಾಲ್ಕನೆಯ ಪುನರ್ಮುದ್ರಣವನ್ನು ಕಂಡಿವೆ ಎಂಬುದೂ, ಹತ್ತಾರು ಸಾವಿರ ಮಂದಿ ಗ್ರಾಹಕರು ಈ ಸಂಪುಟ ಗಳನ್ನು ಪಡೆಯಲು ಚಾತಕಪಕ್ಷಿಗಳಂತೆ ನಿರೀಕ್ಷಿಸುತ್ತಿರುವುದೂ ಶುಭ ಲಕ್ಷಣ"–ಎಂದೂ ತಿಳಿಸಿದರು.

ಸಂಪುಟವನ್ನು ಪರಿಚಯಿಸಿ ಅನುಗ್ರಹಭಾಷಣ ಮಾಡಿದ ಭಾರತ ದರ್ಶನ ಪ್ರಕಾಶನದ ಅಧ್ಯಕ್ಷರಾದ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕ ಸ್ವಾಮಿಗಳವರು ಹೀಗೆ ಅನುಗ್ರಹಿಸಿದರು : "ಬೇರೆ ಬೇರೆ ದಿಕ್ಕುಗಳಿಂದ ಹರಿದುಬರುವ ಅಮೃತಧಾರೆಗೆ ಸಮಾನವಾದ ನದಿಗಳೆಲ್ಲ ಸೇರಿ ಹೇಗೆ ಮಹಾಸಮುದ್ರವಾಗಿದೆಯೋ ಹಾಗೆಯೇ ಈ ಏಳನೆಯ ಸಂಪುಟವು ಅಮೃತ ಧಾರೆಗೆ ಸಮಾನವಾಗಿದೆ. ಶ್ರೀಕೃಷ್ಣನು ಮಾಡಿದ ಸಜ್ಜನರ ಉದ್ಧಾರ, ದುಷ್ಟ ಶಕ್ತಿಗಳ ಸಂಹಾರದ ಬಗ್ಗೆ ಕಥಾನಕಗಳಿವೆ. ವಿಶೇಷವಾಗಿ ನಾವು ಆಚರಿಸುವ ನೈಮಿತ್ತಿಕ ವ್ರತಗಳಿಗೆ ಸಂಬಂಧಿಸಿದಂತೆ ವಿವರಣೆಗಳಿವೆ. ಅಪವಾದವೆಂಬುದು

ಭಗವಂತನಿಗೂ ತಪ್ಪಿದ್ದಲ್ಲ. ಆದರೆ ಅಂತರಂಗಶುದ್ಧಿಯಿಂದ ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ಮಾಡಬೇಕು.

## ಶ್ರೇಷ್ಠವ್ಯಕ್ತಿ ಯಾರು?

ಅನಸೂಯಾ, ಕ್ಷಮಾ, ದಯಾ, ಶುಚಿತ್ವ, ಅನಾಯಾಸ, ಅಸ್ಪೃಹ, ತಪಸ್ಸು, ಮಾಂಗಲ್ಯ ಎಂಬ ಎಂಟು ಗುಣಗಳು ಯಾರಲ್ಲಿರುತ್ತವೆಯೋ ಅಂತಹವನು ಯಾವುದೇ ಜಾತಿ-ವಂಶದಲ್ಲಿ ಹುಟ್ಟಿದ್ದರೂ ರತ್ನದಂತೆ ಶ್ರೇಷ್ಠ ವ್ಯಕ್ತಿ. ಶ್ರೀಕೃಷ್ಣನು ಈ ಅಷ್ಟ ಸದ್ಗುಣಗಳಿಂದ ಭೂಷಿತನಾಗಿದ್ದುದರಿಂದಲೇ ಅವನು ವಿಶ್ವವಂದ್ಯ. ಅವನಿಗೇ ಅಗ್ರಪೂಜೆ ಎಂಬುದು ವೇದವ್ಯಾಸರ ಸಂದೇಶವಾಗಿದೆ" ಎಂದು ಶ್ರೀ ಶ್ರೀಗಳವರು ತಿಳಿಸಿದರು.

ತೀರ್ಥಹಳ್ಳಿಯ ಶ್ರೀರಾಮಚಂದ್ರಾಪುರಮಠದ ಶ್ರೀಮಜ್ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀ ಶ್ರೀಮದ್ರಾಘವೇಂದ್ರಭಾರತೀ ಸ್ವಾಮಿಗಳವರು ದಯಪಾಲಿಸಿದ ಸುವರ್ಣಮಂತ್ರಾಕ್ಷತೆಯನ್ನು ಪೂಜ್ಯ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕರು ಸಂಪಾದಕ ಮಂಡಲಿಯ ವಿದ್ವಾಂಸರಿಗೆ ಅನುಗ್ರಹಿಸಿದರು. ಶ್ರೀ ಟಿ. ಎನ್. ಪ್ರಭಾಕರರವರು ವಂದನಾರ್ಪಣೆಮಾಡಿದರು. ಶ್ರೀ ಕೆ. ಎಸ್. ಕೌಶಿಕರು ಕಾರ್ಯಕ್ರಮದ ನಿರ್ವಾಹಕರಾಗಿದ್ದರು.

ಶಾಂತಿಪಾಠದೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು.

ಈ ಸಂಪುಟಕ್ಕೆ ಭಾರತ ದರ್ಶನ ಪ್ರಕಾಶನದ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕ ಸ್ವಾಮಿಗಳವರು ಮುನ್ನುಡಿ ಯನ್ನು ಬರೆದುಕೊಟ್ಟು ಉಪಕರಿಸಿರುತ್ತಾರೆ. ಇವರ ನೇತೃತ್ವದಲ್ಲಿ ಸಂಪಾದಕ ಮಂಡಲಿಯ ವಿದ್ವಾಂಸರು ಶ್ರಮವಹಿಸಿ, ಸಂಪುಟವನ್ನು ಸಂಪಾದಿಸಿಕೊಡುತ್ತಿದ್ದಾರೆ. ನಿಸ್ಪೃಹತೆಯಿಂದ ಭಗವಂತನ ಪ್ರೀತಿಗಾಗಿ ಕಾರ್ಯ ಮಾಡುತ್ತಿರುವ ಪರಮದಯಾಳುಗಳಾದ ಈ ಎಲ್ಲ ವಿದ್ವಾಂಸರಿಗೂ ಹೃತ್ಪೂರ್ವಕವಂದನೆಗಳು.

ಈ ಗ್ರಂಥತ್ರಯಗಳ ಪ್ರಚಾರಕ್ಕಾಗಿ ತೆರೆಯ ಮರೆಯಲ್ಲಿ ಶ್ರಮಿಸುತ್ತಿರುವ ನೂರಾರು ಕಾರ್ಯಕರ್ತರಿಗೂ ಅನಂತಾನಂತವಂದನೆಗಳು.

ಈ ಮಹನೀಯರುಗಳೆಲ್ಲರಿಗೂ ದಯಾಮಯನಾದ ಪರಮಾತ್ಮನು ತನ್ನ ದಿವ್ಯಪಾದಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸಲೆಂದು ಏಕಾಗ್ರವಾದ ಮನಸ್ಸಿನಿಂದ ಪ್ರಾರ್ಥಿಸುತ್ತೇವೆ. —ಪ್ರಕಾಶಕರು.

## ಎರಡನೆಯ ಪುನರ್ಮುದ್ರಣ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ ಶ್ರೀಗುರುಭಗವಂತನ ದಿವ್ಯಾಶೀರ್ವಾದದಿಂದಲೂ ಸಜ್ಜನರ ಸಹಕಾರ ಸದಾಶಯಗಳಿಂದಲೂ ಎಂಟನೆಯ ಸಂಪುಟದ ಎರಡನೆಯ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಏಳಟನೆಯ ಸಂಪುಟದವರೆಗೂ 5 ಸಾವಿರ ಪ್ರತಿಗಳನ್ನು ಛಾಪಿಸುತ್ತಿದ್ದ ನಾವು ಎಂಟನೆಯ ಸಂಪುಟದಿಂದ 6 ಸಾವಿರ ಪ್ರತಿಗಳನ್ನು ಛಾಪಿಸಲು ಪ್ರಾರಂಭಿಸಿದೆವು. 8-9ನೇ ಸಂಪುಟಗಳನ್ನು ತಲಾ 6 ಸಾವಿರ ಪ್ರತಿಗಳಂತೆ ಛಾಪಿಸಲಾಯಿತು. ಆದರೆ ಕಳೆದವರ್ಷ ದಾಸ್ತಾನಿನ ಲೆಕ್ಕ ತೆಗೆದುಕೊಂಡಾಗ ಸುಮಾರು 300-400 ಪ್ರತಿಗಳು ಗೈರು ವಿಲೆವಾದಂತೆ ಕಂಡುಬಂದಿತು. ಈ ಕಾರಣದಿಂದಾಗಿ 8ನೆಯ ಸಂಪುಟವು 9ನೆಯ ಸಂಪುಟದಿಂದ ಬಹಳ ಬೇಗ ಮುಗಿದುಹೋಯಿತು.

ಈಗ ಆ ಎಂಟನೆಯ ಸಂಪುಟವನ್ನು ಪುನರ್ಮುದ್ರಣ ಮಾಡಲಾಗಿದೆ. ಜೊತೆಗೆ ಒಂದನೆಯ ಸಂಪುಟದ ಮೂರನೆಯ ಮುದ್ರಣವನ್ನೂ ಮುಗಿಸಲಾಗಿದೆ. ಈಗ ತಾನೇ ಮುಗಿದು ಹೋಗಿರುವ 9ನೆಯ ಸಂಪುಟವನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಲಾಗಿದೆ. ರಾಮಾಯಣ-ಭಾಗವತಗಳ ಸೆಟ್ಟುಗಳಾದರೂ ಅನವರತವಾಗಿ ಗ್ರಾಹಕರಿಗೆ ಸಿಕ್ಕುವಂತೆ ಮಾಡಬೇಕೆಂದು ಪ್ರಯತ್ನಿಸುತ್ತಿದ್ದೇವೆ. ಭಗವಂತನ ದಯೆಯಿಂದಲೂ ಮತ್ತು ಗೌ|| ಪ್ರತಿನಿಧಿಗಳ ಸಹಕಾರದಿಂದಲೂ ಕಾರ್ಯವು ನಡೆಯಬೇಕಾಗಿದೆ. ರಾಮಾಯಣ ವಿಭಾಗದಲ್ಲಿ ಮುಗಿದುಹೋಗಿರುವ 11ನೆಯ ಸಂಪುಟವು ಶೀಘ್ರದಲ್ಲೇ ಪುನರ್ಮುದ್ರಣವಾಗಲಿದೆ. ಶ್ರೀಮನ್ಮಹಾಭಾರತದ 32 ಸಂಪುಟಗಳನ್ನೂ ಒಟ್ಟಾಗಿ ಗ್ರಾಹಕರಿಗೆ ತಲುಪಿಸುವ ಸಲುವಾಗಿ ಮಹಾಭಾರತದ ಪುನರ್ಮುದ್ರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. ಸಾಮಾನ್ಯವಾಗಿ ತಿಂಗಳಿಗೆ ಒಂದು ಸಂಪುಟವನ್ನಾದರೂ ಹೊರತರಲು ಪ್ರಯತ್ನಿಸಲಾಗಿದೆ. ಭಗವಂತನ ಕೃಪೆಯಿಂದ ಆಗಬೇಕು.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸಮಸ್ತಸನ್ಮಙ್ಗಲಾನಿ ಭವನ್ತು

—ಪ್ರಕಾಶಕರು.

|| ಶ್ರೀರಂಗಸದ್ಗುರವೇ ನಮಃ ||

# ಮುನ್ನುಡಿ

ಶ್ರೀಮದ್ಭಾಗವತಮಹಾಪುರಾಣದ ಏಕಾದಶಸ್ಕಂಧದಲ್ಲಿ ಮೊದಲನೆಯ ಹದಿನೇಳು ಅಧ್ಯಾಯಗಳಿಂದ ಅಲಂಕೃತವಾಗಿರುವ ಈ ಗ್ರಂಥಸಂಪುಟಕ್ಕೆ "ಸ ತ್ವಂ ಸಾಕ್ಷಾತ್ ವಿಷ್ಣುರಧ್ಯಾತ್ಮದೀಪಃ" ಎಂಬುದಾಗಿಯೂ "ಪೂರ್ವೇಷಾಮಪಿ ಸ ಗುರುಃ ಕಾಲೇನಾನವಚ್ಛೇದಾತ್" ಎಂಬುದಾಗಿಯೂ, ಶ್ರೀವ್ಯಾಸ-ಪತಂಜಲಿಮುನೀಂದ್ರರಿಂದ ಸಂಸ್ತುತನಾಗಿರುವ ಅಧ್ಯಾತ್ಮದೀಪ-ಆದಿಗುರು ಶ್ರೀಕೃಷ್ಣಪರಮಾತ್ಮನ ಅನುಗ್ರಹ-ಆಶೀರ್ವಾದಗಳನ್ನು ಪ್ರಾರ್ಥಿಸುತ್ತೇವೆ. ಮಹಾಪುರಾಣದ ಹತ್ತನೆಯ ಸ್ಕಂಧವು ಶ್ರೀಕೃಷ್ಣನ ದಿವ್ಯಲೀಲೆಗಳ ವರ್ಣನೆಗೆ ಮೀಸಲಾಗಿ ಅಗ್ರಸ್ಥಾನವನ್ನು ಪಡೆ ದಿರುವಂತೆ ಈ ಹನ್ನೊಂದನೆಯ ಸ್ಕಂಧವು 'ಅಧ್ಯಾತ್ಮವಿದ್ಯಾ ವಿದ್ಯಾನಾಂ' ಎಂದು ಶ್ರೀಭಗವಂತನೇ ಗೀತೆಯಲ್ಲಿ ಕೊಂಡಾಡಿರುವಂತೆ ವಿದ್ಯೆಗಳಿಗೆ ಮೂಲವಾಗಿ ಮೂರ್ಧನ್ಯಮಹಾವಿಭೂತಿಯಾಗಿರುವ ಅಧ್ಯಾತ್ಮವಿಚಾರದ ಹೂರಣವೇ ಇದರ ಬಹುಭಾಗವನ್ನು ತುಂಬಿಕೊಂಡಿದೆ. ಇದರೊಡನೆ ಅದನ್ನು ಬೋಧಿಸುವವನು ಜಗದ್ಗುರುವಾದ ಶ್ರೀವಾಸುದೇವನೇ ಆಗಿರುವ ವಿಷಯವಂತೂ ಗ್ರಂಥದ ಮಹಿಮೆಯನ್ನು ಪರಿಪೂರ್ಣತೆಯ ಮಟ್ಟಕ್ಕೇ ಏರಿಸಿದೆ. ಕಥಾಭಾಗವಾದ ಯದುವಂಶವಿನಾಶಪ್ರಕರಣವೂ ಭಗವಂತನ ನಿಸ್ಸಮವಾದ ಸಮತ್ವಬುದ್ಧಿಯನ್ನೂ ಅವ್ಯಾಹತವಾದ ಸಂಕಲ್ಪಶಕ್ತಿ

ಯನ್ನೂ ತೋರಿಸಿಕೊಡುತ್ತಾ ಆತನ ಮಹಿಮೆಯ ಮಹೋದಧಿಯಲ್ಲೇ ನಮಗೆ ಅವಗಾಹನೆಮಾಡಿಸುತ್ತದೆ.

"ಯಾದವರು ವಿಪ್ರಶಾಪದಿಂದ ಪರಸ್ಪರ ಕಲಹವಾಡಿ ವಿನಾಶಕ್ಕೆ ತುತ್ತಾದರು"–ಎಂದು ಶುಕಮುನಿಗಳು ಹೇಳಿದಾಗ, "ಇದು ಹೇಗೆ ಸಾಧ್ಯ? ಯಾದವರು ಗುರು-ದೇವತಾಭಕ್ತರು. ಪರಮೋದಾರಿಗಳು. ಅದ್ಭುತವಾದ ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿಗಳಿಂದ ಸಂಪನ್ನರಾಗಿದ್ದವರು. ಎಣೆಯಿಲ್ಲದ ಪರಾಕ್ರಮವುಳ್ಳವರು ಮತ್ತು ಎಲ್ಲಕ್ಕೂ ಮೇಲಾಗಿ ಶ್ರೀಕೃಷ್ಣ ಪರಮಾತ್ಮನನ್ನೇ ಆಶ್ರಯಿಸಿ ಏಕಾತ್ಮತೆಯನ್ನು ಹೊಂದಿದ್ದವರು. ಇಂತಹವ ರಿಂದ ವಿಪ್ರಾಪಚಾರ ಹೇಗೆ ಒದಗಿತು? ಇತರರ ಆಕ್ರಮಣವಾಗಲೀ, ಒಳ ಜಗಳವಾಗಲೀ ಅಥವಾ ಇತರ ಯಾವುದೇ ಕಾರಣವಾಗಲೀ ಇವರಿಗೆ ವಿನಾಶ ವನ್ನು ತರಲು ಹೇಗೆ ಶಕ್ಯವಾಯಿತು?"–ಎಂದು ನಮಗೆ ಏಳುವ ಪ್ರಶ್ನೆ ಯನ್ನೇ ಪರೀಕ್ಷಿದ್ರಾಜನು ಶುಕಮುನಿಗಳಲ್ಲಿ ಅರಿಕೆಮಾಡಿಕೊಳ್ಳುತ್ತಾನೆ. ಅದಕ್ಕೆ ಮಹಾಮುನಿಗಳು "ಮಹಾರಾಜ! ಯಾದವರ ಶಕ್ತಿಸಾಮರ್ಥ್ಯ ಗಳ ಬಗೆಗೆ ನೀನು ಹೇಳಿದ್ದೆಲ್ಲಾ ಸರಿಯೇ. ಆದರೆ ವಿನಾಶಕ್ಕೆ ಮುಖ್ಯ ಕಾರಣ, ಮೂಲಕಾರಣವಾದದ್ದು ಶ್ರೀಕೃಷ್ಣನ ಸಂಕಲ್ಪವೇ. ವಿಪ್ರಶಾಪವು ಅದಕ್ಕೆ ಒಂದು ನೆಪಮಾತ್ರ. ಅವರು ಅರ್ಥಮದ, ಅನ್ನಮದ, ಬುದ್ಧಿಮದ, ಶಕ್ತಿಮದವೇ ಮುಂತಾದ ಮದಗಳಿಂದ ಕೊಬ್ಬಿ ಭೂಮಿಗೆ ಭಾರವಾಗಿಬಿಟ್ಟಿ ದ್ದರು. ದೇವತೆಗಳಿಂದಲೂ ಅವರನ್ನು ನಿಗ್ರಹಿಸಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಕಾಲಸ್ವರೂಪಿಯಾದ ಭಗವಂತನು, ಅವರು ವಿಪ್ರಾಪಚಾರವ ನ್ನೆಸಗಿ ಪರಸ್ಪರಕಲಹಾಗ್ನಿಯಿಂದಲೇ ಅಳಿಯುವಂತೆ ಮಾಡಿಬಿಟ್ಟನು" ಎಂದು ಸಮಾಧಾನನೀಡಿ ಆ ಶಾಪಾದಿ ಪ್ರಸಂಗವನ್ನು ವಿವರಿಸುತ್ತಾರೆ.

**ಏವಂ ವ್ಯವಸ್ಥಿತೋ ಸತ್ಯಸಂಕಲ್ಪ ಈಶ್ವರಃ ।**
**ಶಾಪವ್ಯಾಜೇನ ವಿಪ್ರಾಣಾಂ ಸಂಜಹ್ರೇ ಸ್ವಕುಲಂ ವಿಭುಃ ॥**

ಏನಿದ್ದರೂ ಯಾದವರು ಶ್ರೀಕೃಷ್ಣನಿಗೆ ಸ್ವಜನರು. ಆತ್ಮೀಯರಾದ ಆಶ್ರಿತಜನರು. ಆದುದರಿಂದ ಅವರಿಗೆ ಒದಗಿದ್ದ ವಿಪ್ರಶಾಪವನ್ನು ಸರ್ವ

ಸಮರ್ಥನಾದ ಸ್ವಾಮಿಯು ಏಕೆ ತಪ್ಪಿಸಲಿಲ್ಲ?–ಎಂದರೆ : ಯಾದವರು ಎಸಗಿದ್ದು ಅಕ್ಷಮ್ಯವಾದ ಅಪರಾಧ. ಋಜುಬುದ್ಧಿಯುಳ್ಳ ಭಾಗವತೋತ್ತಮರಲ್ಲಿ ಅವರು ಕಪಟ ಕುಚೋದ್ಯಗಳನ್ನು ಆಚರಿಸಿದರು. ಅದಕ್ಕಾಗಿ ಅವರಿಗೆ ತಕ್ಕ ಶಿಕ್ಷೆ ಆಗಲೇಬೇಕು. ತಪ್ಪುಮಾಡಿದವರು ಸ್ವಜನರಾದರೆ ಏನಂತೆ? ಬೆರಳು ತನ್ನ ಶರೀರದ ಒಂದು ಭಾಗವೇ ಆಗಿ ಅತಿಪ್ರಿಯವಾಗಿ ದ್ದರೂ ಅದಕ್ಕೆ ವಿಷದೋಷ ಏರಿದಾಗ ಅದನ್ನು ದಯೆ-ದಾಕ್ಷಿಣ್ಯಗಳಿಲ್ಲದೆ ಕತ್ತರಿಸಿಹಾಕಬೇಕಾಗಿದೆ.

**ತ್ಯಾಜ್ಯೋ ದುಷ್ಟಃ ಪ್ರಿಯೋಪ್ಯಾಸೀತ್ ಅಂಗುಲೀವೋರಗಕ್ಷತಾ ।**

ಇದಲ್ಲದೇ ಸರ್ವಸಮನಾಗಿರುವ ಭಗವಂತನಿಗೆ ನ್ಯಾಯನಿರ್ವಹಣೆ ಯಲ್ಲಿ ಸ್ವಜನ-ಪರಜನರ ಭೇದವೆಲ್ಲಿಂದ ಬಂದೀತು? "**ಸಮೋಽಹಂ ಸರ್ವ ಭೂತೇಷು ನ ಮೇ ದ್ವೇಷ್ಯೋಽಸ್ತಿ** ನ ಪ್ರಿಯಃ ।" ಎಂದು ಶ್ರೀಗೀತೆ ಯಲ್ಲಿ ಆತನೇ ಘೋಷಣೆಮಾಡಿಲ್ಲವೇ? ಅದಕ್ಕೇ ಸರ್ವಜ್ಞನೂ ಸರ್ವ ಶಕ್ತನೂ ಆದ ಆ ಪ್ರಭುವು ಆ ವಿಪ್ರಶಾಪವನ್ನು ತಾನೂ ಅನುಮೋದಿಸಿ ಸಫಲಗೊಳಿಸಿದನು"–ಎಂದು ಮಹರ್ಷಿಗಳು ಹೇಳುತ್ತಾರೆ.

**ಭಗವಾನ್ ಜ್ಞಾತಸರ್ವಾರ್ಥಃ ಈಶ್ವರೋಽಪಿ ತದನ್ಯಥಾ ।**
**ಕರ್ತುಂ ನೈಚ್ಛತ್ ವಿಪ್ರಶಾಪಂ ಕಾಲರೂಪ್ಯನ್ವಮೋದತ ॥**

"ಪ್ರಭೋ! ನಿನ್ನ ಅವತಾರಕೃತ್ಯವು ಮುಗಿದಿದ್ದರೆ ನಿನ್ನ ಸ್ವಧಾಮವಾದ ಪರಮಧಾಮಕ್ಕೆ ಹಿಂದಿರುಗಿ ನಮ್ಮನ್ನು ಅನುಗ್ರಹಿಸಬೇಕು"–ಎಂದು ಬ್ರಹ್ಮದೇವರು ಪ್ರಾರ್ಥಿಸಿದಾಗ, "ಧರ್ಮಸಂಸ್ಥಾಪನೆಗಾಗಿ ಭೂಮಿಯ ಭಾರವನ್ನು ಇಳುಹುವ ನನ್ನ ಅವತಾರೋದ್ದೇಶವು ಬಹುಮಟ್ಟಿಗೆ ನೆರವೇರಿ ದ್ದರೂ ಅದರಲ್ಲಿ ಇನ್ನೂ ಸ್ವಲ್ಪ ಉಳಿಕೆಯಿದೆ. ವೀರ್ಯ, ಶೌರ್ಯ, ಸಂಪತ್ತುಗಳಿಂದ ಉದ್ಧತರಾಗಿ ಜಗತ್ತನ್ನು ನುಂಗಲು ತೊಡಗಿರುವ ಈ ಯಾದವಕುಲವನ್ನೂ ಸಂಹಾರವಾಗಿಸಿದ ಬಳಿಕ ಅದು ಪೂರ್ಣವಾಗುವುದು. ಅನಂತರವೇ ನಾನು ನನ್ನ ವೈಷ್ಣವಪದಕ್ಕೆ ಹಿಂದಿರುಗುವೆನು"–ಎಂದು ಅವರಿಗೆ ಉತ್ತರವನ್ನು ಅನುಗ್ರಹಿಸಿ, "ತಪೋಧನರ ಶಾಪವನ್ನು ಹೇಗೂ ತಪ್ಪಿಸಿ ಕೊಳ್ಳಲಾಗುವುದಿಲ್ಲ. ಆದುದರಿಂದ ನೀವು ಒಡನೆಯೇ ಮಾಡಬೇಕಾದ

ಕಾಲೋಚಿತಕಾರ್ಯ: ಪುಣ್ಯತೀರ್ಥವಾದ ಪ್ರಭಾಸಕ್ಕೆ ಯಾತ್ರೆಹೊರಟು, ಅಲ್ಲಿ ದಾನ-ಧರ್ಮ-ಪೂಜೆಗಳನ್ನು ಪುಷ್ಕಳವಾಗಿ ಮಾಡಿ ಪಾಪಪರಿಹಾರ ಮಾಡಿಕೊಳ್ಳುವುದು"–ಎಂದು ಅಂತಿಮಕರ್ತವ್ಯವನ್ನು ಕರುಣಾಳುವು ಯಾದವರಿಗೆ ಉಪದೇಶಮಾಡುತ್ತಾನೆ.

ದಯೆ-ದಾಕ್ಷಿಣ್ಯಗಳಿಲ್ಲದೆ ದುಷ್ಟರನ್ನು ಶಿಕ್ಷಿಸಬೇಕು. ಕರ್ತವ್ಯವನ್ನು ಆಚರಿಸಬೇಕು–ಎಂದು ಸಾಮಾನ್ಯವಾದ ನ್ಯಾಯ ಹೇಳುತ್ತದೆ. ಪ್ರಕೃತ ದಲ್ಲಾದರೋ ದಯಾನಿಧಿಯೂ, ನ್ಯಾಯಮೂರ್ತಿಯೂ ಆದ ಭಗವಂತನು ದಯೆ-ದಾಕ್ಷಿಣ್ಯಗಳಿಂದಲೇ ಯಾದವರ ಸಂಹಾರವನ್ನು ಮಾಡಿಸಿದ್ದಾನೆ. ತಾನು ಪರಂಧಾಮಕ್ಕೆ ತೆರಳಿದ ಬಳಿಕ ಯಾದವರು ಪ್ರಳಯಕಾಲದಲ್ಲಿ ಮೇರೆ ಮೀರುವ ಸಮುದ್ರದಂತೆ ಗರ್ವದಿಂದ ಉಕ್ಕೇರಿ ಲೋಕಕ್ಕೆ ಉಪದ್ರವವನ್ನು ಮಾಡುವರು. ಇದರಿಂದ ಲೋಕಕ್ಕೆ ತೊಂದರೆ. ಅಧರ್ಮಾಚರಣೆಯಿಂದ ಯಾದವರಿಗೂ ಪಾಪವು ಬರುವುದು. ಇದನ್ನು ತಪ್ಪಿಸಿ ಯಾದವರು ಸ್ವಧಾಮವಾದ ದೇವಲೋಕಕ್ಕೆ ಶೀಘ್ರದಲ್ಲಿ ತೆರಳಬೇಕಾದರೆ ಅವರ ಸಂಹಾರ ವಾಗಲೇಬೇಕು. ಇದರ ನಿರ್ವಹಣೆಯಿಂದ ಲೋಕದ ಮೇಲೆ ಅನುಕಂಪ, ಯಾದವರ ಮೇಲೆ ದಯೆ–ಎರಡನ್ನೂ ಭಗವಂತನು ತೋರಿದ್ದಾನೆ. ಯಾದ ವರು ಅತುಲಪರಾಕ್ರಮಿಗಳಾದ್ದರಿಂದ ದೇವತೆಗಳೂ ಅವರನ್ನು ಸಂಹರಿಸ ಲಾರರು. ಅವರು ತನ್ನ ಬಂಧುಗಳಾದ್ದರಿಂದ ಅವರನ್ನು ತಾನೂ ನೇರವಾಗಿ ಸಂಹರಿಸಬಾರದು–ಎಂಬ ದಾಕ್ಷಿಣ್ಯವನ್ನೂ ನಿರ್ವಹಿಸಬೇಕು. ಆದ್ದರಿಂದ ಅವರಲ್ಲಿ ಅಂತಃಕಲಹವು ಬರುವಂತೆ ವಿಪ್ರಶಾಪದ ಮೂಲಕ ಏರ್ಪಡಿಸಿ ಅವರ ಸಂಹಾರವನ್ನು ಮಾಡಿಸಿದ್ದಾನೆ. ಹೀಗೆ ಶ್ರೀಭಗವಂತನ ಈ ಯೋಜನೆ ಯಲ್ಲಿ ದಯೆ-ದಾಕ್ಷಿಣ್ಯ, ಆತ್ಮನೀತಿ, ಲೋಕನೀತಿ, ಸಾಮಾಜಿಕನೀತಿ ಎಲ್ಲವೂ ಅಡಕವಾಗಿವೆ. "ದಾಕ್ಷಿಣ್ಯಂ ಸ್ವಜನೇ ದಯಾಂ ಪರಜನೇ"– ಎಂಬ ಸಜ್ಜನರ ನೀತಿಯನ್ನೇ ಭಗವಂತನು ಇಲ್ಲಿ ತನ್ನ ಆಚರಣೆಯಿಂದ ಮೆರೆಯಿಸಿದ್ದಾನೆಂದು ಮನಗಾಣಬೇಕು.

ಇನ್ನು ಗ್ರಂಥದಲ್ಲಿ ಓತಪ್ರೋತವಾಗಿರುವ ಅಮೋಘವಾದ ಆಧ್ಯಾತ್ಮಿಕ ಉಪದೇಶ. ಈ ಉಪದೇಶವು ಇಲ್ಲಿ ದ್ವಿಮುಖವಾಗಿದೆ. ಮೊದಲನೆಯದು

ವಸುದೇವನ ಮನೆಗೆ ದಯಮಾಡಿಸಿದ ನಾರದರು ಜನಕಮಹಾರಾಜನಿಗೂ ಋಷಭಪುತ್ರರಾದ ಒಂಭತ್ತು ಮಂದಿ ಯೋಗೀಶ್ವರರಿಗೂ ನಡೆದ ಸಂವಾದ ವನ್ನು ಅನುವಾದಮಾಡುವುದರ ಮೂಲಕ ಅನುಗ್ರಹಿಸಿದ ಭಾಗವತ ಧರ್ಮೋಪದೇಶ. 'ಕೃಷ್ಣಂ ಧರ್ಮಂ ಸನಾತನಂ' ಎಂಬಂತೆ ಸಾಕ್ಷಾ ಧರ್ಮಮೂರ್ತಿಯೇ ಆಗಿರುವ ಭಗವಂತನಾದ ಶ್ರೀಕೃಷ್ಣಪರಮಾತ್ಮನು ಪುತ್ರರೂಪದಲ್ಲಿ ತನ್ನ ಬಳಿಯಲ್ಲೇ ಬೆಳಗುತ್ತಿದ್ದರೂ ಆತನನ್ನು ಬಿಟ್ಟು ವಸುದೇವನು ನಾರದರನ್ನು ಧರ್ಮದ ಬಗ್ಗೆ ಪ್ರಶ್ನಿಸುವುದು ಧರ್ಮದ ವಿಡಂಬನೆಯಾಗಿದೆ. ದಿವ್ಯಗಂಗಾನದಿಯ ತೀರದಲ್ಲಿರುವವನು ಅದರಿಂದ ಉದಕವನ್ನು ಸ್ವೀಕರಿಸದೆ ಅದರ ಪಕ್ಕದಲ್ಲಿರುವ ಕಾಲುವೆಯಿಂದ ನೀರನ್ನು ಕುಡಿಯಲು ಬಯಸುತ್ತಿದ್ದಾನೆ. ಭಗವಂತನ ಮಾಯೆಯಿಂದ ವ್ಯಾಮೋಹಕ್ಕೆ ಒಳಗಾದ ವಸುದೇವನು ತನ್ನ ಪುತ್ರನ ಪರಮಪುರುಷತ್ವವನ್ನು ಗಮನಿಸದೇ ಇದ್ದರೂ 'ಜ್ಞಾನೀತ್ವಾತ್ಮೈವ ಮೇ ಮತಂ' ಎಂಬಂತೆ ಆ ಭಗವಂತನಿಗೆ ಅತ್ಯಂತ ಪ್ರಿಯತಮರಾದ ಭಾಗವತಶ್ರೇಷ್ಠರೂ ಮುನಿಶ್ರೇಷ್ಠರೂ ಧರ್ಮ–ಬ್ರಹ್ಮವಿದರಲ್ಲಿ ಅಗ್ರಗಣ್ಯರೂ ಆದ ನಾರದರನ್ನೇ ಧರ್ಮದ ಬಗ್ಗೆ ಆತನು ಪ್ರಶ್ನಿಸುತ್ತಿದ್ದಾನೆ. ಭಗವಂತನ ಸಾಕ್ಷಾತ್ ಸಾನ್ನಿಧ್ಯದಲ್ಲೇ ಈ ಧರ್ಮ ಸಂಭಾಷಣೆ ನಡೆಯುತ್ತದೆ. ನಾರದರ ಆತ್ಮ-ಬುದ್ಧಿ-ಹೃದಯ-ಜಿಹ್ವೆಗಳಲ್ಲಿ ಕುಳಿತು ಅವರ ಮೂಲಕ ತನ್ನ ತಂದೆಗೆ ಧರ್ಮೋಪದೇಶವನ್ನು ಧರ್ಮಪ್ರಭುವಾದ ಶ್ರೀಕೃಷ್ಣನೇ ಮಾಡಿಸುತ್ತಿದ್ದಾನೆಂಬುದನ್ನು ನಾವು ಇಲ್ಲಿ ಗಮನಿಸುತ್ತೇವೆ. ಇದೂ ಸದ್ವಾರಕವಾದ ಭಗವದುಪದೇಶ. ಗಂಗೆಯ ಕಾಲುವೆಯಲ್ಲಿ ಹರಿಯುವ ನೀರೂ ಗಂಗೋದಕವೇ ತಾನೇ! ನಾರದರಿಗೂ ಭಗವಂತನ ಸನ್ನಿಧಿಯಲ್ಲಿ ಭಾಗವತಧರ್ಮದ ಪಾಠವನ್ನು ಒಪ್ಪಿಸುವ ಭಾಗ್ಯ ಒದಗಿ ಬಂದಿತು. ಉಪದೇಶದ ಕಡೆಯಲ್ಲಿ ವಸುದೇವನ ಮುಗ್ಧತೆಯನ್ನು ಹೋಗಲಾಡಿಸುತ್ತಾ ನಾರದರು ಕೊಡುವ ತಿಳಿವಳಿಕೆಯು ಸತ್ಯಸುಂದರವಾಗಿದೆ.

"ಅಪ್ಪಾ, ವಸುದೇವ! ಈ ಕೃಷ್ಣನನ್ನು ನಿನ್ನ ಪುತ್ರನೆಂದು ತಿಳಿದು ಮೋಸಹೋಗಬೇಡ. ಈತನು ದೇವದೇವನು. ಅವ್ಯಯನಾದ ಪರ ಮಾತ್ಮನು. ಸರ್ವಾತ್ಮಕ ಸರ್ವೇಶ್ವರನು. ಮಾಯೆಯಿಂದ ಮನುಷ್ಯರೂಪ ದಿಂದ ಪ್ರಕಟಗೊಂಡು ತನ್ನ ಈಶ್ವರಭಾವವನ್ನು ಮರೆಸಿಕೊಂಡಿದ್ದಾನೆ.

**ಮಾಪತ್ಯಬುದ್ಧಿಮಕೃಥಾಃ ಕೃಷ್ಣೇ ಸರ್ವಾತ್ಮನೀಶ್ವರೇ ।**
**ಮಾಯಾಮನುಷ್ಯಭಾವೇನ ಗೂಢೈಶ್ವರ್ಯೇ ಪರೇಽವ್ಯಯೇ ॥**

ಈ ವಸುದೇವ-ನಾರದ ಸಂವಾದದಲ್ಲಿ ಮಾಯೆ, ಮಾಯಾವಿಮೋಚನೆ, ಭಗವತ್ಸ್ವರೂಪ, ಭಗವದವತಾರ, ಭಗವತ್ಪ್ರಾಪ್ತಿಗೆ ಉಪಾಯವಾದ ಭಕ್ತಿಯೋಗ-ಕರ್ಮಯೋಗಗಳು ಮತ್ತು ಪೂಜಾವಿಧಿಯೇ ಮುಂತಾದ ನಾನಾ ವಿಷಯಗಳು ಅಡಕವಾಗಿದ್ದರೂ ಎಲ್ಲಕ್ಕೂ ಜೀವಧಮನಿಯಾಗಿರು ವುದು ಭಾಗವತಧರ್ಮವೇ.

**ಬ್ರಹ್ಮಂ ಸ್ತಥಾಪಿ ಪೃಚ್ಛಾಮೋ ಧರ್ಮಾನ್ ಭಾಗವತಾಂ ಸ್ತವ ।**
**ಯಾನ್ ಶ್ರುತ್ವಾ ಶ್ರದ್ಧಯಾ ಮರ್ತ್ಯೋ ಮುಚ್ಯತೇ ಸರ್ವತೋ**
**ಭಯಾತ್ ॥**

ಇಲ್ಲಿ ಅವತಾರಗಳಲ್ಲಿ ಅತ್ಯಂತ ವಿಶೇಷವಾಗಿ ವರ್ಣಿತವಾಗಿರುವುದು ನಾರಾಯಣಮಹರ್ಷಿಯ ಅವತಾರ. ಅವತಾರದ ಉದ್ದೇಶ, ತಪೋನಿಷ್ಠೆಯ ಆದರ್ಶದ ವರ್ಣನೆ, ತಪಸ್ಸಿನಿಂದ ತನ್ನನ್ನು ಕದಲಿಸಲು ಬಳಿಗೆ ಬಂದು, ಬೆಡಗು-ಬಿನ್ನಾಣಗಳೊಡನೆ ನಲಿದಾಡಿದ ಅಪ್ಸರೆಯರನ್ನು ಕಂಡು ವಿಶ್ವಾಮಿತ್ರಾದಿಗಳಂತೆ ಕಾಮಕ್ಕಾಗಲೀ, ಕ್ರೋಧಕ್ಕಾಗಲೀ ವಶವಾಗದೆ ಸ್ವಾಮಿಯು, ಅವರ ಸಾಹಸವನ್ನು ಕುರಿತು ನಗುತ್ತಾ, ಭೀತಿಗೊಂಡವರಿಗೆ ಅಭಯವನ್ನಿತ್ತು ಅವರ ಸೌಂದರ್ಯವನ್ನು ನಾಚಿಸುವ ರೂಪಲಾವಣ್ಯಗಳಲ್ಲಿ ಎಣೆ-ಮಿಗಿಲಿಲ್ಲದ 'ಉರ್ವಶಿ' ಎಂಬ ಅಪ್ಸರೋರತ್ನವನ್ನು ಅವರಿಗೆ ವರವನ್ನಾಗಿ ಕೊಟ್ಟು ಕಳುಹಿಸಿದ ಅದ್ಭುತವಾದ ಪ್ರಸಂಗ ಅತ್ಯಂತ ರಮಣೀಯ ವಾಗಿದೆ. ಕರ್ಮಜ್ಞಾನಮೂರ್ತಿಯಾದ ತಾನು ಜ್ಞಾನಕ್ಕೆ ಸುಲಭೋ ಪಾಯವಾಗಿರುವ ಯೋಗವನ್ನು ಉಪದೇಶಿಸಿ ತಾನೂ ಆಚರಿಸುತ್ತಾ, ಮಹರ್ಷಿಗಳಿಂದ ಸೇವಿಸಲ್ಪಡುತ್ತಾ, ಈಗಲೂ ಬದರಿಕಾಶ್ರಮದಲ್ಲಿ ಬೆಳಗು ತ್ತಿರುವ, ಧರ್ಮ ಮತ್ತು ಮೂರ್ತಿಗಳ ಸುಪುತ್ರನಾದ ಧರ್ಮಮೂರ್ತಿ–ಪರಬ್ರಹ್ಮಮೂರ್ತಿಯಾದ ಆ ನರ-ನಾರಾಯಣದೇವನಿಗೆ ನಮೋ ನಮಃ.

**ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ**
**ನಾರಾಯಣೋ ನರ ಋಷಿಪ್ರವರಃ ಪ್ರಶಾನ್ತಃ ।**

**ನೈಷ್ಕರ್ಮ್ಯಲಕ್ಷಣಮುವಾಚ ಚಕಾರ ಕರ್ಮ**
**ಯೋಽದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ ॥**

ಅನಂತರ ಯದುಕುಲವನ್ನು ಸಂಹರಿಸಿ ಸ್ವಧಾಮಕ್ಕೆ ತೆರಳುವ ಸಂಕಲ್ಪ ಮಾಡಿ ಮಹಾಪ್ರಸ್ಥಾನವನ್ನು ಬೆಳೆಸುತ್ತಿದ್ದ ಭಗವಂತನು ಉದ್ಧವನನ್ನು ಕುರಿತು ಆತನ ಪ್ರಶ್ನೆಗಳಿಗೆ ಉತ್ತರರೂಪವಾಗಿ ಮಾಡಿದ ಉಪದೇಶವು ನಮ್ಮ ಮನಸ್ಸನ್ನು ಸೆಳೆಯುತ್ತದೆ. ಇದು ಅದ್ವಾರಕವಾದ ಉಪದೇಶ ; ಪರಮಾತ್ಮನು ತಾನೇ ತನ್ನ ಮುಖಪದ್ಮದಿಂದ ನೇರವಾಗಿ ಮಾಡಿದ ದಿವ್ಯೋಪದೇಶ. ಕುರುಕ್ಷೇತ್ರದಲ್ಲಿ ಈ ಹಿಂದೆ ಅರ್ಜುನನನ್ನು ನೆಪವನ್ನಾಗಿ ಮಾಡಿಕೊಂಡು ಅಖಿಲಲೋಕಕಲ್ಯಾಣಾರ್ಥವಾಗಿ ಮಾಡಿದ ಗೀತೋಪದೇಶಕ್ಕೆ ಮಾತ್ರವೇ ಸಾಟಿಯಾಗಿರುವ ಉಪದೇಶ. ಅಲ್ಲಿ ಶೋಕ-ಮೋಹಗಳಿಗೆ ವಶನಾಗಿ ಕರ್ತವ್ಯವಿಮುಖನಾಗಿದ್ದ ಮಿತ್ರಶ್ರೇಷ್ಠನಾದ ಅರ್ಜುನನನ್ನು ಕುರಿತು ಮಾತನಾಡಿದರೆ, ಇಲ್ಲಿ ತನ್ನ ವಿರಹವನ್ನು ತಾಳಲಾರದೆ ಮುಂದಿನ ಕರ್ತವ್ಯವನ್ನೂ ಅರಿಯದೆ ತತ್ತಳಿಸುತ್ತಿದ್ದ ಭಕ್ತಶ್ರೇಷ್ಠ ಉದ್ಧವನನ್ನು ಕುರಿತು ಉಪದೇಶಮಾಡುತ್ತಾರೆ. ಸ್ವಾಮಿಯು ಪ್ರಕಾರಾಂತರದಲ್ಲಿ ಮಾಡಿದ ಭಗವದ್ಗೀತೋಪದೇಶದ ಪುನರಾವರ್ತನೆಯೇ ಈ ಉದ್ಧವಗೀತೆ ಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆತನೇ ಈ ವಿಷಯವನ್ನು ಬಾಯಿಬಿಟ್ಟು ಹೇಳುತ್ತಾನೆ.

**ಏವಮೇತದಹಂ ಪೃಷ್ಟಃ ಪ್ರಶ್ನಂ ಪ್ರಶ್ನವಿದಾಂ ವರ ।**
**ಯುಯುತ್ಸುನಾ ವಿನಶನೇ ಸಪತ್ನೈರರ್ಜುನೇನ ಹಿ ॥**

ಅಲ್ಲಿ ಉಪದಿಷ್ಟವಾಗಿರುವಂತೆಯೇ ಇಲ್ಲಿಯೂ ಆತ್ಮಸ್ವರೂಪ, ಪ್ರಕೃತಿ-ಪುರುಷವಿವೇಕ, ಗುಣತ್ರಯಸ್ವರೂಪ, ಬಂಧ-ಮೋಕ್ಷವಿವೇಕ, ತತ್ತ್ವ ಪರಿಗಣನೆ, ಪ್ರಧಾನಮೋಕ್ಷೋಪಾಯಗಳಾದ ಜ್ಞಾನ-ಕರ್ಮ-ಭಕ್ತಿಯೋಗ ಗಳು, ಜ್ಞಾನಿ-ಭಕ್ತರ ಲಕ್ಷಣಗಳು, ಭಗವದ್ವಿಭೂತಿಗಳು, ಧ್ಯಾನಯೋಗ, ಸಾಂಖ್ಯಯೋಗ, ವರ್ಣಾಶ್ರಮ ಮತ್ತು ಭಾಗವತಧರ್ಮಗಳು, ಪರಮಾರ್ಥ ನಿರೂಪಣೆ–ಮುಂತಾದ ಅತಿಮುಖ್ಯವಾದ ಆಧ್ಯಾತ್ಮಿಕವಿಷಯಗಳೆಲ್ಲವೂ ಹೃದಯಂಗಮವಾಗಿ ಪ್ರಶ್ನೋತ್ತರರೂಪದಲ್ಲಿ ಅನುಗ್ರಹಿಸಲ್ಪಟ್ಟಿವೆ. ಭಕ್ತಿ

ಯೋಗ-ಭಾಗವತಧರ್ಮಗಳನ್ನೂ ಮತ್ತು ಕ್ರಿಯಾಯೋಗ–ಪೂಜಾವಿಧಿಗಳನ್ನೂ ಇಲ್ಲಿ ಮತ್ತೂ ವಿಸ್ತಾರವಾಗಿ ಹೇಳಿದೆ. ಅವಧೂತನು ಹೇಳುವ ಪೃಥಿವಿಯೇ ಮುಂತಾದ ಇಪ್ಪತ್ತುನಾಲ್ಕು ಗುರುಗಳ ಪರಿಚಯವು ಅಧ್ಯಾತ್ಮ ವಿವೇಕದ ಅದ್ಭುತದಾಖಲೆಯಾಗಿ ವಿವೇಕಿಯಾದವನಿಗೆ ಪ್ರಕೃತಿಯಲ್ಲಿ ಎಲ್ಲೆಲ್ಲೂ ಶಿಕ್ಷಣ ದೊರೆಯುತ್ತದೆಯೆಂಬ ನೀತಿಯನ್ನು ಮನೋಜ್ಞವಾಗಿ ಸಾರುತ್ತದೆ.

**ಏತೇ ಮೇ ಗುರವೋ ರಾಜನ್ ಚತುರ್ವಿಂಶತಿರಾಶ್ರಿತಾಃ ।**
**ಶಿಕ್ಷಾವೃತ್ತಿಭಿರೇತೇಷಾಂ ಅನ್ವಶಿಕ್ಷಮಿಹಾತ್ಮನಃ ॥**

ಯದು-ವಿಪ್ರಸಂವಾದ, ಹಂಸೋಪದೇಶ, ಪುರೂರವೋಪದೇಶ ಮುಂತಾದುವೂ ಜ್ಞಾನ-ವೈರಾಗ್ಯಗಳ ಭಂಡಾರವಾಗಿವೆ. ಇಷ್ಟೆಲ್ಲಾ ಉಪದೇಶಗಳಿದ್ದರೂ ಇವೆಲ್ಲಾ ಭಾಗವತಧರ್ಮೋಪದೇಶದ ವಿಸ್ತಾರವಾಗಿಯೇ ಮಂಡಿಸಲ್ಪಟ್ಟಿವೆ. **'ಆತ್ಮನೋ ಗುರುರಾತ್ಮೈವ' 'ಸರ್ವಭೂತ ಸುಹೃಚ್ಛಾನ್ತಃ ಜ್ಞಾನವಿಜ್ಞಾನನಿಶ್ಚಯಃ' 'ಸುಪರ್ಣಾವೇತೌ ಸದೃಶೌ ಸಖಾಯೌ' 'ಭಕ್ತ್ಯಾಹಮೇಕಯಾ ಗ್ರಾಹ್ಯಃ'** ಮುಂತಾದುವು ಗೀತೋಪನಿಷದ್ವಾಕ್ಯಗಳ ಛಾಯೆಗಳೇ ಆಗಿವೆ. ಹದಿನೈದನೆಯ ಅಧ್ಯಾಯದಲ್ಲಿ ನಿರೂಪಿತವಾದ ಹದಿನೆಂಟು ಸಿದ್ಧಿಗಳೂ ಮತ್ತು ಅದರ ಮುಂದಿನ ಅಧ್ಯಾಯವು ಪರಿಗಣಿಸಿರುವ ವಿಭೂತಿಗಳೂ ಭಗವಂತನ ಮಹಿಮೆಯ ವರ್ಣನೆಯಲ್ಲಿಯೇ ತಾತ್ಪರ್ಯವನ್ನು ಹೊಂದಿವೆ. **'ತೇ ಚ ಸಮಾಧಾ ವುಪಸರ್ಗಾ ವ್ಯುತ್ಥಾನೇ ಸಿದ್ಧಯಃ'** ಎಂಬ ಯೋಗೋಪದೇಶವನ್ನು ಗಮನಿಸಿದವರು ಆ ಸಿದ್ಧಿಗಳಿಗೆ ಆಸೆಪಡದೆ ಭಗವಂತನನ್ನು ಶರಣುಹೊಂದಿ ಭಕ್ತಿಯೋಗಸಮಾಧಿಯನ್ನೇ ಪ್ರಾರ್ಥಿಸಬೇಕು–ಎಂಬ ಪಾಠವೂ ಇಲ್ಲಿ ಮನವರಿಕೆಯಾಗುತ್ತದೆ. **'ಅನ್ತರಾಯಾನ್ವದನ್ತ್ಯೇತಾ ಯುಂಜತೋ ಯೋಗಮುತ್ತಮಃ'**

ಈ ಸಂಪುಟದಲ್ಲಿ ಆತ್ಮಗುಣಸಂಪನ್ನರಾದ ಸಾಧು-ಸಜ್ಜನರ ಸಂಗದ ಮಹಿಮೆಯನ್ನು ಸಾರುವ ಶ್ರೀಮದ್ಭಾಗವತವಾಕ್ಯಗಳು ಸುಭಾಷಿತ ಭಂಡಾಗಾರದ ಅನರ್ಘ್ಯರತ್ನಗಳಾಗಿವೆ. ಗ್ರಂಥದ ಇತರ ಸಂಪುಟಗಳಲ್ಲಿರು

ವಂತೆಯೇ ಇಲ್ಲಿಯೂ ಸಂಸ್ಕೃತಮೂಲದ ಕನ್ನಡ ಅನುವಾದವನ್ನು ಮಾತ್ರ ವಲ್ಲದೆ ಅವಶ್ಯಕವಾದ ಸ್ಥಳಗಳಲ್ಲಿ ಅಡಿಟಿಪ್ಪಣಿಯಲ್ಲಿ ನಾನಾವ್ಯಾಖ್ಯಾನ ಕಾರರ ಅಭಿಪ್ರಾಯಗಳನ್ನೂ ಸ್ವಾಭಿಪ್ರಾಯಗಳನ್ನೂ ಮಂಡಿಸಿ ವಿಶೇಷ ತಿಳಿ ವಳಿಕೆಗೆ ಸಹಾಯಮಾಡಿದೆ. ಅಧ್ಯಾತ್ಮವಿವೇಕಕ್ಕೆ ಮತ್ತು ವಿಶೇಷವಾಗಿ ಭಕ್ತಿ-ಜ್ಞಾನ-ವೈರಾಗ್ಯತತ್ತ್ವಗಳಿಗೆ ಅಕ್ಷಯವಾದ ಗಣಿಯಾಗಿರುವ ಈ ಗ್ರಂಥಸಂಪುಟವು ಸಹೃದಯರಿಗೆ ದಿವ್ಯಸ್ಫೂರ್ತಿಯ ಚಿಲುಮೆಯಾಗಲೆಂದು ನಾವು ಆಶಿಸುತ್ತೇವೆ.

ಅಷ್ಟಾಂಗಯೋಗವಿಜ್ಞಾನಮಂದಿರಂ
ಬೆಂಗಳೂರು
ಕಾರ್ತಿಕ ಕೃಷ್ಣ ದ್ವಾದಶೀ — ಇತಿ ನಾರಾಯಣಸ್ಮೃತಯಃ
7-12-1996 — ಶ್ರೀ ಶ್ರೀ **ರಂಗಪ್ರಿಯ** ಶ್ರೀಪಾದ ಶ್ರೀ ಶ್ರೀಃ



## ತೃತೀಯ ಮುದ್ರಣದ ಪ್ರಸ್ತಾವನೆ

ಶ್ರೀಮದ್ಭಾಗವತದ 8ನೇ ಸಂಪುಟದ 3ನೇ ಮುದ್ರಣವನ್ನು ಮಾಡುತ್ತಿದ್ದೇವೆ. ಮಾರಾಟವು ಸ್ವಲ್ಪ ನಿಧಾನವಾದರೂ ಪರಮಾತ್ಮನ ದಯೆಯಿಂದ ಯಾವ ಕೊಂಡಿಯೂ ಕಳಚಿಕೊಂಡಿಲ್ಲ. ಎಲ್ಲಾ 58 ಸಂಪುಟಗಳು ಸಿಕ್ಕುತ್ತವೆ. ಕಾಲಾನುಕಾಲಕ್ಕೆ ಸಂಪುಟಗಳು ಮುಗಿದುಹೋದರೂ ಪುನರ್ಮುದ್ರಣ ಮಾಡುವ ಸಾಮರ್ಥ್ಯವನ್ನು ಪರಮಾತ್ಮನು ಒದಗಿಸಿಕೊಟ್ಟಿದ್ದಾನೆ. ಆದರೆ ಮಹಾಗ್ರಂಥಗಳ ಪುನರ್ಮುದ್ರಣವಾಗಿ ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ಸಂಪುಟಗಳು ಸಿಕ್ಕುತ್ತವೆಯೆಂದು ಗ್ರಾಹಕರು ಭರವಸೆಯನ್ನು ಇಟ್ಟುಕೊಳ್ಳಕೂಡದು. ಸಂಪುಟಗಳು ಸಿಕ್ಕುವಾಗ ಸಂಗ್ರಹಿಸಿ ಇಟ್ಟುಕೊಳ್ಳುವುದು ಶ್ರೇಯಸ್ಕರ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸಮಸ್ತಸನ್ಮಙ್ಗಲಾನಿ ಭವನ್ತು

**–ಪ್ರಕಾಶಕರು.**

## ಶ್ರೀಮದ್ಭಾಗವತ-ಎಂಟನೆಯ ಸಂಪುಟ
## ಅಧ್ಯಾಯಾನುಕ್ರಮಣಿಕೆ ಮತ್ತು ವಿಷಯಾನುಕ್ರಮಣಿಕೆ

(ವಿ.ಸೂ. ಮೊದಲನೆಯದು : ಮೂಲ ಶ್ಲೋಕಗಳ ಅಧ್ಯಾಯಗಳ ಪುಟಸಂಖ್ಯೆ ;
ಎರಡನೆಯದು : ಅನುವಾದದಲ್ಲಿರುವ ವಿಷಯಗಳ ಪುಟಸಂಖ್ಯೆ )

### ದಶಮಸ್ಕಂಧ


| ಅಧ್ಯಾಯ | ವಿಷಯಗಳು | ಪುಟಸಂಖ್ಯೆ | ಪುಟಸಂಖ್ಯೆ |
|---|---|---|---|
| ೭೭ | ಶಾಲ್ವನ ಸಂಹಾರ | ...೧೪೧೭ | 2811 |
| ೭೮ | ದಂತವಕ್ತ್ರ-ವಿದೂರಥರ ಸಂಹಾರ : ತೀರ್ಥಯಾತ್ರೆಯ ಸಮಯದಲ್ಲಿ ಬಲರಾಮನು ಸೂತಪುರಾಣಿಕರನ್ನು ಸಂಹರಿಸಿದುದು | ...೧೪೨೧ | 2820 |
| ೭೯ | ಬಲರಾಮನಿಂದ ಬಲ್ವಲನ ಸಂಹಾರ : ತೀರ್ಥಯಾತ್ರೆ | ...೧೪೨೫ | 2829 |
| ೮೦ | ಕುಚೇಲನ ಕಥೆ | ...೧೪೨೯ | 2835 |
| ೮೧ | ಸುದಾಮನಿಗೆ ಐಶ್ವರ್ಯಪ್ರಾಪ್ತಿ | ...೧೪೩೩ | 2845 |
| ೮೨ | ಬಲರಾಮ-ಕೃಷ್ಣರು ಗೋಪ-ಗೋಪಿಯರನ್ನು ಸಂಧಿಸಿದುದು | ...೧೪೩೮ | 2856 |
| ೮೩ | ಶ್ರೀಕೃಷ್ಣ ಪಟ್ಟಮಹಿಷಿಯರೊಡನೆ ದ್ರೌಪದಿಯ ಮಾತುಕತೆ | ...೧೪೪೩ | 2868 |
| ೮೪ | ವಸುದೇವನ ಯಜ್ಞೋತ್ಸವ | ...೧೪೪೯ | 2879 |
| ೮೫ | ಭಗವಂತನು ವಸುದೇವನಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದುದು : ಶ್ರೀಕೃಷ್ಣನು ಗತಿಸಿಹೋಗಿದ್ದ ದೇವಕಿಯ ಆರು ಮಕ್ಕಳನ್ನೂ ಹಿಂದಕ್ಕೆ ತಂದುದು | ...೧೪೫೬ | 2895 |
| ೮೬ | ಸುಭದ್ರಾಹರಣ : ಭಗವಾನ್ ಶ್ರೀಕೃಷ್ಣನು ಮಿಥಿಲಾಪಟ್ಟಣದ ರಾಜನಾದ ಜನಕನ | | |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ | ಪುಟಸಂಖ್ಯೆ |
|---|---|---|---|
| | ಅರಮನೆಗೂ ಶ್ರುತದೇವಬ್ರಾಹ್ಮಣನ ಮನೆಗೂ ಏಕಕಾಲದಲ್ಲಿ ಪ್ರವೇಶಿಸಿದುದು | ...೧೪೬೩ | 2912 |
| ೮೭ | ವೇದ ಸ್ತುತಿ | ...೧೪೬೯ | 2928 |
| ೮೮ | ವೃಕಾಸುರನ ಕಥೆ | ...೧೪೭೬ | 2966 |
| ೮೯ | ಭೃಗುಮಹರ್ಷಿಯು ತ್ರಿಮೂರ್ತಿಗಳನ್ನೂ ಪರೀಕ್ಷಿಸಿದುದು : ಭಗವಂತನು ಸತ್ತುಹೋಗಿದ್ದ ಬ್ರಾಹ್ಮಣಬಾಲಕರನ್ನು ಕರೆತಂದುದು | ...೧೪೮೦ | 2976 |
| ೯೦ | ಭಗವಂತನ ಲೀಲಾವಿಹಾರವರ್ಣನೆ | ...೧೪೮೮ | 2991 |
| | **ಏಕಾದಶಸ್ಕಂಧ** | | |
| ೧ | ಯಾದವರಿಗೆ ಮುನಿಗಳ ಶಾಪ | ...೧೪೯೪ | 3005 |
| ೨ | ಯೋಗೇಶ್ವರರ ಉಪದೇಶ | ...೧೪೯೭ | 3013 |
| ೩ | ಮಾಯೆಯ ಸ್ವರೂಪ : ಮಾಯೆಯಿಂದ ಪಾರಾಗುವ ಉಪಾಯ : ಬ್ರಹ್ಮ ಮತ್ತು ಕರ್ಮಯೋಗದ ನಿರೂಪಣೆ | ...೧೫೦೩ | 3029 |
| ೪ | ಭಗವಂತನ ಅವತಾರಗಳ ವರ್ಣನೆ | ...೧೫೦೯ | 3050 |
| ೫ | ಭಕ್ತಿಹೀನರಿಗೆ ಪ್ರಾಪ್ತವಾಗುವ ದುರ್ಗತಿ : ಭಗವಂತನ ಪೂಜಾವಿಧಿಯ ವರ್ಣನೆ | ...೧೫೧೩ | 3060 |
| ೬ | ದೇವತೆಗಳು ಶ್ರೀಕೃಷ್ಣನನ್ನು ತನ್ನ ಪರಮ ಪದಕ್ಕೆ ಹಿಂದಿರುಗಲು ಪ್ರಾರ್ಥಿಸಿದುದು : ಯಾದವರು ಪ್ರಭಾಸಕ್ಷೇತಕ್ಕೆ ಹೊರಡಲು ಸಿದ್ಧರಾಗುತ್ತಿರುವುದನ್ನು ಕಂಡು ಉದ್ಧವನು ಶ್ರೀಕೃಷ್ಣನ ಬಳಿಗೆ ಹೋದುದು | ...೧೫೧೯ | 3076 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ | ಪುಟಸಂಖ್ಯೆ |
|---|---|---|---|
| ೭. | ಅವಧೂತೋಪಾಖ್ಯಾನ: ಎಂಟು ಗುರುಗಳ ಕಥೆ | ೧೫೨೫ | 3092 |
| ೮ | ಅವಧೂತೋಪಾಖ್ಯಾನ : ಹೆಬ್ಬಾವಿನಿಂದ ಪಿಂಗಳಾ ಎಂಬ ವೇಶ್ಯೆಯವರೆಗಿನ ಒಂಭತ್ತು ಗುರುಗಳಿಂದ ಕಲಿಯಬೇಕಾದ ಪಾಠಗಳು | ...೧೫೩೨ | 3118 |
| ೯ | ಅವಧೂತೋಪಾಖ್ಯಾನ : ಕುರರವೇ ಮುಂತಾದ ಏಳು ಗುರುಗಳ ಕಥೆ | ...೧೫೩೭ | 3133 |
| ೧೦ | ಸಾರಹೀನವಾದ ಲೌಕಿಕ ಮತ್ತು ಪಾರಲೌಕಿಕವಾದ ಉಪಭೋಗಗಳ ವಿವರಣೆ | ...೧೫೪೦ | 3144 |
| ೧೧ | ಬದ್ಧರು, ಮುಕ್ತರು ಮತ್ತು ಭಕ್ತರು-ಇವರ ಲಕ್ಷಣ | ...೧೫೪೪ | 3160 |
| ೧೨ | ಸತ್ಸಂಗದ ಮಹಿಮೆ : ಕರ್ಮ ಮತ್ತು ಕರ್ಮತ್ಯಾಗದ ವಿಧಿ-ನಿಯಮಗಳು | ...೧೫೪೯ | 3180 |
| ೧೩ | ಹಂಸರೂಪದಲ್ಲಿ ಸನಕಾದಿಗಳಿಗೆ ಮಾಡಿದ ಉಪದೇಶದ ವರ್ಣನೆ | ...೧೫೫೨ | 3188 |
| ೧೪ | ಭಕ್ತಿಯೋಗದ ಮಹಿಮೆ : ಧ್ಯಾನವಿಧಿಯ ವರ್ಣನೆ | ...೧೫೫೭ | 3201 |
| ೧೫ | ಅಣಿಮಾದಿ ಸಿದ್ಧಿಗಳ ವರ್ಣನೆ | ...೧೫೬೨ | 3214 |
| ೧೬ | ಭಗವಂತನ ವಿಭೂತಿಗಳ ವರ್ಣನೆ | ...೧೫೬೬ | 3226 |
| ೧೭ | ವರ್ಣಾಶ್ರಮಧರ್ಮ ನಿರೂಪಣೇ | ...೧೫೭೦ | 3238 |




ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಶ್ರೀಮದ್ರಾಮಚಂದ್ರಾಪುರಮಠಸ್ಥ



**ಶ್ರೀಮದ್ರಾಘವೇಂದ್ರಭಾರತೀ ಸ್ವಾಮಿಭಿಃ**

**ಅಸ್ಮದತ್ಯಂತ ಪ್ರಿಯಶಿಷ್ಯ ಕೆ. ಸುಬ್ರಹ್ಮಣ್ಯ ಕೌಶಿಕರು, ಸಂಪಾದಕರು,**
**ಭಾರತ ದರ್ಶನ, ತ್ಯಾಗರಾಜನಗರ, ಬೆಂಗಳೂರು ಇವರಿಗೆ–**

**ಶ್ರೀಮನ್ನಾರಾಯಣ ಸ್ಮರಣ ಪುರಸ್ಸರಂ ಸಂದಿಷ್ಟೋಽಯಂ ಸಂದೇಶಃ**

ಅದಾಗಿ ಶ್ರೀ ಸವಾರಿಯು ಆರಾಧ್ಯ ಶ್ರೀ ಸೀತಾರಾಮಚಂದ್ರಾದಿ ದೇವತಾ ದಿವ್ಯ ಸನ್ನಿಧಿಯಲ್ಲಿ ಸಮಸ್ತ ಜನತೆಯ ಯೋಗಕ್ಷೇಮಗಳನ್ನು ಸಂಪ್ರಾರ್ಥಿಸುತ್ತಾ ಸದ್ಯ ಈ ಮುಕ್ಕಾಮಿನಲ್ಲಿ ಕ್ಷೇಮದಿಂದ ವಸತಿಮಾಡಿದೆ.

ಶ್ರೀಮದ್ಭಾಗವತದ ಪುರಾಣವನ್ನು ಸಂಪುಟ-ಸಂಪುಟವಾಗಿ, ಹೊರ ತರುತ್ತಿರುವ ನೀವು ಇದೀಗ ಲನೇ ಸಂಪುಟವನ್ನು ಬರುವ ದಿನಾಂಕ

22-12-1996ನೇ ರವಿವಾರದಂದು ಬಿಡುಗಡೆಗೊಳಿಸಲುದ್ಯುಕ್ತರಾಗಿ, ಈ ಕುರಿತು ನಮ್ಮ ಆಶೀರ್ವಾದ ಸಂದೇಶ ಬಯಸಿ ಬಿನ್ನವಿಸಿಕೊಂಡುದು ವೇದ್ಯವಾಗಿ ಸಂತೋಷವಾಯಿತು.

ಈ 8ನೇ ಸಂಪುಟದಲ್ಲಿ ಹತ್ತನೆಯ ಸ್ಕಂಧದ 14 ಅಧ್ಯಾಯಗಳೂ, ಹನ್ನೊಂದನೇ ಸ್ಕಂಧದ 17 ಅಧ್ಯಾಯಗಳೂ ಅಡಕವಾಗಿವೆ. ಹತ್ತನೇ ಸ್ಕಂಧದ 14 ಅಧ್ಯಾಯಗಳಲ್ಲಿ ಶ್ರೀಕೃಷ್ಣನ ರೋಚಕವಾದ ಮತ್ತು ಲೋಕೋತ್ತರವಾದ ಕಥೆಗಳಿವೆ. ಮಿಥಿಲೆಯಲ್ಲಿ ಶ್ರೀಕೃಷ್ಣನು ದ್ವಿರೂಪವನ್ನು ಧರಿಸಿ ಬ್ರಾಹ್ಮಣನ ಮತ್ತು ರಾಜನ ಸತ್ಕಾರವನ್ನು ಸ್ವೀಕರಿಸಿರುವುದು, ತಂದೆಯಾದ ವಸುದೇವನಿಗೆ ತತ್ತ್ವೋಪದೇಶ, ಸುಭದ್ರಾಹರಣ, ವೇದಸ್ತುತಿ, ವೃಕಾಸುರವಧೆ–ಇವೇ ಮೊದಲಾದ ರೋಚಕ ಕಥೆಗಳಿಂದ ತುಂಬಿಹೋಗಿದೆ. ಶ್ರೀಕೃಷ್ಣನಿಲ್ಲಿ ತನ್ನ ಅದ್ಭುತ ಪವಾಡಗಳನ್ನು ತೋರಿಸಿದ್ದಾನೆ. ತನ್ನ ಹಿಂದೆ ಗತಿಸಿಹೋಗಿದ್ದ ಆರು ಮಕ್ಕಳನ್ನು ತಂದು ತಾಯಿಗೆ ಒಪ್ಪಿಸುವ ಪ್ರಸಂಗ ರೋಮಾಂಚಕಾರಿಯಾಗಿದೆ. ಹನ್ನೊಂದನೇ ಸ್ಕಂಧದಲ್ಲಿ ಅಧ್ಯಾತ್ಮದ ಸೊಗಡನ್ನು ಕಾಣಬಹುದಾಗಿದೆ. ಮನುಷ್ಯನ ಹುಟ್ಟು–ಕಾಮದ ಭೋಗಕ್ಕಲ್ಲ. ಕೇವಲ ಆತ್ಮಸಾಕ್ಷಾತ್ಕಾರಕ್ಕಾಗಿ– ಎಂಬುದನ್ನು ಸ್ಪಷ್ಟೋಕ್ತಿಗಳಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಇಷ್ಟು ನೇರವಾಗಿ ಬಿರುನುಡಿಗಳಲ್ಲಿ ವೇದಾಂತವನ್ನು ಬೋಧಿಸುವ ಗ್ರಂಥವು ಮತ್ತೊಂದು ಇರಲಾರದು.

ಜಗದ್ಗುರುವಾಗಿ ಲೋಕಕಲ್ಯಾಣಕ್ಕೆ ನಡೆಸಿದ ಲೋಕೋತ್ತರ ಘಟನಾವಳಿಗಳಿಂದ ಕೂಡಿದ, ಈ ಸಂಪುಟದ ಬಿಡುಗಡೆ ಸಮಾರಂಭವು ಯಶಸ್ವಿಯಾಗಿ ಸಾಗಲೆಂದೂ, ಭಗವದ್ಭಕ್ತರಾದ ಕನ್ನಡಿಗರೆಲ್ಲ ಇದನ್ನು ಓದಿ ಆನಂದಿಸುವಂತಾಗಲೆಂದೂ, ಪರಿಶ್ರಮಿಕರಾದ ನೀವು ಶ್ರೀಭಗವತ್ಕೃಪೆಗೆ ಪಾತ್ರರಾಗುವಂತಾಗಲೆಂದೂ ಸುವರ್ಣ ಮಂತ್ರಾಕ್ಷತೆಯಿತ್ತು ಹಾರೈಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮೃತಯಃ

---

ಮಿತಿ :- ಶ್ರೀಧಾತೃನಾಮ ಸಂವತ್ಸರದ ಮಾರ್ಗಶೀರ್ಷ ಶುದ್ಧ ೧ಯು
(ದಿನಾಂಕ 11-12-1996) ಬುಧವಾರ.

ವಸತಿ :- ಶ್ರೀವಿದ್ಯಾಮಂದಿರ, ನಂ. 2/ಎ, ಜೆ.ಪಿ. ರಸ್ತೆ, ಗಿರಿನಗರ,
ಬೆಂಗಳೂರು - 560 085.

ಡಿ. ವೀರೇಂದ್ರ ಹೆಗ್ಗಡೆಯವರು
ಶ್ರೀ ಧರ್ಮಸ್ಥಳ - 574 216
ಕರ್ನಾಟಕ.

ದೂರವಾಣಿ : ಕಚೇರಿ : 77121

ಕ್ರಮ ಸಂಖ್ಯೆ : 3269/96 ದಿನಾಂಕ 15-12-96

ಪ್ರಕಾಶಕರು :
ಭಾರತ ದರ್ಶನ ಪ್ರಕಾಶನ
163, ಮಂಜುನಾಥ ರಸ್ತೆ
2ನೇ ಬ್ಲಾಕ್, ತ್ಯಾಗರಾಜನಗರ
ಬೆಂಗಳೂರು - 28.

## ಸಂದೇಶ

ಭಾರತ ದರ್ಶನ ಪ್ರಕಾಶನ, ಬೆಂಗಳೂರು ಇವರ ವತಿಯಿಂದ "ಶ್ರೀಮದ್ಭಾಗವತ"ದ ೮ನೆಯ ಸಂಪುಟದ ಪ್ರಕಾಶನ ಸಮಾರಂಭವು ನರಸಿಂಹರಾಜ ಕಾಲೋನಿ ಶ್ರೀರಾಮ ಮಂದಿರದಲ್ಲಿ ಪೂಜ್ಯ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶ್ರೀಶಂಕರಾಚಾರ್ಯ ಶ್ರೀ ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರ ದಿವ್ಯಸಮ್ಮುಖದಲ್ಲಿ ಜರುಗಲಿರುವ ವಿಚಾರ ತಿಳಿದು ಸಂತೋಷವಾಯಿತು.

ಧಾರ್ಮಿಕ ಜಿಜ್ಞಾಸುಗಳಿಗೆ ಈ ಪುಸ್ತಕವು ಅತ್ಯಂತ ಉಪಯುಕ್ತವಾಗಿ ಪರಿಣಮಿಸಲೆಂದು ಆಶಿಸುತ್ತೇನೆ.

ಸಮಾರಂಭವು ಸಹೃದಯ ಅಭಿಮಾನಿಗಳ ಉಪಸ್ಥಿತಿಯಲ್ಲಿ ಯಶಸ್ವಿಯಾಗಿ ನೆರವೇರಲೆಂದು ಹಾರೈಸುತ್ತೇನೆ.

ಶ್ರೀ ಮಂಜುನಾಥಸ್ವಾಮಿಯ ಅನುಗ್ರಹವಿರಲಿ.

ಇತಿ,
ಡಿ. ವೀರೇಂದ್ರ ಹೆಗ್ಗಡೆ
(ಡಿ. ವೀರೇಂದ್ರ ಹೆಗ್ಗಡೆಯವರು)

ಶ್ರೀಮಹಾಗಣಪತಯೇ ನಮಃ     ಶ್ರೀಮಹಾಸರಸ್ವತ್ಯೈ ನಮಃ     ಶ್ರೀಸದ್ಗುರವೇ ನಮಃ



# ಅಷ್ಟಮಃ ಸಂಪುಟಃ

# ಶ್ರೀಮದ್ಭಾಗವತೇ–ದಶಮಃ ಸ್ಕನ್ಧಃ

## (ಉತ್ತರಾರ್ಧಃ)

ಜನ್ಮಾದ್ಯಸ್ಯ ಯತೋಽನ್ವಯಾದಿತರತ–
ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ
ಮುಹ್ಯನ್ತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ
ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ
ಸತ್ಯಂ ಪರಂ ಧೀಮಹಿ ॥

### ಅಥ ಸಪ್ತಸಪ್ತತಿತಮೋಽಧ್ಯಾಯಃ

ಶ್ರೀಶುಕ ಉವಾಚ :
ಸ ತೂಪಸ್ಪೃಶ್ಯ ಸಲಿಲಂ ದಂಶಿತೋ ಧೃತಕಾರ್ಮುಕಃ ।
ನಯ ಮಾಂ ದ್ಯುಮತಃ ಪಾರ್ಶ್ವಂ ವೀರಸ್ಯೇತ್ಯಾಹ ಸಾರಥಿಮ್ ॥೧॥

ವಿಧಮನ್ತಂ ಸ್ವಸೈನ್ಯಾನಿ ದ್ಯುಮನ್ತಂ ರುಕ್ಮಿಣೀಸುತಃ ।
ಪ್ರತಿಹತ್ಯ ಪ್ರತ್ಯವಿಧ್ಯನ್ನಾರಾಚೈರಷ್ಟಭಿಃ ಸ್ಮಯನ್ ॥೨॥

ಚತುರ್ಭಿಶ್ಚತುರೋ ವಾಹಾನ್ ಸೂತಮೇಕೇನ ಚಾಹನತ್ ।
ದ್ವಾಭ್ಯಾಂ ಧನುಶ್ಚ ಕೇತುಂ ಚ ಶರೇಣಾನ್ಯೇನ ವೈ ಶಿರಃ ॥೩॥

ಗದಸಾತ್ಯಕಿಸಾಮ್ಬಾದ್ಯಾ ಜಘ್ನುಃ ಸೌಭಪತೇರ್ಬಲಮ್ ।
ಪೇತುಃ ಸಮುದ್ರೇ ಸೌಭೇಯಾಃ ಸರ್ವೇ ಸಂಭಿನ್ನ ಕನ್ಧರಾಃ ॥೪॥

ಏವಂ ಯದೂನಾಂ ಶಾಲ್ವಾನಾಂ ನಿಘ್ನ ತಾಮಿತರೇತರಮ್ ।
ಯುದ್ಧಂ ತ್ರಿಣವರಾತ್ರಂ ತದಭೂತ್ತುಮುಲಮುಲ್ಬಣಮ್ ॥೫॥

ಇನ್ದ್ರಪ್ರಸ್ಥಂ ಗತಃ ಕೃಷ್ಣ ಆಹೂತೋ ಧರ್ಮಸೂನುನಾ ।
ರಾಜಸೂಯೇಽಥ ನಿರ್ವೃತ್ತೇ ಶಿಶುಪಾಲೇ ಚ ಸಂಸ್ಥಿತೇ ॥೬॥

ಕುರುವೃದ್ಧಾನನುಜ್ಞಾಪ್ಯ ಮುನೀಂಶ್ಚ ಸಸುತಾಂ ಪೃಥಾಮ್ ।
ನಿಮಿತ್ತಾನ್ಯತಿಘೋರಾಣಿ ಪಶ್ಯನ್ದ್ವಾರವತೀಂ ಯಯೌ ॥೭॥

ಆಹ ಚಾಹಮಿಹಾಯಾತ ಆರ್ಯಮಿಶ್ರಾಭಿಸಙ್ಗತಃ ।
ರಾಜನ್ಯಾಶ್ಚೈದ್ಯಪಕ್ಷೀಯಾ ನೂನಂ ಹನ್ಯುಃ ಪುರೀಂ ಮಮ ॥೮॥

ವೀಕ್ಷ್ಯ ತತ್ಕದನಂ ಸ್ವಾನಾಂ ನಿರೂಪ್ಯ ಪುರರಕ್ಷಣಮ್ ।
ಸೌಭಂ ಚ ಶಾಲ್ವರಾಜಂ ಚ ದಾರುಕಂ ಪ್ರಾಹ ಕೇಶವಃ ॥೯॥

ರಥಂ ಪ್ರಾಪಯ ಮೇ ಸೂತ ಶಾಲ್ವಸ್ಯಾನ್ತಿಕಮಾಶು ವೈ ।
ಸಂಭ್ರಮಸ್ತೇ ನ ಕರ್ತವ್ಯೋ ಮಾಯಾವೀ ಸೌಭರಾಡಯಮ್ ॥೧೦॥

ಇತ್ಯುಕ್ತಶ್ಚೋದಯಾಮಾಸ ರಥಮಾಸ್ಥಾಯ ದಾರುಕಃ ।
ವಿಶನ್ತಂ ದದೃಶುಃ ಸರ್ವೇ ಸ್ವೇ ಪರೇ ಚಾರುಣಾನುಜಮ್ ॥೧೧॥

ಶಾಲ್ವಶ್ಚ ಕೃಷ್ಣಮಾಲೋಕ್ಯ ಹತಪ್ರಾಯಬಲೇಶ್ವರಃ ।
ಪ್ರಾಹರತ್ ಕೃಷ್ಣಸೂತಾಯ ಶಕ್ತಿಂ ಭೀಮರವಾಂ ಮೃಧೇ ॥೧೨॥

ತಾಮಾಪತನ್ತೀಂ ನಭಸಿ ಮಹೋಲ್ಕಾಮಿವ ರಂಹಸಾ ।
ಭಾಸಯನ್ತೀಂ ದಿಶಃ ಶೌರಿಃ ಸಾಯಕೈಃ ಶತಧಾಚ್ಛಿನತ್ ॥೧೩॥

ತಂ ಚ ಷೋಡಶಭಿರ್ವಿದ್ಧ್ವಾ ಬಾಣೈಃ ಸೌಭಂ ಚ ಖೇ ಭ್ರಮತ್ ।
ಅವಿಧ್ಯಚ್ಛರಸಂದೋಹೈಃ ಖಂ ಸೂರ್ಯ ಇವ ರಶ್ಮಿಭಿಃ ॥೧೪॥

ಶಾಲ್ವಃ ಶೌರೇಸ್ತು ದೋಃ ಸವ್ಯಂ ಸಶಾರ್ಙ್ಗಂ ಶಾರ್ಙ್ಗಧನ್ವನಃ ।
ಬಿಭೇದ ನ್ಯಪತದ್ಧಸ್ತಾತ್ ಶಾರ್ಙ್ಗಮಾಸೀತ್ತದದ್ಭುತಮ್ ॥೧೫॥

ಹಾಹಾಕಾರೋ ಮಹಾನಾಸೀದ್ ಭೂತಾನಾಂ ತತ್ರ ಪಶ್ಯತಾಮ್ ।
ವಿನದ್ಯ ಸೌಭರಾಡುಚ್ಚೈರಿದಮಾಹ ಜನಾರ್ದನಮ್ ॥೧೬॥

ಯತ್ತ್ವಯಾ ಮೂಢ ನಃ ಸಖ್ಯುರ್ಭ್ರಾತುರ್ಭಾರ್ಯಾ ಹೃತೇಕ್ಷತಾಮ್ ।
ಪ್ರಮತ್ತಃ ಸ ಸಭಾಮಧ್ಯೇ ತ್ವಯಾ ವ್ಯಾಪಾದಿತಃ ಸಖಾ ॥೧೭॥

ತಂ ತ್ವದ್ಯ ನಿಶಿತೈರ್ಬಾಣೈರಪರಾಜಿತಮಾನಿನಮ್ ।
ನಯಾಮ್ಯಪುನರಾವೃತ್ತಿಂ ಯದಿ ತಿಷ್ಠೇರ್ಮಮಾಗ್ರತಃ ॥೧೮॥

ಶ್ರೀಭಗವಾನುವಾಚ :

ವೃಥಾ ತ್ವಂ ಕತ್ಥಸೇ ಮನ್ದ ನ ಪಶ್ಯಸ್ಯನ್ತಿಕೇಽನ್ತಕಮ್ ।
ಪೌರುಷಂ ದರ್ಶಯನ್ತಿ ಸ್ಮ ಶೂರಾ ನ ಬಹುಭಾಷಿಣಃ ॥೧೯॥

ಇತ್ಯುಕ್ತ್ವಾ ಭಗವಾನ್ ಶಾಲ್ವಂ ಗದಯಾ ಭೀಮವೇಗಯಾ ।
ತತಾಡ ಜತ್ರೌ ಸಂರಬ್ಧಃ ಸ ಚಕಮ್ಪೇ ವಮನ್ನಸೃಕ್ ॥೨೦॥

ಗದಾಯಾಂ ಸನ್ನಿವೃತ್ತಾಯಾಂ ಶಾಲ್ವಸ್ತ್ವನ್ತರಧೀಯತ ।
ತತೋ ಮುಹೂರ್ತ ಆಗತ್ಯ ಪುರುಷಃ ಶಿರಸಾಚ್ಯುತಮ್ ।
ದೇವಕ್ಯಾ ಪ್ರಹಿತೋಽಸ್ಮೀತಿ ನತ್ವಾ ಪ್ರಾಹ ವಚೋ ರುದನ್ ॥೨೧॥

ಕೃಷ್ಣ ಕೃಷ್ಣ ಮಹಾಬಾಹೋ ಪಿತಾ ತೇ ಪಿತೃವತ್ಸಲ ।
ಬದ್ಧ್ವಾಪನೀತಃ ಶಾಲ್ವೇನ ಸೌನಿಕೇನ ಯಥಾ ಪಶುಃ ॥೨೨॥

ನಿಶಮ್ಯ ವಿಪ್ರಿಯಂ ಕೃಷ್ಣೋ ಮಾನುಷೀಂ ಪ್ರಕೃತಿಂ ಗತಃ ।
ವಿಮನಸ್ಕೋ ಘೃಣೀ ಸ್ನೇಹಾದ್ಬಭಾಷೇ ಪ್ರಾಕೃತೋ ಯಥಾ ॥೨೩॥

ಕಥಂ ರಾಮಮಸಂಭ್ರಾನ್ತಂ ಜಿತ್ವಾಽಜೇಯಂ ಸುರಾಸುರೈಃ ।
ಶಾಲ್ವೇನಾಲ್ಪೀಯಸಾ ನೀತಃ ಪಿತಾ ಮೇ ಬಲವಾನ್ ವಿಧಿಃ ॥೨೪॥

ಇತಿ ಬ್ರುವಾಣೇ ಗೋವಿನ್ದೇ ಸೌಭರಾಟ್ ಪ್ರತ್ಯುಪಸ್ಥಿತಃ ।
ವಸುದೇವಮಿವಾನೀಯ ಕೃಷ್ಣಂ ಚೇದಮುವಾಚ ಸಃ ॥೨೫॥

ಏಷ ತೇ ಜನಿತಾ ತಾತೋ ಯದರ್ಥಮಿಹ ಜೀವಸಿ ।
ವಧಿಷ್ಯೇ ವೀಕ್ಷತಸ್ತೇಽಮುಮೀಶಶ್ಚೇತ್ ಪಾಹಿ ಬಾಲಿಶ ॥೨೬॥

ಏವಂ ನಿರ್ಭರ್ತ್ಸ್ಯ ಮಾಯಾವೀ ಖಡ್ಗೇನಾನಕದುನ್ದುಭೇಃ ।
ಉತ್ಕೃತ್ಯ ಶಿರ ಆದಾಯ ಖಸ್ಥಂ ಸೌಭಂ ಸಮಾವಿಶತ್ ॥೨೭॥

ತತೋ ಮುಹೂರ್ತಂ ಪ್ರಕೃತಾವುಪಪ್ಲುತಃ
ಸ್ವಬೋಧ ಆಸ್ತೇ ಸ್ವಜನಾನುಷಙ್ಗತಃ ।
ಮಹಾನುಭಾವಸ್ತದಬುದ್ಧ್ಯದಾಸುರೀಃ
ಮಾಯಾಂ ಸ ಶಾಲ್ವಪ್ರಸೃತಾಂ ಮಯೋದಿತಾಮ್ ॥೨೮॥

ನ ತತ್ರ ದೂತಂ ನ ಪಿತುಃ ಕಲೇವರಂ
ಪ್ರಬುದ್ಧ ಆಜೌ ಸಮಪಶ್ಯದಚ್ಯುತಃ ।
ಸ್ವಾಪ್ನಂ ಯಥಾ ಚಾಮ್ಬರಚಾರಿಣಂ ರಿಪುಂ
ಸೌಭಸ್ಥಮಾಲೋಕ್ಯ ನಿಹನ್ತುಮುದ್ಯತಃ ॥೨೯॥

ಏವಂ ವದನ್ತಿ ರಾಜರ್ಷೇ ಋಷಯಃ ಕೇ ಚ ನಾನ್ವಿತಾಃ ।
ಯತ್ ಸ್ವವಾಚೋ ವಿರುಧ್ಯೇತ ನೂನಂ ತೇ ನ ಸ್ಮರನ್ತ್ಯುತ ॥೩೦॥

ಕ್ವ ಶೋಕಮೋಹೌ ಸ್ನೇಹೋ ವಾ ಭಯಂ ವಾ ಯೇಽಜ್ಞ ಸಂಭವಾಃ ।
ಕ್ವ ಚಾಖಣ್ಡಿತವಿಜ್ಞಾನಜ್ಞಾನೈಶ್ವರ್ಯಸ್ತ್ವಖಣ್ಡಿತಃ ॥೩೧॥

ಯತ್ಪಾದಸೇವೋರ್ಜಿತಯಾಽತ್ಮವಿದ್ಯಯಾ
ಹಿನ್ವನ್ತ್ಯನಾದ್ಯಾತ್ಮವಿಪರ್ಯಯಗ್ರಹಮ್ ।
ಲಭನ್ತ ಆತ್ಮೀಯಮನನ್ತಮೈಶ್ವರಂ
ಕುತೋ ನು ಮೋಹಃ ಪರಮಸ್ಯ ಸದ್ಗತೇಃ ॥೩೨॥

ತಂ ಶಸ್ತ್ರಪೂಗೈಃ ಪ್ರಹರನ್ತಮೋಜಸಾ
ಶಾಲ್ವಂ ಶರೈಃ ಶೌರಿರಮೋಘವಿಕ್ರಮಃ ।
ವಿದ್ಧ್ವಾಚ್ಛಿನದ್ವರ್ಮ ಧನುಃ ಶಿರೋಮಣಿಂ
ಸೌಭಂ ಚ ಶತ್ರೋರ್ಗದಯಾ ರುರೋಜ ಹ ॥೩೩॥

ತತ್ ಕೃಷ್ಣಹಸ್ತೇರಿತಯಾ ವಿಚೂರ್ಣಿತಂ
ಪಪಾತ ತೋಯೇ ಗದಯಾ ಸಹಸ್ರಧಾ ।
ವಿಸೃಜ್ಯ ತದ್ಭೂತಲಮಾಸ್ಥಿತೋ ಗದಾ-
ಮುದ್ಯಮ್ಯ ಶಾಲ್ವೋऽಚ್ಯುತಮಭ್ಯಗಾದ್ದ್ರುತಮ್ ॥೩೪॥

ಆಧಾವತಃ ಸಗದಂ ತಸ್ಯ ಬಾಹುಂ
ಭಲ್ಲೇನ ಛಿತ್ತ್ವಾಥ ರಥಾಙ್ಗಮದ್ಭುತಮ್ ।
ವಧಾಯ ಶಾಲ್ವಸ್ಯ ಲಯಾರ್ಕಸನ್ನಿಭಂ
ಬಿಭ್ರದ್ಬಭೌ ಸಾರ್ಕ ಇವೋದಯಾಚಲಃ ॥೩೫॥

ಜಹಾರ ತೇನೈವ ಶಿರಃ ಸಕುಣ್ಡಲಂ
ಕಿರೀಟಯುಕ್ತಂ ಪುರುಮಾಯಿನೋ ಹರಿಃ ।
ವಜ್ರೇಣ ವೃತ್ರಸ್ಯ ಯಥಾ ಪುರನ್ದರೋ
ಬಭೂವ ಹಾಹೇತಿ ವಚಸ್ತದಾ ನೃಣಾಮ್ ॥೩೬॥

ತಸ್ಮಿನ್ನಿಪತಿತೇ ಪಾಪೇ ಸೌಭೇ ಚ ಗದಯಾ ಹತೇ ।
ನೇದುರ್ದುನ್ದುಭಯೋ ರಾಜನ್ ದಿವಿ ದೇವಗಣೇರಿತಾಃ ।
ಸಖೀನಾಮಪಚಿತಿಂ ಕುರ್ವನ್ ದನ್ತವಕ್ತ್ರೋ ರುಷಾಭ್ಯಗಾತ್ ॥೩೭॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ದಶಮಸ್ಕನ್ಧೇ ಸೌಭವಧೋನಾಮ
ಸಪ್ತಸಪ್ತತಿತಮೋऽಧ್ಯಾಯಃ

---

## ಅಥ ಅಷ್ಟಸಪ್ತತಿತಮೋऽಧ್ಯಾಯಃ

ಶ್ರೀಶುಕ ಉವಾಚ :

ಶಿಶುಪಾಲಸ್ಯ ಶಾಲ್ವಸ್ಯ ಪೌಂಡ್ರಕಸ್ಯಾಪಿ ದುರ್ಮತಿಃ ।
ಪರಲೋಕಗತಾನಾಂ ಚ ಕುರ್ವನ್ ಪಾರೋಕ್ಷ್ಯಸೌಹೃದಮ್ ॥೧॥

ಏಕಃ ಪದಾತಿಃ ಸಂಕ್ರುದ್ಧೋ ಗದಾಪಾಣಿಃ ಪ್ರಕಂಪಯನ್ ।
ಪದ್ಭ್ಯಾಮಿಮಾಂ ಮಹಾರಾಜ ಮಹಾಸತ್ತ್ವೋ ವ್ಯದೃಶ್ಯತ ॥೨॥

ತಂ ತಥಾಽಯಾನ್ತಮಾಲೋಕ್ಯ ಗದಾಮಾದಾಯ ಸತ್ವರಃ ।
ಅವಪ್ಲುತ್ಯ ರಥಾತ್ ಕೃಷ್ಣಃ ಸಿನ್ಧುಂ ವೇಲೇವ ಪ್ರತ್ಯಧಾತ್ ॥೩॥

ಗದಾಮುದ್ಯಮ್ಯ ಕಾರೂಷೋ ಮುಕುನ್ದಂ ಪ್ರಾಹ ದುರ್ಮದಃ ।
ದಿಷ್ಟ್ಯಾ ದಿಷ್ಟ್ಯಾ ಭವಾನದ್ಯ ಮಮ ದೃಷ್ಟಿಪಥಂ ಗತಃ ॥೪॥

ತ್ವಂ ಮಾತುಲೇಯೋ ನಃ ಕೃಷ್ಣ ಮಿತ್ರಧ್ರುಙ್ಮಾಂ ಜಿಘಾಂಸಸಿ ।
ಅತಸ್ತ್ವಾಂ ಗದಯಾ ಮನ್ದ ಹನಿಷ್ಯೇ ವಜ್ರಕಲ್ಪಯಾ ॥೫॥

ತರ್ಹ್ಯಾನೃಣ್ಯಮುಪೈಮ್ಯಜ್ಞ ಮಿತ್ರಾಣಾಂ ಮಿತ್ರವತ್ಸಲಃ ।
ಬನ್ಧುರೂಪಮರಿಂ ಹತ್ವಾ ವ್ಯಾಧಿಂ ದೇಹಚರಂ ಯಥಾ ॥೬॥

ಏವಂ ರೂಕ್ಷೈಸ್ತುದನ್ ವಾಕ್ಯೈಃ ಕೃಷ್ಣಂ ತೋತ್ರೈರಿವ ದ್ವಿಪಮ್ ।
ಗದಯಾ ತಾಡಯನ್ಮೂರ್ಧ್ನಿ ಸಿಂಹವದ್ವ್ಯನದಚ್ಚಸಃ ॥೭॥

ಗದಯಾಭಿಹತೋಽಪ್ಯಾಜೌ ನ ಚಚಾಲ ಯದೂದ್ವಹಃ ।
ಕೃಷ್ಣೋಽಪಿ ತಮಹನ್ಗುರ್ವ್ಯಾ ಕೌಮೋದಕ್ಯಾ ಸ್ತನಾನ್ತರೇ ॥೮॥

ಗದಾನಿರ್ಭಿನ್ನ ಹೃದಯ ಉದ್ವಮನ್ರುಧಿರಂ ಮುಖಾತ್ ।
ಪ್ರಸಾರ್ಯ ಕೇಶಬಾಹ್ವಙ್ಘ್ರೀನ್ಧರಣ್ಯಾಂ ನ್ಯಪತದ್ವ್ಯಸುಃ ॥೯॥

ತತಃ ಸೂಕ್ಷ್ಮತರಂ ಜ್ಯೋತಿಃ ಕೃಷ್ಣಮಾವಿಶದದ್ಭುತಮ್ ।
ಪಶ್ಯತಾಂ ಸರ್ವಭೂತಾನಾಂ ಯಥಾ ಚೈದ್ಯವಧೇ ನೃಪ ॥೧೦॥

ವಿದೂರಥಸ್ತು ತದ್ಭ್ರಾತಾ ಭ್ರಾತೃಶೋಕಪರಿಪ್ಲುತಃ ।
ಆಗಚ್ಛದಸಿಚರ್ಮಾಭ್ಯಾಮುಚ್ಛ್ವಸಂಸ್ತಜ್ಜಿಘಾಂಸಯಾ ॥೧೧॥

ತಸ್ಯ ಚಾಪತತಃ ಕೃಷ್ಣಶ್ಚಕ್ರೇಣ ಕ್ಷುರನೇಮಿನಾ ।
ಶಿರೋ ಜಹಾರ ರಾಜೇನ್ದ್ರ ಸಕಿರೀಟಂ ಸಕುಣ್ಡಲಮ್ ॥೧೨॥

ಏವಂ ಸೌಭಂ ಚ ಶಾಲ್ವಂ ಚ ದನ್ತವಕ್ತ್ರಂ ಸಹಾನುಜಮ್ ।
ಹತ್ವಾ ದುರ್ವಿಷಹಾನನ್ಯೈರೀಡಿತಃ ಸುರಮಾನವೈಃ ॥೧೩॥

ಮುನಿಭಿಃ ಸಿದ್ಧಗನ್ಧರ್ವೈರ್ವಿದ್ಯಾಧರಮಹೋರಗೈಃ ।
ಅಪ್ಸರೋಭಿಃ ಪಿತೃಗಣೈರ್ಯಕ್ಷೈಃ ಕಿನ್ನರಚಾರಣೈಃ ॥೧೪॥

ಉಪಗೀಯಮಾನವಿಜಯಃ ಕುಸುಮೈರಭಿವರ್ಷಿತಃ ।
ವೃತಶ್ಚ ವೃಷ್ಣಿಪ್ರವರೈರ್ವಿವೇಶಾಲಙ್ಕೃತಾಂ ಪುರೀಮ್ ॥೧೫॥

ಏವಂ ಯೋಗೇಶ್ವರಃ ಕೃಷ್ಣೋ ಭಗವಾನ್ ಜಗದೀಶ್ವರಃ ।
ಈಯತೇ ಪಶುದೃಷ್ಟೀನಾಂ ನಿರ್ಜಿತೋ ಜಯತೀತಿ ಸಃ ॥೧೬॥

ಶ್ರುತ್ವಾ ಯುದ್ಧೋದ್ಯಮಂ ರಾಮಃ ಕುರೂಣಾಂ ಸಹ ಪಾಣ್ಡವೈಃ ।
ತೀರ್ಥಾಭಿಷೇಕವ್ಯಾಜೇನ ಮಧ್ಯಸ್ಥಃ ಪ್ರಯಯೌ ಕಿಲ ॥೧೭॥

ಸ್ನಾತ್ವಾ ಪ್ರಭಾಸೇ ಸನ್ತರ್ಪ್ಯ ದೇವರ್ಷಿಪಿತೃಮಾನವಾನ್ ।
ಸರಸ್ವತೀಂ ಪ್ರತಿಸ್ರೋತಂ ಯಯೌ ಬ್ರಾಹ್ಮಣಸಂವೃತಃ ॥೧೮॥

ಪೃಥೂದಕಂ ಬಿನ್ದುಸರಸ್ತ್ರಿತಕೂಪಂ ಸುದರ್ಶನಮ್ ।
ವಿಶಾಲಂ ಬ್ರಹ್ಮತೀರ್ಥಂ ಚ ಚಕ್ರಂ ಪ್ರಾಚೀಂ ಸರಸ್ವತೀಮ್ ॥೧೯॥

ಯಮುನಾಮನು ಯಾನ್ಯೇವ ಗಙ್ಗಾಮನು ಚ ಭಾರತ ।
ಜಗಾಮ ನೈಮಿಷಂ ಯತ್ರ ಋಷಯಃ ಸತ್ರಮಾಸತೇ ॥೨೦॥

ತಮಾಗತಮಭಿಪ್ರೇತ್ಯ ಮುನಯೋ ದೀರ್ಘಸತ್ರಿಣಃ ।
ಅಭಿನನ್ದ್ಯ ಯಥಾನ್ಯಾಯಂ ಪ್ರಣಮ್ಯೋತ್ಥಾಯ ಚಾರ್ಚಯನ್ ॥೨೧॥

ಸೋಽರ್ಚಿತಃ ಸಪರೀವಾರಃ ಕೃತಾಸನಪರಿಗ್ರಹಃ ।
ರೋಮಹರ್ಷಣಮಾಸೀನಂ ಮಹರ್ಷೇಃ ಶಿಷ್ಯಮೈಕ್ಷತ ॥೨೨॥

ಅಪ್ರತ್ಯುತ್ಥಾಯಿನಂ ಸೂತಮಕೃತಪ್ರಹ್ವಣಾಞ್ಜಲಿಮ್ ।
ಅಧ್ಯಾಸೀನಂ ಚ ತಾನ್ವಿಪ್ರಾಂಶ್ಚುಕೋಪೋದ್ವೀಕ್ಷ್ಯ ಮಾಧವಃ ॥೨೩॥

ಕಸ್ಮಾದಸಾವಿಮಾನ್ವಿಪ್ರಾನಧ್ಯಾಸ್ತೇ ಪ್ರತಿಲೋಮಜಃ ।
ಧರ್ಮಪಾಲಾಂಸ್ತಥೈವಾಸ್ಮಾನ್ವಧಮರ್ಹತಿ ದುರ್ಮತಿಃ ॥೨೪॥

ಋಷೇರ್ಭಗವತೋ ಭೂತ್ವಾ ಶಿಷ್ಯೋಽಧೀತ್ಯ ಬಹೂನಿ ಚ ।
ಸೇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥೨೫॥

ಅದಾನ್ತಸ್ಯಾವಿನೀತಸ್ಯ ವೃಥಾ ಪಣ್ಡಿತಮಾನಿನಃ ।
ನ ಗುಣಾಯ ಭವನ್ತಿ ಸ್ಮ ನಟಸ್ಯೇವಾಜಿತಾತ್ಮನಃ ॥೨೬॥

ಏತದರ್ಥೋ ಹಿ ಲೋಕೇಽಸ್ಮಿನ್ನವತಾರೋ ಮಯಾ ಕೃತಃ ।
ವಧ್ಯಾ ಮೇ ಧರ್ಮಧ್ವಜಿನಸ್ತೇ ಹಿ ಪಾತಕಿನೋಽಧಿಕಾಃ ॥೨೭॥

ಏತಾವದುಕ್ತ್ವಾ ಭಗವಾನ್ ನಿವೃತ್ತೋಽಸದ್ವಧಾದಪಿ ।
ಭಾವಿತ್ವಾತ್ತಂ ಕುಶಾಗ್ರೇಣ ಕರಸ್ಥೇನಾಹನತ್ ಪ್ರಭುಃ ॥೨೮॥

ಹಾಹೇತಿ ವಾದಿನಃ ಸರ್ವೇ ಮುನಯಃ ಖಿನ್ನಮಾನಸಾಃ ।
ಊಚುಃ ಸಙ್ಕರ್ಷಣಂ ದೇವಮಧರ್ಮಸ್ತೇ ಕೃತಃ ಪ್ರಭೋ ॥೨೯॥

ಅಸ್ಯ ಬ್ರಹ್ಮಾಸನಂ ದತ್ತಮಸ್ಮಾಭಿರ್ಯದುನನ್ದನ ।
ಆಯುಶ್ಚಾತ್ಮಾಕ್ಲಮಂ ತಾವದ್ಯಾವತ್ಸತ್ರಂ ಸಮಾಪ್ಯತೇ ॥೩೦॥

ಅಜಾನತೈವಾಚರಿತಸ್ತ್ವಯಾ ಬ್ರಹ್ಮವಧೋ ಯಥಾ ।
ಯೋಗೇಶ್ವರಸ್ಯ ಭವತೋ ನಾಮ್ನಾ ಯೋಽಪಿ ನಿಯಾಮಕಃ ॥೩೧॥

ಯದ್ಯೇತದ್ಬ್ರಹ್ಮಹತ್ಯಾಯಾಃ ಪಾವನಂ ಲೋಕಪಾವನ ।
ಚರಿಷ್ಯತಿ ಭವಾನ್ಲೋಕಸಙ್ಗ್ರಹೋಽನನ್ಯಚೋದಿತಃ ॥೩೨॥

ಶ್ರೀಭಗವಾನುವಾಚ :

ಕರಿಷ್ಯೇ ವಧನಿರ್ವೇಶಂ ಲೋಕಾನುಗ್ರಹಕಾಮ್ಯಯಾ ।
ನಿಯಮಃ ಪ್ರಥಮೇ ಕಲ್ಪೇ ಯಾವಾನ್ಸ ತು ವಿಧೀಯತಾಮ್ ॥೩೩॥

ದೀರ್ಘಮಾಯುರ್ಬತೈತಸ್ಯ ಸತ್ತ್ವಮಿನ್ದ್ರಿಯಮೇವ ಚ ।
ಆಶಾಸಿತಂ ಯತ್ತದ್ಬ್ರೂತ ಸಾಧಯೇ ಯೋಗಮಾಯಯಾ ॥೩೪॥

ಋಷಯ ಊಚುಃ :

ಅಸ್ತ್ರಸ್ಯ ತವ ವೀರ್ಯಸ್ಯ ಮೃತ್ಯೋರಸ್ಮಾಕಮೇವ ಚ ।
ಯಥಾ ಭವೇದ್ವಚಃ ಸತ್ಯಂ ತಥಾ ರಾಮ ವಿಧೀಯತಾಮ್ ॥೩೫॥

ಶ್ರೀಭಗವಾನುವಾಚ :

ಆತ್ಮಾ ವೈ ಪುತ್ರ ಉತ್ಪನ್ನ ಇತಿ ವೇದಾನುಶಾಸನಮ್ ।
ತಸ್ಮಾದಸ್ಯ ಭವೇದ್ವಕ್ತಾ ಆಯುರಿನ್ದ್ರಿಯಸತ್ತ್ವವಾನ್ ॥೩೬॥
ಕಿಂ ವಃ ಕಾಮೋ ಮುನಿಶ್ರೇಷ್ಠಾ ಬ್ರೂತಾಹಂ ಕರವಾಣ್ಯಥ ।
ಅಜಾನತಸ್ತ್ವಪಚಿತಿಂ ಯಥಾ ಮೇ ಚಿನ್ತ್ಯತಾಂ ಬುಧಾಃ ॥೩೭॥

ಋಷಯ ಊಚುಃ :

ಇಲ್ವಲಸ್ಯ ಸುತೋ ಘೋರೋ ಬಲ್ವಲೋ ನಾಮ ದಾನವಃ ।
ಸ ದೂಷಯತಿ ನಃ ಸತ್ರಮೇತ್ಯ ಪರ್ವಣಿ ಪರ್ವಣಿ ॥೩೮॥
ತಂ ಪಾಪಂ ಜಹಿ ದಾಶಾರ್ಹ ತನ್ನಃ ಶುಶ್ರೂಷಣಂ ಪರಮ್ ।
ಪೂಯಶೋಣಿತವಿಣ್ಮೂತ್ರಸುರಾಮಾಂಸಾಭಿವರ್ಷಿಣಮ್ ॥೩೯॥
ತತಶ್ಚ ಭಾರತಂ ವರ್ಷಂ ಪರೀತ್ಯ ಸುಸಮಾಹಿತಃ ।
ಚರಿತ್ವಾ ದ್ವಾದಶ ಮಾಸಾಂಸ್ತೀರ್ಥಸ್ನಾಯೀ ವಿಶುದ್ಧ್ಯಸೇ ॥೪೦॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ದಶಮಸ್ಕನ್ಧೇ ಬಲದೇವಚರಿತ್ರೇ
ಬಲ್ವಲವಧೋಪಕ್ರಮೋನಾಮಾಷ್ಟಸಪ್ತತಿತಮೋಽಧ್ಯಾಯಃ

---

## ಅಥ ಏಕೋನಾಶೀತಿತಮೋಽಧ್ಯಾಯಃ

ಶ್ರೀಶುಕ ಉವಾಚ :

ತತಃ ಪರ್ವಣ್ಯುಪಾವೃತ್ತೇ ಪ್ರಚಣ್ಡಃ ಪಾಂಸುವರ್ಷಣಃ ।
ಭೀಮೋ ವಾಯುರಭೂದ್ರಾಜನ್ ಪೂಯಗನ್ಧಸ್ತು ಸರ್ವಶಃ ॥೧॥
ತತೋಽಮೇಧ್ಯಮಯಂ ವರ್ಷಂ ಬಲ್ವಲೇನ ವಿನಿರ್ಮಿತಮ್ ।
ಅಭವದ್ಯಜ್ಞಶಾಲಾಯಾಂ ಸೋಽನ್ವದೃಶ್ಯತ ಶೂಲಧೃಕ್ ॥೨॥
ತಂ ವಿಲೋಕ್ಯ ಬೃಹತ್ಕಾಯಂ ಭಿನ್ನಾಞ್ಜನಚಯೋಪಮಮ್ ।
ತಪ್ತತಾಮ್ರಶಿಖಾಶ್ಮಶ್ರುಂ ದಂಷ್ಟ್ರೋಗ್ರಭ್ರುಕುಟೀಮುಖಮ್ ॥೩॥

ಸಸ್ಮಾರ ಮುಸಲಂ ರಾಮಃ ಪರಸೈನ್ಯವಿದಾರಣಮ್ ।
ಹಲಂ ಚ ದೈತ್ಯದಮನಂ ತೇ ತೂರ್ಣಮುಪತಸ್ಥತುಃ ॥೪॥

ತಮಾಕೃಷ್ಯ ಹಲಾಗ್ರೇಣ ಬಲ್ವಲಂ ಗಗನೇಚರಮ್ ।
ಮುಸಲೇನಾಹನತು ದ್ಧೋ ಮೂರ್ಧ್ನಿ ಬ್ರಹ್ಮದ್ರುಹಂ ಬಲಃ ॥೫॥

ಸೋಽಪತದ್ಭುವಿ ನಿರ್ಭಿನ್ನ ಲಲಾಟೋಽಸೃಕ್ಸಮುತ್ಸೃಜನ್ ।
ಮುಞ್ಚನ್ನಾರ್ತಸ್ವರಂ ಶೈಲೋ ಯಥಾ ವಜ್ರಹತೋಽರುಣಃ ॥೬॥

ಸಂಸ್ತುತ್ಯ ಮುನಯೋ ರಾಮಂ ಪ್ರಯುಜ್ಯಾಪಿ ತಥಾಶಿಷಃ ।
ಅಭ್ಯಷಿಞ್ಚನ್ಮಹಾಭಾಗಾ ವೃತ್ರಘ್ನಂ ವಿಬುಧಾ ಯಥಾ ॥೭॥

ವೈಜಯನ್ತೀಂ ದದುರ್ಮಾಲಾಂ ಶ್ರೀಧಾಮಾಮ್ಲಾನಪಙ್ಕಜಾಮ್ ।
ರಾಮಾಯ ವಾಸಸೀ ದಿವ್ಯೇ ದಿವ್ಯಾನ್ಯಾಭರಣಾನಿ ಚ ॥೮॥

ಅಥ ತೈರಭ್ಯನುಜ್ಞಾತಃ ಕೌಶಿಕೀಮೇತ್ಯ ಬ್ರಾಹ್ಮಣೈಃ ।
ಸ್ನಾ ತ್ವಾ ಸರೋವರಮಗಾದ್ಯತಃ ಸರಯುರಾಸ್ರವತ್ ॥೯॥

ಅನುಸ್ರೋತೇನ ಸರಯೂಂ ಪ್ರಯಾಗಮುಪಗಮ್ಯ ಸಃ ।
ಸ್ನಾ ತ್ವಾ ಸನ್ತರ್ಪ್ಯ ದೇವಾದೀನ್ಜಗಾಮ ಪುಲಹಾಶ್ರಮಮ್ ॥೧೦॥

ಗೋಮತೀಂ ಗಣ್ಡಕೀಂ ಸ್ನಾ ತ್ವಾ ವಿಪಾಶಾಂ ಶೋಣ ಆಪ್ಲುತಃ ।
ಗಯಾಂ ಗತ್ವಾ ಪಿತೄನಿಷ್ಟ್ವಾ ಗಙ್ಗಾಸಾಗರಸಙ್ಗಮೇ ॥೧೧॥

ಉಪಸ್ಪೃಶ್ಯ ಮಹೇನ್ದ್ರಾದ್ರೌ ರಾಮಂ ದೃಷ್ಟ್ವಾಭಿವಾದ್ಯ ಚ ।
ಸಪ್ತಗೋದಾವರೀಂ ವೇಣಾಂ ಪಮ್ಪಾಂ ಭೀಮರಥೀಂ ತತಃ ॥೧೨॥

ಸ್ಕನ್ದಂ ದೃಷ್ಟ್ವಾ ಯಯೌ ರಾಮಃ ಶ್ರೀಶೈಲಂ ಗಿರಿಶಾಲಯಮ್ ।
ದ್ರವಿಡೇಷು ಮಹಾಪುಣ್ಯಂ ದೃಷ್ಟ್ವಾದ್ರಿಂ ವೇಙ್ಕಟಂ ಪ್ರಭುಃ ॥೧೩॥

ಕಾಮಕೋಷ್ಣೀಂ ಪುರೀಂ ಕಾಞ್ಚೀಂ ಕಾವೇರೀಂ ಚ ಸರಿದ್ವರಾಮ್ ।
ಶ್ರೀರಙ್ಗಾಖ್ಯಂ ಮಹಾಪುಣ್ಯಂ ಯತ್ರ ಸನ್ನಿಹಿತೋ ಹರಿಃ ॥೧೪॥

ಋಷಭಾದ್ರಿಂ ಹರೇಃ ಕ್ಷೇತ್ರಂ ದಕ್ಷಿಣಾಂ ಮಥುರಾಂ ತಥಾ ।
ಸಾಮುದ್ರಂ ಸೇತುಮಗಮನ್ಮಹಾಪಾತಕನಾಶನಮ್ ॥೧೫॥

ತತ್ರಾಯುತಮದಾದ್ಧೇನೂರ್ಬ್ರಾಹ್ಮಣೇಭ್ಯೋ ಹಲಾಯುಧಃ ।
ಕೃತಮಾಲಾಂ ತಾಮ್ರಪರ್ಣೀಂ ಮಲಯಂ ಚ ಕುಲಾಚಲಮ್ ॥೧೬॥

ತತ್ರಾಗಸ್ತ್ಯಂ ಸಮಾಸೀನಂ ನಮಸ್ಕೃತ್ಯಾಭಿವಾದ್ಯ ಚ ।
ಯೋಜಿತಸ್ತೇನ ಚಾಶೀರ್ಭಿರನುಜ್ಞಾತೋ ಗತೋಽರ್ಣವಮ್ ।
ದಕ್ಷಿಣಂ ತತ್ರ ಕನ್ಯಾಖ್ಯಾಂ ದುರ್ಗಾಂ ದೇವೀಂ ದದರ್ಶ ಸಃ ॥೧೭॥

ತತಃ ಫಾಲ್ಗುನಮಾಸಾದ್ಯ ಪಞ್ಚಾಪ್ಸರಸಮುತ್ತಮಮ್ ।
ವಿಷ್ಣುಃ ಸನ್ನಿಹಿತೋ ಯತ್ರ ಸ್ನಾತ್ವಾ ಸ್ಪರ್ಶದ್ಗವಾಯುತಮ್ ॥೧೮॥

ತತೋಽಭಿವ್ರಜ್ಯ ಭಗವಾನ್ ಕೇರಲಾಂಸ್ತು ತ್ರಿಗರ್ತಕಾನ್ ।
ಗೋಕರ್ಣಾಖ್ಯಂ ಶಿವಕ್ಷೇತ್ರಂ ಸಾಂನಿಧ್ಯಂ ಯತ್ರ ಧೂರ್ಜಟೇಃ ॥೧೯॥

ಆರ್ಯಾಂ ದ್ವೈಪಾಯನೀಂ ದೃಷ್ಟ್ವಾ ಶೂರ್ಪಾರಕಮಗಾದ್ಬಲಃ ।
ವಾಪೀಂ ಪಯೋಷ್ಣೀಂ ನಿರ್ವಿನ್ಧ್ಯಾಮುಪಸ್ಪೃಶ್ಯಾಥ ದಣ್ಡಕಮ್ ॥೨೦॥

ಪ್ರವಿಶ್ಯ ರೇವಾಮಗಮದ್ಯತ್ರ ಮಾಹಿಷ್ಮತೀ ಪುರೀ ।
ಮನುತೀರ್ಥಮುಪಸ್ಪೃಶ್ಯ ಪ್ರಭಾಸಂ ಪುನರಾಗಮತ್ ॥೨೧॥

ಶ್ರುತ್ವಾ ದ್ವಿಜೈಃ ಕಥ್ಯಮಾನಂ ಕುರುಪಾಣ್ಡವಸಂಯುಗೇ ।
ಸರ್ವರಾಜನ್ಯನಿಧನಂ ಭಾರಂ ಮೇನೇ ಹೃತಂ ಭುವಃ ॥೨೨॥

ಸ ಭೀಮದುರ್ಯೋಧನಯೋರ್ಗದಾಭ್ಯಾಂ ಯುಧ್ಯತೋರ್ಮೃಧೇ ।
ವಾರಯಿಷ್ಯನ್ವಿನಶನಂ ಜಗಾಮ ಯದುನನ್ದನಃ ॥೨೩॥

ಯುಧಿಷ್ಠಿರಸ್ತು ತಂ ದೃಷ್ಟ್ವಾ ಯಮೌ ಕೃಷ್ಣಾರ್ಜುನಾವಪಿ ।
ಅಭಿವಾದ್ಯಾಭವಂಸ್ತೂಷ್ಣೀಂ ಕಿಂವಿವಕ್ಷುರಿಹಾಗತಃ ॥೨೪॥

ಗದಾಪಾಣೀ ಉಭೌ ದೃಷ್ಟ್ವಾ ಸಂರಬ್ಧೌ ವಿಜಯೈಷಿಣೌ ।
ಮಣ್ಡಲಾನಿ ವಿಚಿತ್ರಾಣಿ ಚರನ್ತಾವಿದಮಬ್ರವೀತ್ ॥೨೫॥

ಯುವಾಂ ತುಲ್ಯಬಲೌ ವೀರೌ ಹೇ ರಾಜನ್ ಹೇ ವೃಕೋದರ ।
ಏಕಂ ಪ್ರಾಣಾಧಿಕಂ ಮನ್ಯೇ ಉತೈಕಂ ಶಿಕ್ಷಯಾಧಿಕಮ್ ॥೨೬॥

ತಸ್ಮಾದೇಕತರಸ್ಯೇಹ ಯುವಯೋಃ ಸಮವೀರ್ಯಯೋಃ ।
ನ ಲಕ್ಷ್ಯತೇ ಜಯೋಽನ್ಯೋ ವಾ ವಿರಮತ್ವಫಲೋ ರಣಃ ॥೨೭॥

ನ ತದ್ವಾಕ್ಯಂ ಜಗೃಹತುರ್ಬದ್ಧವೈರೌ ನೃಪಾರ್ಥವತ್ ।
ಅನುಸ್ಮರನ್ತಾವನ್ಯೋನ್ಯಂ ದುರುಕ್ತಂ ದುಷ್ಕೃತಾನಿ ಚ ॥೨೮॥

ದಿಷ್ಟಂ ತದನುಮನ್ವಾನೋ ರಾಮೋ ದ್ವಾರವತೀಂ ಯಯೌ ।
ಉಗ್ರಸೇನಾದಿಭಿಃ ಪ್ರೀತೈರ್ಜ್ಞಾತಿಭಿಃ ಸಮುಪಾಗತಃ ॥೨೯॥

ತಂ ಪುನರ್ನೈಮಿಷಂ ಪ್ರಾಪ್ತಮೃಷಯೋಽಯಾಜಯನ್ಮುದಾ ।
ಕ್ರತ್ವಙ್ಗಂ ಕ್ರತುಭಿಃ ಸರ್ವೈರ್ನಿವೃತ್ತಾಖಿಲವಿಗ್ರಹಮ್ ॥೩೦॥

ತೇಭ್ಯೋ ವಿಶುದ್ಧವಿಜ್ಞಾನಂ ಭಗವಾನ್ ವ್ಯತರದ್ವಿಭುಃ ।
ಯೇನೈವಾತ್ಮನ್ಯದೋ ವಿಶ್ವಮಾತ್ಮಾನಂ ವಿಶ್ವಗಂ ವಿದುಃ ॥೩೧॥

ಸ್ವಪತ್ನ್ಯಾವಭೃಥಸ್ನಾತೋ ಜ್ಞಾತಿಬನ್ಧುಸುಹೃದ್ವೃತಃ ।
ರೇಜೇ ಸ್ವಜ್ಯೋತ್ಸ್ನಯೇವೇನ್ದುಃ ಸುವಾಸಾಃ ಸುಷ್ಠ್ವಲಙ್ಕೃತಃ ॥೩೨॥

ಈದೃಗ್ವಿಧಾನ್ಯಸಙ್ಖ್ಯಾನಿ ಬಲಸ್ಯ ಬಲಶಾಲಿನಃ ।
ಅನನ್ತಸ್ಯಾಪ್ರಮೇಯಸ್ಯ ಮಾಯಾಮರ್ತ್ಯಸ್ಯ ಸನ್ತಿ ಹಿ ॥೩೩॥

ಯೋಽನುಸ್ಮರೇತ ರಾಮಸ್ಯ ಕರ್ಮಾಣ್ಯದ್ಭುತಕರ್ಮಣಃ ।
ಸಾಯಂ ಪ್ರಾತರನನ್ತಸ್ಯ ವಿಷ್ಣೋಃ ಸ ದಯಿತೋ ಭವೇತ್ ॥೩೪॥

ಇತಿ ಶ್ರೀಮಾದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ದಶಮಸ್ಕನ್ಧೇ ಬಲದೇವತೀರ್ಥಯಾತ್ರಾ ನಿರೂಪಣಂ
ನಾಮ ಏಕೋನಾಶೀತಿತಮೋಽಧ್ಯಾಯಃ

---

# ಅಥ ಅಶೀತಿತಮೋಽಧ್ಯಾಯಃ

ರಾಜೋವಾಚ :

ಭಗವನ್ ಯಾನಿ ಚಾನ್ಯಾನಿ ಮುಕುನ್ದಸ್ಯ ಮಹಾತ್ಮನಃ ।
ವೀರ್ಯಾಣ್ಯನನ್ತವೀರ್ಯಸ್ಯ ಶ್ರೋತುಮಿಚ್ಛಾಮಹೇ ಪ್ರಭೋ ॥೧॥

ಕೋ ನು ಶ್ರುತ್ವಾಸಕೃದ್ಬ್ರಹ್ಮನ್ನುತ್ತಮಶ್ಲೋಕಸತ್ಕಥಾಃ ।
ವಿರಮೇತ ವಿಶೇಷಜ್ಞೋ ವಿಷಣ್ಣಃ ಕಾಮಮಾರ್ಗಣೈಃ ॥೨॥

ಸಾ ವಾಗ್ಯಯಾ ತಸ್ಯ ಗುಣಾನ್ಗೃಣೀತೇ
ಕರೌ ಚ ತತ್ಕರ್ಮಕರೌ ಮನಶ್ಚ ।
ಸ್ಮರೇದ್ವಸನ್ತಂ ಸ್ಥಿರಜಙ್ಗಮೇಷು
ಶೃಣೋತಿ ತತ್ಪುಣ್ಯಕಥಾಃ ಸ ಕರ್ಣಃ ॥೩॥

ಶಿರಸ್ತು ತಸ್ಯೋಭಯಲಿಙ್ಗ ಮಾನಮೇ-
ತ್ತದೇವ ಯತ್ಪಶ್ಯತಿ ತದ್ಧಿ ಚಕ್ಷುಃ ।
ಅಙ್ಗಾನಿ ವಿಷ್ಣೋರಥ ತಜ್ಜನಾನಾಂ
ಪಾದೋದಕಂ ಯಾನಿ ಭಜನ್ತಿ ನಿತ್ಯಮ್ ॥೪॥

ಸೂತ ಉವಾಚ :

ವಿಷ್ಣುರಾತೇನ ಸಮ್ಪೃಷ್ಟೋ ಭಗವಾನ್ ಬಾದರಾಯಣಿಃ ।
ವಾಸುದೇವೇ ಭಗವತಿ ನಿಮಗ್ನಹೃದಯೋಽಬ್ರವೀತ್ ॥೫॥

ಶ್ರೀಶುಕ ಉವಾಚ :

ಕೃಷ್ಣಸ್ಯಾಸೀತ್ಸಖಾ ಕಶ್ಚಿದ್ಬ್ರಾಹ್ಮಣೋ ಬ್ರಹ್ಮವಿತ್ತಮಃ ।
ವಿರಕ್ತ ಇನ್ದ್ರಿಯಾರ್ಥೇಷು ಪ್ರಶಾನ್ತಾತ್ಮಾ ಜಿತೇನ್ದ್ರಿಯಃ ॥೬॥

ಯದೃಚ್ಛಯೋಪಪನ್ನೇನ ವರ್ತಮಾನೋ ಗೃಹಾಶ್ರಮೀ ।
ತಸ್ಯ ಭಾರ್ಯಾ ಕುಚೈಲಸ್ಯ ಕ್ಷುತ್ಕ್ಷಾಮಾ ಚ ತಥಾವಿಧಾ ॥೭॥

ಪತಿವ್ರತಾ ಪತಿಂ ಪ್ರಾಹ ಮ್ಲಾಯತಾ ವದನೇನ ಸಾ ।
ದರಿದ್ರಾ ಸೀದಮಾನಾ ಸಾ ವೇಪಮಾನಾಭಿಗಮ್ಯ ಚ ॥೮॥

ನನು ಬ್ರಹ್ಮನ್ ಭಗವತಃ ಸಖಾ ಸಾಕ್ಷಾಚ್ಛ್ರಿಯಃ ಪತಿಃ ।
ಬ್ರಹ್ಮಣ್ಯಶ್ಚ ಶರಣ್ಯಶ್ಚ ಭಗವಾನ್ ಸಾತ್ವತರ್ಷಭಃ ॥೯॥

ತಮುಪೈಹಿ ಮಹಾಭಾಗ ಸಾಧೂನಾಂ ಚ ಪರಾಯಣಮ್ ।
ದಾಸ್ಯತಿ ದ್ರವಿಣಂ ಭೂರಿ ಸೀದತೇ ತೇ ಕುಟುಮ್ಬಿನೇ ॥೧೦॥

ಆಸ್ತೇಽಧುನಾ ದ್ವಾರವತ್ಯಾಂ ಭೋಜವೃಷ್ಣ್ಯನ್ಧಕೇಶ್ವರಃ ।
ಸ್ಮರತಃ ಪಾದಕಮಲಮಾತ್ಮಾನಮಪಿ ಯಚ್ಛತಿ ।
ಕಿಂನ್ವರ್ಥಕಾಮಾನ್ಭಜತೋ ನಾತ್ಯಭೀಷ್ಟಾಞ್ಜಗದ್ಗುರುಃ ॥೧೧॥

ಸ ಏವಂ ಭಾರ್ಯಯಾ ವಿಪ್ರೋ ಬಹುಶಃ ಪ್ರಾರ್ಥಿತೋ ಮೃದು ।
ಅಯಂ ಹಿ ಪರಮೋ ಲಾಭ ಉತ್ತಮಶ್ಲೋಕದರ್ಶನಮ್ ॥೧೨॥

ಇತಿ ಸಞ್ಚಿನ್ತ್ಯ ಮನಸಾ ಗಮನಾಯ ಮತಿಂ ದಧೇ ।
ಅಪ್ಯಸ್ತ್ಯುಪಾಯನಂ ಕಿಞ್ಚಿದ್ಗೃಹೇ ಕಲ್ಯಾಣಿ ದೀಯತಾಮ್ ॥೧೩॥

ಯಾಚಿತ್ವಾ ಚತುರೋ ಮುಷ್ಟೀನ್ವಿಪ್ರಾನ್ ಪೃಥುಕತಣ್ಡುಲಾನ್ ।
ಚೈಲಖಣ್ಡೇನ ತಾನ್ಬದ್ಧ್ವಾ ಭರ್ತ್ರೇ ಪ್ರಾದಾದುಪಾಯನಮ್ ॥೧೪॥

ಸ ತಾನಾದಾಯ ವಿಪ್ರಾಗ್ರ್ಯಃ ಪ್ರಯಯೌ ದ್ವಾರಕಾಂ ಕಿಲ ।
ಕೃಷ್ಣಸನ್ದರ್ಶನಂ ಮಹ್ಯಂ ಕಥಂ ಸ್ಯಾದಿತಿ ಚಿನ್ತಯನ್ ॥೧೫॥

ತ್ರೀಣಿ ಗುಲ್ಮಾನ್ಯತೀಯಾಯ ತಿಸ್ರಃ ಕಕ್ಷಾಶ್ಚ ಸ ದ್ವಿಜಃ ।
ವಿಪ್ರೋಽಗಮ್ಯಾನ್ಧಕವೃಷ್ಣೀನಾಂ ಗೃಹೇಷ್ವಚ್ಯುತಧರ್ಮಿಣಾಮ್ ॥೧೬॥

ಗೃಹಂ ದ್ವ್ಯಷ್ಟಸಹಸ್ರಾಣಾಂ ಮಹಿಷೀಣಾಂ ಹರೇರ್ದ್ವಿಜಃ ।
ವಿವೇಶೈಕತಮಂ ಶ್ರೀಮದ್ಬ್ರಹ್ಮಾನನ್ದಂ ಗತೋ ಯಥಾ ॥೧೭॥

ತಂ ವಿಲೋಕ್ಯಾಚ್ಯುತೋ ದೂರಾತ್ಪ್ರಿಯಾಪರ್ಯಙ್ಕಮಾಸ್ಥಿತಃ ।
ಸಹಸೋತ್ಥಾಯ ಚಾಭ್ಯೇತ್ಯ ದೋರ್ಭ್ಯಾಂ ಪರ್ಯಗ್ರಹೀನ್ಮುದಾ ॥೧೮॥

ಸಖ್ಯುಃ ಪ್ರಿಯಸ್ಯ ವಿಪ್ರರ್ಷೇರಙ್ಗಸಙ್ಗಾತಿನಿರ್ವೃತಃ ।
ಪ್ರೀತೋ ವ್ಯಮುಞ್ಚದಬ್ಬಿನ್ದೂನ್ನೇತ್ರಾಭ್ಯಾಂ ಪುಷ್ಕರೇಕ್ಷಣಃ ॥೧೯॥

ಅಥೋಪವೇಶ್ಯ ಪರ್ಯಙ್ಕೇ ಸ್ವಯಂ ಸಖ್ಯುಃ ಸಮರ್ಹಣಮ್ ।
ಉಪಹೃತ್ಯಾವನಿಜ್ಯಾಸ್ಯ ಪಾದೌ ಪಾದಾವನೇಜನೀಃ ॥೨೦॥

ಅಗ್ರಹೀಚ್ಛಿರಸಾ ರಾಜನ್ ಭಗವಾನ್ ಲೋಕಪಾವನಃ ।
ವ್ಯಲಿಮ್ಪದ್ದಿವ್ಯಗನ್ಧೇನ ಚನ್ದನಾಗುರುಕುಙ್ಕುಮೈಃ ॥೨೧॥

ಧೂಪೈಃ ಸುರಭಿಭಿರ್ಮಿತ್ರಂ ಪ್ರದೀಪಾವಲಿಭಿರ್ಮುದಾ ।
ಅರ್ಚಿತ್ವಾಽಽವೇದ್ಯ ತಾಮ್ಬೂಲಂ ಗಾಂ ಚ ಸ್ವಾಗತಮಬ್ರವೀತ್ ॥೨೨॥

ಕುಚೈಲಂ ಮಲಿನಂ ಕ್ಷಾಮಂ ದ್ವಿಜಂ ಧಮನಿಸನ್ತತಮ್ ।
ದೇವೀ ಪರ್ಯಚರತ್ಸಾಕ್ಷಾಚ್ಚಾಮರವ್ಯಜನೇನ ವೈ ॥೨೩॥

ಅನ್ತಃಪುರಜನೋ ದೃಷ್ಟ್ವಾ ಕೃಷ್ಣೇನಾಮಲಕೀರ್ತಿನಾ ।
ವಿಸ್ಮಿತೋಽಭೂದತಿಪ್ರೀತ್ಯಾ ಅವಧೂತಂ ಸಭಾಜಿತಮ್ ॥೨೪॥

ಕಿಮನೇನ ಕೃತಂ ಪುಣ್ಯಮವಧೂತೇನ ಭಿಕ್ಷುಣಾ ।
ಶ್ರಿಯಾ ಹೀನೇನ ಲೋಕೇಽಸ್ಮಿನ್ ಗರ್ಹಿತೇನಾಧಮೇನ ಚ ॥೨೫॥

ಯೋಽಸೌ ತ್ರಿಲೋಕಗುರುಣಾ ಶ್ರೀನಿವಾಸೇನ ಸಮ್ಭೃತಃ ।
ಪರ್ಯಙ್ಕಸ್ಥಾಂ ಶ್ರಿಯಂ ಹಿತ್ವಾ ಪರಿಷ್ವಕ್ತೋಽಗ್ರಜೋ ಯಥಾ ॥೨೬॥

ಕಥಯಾಞ್ಚಕ್ರತುರ್ಗಾಥಾಃ ಪೂರ್ವಾ ಗುರುಕುಲೇ ಸತೋಃ ।
ಆತ್ಮನೋ ಲಲಿತಾ ರಾಜನ್ಕರೌ ಗೃಹ್ಯ ಪರಸ್ಪರಮ್ ॥೨೭॥

ಶ್ರೀಭಗವಾನುವಾಚ :

ಅಪಿ ಬ್ರಹ್ಮನ್ಗುರುಕುಲಾದ್ಭವತಾ ಲಬ್ಧದಕ್ಷಿಣಾತ್ ।
ಸಮಾವೃತ್ತೇನ ಧರ್ಮಜ್ಞ ಭಾರ್ಯೋಢಾ ಸದೃಶೀ ನ ವಾ ॥೨೮॥

ಪ್ರಾಯೋ ಗೃಹೇಷು ತೇ ಚಿತ್ತಮಕಾಮವಿಹತಂ ತಥಾ ।
ನೈವಾತಿಪ್ರೀಯಸೇ ವಿದ್ವನ್ಧನೇಷು ವಿದಿತಂ ಹಿ ಮೇ ॥೨೯॥

ಕೇಚಿತ್ಕುರ್ವನ್ತಿ ಕರ್ಮಾಣಿ ಕಾಮೈರಹತಚೇತಸಃ ।
ತ್ಯಜನ್ತಃ ಪ್ರಕೃತೀರ್ದೈವೀರ್ಯಥಾಹಂ ಲೋಕಸಙ್ಗ್ರಹಮ್ ॥೩೦॥

ಕಚ್ಚಿದ್ಗುರುಕುಲೇ ವಾಸಂ ಬ್ರಹ್ಮನ್ಸ್ಮರಸಿ ನೌ ಯತಃ ।
ದ್ವಿಜೋ ವಿಜ್ಞಾಯ ವಿಜ್ಞೇಯಂ ತಮಸಃ ಪಾರಮಶ್ನುತೇ ॥೩೧॥

ಸ ವೈ ಸತ್ಕರ್ಮಣಾಂ ಸಾಕ್ಷಾದ್ದ್ವಿಜಾತೇರಿಹ ಸಮ್ಭವಃ ।
ಆದ್ಯೋಽಙ್ಗ ಯತ್ರಾಶ್ರಮಿಣಾಂ ಯಥಾಹಂ ಜ್ಞಾನದೋ ಗುರುಃ ॥೩೨॥

ನನ್ವರ್ಥಕೋವಿದಾ ಬ್ರಹ್ಮನ್ವರ್ಣಾಶ್ರಮವತಾಮಿಹ ।
ಯೇ ಮಯಾ ಗುರುಣಾ ವಾಚಾ ತರನ್ತ್ಯಞ್ಜೋ ಭವಾರ್ಣವಮ್ ॥೩೩॥

ನಾಹಮಿಜ್ಯಾಪ್ರಜಾತಿಭ್ಯಾಂ ತಪಸೋಪಶಮೇನ ವಾ ।
ತುಷ್ಯೇಯಂ ಸರ್ವಭೂತಾತ್ಮಾ ಗುರುಶುಶ್ರೂಷಯಾ ಯಥಾ ॥೩೪॥

ಅಪಿ ನಃ ಸ್ಮರ್ಯತೇ ಬ್ರಹ್ಮನ್ವೃತ್ತಂ ನಿವಸತಾಂ ಗುರೌ ।
ಗುರುದಾರೈಶ್ಚೋದಿತಾನಾಮಿನ್ಧನಾನಯನೇ ಕ್ವಚಿತ್ ॥೩೫॥

ಪ್ರವಿಷ್ಟಾನಾಂ ಮಹಾರಣ್ಯಮಪರ್ತೌ ಸುಮಹದ್ದ್ವಿಜ ।
ವಾತವರ್ಷಮಭೂತ್ತೀವ್ರಂ ನಿಷ್ಠುರಾಃ ಸ್ತನಯಿತ್ನವಃ ॥೩೬॥

ಸೂರ್ಯಶ್ಚಾಸ್ತಂ ಗತಸ್ತಾವತ್ತಮಸಾ ಚಾವೃತಾ ದಿಶಃ ।
ನಿಮ್ನಂ ಕೂಲಂ ಜಲಮಯಂ ನ ಪ್ರಾಜ್ಞಾಯತ ಕಿಞ್ಚನ ॥೩೭॥

ವಯಂ ಭೃಶಂ ತತ್ರ ಮಹಾನಿಲಾಮ್ಬುಭಿ-
ರ್ನಿಹನ್ಯಮಾನಾ ಮುಹುರಮ್ಬುಸಮ್ಪ್ಲವೇ ।
ದಿಶೋಽವಿದನ್ತೋಽಥ ಪರಸ್ಪರಂ ವನೇ
ಗೃಹೀತಹಸ್ತಾಃಪರಿಬಭ್ರಿಮಾತುರಾಃ ॥೩೮॥

ಏತದ್ವಿದಿತ್ವಾ ಉದಿತೇ ರವೌ ಸಾನ್ದೀಪನಿರ್ಗುರುಃ ।
ಅನ್ವೇಷಮಾಣೋ ನಃ ಶಿಷ್ಯಾನಾಚಾರ್ಯೋಽಪಶ್ಯದಾತುರಾನ್ ॥೩೯॥

ಅಹೋ ಹೇ ಪುತ್ರಕಾ ಯೂಯಮಸ್ಮದರ್ಥೇಽತಿದುಃಖಿತಾಃ।
ಆತ್ಮಾ ವೈ ಪ್ರಾಣಿನಾಂ ಪ್ರೇಷ್ಠಸ್ತಮನಾದೃತ್ಯ ಮತ್ಪರಾಃ ॥೪೦॥

ಏತದೇವ ಹಿ ಸಚ್ಛಿಷ್ಯೈಃ ಕರ್ತವ್ಯಂ ಗುರುನಿಷ್ಕೃತಮ್ ।
ಯದ್ವೈ ವಿಶುದ್ಧಭಾವೇನ ಸರ್ವಾರ್ಥಾತ್ಮಾರ್ಪಣಂ ಗುರೌ ॥೪೧॥

ತುಷ್ಟೋಽಹಂ ಭೋ ದ್ವಿಜಶ್ರೇಷ್ಠಾಃ ಸತ್ಯಾಃ ಸನ್ತು ಮನೋರಥಾಃ ।
ಛನ್ದಾಂಸ್ಯಯಾತಯಾಮಾನಿ ಭವನ್ತ್ವಿಹ ಪರತ್ರ ಚ ॥೪೨॥

ಇತ್ಥಂವಿಧಾನ್ಯನೇಕಾನಿ ವಸತಾಂ ಗುರುವೇಶ್ಮಸು ।
ಗುರೋರನುಗ್ರಹೇಣೈವ ಪುಮಾನ್ಪೂರ್ಣಃ ಪ್ರಶಾನ್ತಯೇ ॥೪೩॥

ಬ್ರಾಹ್ಮಣ ಉವಾಚ :

ಕಿಮಸ್ಮಾಭಿರನಿರ್ವೃತ್ತಂ ದೇವದೇವ ಜಗದ್ಗುರೋ ।
ಭವತಾ ಸತ್ಯಕಾಮೇನ ಯೇಷಾಂ ವಾಸೋ ಗುರಾವಭೂತ್ ॥೪೪॥

ಯಸ್ಯಚ್ಛನ್ದೋಮಯಂ ಬ್ರಹ್ಮ ದೇವ ಆವಪನಂ ವಿಭೋ ।
ಶ್ರೇಯಸಾಂ ತಸ್ಯ ಗುರುಷು ವಾಸೋಽತ್ಯನ್ತವಿಡಮ್ಬನಮ್ ॥೪೫॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ದಶಮಸ್ಕನ್ಧೇ ಶ್ರೀದಾಮಚರಿತೇ
ಅಶೀತಿತಮೋಽಧ್ಯಾಯಃ

---

## ಅಥ ಏಕಾಶೀತಿತಮೋಽಧ್ಯಾಯಃ

ಶ್ರೀಶುಕ ಉವಾಚ :

ಸ ಇತ್ಥಂ ದ್ವಿಜಮುಖ್ಯೇನ ಸಹ ಸಙ್ಕಥಯನ್ ಹರಿಃ ।
ಸರ್ವಭೂತಮನೋಽಭಿಜ್ಞಃ ಸ್ಮಯಮಾನ ಉವಾಚ ತಮ್ ॥೧॥

ಬ್ರಹ್ಮಣ್ಯೋ ಬ್ರಾಹ್ಮಣಂ ಕೃಷ್ಣೋ ಭಗವಾನ್ಪ್ರಹಸನ್ಪ್ರಿಯಮ್ ।
ಪ್ರೇಮ್ಣಾ ನಿರೀಕ್ಷಣೇನೈವ ಪ್ರೇಕ್ಷನ್ಖಲು ಸತಾಂ ಗತಿಃ ॥೨॥

ಶ್ರೀಭಗವಾನುವಾಚ :

ಕಿಮುಪಾಯನಮಾನೀತಂ ಬ್ರಹ್ಮನ್ ಮೇ ಭವತಾ ಗೃಹಾತ್ ।
ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್ ।
ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ॥೩॥

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೪॥

ಇತ್ಯುಕ್ತೋಽಪಿ ದ್ವಿಜಸ್ತಸ್ಮೈ ವ್ರೀಡಿತಃ ಪತಯೇ ಶ್ರಿಯಃ ।
ಪೃಥುಕಪ್ರಸೃತಿಂ ರಾಜನ್ ನ ಪ್ರಾಯಚ್ಛದವಾಙ್ಮುಖಃ ॥೫॥

ಸರ್ವಭೂತಾತ್ಮದೃಕ್ ಸಾಕ್ಷಾತ್ ತಸ್ಯಾಗಮನಕಾರಣಮ್ ।
ವಿಜ್ಞಾಯಾಚಿನ್ತಯನ್ನಾಯಂ ಶ್ರೀಕಾಮೋ ಮಾಭಜತ್ಪುರಾ ॥೬॥

ಪತ್ನ್ಯಾಃ ಪತಿವ್ರತಾಯಾಸ್ತು ಸಖಾ ಪ್ರಿಯಚಿಕೀರ್ಷಯಾ ।
ಪ್ರಾಪ್ತೋ ಮಾಮಸ್ಯ ದಾಸ್ಯಾಮಿ ಸಮ್ಪದೋಽಮರ್ತ್ಯದುರ್ಲಭಾಃ ॥೭॥

ಇತ್ಥಂ ವಿಚಿನ್ತ್ಯ ವಸನಾಚ್ಚೀರಬದ್ಧಾನ್ದ್ವಿಜನ್ಮನಃ ।
ಸ್ವಯಂ ಜಹಾರ ಕಿಮಿದಮಿತಿ ಪೃಥುಕತಣ್ಡುಲಾನ್ ॥೮॥

ನನ್ವೇತದುಪನೀತಂ ಮೇ ಪರಮಪ್ರೀಣನಂ ಸಖೇ ।
ತರ್ಪಯನ್ತ್ಯಙ್ಗ ಮಾಂ ವಿಶ್ವಮೇತೇ ಪೃಥುಕತಣ್ಡುಲಾಃ ॥೯॥

ಇತಿ ಮುಷ್ಟಿಂ ಸಕೃಜ್ಜಗ್ಧ್ವಾ ದ್ವಿತೀಯಾಂ ಜಗ್ಧುಮಾದದೇ ।
ತಾವಚ್ಛ್ರೀರ್ಜಗೃಹೇ ಹಸ್ತಂ ತತ್ಪರಾ ಪರಮೇಷ್ಠಿನಃ ॥೧೦॥

ಏತಾವತಾಲಂ ವಿಶ್ವಾತ್ಮನ್ಸರ್ವಸಮ್ಪತ್ಸಮೃದ್ಧಯೇ ।
ಅಸ್ಮಿನ್ಲೋಕೇಽಥವಾಮುಷ್ಮಿನ್ಪುಂಸಸ್ತ್ವತ್ತೋಷಕಾರಣಮ್ ॥೧೧॥

ಬ್ರಾಹ್ಮಣಸ್ತಾಂ ತು ರಜನೀಮುಷಿತ್ವಾಚ್ಯುತಮನ್ದಿರೇ ।
ಭುಕ್ತ್ವಾ ಪೀತ್ವಾ ಸುಖಂ ಮೇನೇ ಆತ್ಮಾನಂ ಸ್ವರ್ಗತಂ ಯಥಾ ॥೧೨॥

ಶ್ವೋಭೂತೇ ವಿಶ್ವಭಾವೇನ ಸ್ವಸಖೇನಾಭಿವನ್ದಿತಃ ।
ಜಗಾಮ ಸ್ವಾಲಯಂ ತಾತ ಪಥ್ಯನುವ್ರಜ್ಯ ನನ್ದಿತಃ ॥೧೩॥

ಸ ಚಾಲಬ್ಧ್ವಾ ಧನಂ ಕೃಷ್ಣಾನ್ನ ತು ಯಾಚಿತವಾನ್ ಸ್ವಯಮ್ ।
ಸ್ವಗೃಹಾನ್ ವ್ರೀಡಿತೋಽಗಚ್ಛನ್ಮಹದ್ದರ್ಶನನಿರ್ವೃತಃ ॥೧೪॥

ಅಹೋ ಬ್ರಹ್ಮಣ್ಯದೇವಸ್ಯ ದೃಷ್ಟ್ವಾ ಬ್ರಹ್ಮಣ್ಯತಾ ಮಯಾ ।
ಯದ್ದರಿದ್ರತಮೋ ಲಕ್ಷ್ಮೀಮಾಶ್ಲಿಷ್ಟೋ ಬಿಭ್ರತೋರಸಿ ॥೧೫॥

ಕ್ವಾಹಂ ದರಿದ್ರಃ ಪಾಪೀಯಾನ್ ಕ್ವ ಕೃಷ್ಣಃ ಶ್ರೀನಿಕೇತನಃ ।
ಬ್ರಹ್ಮಬನ್ಧುರಿತಿ ಸ್ಮಾಹಂ ಬಾಹುಭ್ಯಾಂ ಪರಿರಮ್ಭಿತಃ ॥೧೬॥

ನಿವಾಸಿತಃ ಪ್ರಿಯಾಜುಷ್ಟೇ ಪರ್ಯಙ್ಕೇ ಭ್ರಾತರೋ ಯಥಾ ।
ಮಹಿಷ್ಯಾ ವೀಜಿತಃ ಶ್ರಾನ್ತೋ ವಾಲವ್ಯಜನಹಸ್ತಯಾ ॥೧೭॥

ಶುಶ್ರೂಷಯಾ ಪರಮಯಾ ಪಾದಸಂವಾಹನಾದಿಭಿಃ ।
ಪೂಜಿತೋ ದೇವದೇವೇನ ವಿಪ್ರದೇವೇನ ದೇವವತ್ ॥೧೮॥

ಸ್ವರ್ಗಾಪವರ್ಗಯೋಃ ಪುಂಸಾಂ ರಸಾಯಾಂ ಭುವಿ ಸಮ್ಪದಾಮ್ ।
ಸರ್ವಾಸಾಮಪಿ ಸಿದ್ಧೀನಾಂ ಮೂಲಂ ತಚ್ಚರಣಾರ್ಚನಮ್ ॥೧೯॥

ಅಧನೋಽಯಂ ಧನಂ ಪ್ರಾಪ್ಯ ಮಾದ್ಯನ್ನುಚ್ಚೈರ್ನ ಮಾಂ ಸ್ಮರೇತ್ ।
ಇತಿ ಕಾರುಣಿಕೋ ನೂನಂ ಧನಂ ಮೇಽಭೂರಿ ನಾದದಾತ್ ॥೨೦॥

ಇತಿ ತಚ್ಚಿನ್ತಯನ್ನನ್ತಃ ಪ್ರಾಪ್ತೋ ನಿಜಗೃಹಾನ್ತಿಕಮ್ ।
ಸೂರ್ಯಾನಲೇನ್ದುಸಙ್ಕಾಶೈರ್ವಿಮಾನೈಃ ಸರ್ವತೋ ವೃತಮ್ ॥೨೧॥

ವಿಚಿತ್ರೋಪವನೋದ್ಯಾನೈಃ ಕೂಜದ್ದ್ವಿಜಕುಲಾಕುಲೈಃ ।
ಪ್ರೋತ್ಫುಲ್ಲಕುಮುದಾಮ್ಭೋಜಕಹ್ಲಾರೋತ್ಪಲವಾರಿಭಿಃ ॥೨೨॥

ಜುಷ್ಟಂ ಸ್ವಲಙ್ಕೃತೈಃ ಪುಮ್ಭಿಃ ಸ್ತ್ರೀಭಿಶ್ಚ ಹರಿಣಾಕ್ಷಿಭಿಃ ।
ಕಿಮಿದಂ ಕಸ್ಯ ವಾ ಸ್ಥಾನಂ ಕಥಂ ತದಿದಮಿತ್ಯಭೂತ್ ॥೨೩॥

ಏವಂ ಮೀಮಾಂಸಮಾನಂ ತಂ ನರಾ ನಾರ್ಯೋಽಮರಪ್ರಭಾಃ ।
ಪ್ರತ್ಯಗೃಹ್ಣನ್ಮಹಾಭಾಗಂ ಗೀತವಾದ್ಯೇನ ಭೂಯಸಾ ॥೨೪॥

ಪತಿಮಾಗತಮಾಕರ್ಣ್ಯ ಪತ್ನ್ಯುದ್ಧರ್ಷಾತಿಸಮ್ಭ್ರಮಾ ।
ನಿಶ್ಚಕ್ರಾಮ ಗೃಹಾತ್ತೂರ್ಣಂ ರೂಪಿಣೀ ಶ್ರೀರಿವಾಲಯಾತ್ ॥೨೫॥

ಪತಿವ್ರತಾ ಪತಿಂ ದೃಷ್ಟ್ವಾ ಪ್ರೇಮೋತ್ಕಣ್ಠಾಶ್ರುಲೋಚನಾ ।
ಮೀಲಿತಾಕ್ಷ್ಯನಮದ್ಬುದ್ಧ್ಯಾ ಮನಸಾ ಪರಿಷಸ್ವಜೇ ॥೨೬॥

ಪತ್ನೀಂ ವೀಕ್ಷ್ಯ ವಿಸ್ಫುರನ್ತೀಂ ದೇವೀಂ ವೈಮಾನಿಕೀಮಿವ ।
ದಾಸೀನಾಂ ನಿಷ್ಕಕಣ್ಠೀನಾಂ ಮಧ್ಯೇ ಭಾನ್ತೀಂ ಸ ವಿಸ್ಮಿತಃ ॥೨೭॥

ಪ್ರೀತಃ ಸ್ವಯಂ ತಯಾ ಯುಕ್ತಃ ಪ್ರವಿಷ್ಟೋ ನಿಜಮನ್ದಿರಮ್ ।
ಮಣಿಸ್ತಮ್ಭಶತೋಪೇತಂ ಮಹೇನ್ದ್ರಭವನಂ ಯಥಾ ॥೨೮॥

ಪಯಃಫೇನನಿಭಾಃ ಶಯ್ಯಾ ದಾನ್ತಾ ರುಕ್ಮಪರಿಚ್ಛದಾಃ ।
ಪರ್ಯಙ್ಕಾ ಹೇಮದಣ್ಡಾನಿ ಚಾಮರವ್ಯಜನಾನಿ ಚ ॥೨೯॥

ಆಸನಾನಿ ಚ ಹೈಮಾನಿ ಮೃದೂಪಸ್ತರಣಾನಿ ಚ ।
ಮುಕ್ತಾದಾಮವಿಲಮ್ಬೀನಿ ವಿತಾನಾನಿ ದ್ಯುಮನ್ತಿ ಚ ॥೩೦॥

ಸ್ವಚ್ಛಸ್ಫಟಿಕಕುಡ್ಯೇಷು ಮಹಾಮಾರಕತೇಷು ಚ ।
ರತ್ನದೀಪಾ ಭ್ರಾಜಮಾನಾ ಲಲನಾರತ್ನಸಂಯುತಾಃ ॥೩೧॥

ವಿಲೋಕ್ಯ ಬ್ರಾಹ್ಮಣಸ್ತತ್ರ ಸಮೃದ್ಧೀಃ ಸರ್ವಸಮ್ಪದಾಮ್ ।
ತರ್ಕಯಾಮಾಸ ನಿರ್ವ್ಯಗ್ರಃ ಸ್ವಸಮೃದ್ಧಿಮಹೈತುಕೀಮ್ ॥೩೨॥

ನೂನಂ ಬತೈತನ್ಮಮ ದುರ್ಭಗಸ್ಯ
ಶಶ್ವದ್ದರಿದ್ರಸ್ಯ ಸಮೃದ್ಧಿಹೇತುಃ ।
ಮಹಾವಿಭೂತೇರವಲೋಕತೋಽನ್ಯೋ
ನೈವೋಪಪದ್ಯೇತ ಯದೂತ್ತಮಸ್ಯ ॥೩೩॥

ನನ್ವಬ್ರುವಾಣೋ ದಿಶತೇ ಸಮಕ್ಷಂ
ಯಾಚಿಷ್ಣವೇ ಭೂರ್ಯಪಿ ಭೂರಿಭೋಜಃ ।
ಪರ್ಜನ್ಯವತ್ತತ್ಸ್ವಯಮೀಕ್ಷಮಾಣೋ
ದಶಾರ್ಹಕಾಣಾಮೃಷಭಃ ಸಖಾ ಮೇ ॥೩೪॥

ಕಿಞ್ಚಿತ್ಕರೋತ್ಯುರ್ವಪಿ ಯತ್ಸ್ವದತ್ತಂ
ಸುಹೃತ್ಕೃತಂ ಫಲ್ಗ್ವಪಿ ಭೂರಿಕಾರೀ ।
ಮಯೋಪನೀತಾಂ ಪೃಥುಕೈಕಮುಷ್ಟಿಂ
ಪ್ರತ್ಯಗ್ರಹೀತ್ಪ್ರೀತಿಯುತೋ ಮಹಾತ್ಮಾ ॥೩೫॥

ತಸ್ಯೈವ ಮೇ ಸೌಹೃದಸಖ್ಯಮೈತ್ರೀ
ದಾಸ್ಯಂ ಪುನರ್ಜನ್ಮನಿ ಜನ್ಮನಿ ಸ್ಯಾತ್ ।
ಮಹಾನುಭಾವೇನ ಗುಣಾಲಯೇನ
ವಿಷಜ್ಜತಸ್ತತ್ಪುರುಷಪ್ರಸಙ್ಗಃ ॥೩೬॥

ಭಕ್ತಾಯ ಚಿತ್ರಾ ಭಗವಾನ್ ಹಿ ಸಮ್ಪದೋ
ರಾಜ್ಯಂ ವಿಭೂತೀರ್ನ ಸಮರ್ಥಯತ್ಯಜಃ ।
ಅದೀರ್ಘಬೋಧಾಯ ವಿಚಕ್ಷಣಃ ಸ್ವಯಂ
ಪಶ್ಯನ್ನಿಪಾತಂ ಧನಿನಾಂ ಮದೋದ್ಭವಮ್ ॥೩೭॥

ಇತ್ಥಂ ವ್ಯವಸಿತೋ ಬುದ್ಧ್ಯಾ ಭಕ್ತೋಽತೀವ ಜನಾರ್ದನೇ ।
ವಿಷಯಾಞ್ಜಾಯಯಾ ತ್ಯಕ್ಷ್ಯನ್ಬುಭುಜೇ ನಾತಿಲಮ್ಪಟಃ ॥೩೮॥

ತಸ್ಯ ವೈ ದೇವದೇವಸ್ಯ ಹರೇರ್ಯಜ್ಞಪತೇಃ ಪ್ರಭೋಃ ।
ಬ್ರಾಹ್ಮಣಾಃ ಪ್ರಭವೋ ದೈವಂ ನ ತೇಭ್ಯೋ ವಿದ್ಯತೇ ಪರಮ್ ॥೩೯॥

ಏವಂ ಸ ವಿಪ್ರೋ ಭಗವತ್ಸುಹೃತ್ತದಾ
ದೃಷ್ಟ್ವಾ ಸ್ವಭೃತ್ಯೈರಜಿತಂ ಪರಾಜಿತಮ್ ।
ತದ್ಧ್ಯಾನವೇಗೋದ್ಗ್ರಥಿತಾತ್ಮಬನ್ಧನ-
ಸ್ತದ್ಧಾಮ ಲೇಭೇಽಚಿರತಃ ಸತಾಂ ಗತಿಮ್ ॥೪೦॥

ಏತದ್ಬ್ರಹ್ಮಣ್ಯದೇವಸ್ಯ ಶ್ರುತ್ವಾ ಬ್ರಹ್ಮಣ್ಯತಾಂ ನರಃ ।
ಲಬ್ಧಭಾವೋ ಭಗವತಿ ಕರ್ಮಬನ್ಧಾದ್ವಿಮುಚ್ಯತೇ ॥೪೧॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಮ್
ಸಂಹಿತಾಯಾಂ ದಶಮಸ್ಕನ್ಧೇ ಪೃಥುಕೋಪಾಖ್ಯಾನಂ ನಾಮ
ಏಕಾಶೀತಿತಮೋಽಧ್ಯಾಯಃ

---

## ಅಥ ದ್ವ್ಯಶೀತಿತಮೋಽಧ್ಯಾಯಃ

ಶ್ರೀಶುಕ ಉವಾಚ :

ಅಥೈಕದಾ ದ್ವಾರವತ್ಯಾಂ ವಸತೋ ರಾಮಕೃಷ್ಣಯೋಃ ।
ಸೂರ್ಯೋಪರಾಗಃ ಸುಮಹಾನಾಸೀತ್ಕಲ್ಪಕ್ಷಯೇ ಯಥಾ ॥೧॥

ತಂ ಜ್ಞಾತ್ವಾ ಮನುಜಾ ರಾಜನ್ ಪುರಸ್ತಾದೇವ ಸರ್ವತಃ ।
ಸಮನ್ತಪಞ್ಚಕಂ ಕ್ಷೇತ್ರಂ ಯಯುಃ ಶ್ರೇಯೋವಿಧಿತ್ಸಯಾ ॥೨॥

ನಿಃಕ್ಷತ್ರಿಯಾಂ ಮಹೀಂ ಕುರ್ವನ್ರಾಮಃ ಶಸ್ತ್ರಭೃತಾಂ ವರಃ ।
ನೃಪಾಣಾಂ ರುಧಿರೌಘೇಣ ಯತ್ರ ಚಕ್ರೇ ಮಹಾಹ್ರದಾನ್ ॥೩॥

ಈಜೇ ಚ ಭಗವಾನ್ರಾಮೋ ಯತ್ರಾಸ್ಪೃಷ್ಟೋಽಪಿ ಕರ್ಮಣಾ ।
ಲೋಕಸ್ಯ ಗ್ರಾಹಯನ್ನೀಶೋ ಯಥಾನ್ಯೋಽಘಾಪನುತ್ತಯೇ ॥೪॥

ಮಹತ್ಯಾಂ ತೀರ್ಥಯಾತ್ರಾಯಾಂ ತತ್ರಾಗನ್ಭಾರತೀಃ ಪ್ರಜಾಃ ।
ವೃಷ್ಣಯಶ್ಚ ತಥಾಕ್ರೂರವಸುದೇವಾಹುಕಾದಯಃ ॥೫॥

ಯಯುರ್ಭಾರತ ತತ್ಕ್ಷೇತ್ರಂ ಸ್ವಮಘಂ ಕ್ಷಪಯಿಷ್ಣವಃ ।
ಗದಪ್ರದ್ಯುಮ್ನ ಸಾಮ್ಬಾದ್ಯಾಃ ಸುಚನ್ದ್ರಶುಕಸಾರಣೈಃ ॥೬॥

ಆಸ್ತೇಽನಿರುದ್ಧೋ ರಕ್ಷಾಯಾಂ ಕೃತವರ್ಮಾ ಚ ಯೂಥಪಃ ।
ತೇ ರಥೈರ್ದೇವಧಿಷ್ಣ್ಯಾಭೈರ್ಹಯೈಶ್ಚ ತರಲಪ್ಲವೈಃ ॥೭॥

ಗಜೈರ್ನದದ್ಭಿರಭ್ರಾಭೈರ್ನೃಭಿರ್ವಿದ್ಯಾಧರದ್ಯುಭಿಃ ।
ವ್ಯರೋಚನ್ತ ಮಹಾತೇಜಾಃ ಪಥಿ ಕಾಞ್ಚನಮಾಲಿನಃ ॥೮॥

ದಿವ್ಯಸ್ರಗ್ವಸ್ತ್ರ ಸನ್ನಾಹಾಃ ಕಲತ್ರೈಃ ಖೇಚರಾ ಇವ ।
ತತ್ರ ಸ್ನಾತ್ವಾ ಮಹಾಭಾಗ ಉಪೋಷ್ಯ ಸುಸಮಾಹಿತಾಃ ॥೯॥

ಬ್ರಾಹ್ಮಣೇಭ್ಯೋ ದದುರ್ಧೇನೂರ್ವಾಸಃಸ್ರಗ್ರುಕ್ಮಮಾಲಿನೀಃ ।
ರಾಮಹ್ರದೇಷು ವಿಧಿವತ್ಪುನರಾಪ್ಲುತ್ಯ ವೃಷ್ಣಯಃ ॥೧೦॥

ದದುಃ ಸ್ವನ್ನಂ ದ್ವಿಜಾಗ್ರ್ಯೇಭ್ಯಃ ಕೃಷ್ಣೇ ನೋ ಭಕ್ತಿರಸ್ತ್ವಿತಿ ।
ಸ್ವಯಂ ಚ ತದನುಜ್ಞಾತಾ ವೃಷ್ಣಯಃ ಕೃಷ್ಣದೇವತಾಃ ॥೧೧॥

ಭುಕ್ತ್ವೋಪವಿವಿಶುಃ ಕಾಮಂ ಸ್ನಿಗ್ಧಚ್ಛಾಯಾಂಘ್ರಿಪಾಂಘ್ರಿಷು ।
ತತ್ರಾಗತಾಂಸ್ತೇ ದದೃಶುಃ ಸುಹೃತ್ಸಮ್ಬನ್ಧಿನೋ ನೃಪಾನ್ ॥೧೨॥

ಮತ್ಸ್ಯೋಶೀನರಕೌಸಲ್ಯವಿದರ್ಭಕುರುಸೃಞ್ಜಯಾನ್ ।
ಕಾಮ್ಬೋಜಕೈಕಯಾನ್ಮದ್ರಾನ್ ಕುನ್ತೀನಾನರ್ತಕೇರಲಾನ್ ॥೧೩॥

ಅನ್ಯಾಂಶ್ಚೈವಾತ್ಮಪಕ್ಷೀಯಾನ್ಪರಾಂಶ್ಚ ಶತಶೋ ನೃಪ ।
ನನ್ದಾದೀನ್ಸುಹೃದೋ ಗೋಪಾನ್ ಗೋಪೀಶ್ಚೋತ್ಕಣ್ಠಿತಾಶ್ಚಿರಮ್ ॥೧೪॥

ಅನ್ಯೋನ್ಯಸನ್ದರ್ಶನಹರ್ಷರಂಹಸಾ
ಪ್ರೋತ್ಫುಲ್ಲಹೃದ್ವಕ್ತ್ರ ಸರೋರುಹಶ್ರಿಯಃ ।
ಆಶ್ಲಿಷ್ಯ ಗಾಢಂ ನಯನೈಃ ಸ್ರವಜ್ಜಲಾ
ಹೃಷ್ಯತ್ತ್ವಚೋ ರುದ್ಧಗಿರೋ ಯಯುರ್ಮುದಮ್ ॥೧೫॥

ಸ್ತ್ರಿಯಶ್ಚ ಸಂವೀಕ್ಷ್ಯ ಮಿಥೋऽತಿಸೌಹೃದ-
ಸ್ಮಿತಾಮಲಾಪಾಙ್ಗದೃಶೋऽಭಿರೇಭಿರೇ ।
ಸ್ತನೈಃ ಸ್ತನಾನ್ಕುಙ್ಕುಮಪಙ್ಕರೂಷಿತಾನ್
ನಿಹತ್ಯ ದೋರ್ಭಿಃ ಪ್ರಣಯಾಶ್ರುಲೋಚನಾಃ ॥೧೬॥

ತತೋऽಭಿವಾದ್ಯ ತೇ ವೃದ್ಧಾನ್ಯವಿಷ್ಠೈರಭಿವಾದಿತಾಃ ।
ಸ್ವಾಗತಂ ಕುಶಲಂ ಪೃಷ್ಟ್ವಾ ಚಕ್ರುಃ ಕೃಷ್ಣಕಥಾ ಮಿಥಃ ॥೧೭॥

ಪೃಥಾ ಭ್ರಾತೄನ್ಸ್ವಸೄರ್ವೀಕ್ಷ್ಯ ತತ್ಪುತ್ರಾನ್ಪಿತರಾವಪಿ ।
ಭ್ರಾತೃಪತ್ನೀರ್ಮುಕುನ್ದಂ ಚ ಜಹೌ ಸಙ್ಕಥಯಾ ಶುಚಃ ॥೧೮॥

ಕುನ್ತ್ಯುವಾಚ :

ಆರ್ಯ ಭ್ರಾತರಹಂ ಮನ್ಯೇ ಆತ್ಮಾನಮಕೃತಾಶಿಷಮ್ ।
ಯದ್ವಾ ಆಪತ್ಸು ಮದ್ವಾರ್ತಾಂ ನಾನುಸ್ಮರಥ ಸತ್ತಮಾಃ ॥೧೯॥

ಸುಹೃದೋ ಜ್ಞಾತಯಃ ಪುತ್ರಾ ಭ್ರಾತರಃ ಪಿತರಾವಪಿ ।
ನಾನುಸ್ಮರನ್ತಿ ಸ್ವಜನಂ ಯಸ್ಯ ದೈವಮದಕ್ಷಿಣಮ್ ॥೨೦॥

ವಸುದೇವ ಉವಾಚ :

ಅಮ್ಬ ಮಾಸ್ಮಾನಸೂಯೇಥಾ ದೈವಕ್ರೀಡನಕಾನ್ನರಾನ್ ।
ಈಶಸ್ಯ ಹಿ ವಶೇ ಲೋಕಃ ಕುರುತೇ ಕಾರ್ಯತೇಽಥವಾ ॥೨೧॥

ಕಂಸಪ್ರತಾಪಿತಾಃ ಸರ್ವೇ ವಯಂ ಯಾತಾ ದಿಶಂ ದಿಶಮ್ ।
ಏತರ್ಹ್ಯೇವ ಪುನಃ ಸ್ಥಾನಂ ದೈವೇನಾಸಾದಿತಾಃ ಸ್ವಸಃ ॥೨೨॥

ಶ್ರೀಶುಕ ಉವಾಚ :

ವಸುದೇವೋಗ್ರಸೇನಾದ್ಯೈರ್ಯದುಭಿಸ್ತೇಽರ್ಚಿತಾ ನೃಪಾಃ ।
ಆಸನ್ನಚ್ಯುತಸನ್ದರ್ಶಪರಮಾನನ್ದನಿರ್ವೃತಾಃ ॥೨೩॥

ಭೀಷ್ಮೋ ದ್ರೋಣೋಽಮ್ಬಿಕಾಪುತ್ರೋ ಗಾನ್ಧಾರೀ ಸಸುತಾ ತಥಾ ।
ಸದಾರಾಃ ಪಾಣ್ಡವಾಃ ಕುನ್ತೀ ಸೃಞ್ಜಯೋ ವಿದುರಃ ಕೃಪಃ ॥೨೪॥

ಕುನ್ತಿಭೋಜೋ ವಿರಾಟಶ್ಚ ಭೀಷ್ಮಕೋ ನಗ್ನಜಿನ್ಮಹಾನ್ ।
ಪುರುಜಿದ್ದ್ರುಪದಃ ಶಲ್ಯೋ ಧೃಷ್ಟಕೇತುಃ ಸ ಕಾಶಿರಾಟ್ ॥೨೫॥

ದಮಘೋಷೋ ವಿಶಾಲಾಕ್ಷೋ ಮೈಥಿಲೋ ಮದ್ರಕೇಕಯೌ ।
ಯುಧಾಮನ್ಯುಃ ಸುಶರ್ಮಾ ಚ ಸಸುತಾ ಬಾಹ್ಲಿಕಾದಯಃ ॥೨೬॥

ರಾಜಾನೋ ಯೇ ಚ ರಾಜೇನ್ದ್ರ ಯುಧಿಷ್ಠಿರಮನುವ್ರತಾಃ ।
ಶ್ರೀನಿಕೇತಂ ವಪುಃ ಶೌರೇಃ ಸಸ್ತ್ರೀಕಂ ವೀಕ್ಷ್ಯ ವಿಸ್ಮಿತಾಃ ॥೨೭॥

ಅಥ ತೇ ರಾಮಕೃಷ್ಣಾಭ್ಯಾಂ ಸಮ್ಯಕ್ಪ್ರಾಪ್ತಸಮರ್ಹಣಾಃ ।
ಪ್ರಶಶಂಸುರ್ಮುದಾ ಯುಕ್ತಾ ವೃಷ್ಣೀನ್ಕೃಷ್ಣಪರಿಗ್ರಹಾನ್ ॥೨೮॥

ಅಹೋ ಭೋಜಪತೇ ಯೂಯಂ ಜನ್ಮಭಾಜೋ ನೃಣಾಮಿಹ ।
ಯತ್ಪಶ್ಯಥಾಸಕೃತ್ಕೃಷ್ಣಂ ದುರ್ದರ್ಶಮಪಿ ಯೋಗಿನಾಮ್ ॥೨೯॥

ಮಲ್ಲಿಙ್ಗಮದ್ಭಕ್ತಜನದರ್ಶನಸ್ಪರ್ಶನಾರ್ಚನಮ್ ।
ಪರಿಚರ್ಯಾ ಸ್ತುತಿಃ ಪ್ರಹ್ವಗುಣಕರ್ಮಾನುಕೀರ್ತನಮ್ ॥೩೪॥

ಮತ್ಕಥಾಶ್ರವಣೇ ಶ್ರದ್ಧಾ ಮದನುಧ್ಯಾನಮುದ್ಧವ ।
ಸರ್ವಲಾಭೋಪಹರಣಂ ದಾಸ್ಯೇನಾತ್ಮನಿವೇದನಮ್ ॥೩೫॥

ಮಜ್ಜನ್ಮಕರ್ಮಕಥನಂ ಮಮ ಪರ್ವಾನುಮೋದನಮ್ ।
ಗೀತತಾಣ್ಡವವಾದಿತ್ರಗೋಷ್ಠೀಭಿರ್ಮದ್ಗೃಹೋತ್ಸವಃ ॥೩೬॥

ಯಾತ್ರಾ ಬಲಿವಿಧಾನಂ ಚ ಸರ್ವವಾರ್ಷಿಕಪರ್ವಸು ।
ವೈದಿಕೀ ತಾನ್ತ್ರಿಕೀ ದೀಕ್ಷಾ ಮದೀಯವ್ರತಧಾರಣಮ್ ॥೩೭॥

ಮಮಾರ್ಚಾಸ್ಥಾಪನೇ ಶ್ರದ್ಧಾ ಸ್ವತಃ ಸಂಹತ್ಯ ಚೋದ್ಯಮಃ ।
ಉದ್ಯಾನೋಪವನಾಕ್ರೀಡಪುರಮನ್ದಿರಕರ್ಮಣಿ ॥೩೮॥

ಸಮ್ಮಾರ್ಜನೋಪಲೇಪಾಭ್ಯಾಂ ಸೇಕಮಣ್ಡಲವರ್ತನೈಃ ।
ಗೃಹಶುಶ್ರೂಷಣಂ ಮಹ್ಯಂ ದಾಸವದ್ಯದಮಾಯಯಾ ॥೩೯॥

ಅಮಾನಿತ್ವಮದಮ್ಭಿತ್ವಂ ಕೃತಸ್ಯಾಪರಿಕೀರ್ತನಮ್ ।
ಅಪಿ ದೀಪಾವಲೋಕಂ ಮೇ ನೋಪಯುಞ್ಜ್ಯಾನ್ನಿವೇದಿತಮ್ ॥೪೦॥

ಯದ್ಯದಿಷ್ಟತಮಂ ಲೋಕೇ ಯಚ್ಚಾತಿಪ್ರಿಯಮಾತ್ಮನಃ ।
ತತ್ತನ್ನಿವೇದಯೇನ್ಮಹ್ಯಂ ತದಾನನ್ತ್ಯಾಯ ಕಲ್ಪತೇ ॥೪೧॥

ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ
ಮರುಜ್ಜಲಮ್ ।
ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ ॥೪೨॥

ಸೂರ್ಯೇ ತು ವಿದ್ಯಯಾ ತ್ರಯ್ಯಾ ಹವಿಷಾಗ್ನೌ ಯಜೇತ ಮಾಮ್ ।
ಆತಿಥ್ಯೇನ ತು ವಿಪ್ರಾಗ್ರ್ಯೇ ಗೋಷ್ವಙ್ಗ ಯವಸಾದಿನಾ ॥೪೩॥

ವೈಷ್ಣವೇ ಬನ್ಧುಸತ್ಕೃತ್ಯಾ ಹೃದಿ ಖೇ ಧ್ಯಾನನಿಷ್ಠಯಾ ।
ವಾಯೌ ಮುಖ್ಯಧಿಯಾ ತೋಯೇ ದ್ರವ್ಯೈಸ್ತೋಯಪುರಸ್ಕೃತೈಃ ॥೪೪॥

ಸ್ಥಣ್ಡಿಲೇ ಮನ್ತ್ರ ಹೃದಯೈರ್ಭೋಗೈರಾತ್ಮಾನಮಾತ್ಮನಿ ।
ಕ್ಷೇತ್ರಜ್ಞಂ ಸರ್ವಭೂತೇಷು ಸಮತ್ವೇನ ಯಜೇತ ಮಾಮ್ ॥೪೫॥

ಧಿಷ್ಣ್ಯೇಷ್ವೇಷ್ವಿತಿ ಮದ್ರೂಪಂ ಶಙ್ಖಚಕ್ರಗದಾಮ್ಬುಜೈಃ ।
ಯುಕ್ತಂ ಚತುರ್ಭುಜಂ ಶಾನ್ತ ಧ್ಯಾಯನ್ನರ್ಚೇತ್ ಸಮಾಹಿತಃ ॥೪೬॥

ಇಷ್ಟಾಪೂರ್ತೇನ ಮಾಮೇವಂ ಯೋ ಯಜೇತ ಸಮಾಹಿತಃ ।
ಲಭತೇ ಮಯಿ ಸದ್ಭಕ್ತಿ ಮತ್ಸ್ಮೃತಿಃ ಸಾಧುಸೇವಯಾ ॥೪೭॥

ಪ್ರಾಯೇಣ ಭಕ್ತಿಯೋಗೇನ ಸತ್ಸಙ್ಗೇನ ವಿನೋದ್ಧವ ।
ನೋಪಾಯೋ ವಿದ್ಯತೇ ಸಧ್ರ್ಯಙ್ ಪ್ರಾಯಣಂ ಹಿ ಸತಾಮಹಮ್ ॥೪೮॥

ಅಥೈತತ್ ಪರಮಂ ಗುಹ್ಯಂ ಶೃಣ್ವತೋ ಯದುನನ್ದನ ।
ಸುಗೋಪ್ಯಮಪಿ ವಕ್ಷ್ಯಾಮಿ ತ್ವಂ ಮೇ ಭೃತ್ಯಃ ಸುಹೃತ್ಸಖಾ ॥೪೯॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ಏಕಾದಶಸ್ಕನ್ಧೇ ಏಕಾದಶೋಽಧ್ಯಾಯಃ

---

## ಅಥ ದ್ವಾದಶೋಽಧ್ಯಾಯಃ

ಶ್ರೀಭಗವಾನುವಾಚ :

ನ ರೋಧಯತಿ ಮಾಂ ಯೋಗೋ ನ ಸಾಙ್ಖ್ಯಂ ಧರ್ಮ ಏವ ಚ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ನೇಷ್ಟಾಪೂರ್ತಂ ನ ದಕ್ಷಿಣಾ ॥೧॥

ವ್ರತಾನಿ ಯಜ್ಞಶ್ಛನ್ದಾಂಸಿ ತೀರ್ಥಾನಿ ನಿಯಮಾ ಯಮಾಃ ।
ಯಥಾವರುನ್ಧೇ ಸತ್ಸಙ್ಗಃ ಸರ್ವಸಙ್ಗಾಪಹೋ ಹಿ ಮಾಮ್ ॥೨॥

ಸತ್ಸಙ್ಗೇನ ಹಿ ದೈತೇಯಾ ಯಾತುಧಾನಾ ಮೃಗಾಃ ಖಗಾಃ ।
ಗನ್ಧರ್ವಾಪ್ಸರಸೋ ನಾಗಾಃ ಸಿದ್ಧಾಶ್ಚಾರಣಗುಹ್ಯಕಾಃ ॥೩॥

ವಿದ್ಯಾಧರಾ ಮನುಷ್ಯೇಷು ವೈಶ್ಯಾಃ ಶೂದ್ರಾಃ ಸ್ತ್ರಿಯೋಽನ್ತ್ಯಜಾಃ ।
ರಜಸ್ತಮಃಪ್ರಕೃತಯಸ್ತಸ್ಮಿಂಸ್ತಸ್ಮಿನ್ಯುಗೇಽನಘ ॥೪॥

ಬಹವೋ ಮತ್ಪದಂ ಪ್ರಾಪ್ತಾಸ್ತ್ವಾಷ್ಟ್ರಕಾಯಾಧವಾದಯಃ ।
ವೃಷಪರ್ವಾ ಬಲಿರ್ಬಾಣೋ ಮಯಶ್ಚಾಥ ವಿಭೀಷಣಃ ॥೫॥

ಸುಗ್ರೀವೋ ಹನುಮಾನೃಕ್ಷೋ ಗಜೋ ಗೃಧ್ರೋ ವಣಿಕ್ಪಥಃ ।
ವ್ಯಾಧಃ ಕುಬ್ಜಾ ವ್ರಜೇ ಗೋಪ್ಯೋ ಯಜ್ಞಪತ್ನ್ಯಸ್ತಥಾಪರೇ ॥೬॥

ತೇ ನಾಧೀತಶ್ರುತಿಗಣಾ ನೋಪಾಸಿತಮಹತ್ತಮಾಃ ।
ಅವ್ರತಾತಪ್ತತಪಸಃ ಸತ್ಸಙ್ಗಾನ್ಮಾಮುಪಾಗತಾಃ ॥೭॥

ಕೇವಲೇನ ಹಿ ಭಾವೇನ ಗೋಪ್ಯೋ ಗಾವೋ ನಗಾ ಮೃಗಾಃ ।
ಯೇಽನ್ಯೇ ಮೂಢಧಿಯೋ ನಾಗಾಃ ಸಿದ್ಧಾ ಮಾಮೀಯುರಞ್ಜಸಾ ॥೮॥

ಯಂ ನ ಯೋಗೇನ ಸಾಙ್ಖ್ಯೇನ ದಾನವ್ರತತಪೋಽಧ್ವರೈಃ ।
ವ್ಯಾಖ್ಯಾಸ್ವಾಧ್ಯಾಯಸಂನ್ಯಾಸೈಃ ಪ್ರಾಪ್ನುಯಾದ್ಯತ್ನವಾನಪಿ ॥೯॥

ರಾಮೇಣ ಸಾರ್ಧಂ ಮಥುರಾಂ ಪ್ರಣೀತೇ
ಶ್ವಾಫಲ್ಕಿನಾ ಮಯ್ಯನುರಕ್ತಚಿತ್ತಾಃ ।
ವಿಗಾಢಭಾವೇನ ನ ಮೇ ವಿಯೋಗ-
ತೀವ್ರಾಧಯೋಽನ್ಯಂ ದದೃಶುಃ ಸುಖಾಯ ॥೧೦॥

ತಾಸ್ತಾಃ ಕ್ಷಪಾಃ ಪ್ರೇಷ್ಠತಮೇನ ನೀತಾ
ಮಯೈವ ವೃನ್ದಾವನಗೋಚರೇಣ ।
ಕ್ಷಣಾರ್ಧವತ್ತಾಃ ಪುನರಙ್ಗ ತಾಸಾಂ
ಹೀನಾ ಮಯಾ ಕಲ್ಪಸಮಾ ಬಭೂವುಃ ॥೧೧॥

ತಾ ನಾವಿದನ್ಮಯ್ಯನುಷಙ್ಗಬದ್ಧ-
ಧಿಯಃ ಸ್ವಮಾತ್ಮಾನಮದಸ್ತಥೇದಮ್ ।
ಯಥಾ ಸಮಾಧೌ ಮುನಯೋಽಬ್ಧಿತೋಯೇ
ನದ್ಯಃ ಪ್ರವಿಷ್ಟಾ ಇವ ನಾಮರೂಪೇ ॥೧೨॥

ಮತ್ಕಾಮಾ ರಮಣಂ ಜಾರಮಸ್ವರೂಪವಿದೋಽಬಲಾಃ ।
ಬ್ರಹ್ಮ ಮಾಂ ಪರಮಂ ಪ್ರಾಪುಃ ಸಙ್ಗಾಚ್ಛತಸಹಸ್ರಶಃ ॥೧೩॥

ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಮ್ ।
ಪ್ರವೃತ್ತಂ ಚ ನಿವೃತ್ತಂ ಚ ಶ್ರೋತವ್ಯಂ ಶ್ರುತಮೇವ ಚ ॥೧೪॥

ಮಾಮೇಕಮೇವ ಶರಣಮಾತ್ಮಾನಂ ಸರ್ವದೇಹಿನಾಮ್ ।
ಯಾಹಿ ಸರ್ವಾತ್ಮಭಾವೇನ ಮಯಾ ಸ್ಯಾ ಹ್ಯ ಕುತೋಭಯಃ ॥೧೫॥

ಉದ್ಧವ ಉವಾಚ :

ಸಂಶಯಃ ಶೃಣ್ವತೋ ವಾಚಂ ತವ ಯೋಗೇಶ್ವರೇಶ್ವರ ।
ನ ನಿವರ್ತತ ಆತ್ಮಸ್ಥೋ ಯೇನ ಭ್ರಾಮ್ಯತಿ ಮೇ ಮನಃ ॥೧೬॥

ಶ್ರೀಭಗವಾನುವಾಚ :

ಸ ಏಷ ಜೀವೋ ವಿವರಪ್ರಸೂತಿಃ
ಪ್ರಾಣೇನ ಘೋಷೇಣ ಗುಹಾಂ ಪ್ರವಿಷ್ಟಃ ।
ಮನೋಮಯಂ ಸೂಕ್ಷ್ಮಮುಪೇತ್ಯ ರೂಪಂ
ಮಾತ್ರಾ ಸ್ವರೋ ವರ್ಣ ಇತಿ ಸ್ಥವಿಷ್ಠಃ ॥೧೭॥

ಯಥಾನಲಃ ಖೇಽನಿಲಬನ್ಧುರೂಷ್ಮಾ
ಬಲೇನ ದಾರುಣ್ಯಧಿಮಥ್ಯಮಾನಃ ।
ಅಣುಃ ಪ್ರಜಾತೋ ಹವಿಷಾ ಸಮಿಧ್ಯತೇ
ತಥೈವ ಮೇ ವ್ಯಕ್ತಿರಿಯಂ ಹಿ ವಾಣೀ ॥೧೮॥

ಏವಂ ಗದಿಃ ಕರ್ಮ ಗತಿರ್ವಿಸರ್ಗೋ
ಘ್ರಾಣೋ ರಸೋ ದೃಕ್ಸ್ಪರ್ಶಃ ಶ್ರುತಿಶ್ಚ ।
ಸಙ್ಕಲ್ಪವಿಜ್ಞಾನಮಥಾಭಿಮಾನಃ
ಸೂತ್ರಂ ರಜಃಸತ್ತ್ವತಮೋವಿಕಾರಃ ॥೧೯॥

ಅಯಂ ಹಿ ಜೀವಸ್ತ್ರಿ ವೃದಬ್ಜಯೋನಿ-
ರವ್ಯಕ್ತ ಏಕೋ ವಯಸಾ ಸ ಆದ್ಯಃ ।
ವಿಶ್ಲಿಷ್ಟಶಕ್ತಿರ್ಬಹುಧೇವ ಭಾತಿ
ಬೀಜಾನಿ ಯೋನಿಂ ಪ್ರತಿಪದ್ಯ ಯದ್ವತ್ ॥೨೦॥

ಯಸ್ಮಿನ್ನಿದಂ ಪ್ರೋತಮಶೇಷಮೋತಂ
ಪಟೋ ಯಥಾ ತನ್ತುವಿತಾನಸಂಸ್ಥಃ ।
ಯ ಏಷ ಸಂಸಾರತರುಃ ಪುರಾಣಃ
ಕರ್ಮಾತ್ಮಕಃ ಪುಷ್ಪಫಲೇ ಪ್ರಸೂತೇ ॥೨೧॥

ದ್ವೇ ಅಸ್ಯ ಬೀಜೇ ಶತಮೂಲಸ್ತ್ರಿನಾಲಃ
ಪಞ್ಚಸ್ಕನ್ಧಃ ಪಞ್ಚರಸಪ್ರಸೂತಿಃ ।
ದಶೈಕಶಾಖೋ ದ್ವಿಸುಪರ್ಣನೀಡ-
ಸ್ತ್ರಿವಲ್ಕಲೋ ದ್ವಿಫಲೋಽರ್ಕಂ ಪ್ರವಿಷ್ಟಃ ॥೨೨॥

ಅದನ್ತಿ ಚೈಕಂ ಫಲಮಸ್ಯ ಗೃಧ್ರಾ
ಗ್ರಾಮೇಚರಾ ಏಕಮರಣ್ಯವಾಸಾಃ ।
ಹಂಸಾ ಯ ಏಕಂ ಬಹುರೂಪಮಿಜ್ಯೈ-
ರ್ಮಾಯಾಮಯಂ ವೇದ ಸ ವೇದ ವೇದಮ್ ॥೨೩॥

ಏವಂ ಗುರೂಪಾಸನಯೈಕಭಕ್ತ್ಯಾ
ವಿದ್ಯಾಕುಠಾರೇಣ ಶಿತೇನ ಧೀರಃ ।
ವಿವೃಶ್ಚ್ಯ ಜೀವಾಶಯಮಪ್ರಮತ್ತಃ
ಸಮ್ಪದ್ಯ ಚಾತ್ಮಾನಮಥ ತ್ಯಜಾಸ್ತ್ರಮ್ ॥೨೪॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ಏಕಾದಶಸ್ಕನ್ಧೇ ದ್ವಾದಶೋಽಧ್ಯಾಯಃ

---

## ಅಥ ತ್ರಯೋದಶೋಽಧ್ಯಾಯಃ

ಶ್ರೀಭಗವಾನುವಾಚ :

ಸತ್ತ್ವಂ ರಜಸ್ತಮ ಇತಿ ಗುಣಾ ಬುದ್ಧೇರ್ನ ಚಾತ್ಮನಃ ।
ಸತ್ತ್ವೇನಾನ್ಯತಮೌ ಹನ್ಯಾತ್ಸತ್ತ್ವಂ ಸತ್ತ್ವೇನ ಚೈವ ಹಿ ॥೧॥

ಸತ್ತ್ವಾದ್ಧರ್ಮೋ ಭವೇದ್ವೃದ್ಧಾತ್ಪುಂಸೋ ಮದ್ಭಕ್ತಿಲಕ್ಷಣಃ ।
ಸಾತ್ತ್ವಿಕೋಪಾಸಯಾ ಸತ್ತ್ವಂ ತತೋ ಧರ್ಮಃ ಪ್ರವರ್ತತೇ ॥೨॥

ಧರ್ಮೋ ರಜಸ್ತಮೋ ಹನ್ಯಾತ್ಸತ್ತ್ವವೃದ್ಧಿರನುತ್ತಮಃ ।
ಆಶು ನಶ್ಯತಿ ತನ್ಮೂಲೋ ಹ್ಯಧರ್ಮ ಉಭಯೇ ಹತೇ ॥೩॥

ಆಗಮೋಽಪಃ ಪ್ರಜಾ ದೇಶಃ ಕಾಲಃ ಕರ್ಮ ಚ ಜನ್ಮ ಚ ।
ಧ್ಯಾನಂ ಮನ್ತ್ರೋಽಥ ಸಂಸ್ಕಾರೋ ದಶೈತೇ ಗುಣಹೇತವಃ ॥೪॥

ತತ್ತತ್ ಸಾತ್ತ್ವಿಕಮೇವೈಷಾಂ ಯದ್ಯದ್ವೃದ್ಧಾಃ ಪ್ರಚಕ್ಷತೇ ।
ನಿನ್ದನ್ತಿ ತಾಮಸಂ ತತ್ತದ್ರಾಜಸಂ ತದುಪೇಕ್ಷಿತಮ್ ॥೫॥

ಸಾತ್ತ್ವಿಕಾನ್ಯೇವ ಸೇವೇತ ಪುಮಾನ್ ಸತ್ತ್ವವಿವೃದ್ಧಯೇ ।
ತತೋ ಧರ್ಮಸ್ತತೋ ಜ್ಞಾನಂ ಯಾವತ್ ಸ್ಮೃತಿರಪೋಹನಮ್ ॥೬॥

ವೇಣುಸಙ್ಘರ್ಷಜೋ ವಹ್ನಿರ್ದಗ್ಧ್ವಾ ಶಾಮ್ಯತಿ ತದ್ವನಮ್ ।
ಏವಂ ಗುಣವ್ಯತ್ಯಯಜೋ ದೇಹಃ ಶಾಮ್ಯತಿ ತತ್ಕ್ರಿಯಃ ॥೭॥

ಉದ್ಧವ ಉವಾಚ :

ವಿದನ್ತಿ ಮರ್ತ್ಯಾಃ ಪ್ರಾಯೇಣ ವಿಷಯಾನ್ ಪದಮಾಪದಾಮ್ ।
ತಥಾಪಿ ಭುಞ್ಜತೇ ಕೃಷ್ಣ ತತ್ಕಥಂ ಶ್ವಖರಾಜವತ್ ॥೮॥

ಶ್ರೀಭಗವಾನುವಾಚ :

ಅಹಮಿತ್ಯನ್ಯಥಾಬುದ್ಧಿಃ ಪ್ರಮತ್ತಸ್ಯ ಯಥಾ ಹೃದಿ ।
ಉತ್ಸರ್ಪತಿ ರಜೋ ಘೋರಂ ತತೋ ವೈಕಾರಿಕಂ ಮನಃ ॥೯॥

ರಜೋಯುಕ್ತಸ್ಯ ಮನಸಃ ಸಙ್ಕಲ್ಪಃ ಸವಿಕಲ್ಪಕಃ ।
ತತಃ ಕಾಮೋ ಗುಣಧ್ಯಾನಾದ್ದುಸ್ಸಹಃ ಸ್ಯಾದ್ಧಿ ದುರ್ಮತೇಃ ॥೧೦॥

ಕರೋತಿ ಕಾಮವಶಗಃ ಕರ್ಮಾಣ್ಯವಿಜಿತೇನ್ದ್ರಿಯಃ ।
ದುಃಖೋದರ್ಕಾಣಿ ಸಮ್ಪಶ್ಯನ್ ರಜೋವೇಗವಿಮೋಹಿತಃ ॥೧೧॥

ರಜಸ್ತಮೋಭ್ಯಾಂ ಯದಪಿ ವಿದ್ವಾನ್ ವಿಕ್ಷಿಪ್ತಧೀಃ ಪುನಃ ।
ಅತನ್ದ್ರಿತೋ ಮನೋ ಯುಞ್ಜನ್ದೋಷದೃಷ್ಟಿರ್ನ ಸಜ್ಜತೇ ॥೧೨॥

ಅಪ್ರಮತ್ತೋಽನುಯುಞ್ಜೀತ ಮನೋ ಮಯ್ಯರ್ಪಯನ್ ಶನೈಃ ।
ಅನಿರ್ವಿಣ್ಣೋ ಯಥಾಕಾಲಂ ಜಿತಶ್ವಾಸೋ ಜಿತಾಸನಃ ॥೧೩॥

ಏತಾವಾನ್ ಯೋಗ ಆದಿಷ್ಟೋ ಮಚ್ಛಿಷ್ಯೈಃ ಸನಕಾದಿಭಿಃ ।
ಸರ್ವತೋ ಮನ ಆಕೃಷ್ಯ ಮಯ್ಯದ್ಧಾಽವೇಶ್ಯತೇ ಯಥಾ ॥೧೪॥

ಉದ್ಧವ ಉವಾಚ :

ಯದಾ ತ್ವಂ ಸನಕಾದಿಭ್ಯೋ ಯೇನ ರೂಪೇಣ ಕೇಶವ ।
ಯೋಗಮಾದಿಷ್ಟವಾನೇತದ್ರೂಪಮಿಚ್ಛಾಮಿ ವೇದಿತುಮ್ ॥೧೫॥

ಶ್ರೀಭಗವಾನುವಾಚ :

ಪುತ್ರಾ ಹಿರಣ್ಯಗರ್ಭಸ್ಯ ಮಾನಸಾಃ ಸನಕಾದಯಃ ।
ಪಪ್ರಚ್ಛುಃ ಪಿತರಂ ಸೂಕ್ಷ್ಮಾಂ ಯೋಗಸ್ಯೈಕಾನ್ತಿಕೀಂ ಗತಿಮ್ ॥೧೬॥

ಸನಕಾದಯ ಊಚುಃ :

ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಭೋ ।
ಕಥಮನ್ಯೋನ್ಯಸನ್ತ್ಯಾಗೋ ಮುಮುಕ್ಷೋರತಿತಿತೀರ್ಷೋಃ ॥೧೭॥

ಶ್ರೀಭಗವಾನುವಾಚ :

ಏವಂ ಪೃಷ್ಟೋ ಮಹಾದೇವಃ ಸ್ವಯಮ್ಭೂರ್ಭೂತಭಾವನಃ ।
ಧ್ಯಾಯಮಾನಃ ಪ್ರಶ್ನಬೀಜಂ ನಾಭ್ಯಪದ್ಯತ ಕರ್ಮಧೀಃ ॥೧೮॥

ಸ ಮಾಮಚಿನ್ತಯದ್ದೇವಃ ಪ್ರಶ್ನಪಾರತಿತೀರ್ಷಯಾ ।
ತಸ್ಯಾಹಂ ಹಂಸರೂಪೇಣ ಸಕಾಶಮಗಮಂ ತದಾ ॥೧೯॥

ದೃಷ್ಟ್ವಾ ಮಾಂ ತ ಉಪವ್ರಜ್ಯ ಕೃತ್ವಾ ಪಾದಾಭಿವನ್ದನಮ್ ।
ಬ್ರಹ್ಮಾಣಮಗ್ರತಃ ಕೃತ್ವಾ ಪಪ್ರಚ್ಛುಃ ಕೋ ಭವಾನಿತಿ ॥೨೦॥

ಇತ್ಯಹಂ ಮುನಿಭಿಃ ಪೃಷ್ಟಸ್ತತ್ತ್ವಜಿಜ್ಞಾಸುಭಿಸ್ತದಾ ।
ಯದವೋಚಮಹಂ ತೇಭ್ಯಸ್ತದುದ್ಧವ ನಿಬೋಧ ಮೇ ॥೨೧॥

ವಸ್ತುನೋ ಯದ್ಯನಾನಾತ್ವಮಾತ್ಮನಃ ಪ್ರಶ್ನ ಈದೃಶಃ ।
ಕಥಂ ಘಟೇತ ವೋ ವಿಪ್ರಾ ವಕ್ತುರ್ವಾ ಮೇ ಕ ಆಶ್ರಯಃ ॥೨೨॥

ಪಞ್ಚಾತ್ಮಕೇಷು ಭೂತೇಷು ಸಮಾನೇಷು ಚ ವಸ್ತುತಃ ।
ಕೋ ಭವಾನಿತಿ ವಃ ಪ್ರಶ್ನೋ ವಾಚಾರಮ್ಭೋ ಹ್ಯನರ್ಥಕಃ ॥೨೩॥

ಮನಸಾ ವಚಸಾ ದೃಷ್ಟ್ಯಾ ಗೃಹ್ಯತೇಽನ್ಯೈರಪೀನ್ದ್ರಿಯೈಃ ।
ಅಹಮೇವ ನ ಮತ್ತೋಽನ್ಯದಿತಿ ಬುಧ್ಯಧ್ವಮಞ್ಜಸಾ ॥೨೪॥

ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಜಾಃ ।
ಜೀವಸ್ಯ ದೇಹ ಉಭಯಂ ಗುಣಾಶ್ಚೇತೋ ಮದಾತ್ಮನಃ ॥೨೫॥

ಗುಣೇಷು ಚಾವಿಶಚ್ಚಿತ್ತಮಭೀಕ್ಷ್ಣಂ ಗುಣಸೇವಯಾ ।
ಗುಣಾಶ್ಚ ಚಿತ್ತಪ್ರಭವಾ ಮದ್ರೂಪ ಉಭಯಂ ತ್ಯಜೇತ್ ॥೨೬॥

ಜಾಗ್ರತ್ಸ್ವಪ್ನಃ ಸುಷುಪ್ತಂ ಚ ಗುಣತೋ ಬುದ್ಧಿವೃತ್ತಯಃ ।
ತಾಸಾಂ ವಿಲಕ್ಷಣೋ ಜೀವಃ ಸಾಕ್ಷಿತ್ವೇನ ವಿನಿಶ್ಚಿತಃ ॥೨೭॥

ಯರ್ಹಿ ಸಂಸೃತಿಬನ್ಧೋಽಯಮಾತ್ಮನೋ ಗುಣವೃತ್ತಿದಃ ।
ಮಯಿ ತುರ್ಯೇ ಸ್ಥಿತೋ ಜಹ್ಯಾತ್ತ್ಯಾಗಸ್ತದ್ಗುಣಚೇತಸಾಮ್ ॥೨೮॥

ಅಹಙ್ಕಾರಕೃತಂ ಬನ್ಧಮಾತ್ಮನೋಽರ್ಥವಿಪರ್ಯಯಮ್ ।
ವಿದ್ವಾನ್ ನಿರ್ವಿದ್ಯ ಸಂಸಾರಚಿನ್ತಾಂ ತುರ್ಯೇ ಸ್ಥಿತಸ್ತ್ಯಜೇತ್ ॥೨೯॥

ಯಾವನ್ನಾನಾರ್ಥಧೀಃ ಪುಂಸೋ ನ ನಿವರ್ತೇತ ಯುಕ್ತಿಭಿಃ ।
ಜಾಗರ್ತ್ಯಪಿ ಸ್ವಪನ್ನಜ್ಞಃ ಸ್ವಪ್ನೇ ಜಾಗರಣಂ ಯಥಾ ॥೩೦॥

ಅಸತ್ತ್ವಾದಾತ್ಮನೋಽನ್ಯೇಷಾಂ ಭಾವಾನಾಂ ತತ್ಕೃತಾ ಭಿದಾ ।
ಗತಯೋ ಹೇತವಶ್ಚಾಸ್ಯ ಮೃಷಾ ಸ್ವಪ್ನದೃಶೋ ಯಥಾ ॥೩೧॥

ಯೋ ಜಾಗರೇ ಬಹಿರನುಕ್ಷಣಧರ್ಮಿಣೋಽರ್ಥಾನ್
ಭುಙ್ಕ್ತೇ ಸಮಸ್ತಕರಣೈರ್ಹೃದಿ ತತ್ಸದೃಕ್ಷಾನ್ ।
ಸ್ವಪ್ನೇ ಸುಷುಪ್ತ ಉಪಸಂಹರತೇ ಸ ಏಕಃ
ಸ್ಮೃತ್ಯನ್ವಯಾತ್ತ್ರಿಗುಣವೃತ್ತಿದೃಗಿನ್ದ್ರಿಯೇಶಃ ॥೩೨॥

ಏವಂ ವಿಮೃಶ್ಯ ಗುಣತೋ ಮನಸಸ್ತ್ರ್ಯವಸ್ಥಾ
ಮನ್ಮಾಯಯಾ ಮಯಿ ಕೃತಾ ಇತಿ ನಿಶ್ಚಿತಾರ್ಥಾಃ ।
ಸಞ್ಛಿದ್ಯ ಹಾರ್ದಮನುಮಾನಸದುಕ್ತಿತೀಕ್ಷ್ಣ-
ಜ್ಞಾನಾಸಿನಾ ಭಜತ ಮಾಖಿಲಸಂಶಯಾಧಿಮ್ ॥೩೩॥

ಈಕ್ಷೇತ ವಿಭ್ರಮಮಿದಂ ಮನಸೋ ವಿಲಾಸಂ
ದೃಷ್ಟಂ ವಿನಷ್ಟಮತಿಲೋಲಮಲಾತಚಕ್ರಮ್ ।
ವಿಜ್ಞಾನಮೇಕಮುರುಧೇವ ವಿಭಾತಿ ಮಾಯಾ
ಸ್ವಪ್ನಸ್ತ್ರಿಧಾ ಗುಣವಿಸರ್ಗಕೃತೋ ವಿಕಲ್ಪಃ ॥೩೪॥

ದೃಷ್ಟಿಂ ತತಃ ಪ್ರತಿನಿವರ್ತ್ಯ ನಿವೃತ್ತತೃಷ್ಣ-
ಸ್ತೂಷ್ಣೀಂ ಭವೇನ್ನಿಜಸುಖಾನುಭವೋ ನಿರೀಹಃ ।
ಸನ್ದೃಶ್ಯತೇ ಕ್ವ ಚ ಯದೀದಮವಸ್ತುಬುದ್ಧ್ಯಾ
ತ್ಯಕ್ತಂ ಭ್ರಮಾಯ ನ ಭವೇತ್ ಸ್ಮೃತಿರಾನಿಪಾತಾತ್ ॥೩೫॥

ದೇಹಂ ಚ ನಶ್ವರಮವಸ್ಥಿತಮುತ್ಥಿತಂ ವಾ
ಸಿದ್ಧೋ ನ ಪಶ್ಯತಿ ಯತೋಽಧ್ಯಗವತ್ ಸ್ವರೂಪಮ್ ।
ದೈವಾದಪೇತಮುತ ದೈವವಸಾದುಪೇತಂ
ವಾಸೋ ಯಥಾ ಪರಿಕೃತಂ ಮದಿರಾಮದಾನ್ಧಃ ॥೩೬॥

ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್
ಸ್ವಾರಮ್ಭಕಂ ಪ್ರತಿಸಮೀಕ್ಷತ ಏವ ಸಾಸುಃ ।
ತಂ ಸಪ್ರಪಞ್ಚಮಧಿರೂಢಸಮಾಧಿಯೋಗಃ
ಸ್ವಾಪ್ನಂ ಪುನರ್ನ ಭಜತೇ ಪ್ರತಿಬುದ್ಧವಸ್ತುಃ ॥೩೭॥

ಮಯೈತದುಕ್ತಂ ವೋ ವಿಪ್ರಾ ಗುಹ್ಯಂ ಯತ್ಸಾಙ್ಖ್ಯ ಯೋಗಯೋಃ ।
ಜಾನೀತ ಮಾಽಗತಂ ಯಜ್ಞಂ ಯುಷ್ಮದ್ಧರ್ಮವಿವಕ್ಷಯಾ ॥೩೮॥

ಅಹಂ ಯೋಗಸ್ಯ ಸಾಙ್ಖ್ಯಸ್ಯ ಸತ್ಯಸ್ಯರ್ತಸ್ಯ ತೇಜಸಃ ।
ಪರಾಯಣಂ ದ್ವಿಜಶ್ರೇಷ್ಠಾಃ ಶ್ರಿಯಃ ಕೀರ್ತೇರ್ದಮಸ್ಯ ಚ ॥೩೯॥

ಮಾಂ ಭಜನ್ತಿ ಗುಣಾಃ ಸರ್ವೇ ನಿರ್ಗುಣಂ ನಿರಪೇಕ್ಷಕಮ್ ।
ಸುಹೃದಂ ಪ್ರಿಯಮಾತ್ಮಾನಂ ಸಾಮ್ಯಾ ಸಙ್ಗಾದಯೋಽಗುಣಾಃ ॥೪೦॥

ಇತಿ ಮೇ ಛಿನ್ನಸನ್ದೇಹಾ ಮುನಯಃ ಸನಕಾದಯಃ ।
ಸಭಾಜಯಿತ್ವಾ ಪರಯಾ ಭಕ್ತ್ಯಾಗೃಣತ ಸಂಸ್ತವೈಃ ॥೪೧॥

ತೈರಹಂ ಪೂಜಿತಃ ಸಮ್ಯಕ್ ಸಂಸ್ತುತಃ ಪರಮರ್ಷಿಭಿಃ ।
ಪ್ರತ್ಯೇಯಾಯ ಸ್ವಕಂ ಧಾಮ ಪಶ್ಯತಃ ಪರಮೇಷ್ಠಿನಃ ॥೪೨॥

ಇತಿ ಶ್ರೀಮಾದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ಏಕಾದಶಸ್ಕನ್ಧೇ ತ್ರಯೋದಶೋಽಧ್ಯಾಯಃ

---

## ಅಥ ಚತುರ್ದಶೋಽಧ್ಯಾಯಃ

ಉದ್ಧವ ಉವಾಚ :

ವದನ್ತಿ ಕೃಷ್ಣ ಶ್ರೇಯಾಂಸಿ ಬಹೂನಿ ಬ್ರಹ್ಮವಾದಿನಃ ।
ತೇಷಾಂ ವಿಕಲ್ಪಪ್ರಾಧಾನ್ಯಮುತಾಹೋ ಏಕಮುಖ್ಯತಾ ॥೧॥

ಭವತೋದಾಹೃತಃ ಸ್ವಾಮಿನ್ ಭಕ್ತಿಯೋಗೋಽನಪೇಕ್ಷಿತಃ ।
ನಿರಸ್ಯ ಸರ್ವತಃ ಸಙ್ಗಂ ಯೇನ ತ್ವಯ್ಯಾವಿಶೇನ್ಮನಃ ॥೨॥

ಶ್ರೀಭಗವಾನುವಾಚ :

ಕಾಲೇನ ನಷ್ಟಾ ಪ್ರಲಯೇ ವಾಣೀಯಂ ವೇದಸಂಜ್ಞಿತಾ ।
ಮಯಾಽದೌ ಬ್ರಹ್ಮಣೇ ಪ್ರೋಕ್ತಾ ಧರ್ಮೋ ಯಸ್ಯಾಂ ಮದಾತ್ಮಕಃ ॥೩॥

ತೇನ ಪ್ರೋಕ್ತಾ ಚ ಪುತ್ರಾಯ ಮನವೇ ಪೂರ್ವಜಾಯ ಸಾ ।
ತತೋ ಭೃಗ್ವಾದಯೋಽಗೃಹ್ಣನ್ಸಪ್ತ ಬ್ರಹ್ಮಮಹರ್ಷಯಃ ॥೪॥

ತೇಭ್ಯಃ ಪಿತೃಭ್ಯಸ್ತತ್ಪುತ್ರಾ ದೇವದಾನವಗುಹ್ಯಕಾಃ ।
ಮನುಷ್ಯಾಃ ಸಿದ್ಧಗನ್ಧರ್ವಾಃ ಸವಿದ್ಯಾಧರಚಾರಣಾಃ ॥೫॥

ಕಿಂದೇವಾಃ ಕಿಂನರಾ ನಾಗಾ ರಕ್ಷಃಕಿಂಪುರುಷಾದಯಃ ।
ಬಹ್ವ್ಯಸ್ತೇಷಾಂ ಪ್ರಕೃತಯೋ ರಜಃಸತ್ತ್ವತಮೋಭುವಃ ॥೬॥

ಯಾಭಿರ್ಭೂತಾನಿ ಭಿದ್ಯನ್ತೇ ಭೂತಾನಾಂ ಮತಯಸ್ತಥಾ ।
ಯಥಾಪ್ರಕೃತಿ ಸರ್ವೇಷಾಂ ಚಿತ್ರಾ ವಾಚಃ ಸ್ರವನ್ತಿ ಹಿ ॥೭॥

ಏವಂ ಪ್ರಕೃತಿವೈಚಿತ್ರ್ಯಾದ್ಭಿದ್ಯನ್ತೇ ಮತಯೋ ನೃಣಾಮ್ ।
ಪಾರಮ್ಪರ್ಯೇಣ ಕೇಷಾಞ್ಚಿತ್ಪಾಖಣ್ಡಮತಯೋಽಪರೇ ॥೮॥

ಮನ್ಮಾಯಾಮೋಹಿತಧಿಯಃ ಪುರುಷಾಃ ಪುರುಷರ್ಷಭ ।
ಶ್ರೇಯೋ ವದನ್ತ್ಯನೇಕಾನ್ತಂ ಯಥಾಕರ್ಮ ಯಥಾರುಚಿ ॥೯॥

ಧರ್ಮಮೇಕೇ ಯಶಶ್ಚಾನ್ಯೇ ಕಾಮಂ ಸತ್ಯಂ ದಮಂ ಶಮಮ್ ।
ಅನ್ಯೇ ವದನ್ತಿ ಸ್ವಾರ್ಥಂ ವಾ ಐಶ್ವರ್ಯಂ ತ್ಯಾಗಭೋಜನಮ್ ॥೧೦॥

ಕೇಚಿದ್ಯಜ್ಞತಪೋದಾನಂ ವ್ರತಾನಿ ನಿಯಮಾನ್ಯಮಾನ್ ।
ಆದ್ಯನ್ತವನ್ತ ಏವೈಷಾಂ ಲೋಕಾಃ ಕರ್ಮವಿನಿರ್ಮಿತಾಃ ।
ದುಃಖೋದರ್ಕಾಸ್ತಮೋನಿಷ್ಠಾಃ ಕ್ಷುದ್ರಾನನ್ದಾಃ ಶುಚಾರ್ಪಿತಾಃ ॥೧೧॥

ಮಯ್ಯರ್ಪಿತಾತ್ಮನಃ ಸಭ್ಯ ನಿರಪೇಕ್ಷಸ್ಯ ಸರ್ವತಃ ।
ಮಯಾಽತ್ಮನಾ ಸುಖಂ ಯತ್ತತ್ಕುತಃ ಸ್ಯಾದ್ವಿಷಯಾತ್ಮನಾಮ್ ॥೧೨॥

ಅಕಿಞ್ಚನಸ್ಯ ದಾನ್ತಸ್ಯ ಶಾನ್ತಸ್ಯ ಸಮಚೇತಸಃ ।
ಮಯಾ ಸನ್ತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ॥೧೩॥

ನ ಪಾರಮೇಷ್ಠ್ಯಂ ನ ಮಹೇನ್ದ್ರಧಿಷ್ಣ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಮ್ ।

ನ ಯೋಗಸಿದ್ಧೀರಪುನರ್ಭವಂ ವಾ
ಮಯ್ಯರ್ಪಿತಾತ್ಮೇಚ್ಛತಿ ಮದ್ವಿನಾನ್ಯತ್ ॥೧೪॥

ನ ತಥಾ ಮೇ ಪ್ರಿಯತಮ ಆತ್ಮಯೋನಿರ್ನ ಶಙ್ಕರಃ ।
ನ ಚ ಸಙ್ಕರ್ಷಣೋ ನ ಶ್ರೀರ್ನೈವಾತ್ಮಾ ಚ ಯಥಾ ಭವಾನ್ ॥೧೫॥

ನಿರಪೇಕ್ಷಂ ಮುನಿಂ ಶಾನ್ತಂ ನಿರ್ವೈರಂ ಸಮದರ್ಶನಮ್ ।
ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತ್ಯಂಘ್ರಿರೇಣುಭಿಃ ॥೧೬॥

ನಿಷ್ಕಿಞ್ಚನಾ ಮಯ್ಯನುರಕ್ತಚೇತಸಃ
ಶಾನ್ತಾ ಮಹಾನ್ತೋಽಖಿಲಜೀವವತ್ಸಲಾಃ ।
ಕಾಮೈರನಾಲಬ್ಧಧಿಯೋ ಜುಷನ್ತಿ ಯತ್
ತನ್ನೈರಪೇಕ್ಷ್ಯಂ ನ ವಿದುಃ ಸುಖಂ ಮಮ ॥೧೭॥

ಬಾಧ್ಯಮಾನೋಽಪಿ ಮದ್ಭಕ್ತೋ ವಿಷಯೈರಜಿತೇನ್ದ್ರಿಯಃ ।
ಪ್ರಾಯಃ ಪ್ರಗಲ್ಭಯಾ ಭಕ್ತ್ಯಾ ವಿಷಯೈರ್ನಾಭಿಭೂಯತೇ ॥೧೮॥

ಯಥಾಗ್ನಿಃ ಸುಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ ।
ತಥಾ ಮದ್ವಿಷಯಾ ಭಕ್ತಿರುದ್ಧವೈನಾಂಸಿ ಕೃತ್ಸ್ನಶಃ ॥೧೯॥

ನ ಸಾಧಯತಿ ಮಾಂ ಯೋಗೋ ನ ಸಾಙ್ಖ್ಯಂ ಧರ್ಮ ಉದ್ಧವ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ॥೨೦॥

ಭಕ್ತ್ಯಾಹಮೇಕಯಾ ಗ್ರಾಹ್ಯಃ ಶ್ರದ್ಧಯಾಽತ್ಮಾ ಪ್ರಿಯಃ ಸತಾಮ್ ।
ಭಕ್ತಿಃ ಪುನಾತಿ ಮನ್ನಿಷ್ಠಾ ಶ್ವಪಾಕಾನಪಿ ಸಮ್ಭವಾತ್ ॥೨೧॥

ಧರ್ಮಃ ಸತ್ಯದಯೋಪೇತೋ ವಿದ್ಯಾ ವಾ ತಪಸಾನ್ವಿತಾ ।
ಮದ್ಭಕ್ತ್ಯಾಪೇತಮಾತ್ಮಾನಂ ನ ಸಮ್ಯಕ್ ಪ್ರಪುನಾತಿ ಹಿ ॥೨೨॥

ಕಥಂ ವಿನಾ ರೋಮಹರ್ಷಂ ದ್ರವತಾ ಚೇತಸಾ ವಿನಾ ।
ವಿನಾಽನನ್ದಾಶ್ರುಕಲಯಾ ಶುಧ್ಯೇದ್ಭಕ್ತ್ಯಾ ವಿನಾಽಶಯಃ ॥೨೩॥

ವಾಗ್ಗದ್ಗದಾ ದ್ರವತೇ ಯಸ್ಯ ಚಿತ್ತಂ
ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ ।
ವಿಲಜ್ಜ ಉದ್ಗಾಯತಿ ನೃತ್ಯತೇ ಚ
ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥೨೪॥

ಯಥಾಗ್ನಿನಾ ಹೇಮ ಮಲಂ ಜಹಾತಿ
ಧ್ಮಾತಂ ಪುನಃ ಸ್ವಂ ಭಜತೇ ಚ ರೂಪಮ್ ।
ಆತ್ಮಾ ಚ ಕರ್ಮಾನುಶಯಂ ವಿಧೂಯ
ಮದ್ಭಕ್ತಿಯೋಗೇನ ಭಜತ್ಯಥೋ ಮಾಮ್ ॥೨೫॥

ಯಥಾ ಯಥಾಽತ್ಮಾ ಪರಿಮೃಜ್ಯತೇಽಸೌ
ಮತ್ಪುಣ್ಯಗಾಥಾಶ್ರವಣಾಭಿಧಾನೈಃ ।
ತಥಾ ತಥಾ ಪಶ್ಯತಿ ವಸ್ತು ಸೂಕ್ಷ್ಮಂ
ಚಕ್ಷುರ್ಯಥೈವಾಞ್ಜನಸಂಪ್ರಯುಕ್ತಮ್ ॥೨೬॥

ವಿಷಯಾನ್ ಧ್ಯಾಯತಶ್ಚಿತ್ತಂ ವಿಷಯೇಷು ವಿಷಜ್ಜತೇ ।
ಮಾಮನುಸ್ಮರತಶ್ಚಿತ್ತಂ ಮಯ್ಯೇವ ಪ್ರವಿಲೀಯತೇ ॥೨೭॥

ತಸ್ಮಾದಸದಭಿಧ್ಯಾನಂ ಯಥಾ ಸ್ವಪ್ನಮನೋರಥಮ್ ।
ಹಿತ್ವಾ ಮಯಿ ಸಮಾಧತ್ಸ್ವ ಮನೋ ಮದ್ಭಾವಭಾವಿತಮ್ ॥೨೮॥

ಸ್ತ್ರೀಣಾಂ ಸ್ತ್ರೀಸಙ್ಗಿನಾಂ ಸಙ್ಗಂ ತ್ಯಕ್ತ್ವಾ ದೂರತ ಆತ್ಮವಾನ್ ।
ಕ್ಷೇಮೇ ವಿವಿಕ್ತ ಆಸೀನಶ್ಚಿನ್ತಯೇನ್ಮಾಮತನ್ದ್ರಿತಃ ॥೨೯॥

ನ ತಥಾಸ್ಯ ಭವೇತ್ಕ್ಲೇಶೋ ಬನ್ಧಶ್ಚಾನ್ಯಪ್ರಸಙ್ಗತಃ ।
ಯೋಷಿತ್ಸಙ್ಗಾದ್ಯಥಾ ಪುಂಸೋ ಯಥಾ ತತ್ಸಙ್ಗಿಸಙ್ಗತಃ ॥೩೦॥

ಉದ್ಧವ ಉವಾಚ :

ಯಥಾ ತ್ವಾಮರವಿನ್ದಾಕ್ಷ ಯಾದೃಶಂ ವಾ ಯದಾತ್ಮಕಮ್ ।
ಧ್ಯಾಯೇನ್ಮುಮುಕ್ಷುರೇತನ್ಮೇ ಧ್ಯಾನಂ ತ್ವಂ ವಕ್ತುಮರ್ಹಸಿ ॥೩೧॥

ಶ್ರೀಭಗವಾನುವಾಚ :

ಸಮ ಆಸನ ಆಸೀನಃ ಸಮಕಾಯೋ ಯಥಾಸುಖಮ್ ।
ಹಸ್ತಾವುತ್ಸಙ್ಗ ಆಧಾಯ ಸ್ವನಾಸಾಗ್ರಕೃತೇಕ್ಷಣಃ ॥೩೨॥

ಪ್ರಾಣಸ್ಯ ಶೋಧಯೇನ್ಮಾರ್ಗಂ ಪೂರಕುಮ್ಭಕರೇಚಕೈಃ ।
ವಿಪರ್ಯಯೇಣಾಪಿ ಶನೈರಭ್ಯಸೇನ್ನಿರ್ಜಿತೇನ್ದ್ರಿಯಃ ॥೩೩॥

ಹೃದ್ಯವಿಚ್ಛಿನ್ನಮೋಙ್ಕಾರಂ ಘಣ್ಟಾನಾದಂ ಬಿಸೋರ್ಣವತ್ ।
ಪ್ರಾಣೇನೋದೀರ್ಯ ತತ್ರಾಥ ಪುನಃ ಸಂವೇಶಯೇತ್ ಸ್ವರಮ್ ॥೩೪॥

ಏವಂ ಪ್ರಣವಸಂಯುಕ್ತಂ ಪ್ರಾಣಮೇವ ಸಮಭ್ಯಸೇತ್ ।
ದಶಕೃತ್ವಸ್ತ್ರಿಷವಣಂ ಮಾಸಾದರ್ವಾಗ್ಜಿತಾನಿಲಃ ॥೩೫॥

ಹೃತ್ಪುಣ್ಡರೀಕಮನ್ತಃಸ್ಥಮೂರ್ಧ್ವನಾಲಮಧೋಮುಖಮ್ ।
ಧ್ಯಾತ್ವೋರ್ಧ್ವಮುಖಮುನ್ನಿದ್ರಮಷ್ಟಪತ್ರಂ ಸಕರ್ಣಿಕಮ್ ॥೩೬॥

ಕರ್ಣಿಕಾಯಾಂ ನ್ಯಸೇತ್ಸೂರ್ಯಸೋಮಾಗ್ನೀನುತ್ತರೋತ್ತರಮ್ ।
ವಹ್ನಿಮಧ್ಯೇ ಸ್ಮರೇದ್ರೂಪಂ ಮಮೈತದ್ಧ್ಯಾನಮಙ್ಗಲಮ್ ॥೩೭॥

ಸಮಂ ಪ್ರಶಾನ್ತಂ ಸುಮುಖಂ ದೀರ್ಘಚಾರುಚತುರ್ಭುಜಮ್ ।
ಸುಚಾರುಸುನ್ದರಗ್ರೀವಂ ಸುಕಪೋಲಂ ಶುಚಿಸ್ಮಿತಮ್ ॥೩೮॥

ಸಮಾನಕರ್ಣವಿನ್ಯಸ್ತಸ್ಫುರನ್ಮಕರಕುಣ್ಡಲಮ್ ।
ಹೇಮಾಮ್ಬರಂ ಘನಶ್ಯಾಮಂ ಶ್ರೀವತ್ಸಶ್ರೀನಿಕೇತನಮ್ ॥೩೯॥

ಶಙ್ಖಚಕ್ರಗದಾಪದ್ಮವನಮಾಲಾವಿಭೂಷಿತಮ್ ।
ನೂಪುರೈರ್ವಿಲಸತ್ಪಾದಂ ಕೌಸ್ತುಭಪ್ರಭಯಾ ಯುತಮ್ ॥೪೦॥

ದ್ಯುಮತ್ಕಿರೀಟಕಟಕಕಟಿಸೂತ್ರಾಙ್ಗದಾಯುತಮ್ ।
ಸರ್ವಾಙ್ಗಸುನ್ದರಂ ಹೃದ್ಯಂ ಪ್ರಸಾದಸುಮುಖೇಕ್ಷಣಮ್ ।
ಸುಕುಮಾರಮಭಿಧ್ಯಾಯೇತ್ ಸರ್ವಾಙ್ಗೇಷು ಮನೋ ದಧತ್ ॥೪೧॥

ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯೋ ಮನಸಾಽಽಕೃಷ್ಯ ತನ್ಮನಃ ।
ಬುದ್ಧ್ಯಾ ಸಾರಥಿನಾ ಧೀರಃ ಪ್ರಣಯೇನ್ಮಯಿ ಸರ್ವತಃ ॥೪೨॥

ತತ್ಸರ್ವವ್ಯಾಪಕಂ ಚಿತ್ತಮಾಕೃಷ್ಯೈಕತ್ರ ಧಾರಯೇತ್ ।
ನಾನ್ಯಾನಿ ಚಿನ್ತಯೇದ್ಭೂಯಃ ಸುಸ್ಮಿತಂ ಭಾವಯೇನ್ಮುಖಮ್ ॥೪೩॥

ತತ್ರ ಲಬ್ಧಪದಂ ಚಿತ್ತಮಾಕೃಷ್ಯ ವ್ಯೋಮ್ನಿ ಧಾರಯೇತ್ ।
ತಚ್ಚ ತ್ಯಕ್ತ್ವಾ ಮದಾರೋಹೋ ನ ಕಿಞ್ಚಿದಪಿ ಚಿನ್ತಯೇತ್ ॥೪೪॥

ಏವಂ ಸಮಾಹಿತಮತಿರ್ಮಾಮೇವಾತ್ಮಾನಮಾತ್ಮನಿ ।
ವಿಚಷ್ಟೇ ಮಯಿ ಸರ್ವಾತ್ಮನ್ ಜ್ಯೋತಿರ್ಜ್ಯೋತಿಷಿ ಸಂಯುತಮ್ ॥೪೫॥

ಧ್ಯಾನೇನೇತ್ಥಂ ಸುತೀವ್ರೇಣ ಯುಞ್ಜತೋ ಯೋಗಿನೋ ಮನಃ ।
ಸಂಯಾಸ್ಯತ್ಯಾಶು ನಿರ್ವಾಣಂ ದ್ರವ್ಯಜ್ಞಾನಕ್ರಿಯಾಭ್ರಮಃ ॥೪೬॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಮ್
ಸಂಹಿತಾಯಾಂ ಏಕಾದಶಸ್ಕನ್ಧೇ ಚತುರ್ದಶೋಽಧ್ಯಾಯಃ

---

## ಅಥ ಪಞ್ಚದಶೋಽಧ್ಯಾಯಃ

ಶ್ರೀಭಗವಾನುವಾಚ :

ಜಿತೇನ್ದ್ರಿಯಸ್ಯ ಯುಕ್ತಸ್ಯ ಜಿತಶ್ವಾಸಸ್ಯ ಯೋಗಿನಃ ।
ಮಯಿ ಧಾರಯತಶ್ಚೇತ ಉಪತಿಷ್ಠನ್ತಿ ಸಿದ್ಧಯಃ ॥೧॥

ಉದ್ಧವ ಉವಾಚ :

ಕಯಾ ಧಾರಣಯಾ ಕಾಸ್ವಿತ್ಕಥಂಸ್ವಿತ್ ಸಿದ್ಧಿರಚ್ಯುತ ।
ಕತಿ ವಾ ಸಿದ್ಧಯೋ ಬ್ರೂಹಿ ಯೋಗಿನಾಂ ಸಿದ್ಧಿದೋ ಭವಾನ್ ॥೨॥

ಶ್ರೀಭಗವಾನುವಾಚ :

ಸಿದ್ಧಯೋಽಷ್ಟಾದಶ ಪ್ರೋಕ್ತಾ ಧಾರಣಾಯೋಗಪಾರಗೈಃ ।
ತಾಸಾಮಷ್ಟೌ ಮತ್ಪ್ರಧಾನಾ ದಶೈವ ಗುಣಹೇತವಃ ॥೩॥

ಅಣಿಮಾ ಮಹಿಮಾ ಮೂರ್ತೇರ್ಲಘಿಮಾ ಪ್ರಾಪ್ತಿರಿನ್ದ್ರಿಯೈಃ ।
ಪ್ರಾಕಾಮ್ಯಂ ಶ್ರುತದೃಷ್ಟೇಷು ಶಕ್ತಿಪ್ರೇರಣಮೀಶಿತಾ ॥೪॥

ಗುಣೇಷ್ವಸಙ್ಗೋ ವಶಿತಾ ಯತ್ಕಾಮಸ್ತದವಸ್ಯತಿ ।
ಏತಾ ಮೇ ಸಿದ್ಧಯಃ ಸೌಮ್ಯ ಅಷ್ಟಾವೌತ್ಪತ್ತಿಕಾ ಮತಾಃ ॥೫॥

ಅನೂರ್ಮಿಮತ್ತ್ವಂ ದೇಹೇಽಸ್ಮಿನ್ದೂರಶ್ರವಣದರ್ಶನಮ್ ।
ಮನೋಜವಃ ಕಾಮರೂಪಂ ಪರಕಾಯಪ್ರವೇಶನಮ್ ॥೬॥

ಸ್ವಚ್ಛನ್ದಮೃತ್ಯುರ್ದೇವಾನಾಂ ಸಹಕ್ರೀಡಾನುದರ್ಶನಮ್ ।
ಯಥಾಸಙ್ಕಲ್ಪಸಂಸಿದ್ಧಿರಾಜ್ಞಾಪ್ರತಿಹತಾಗತಿಃ ॥೭॥

ತ್ರಿಕಾಲಜ್ಞತ್ವಮದ್ವನ್ದ್ವಂ ಪರಚಿತ್ತಾದ್ಯಭಿಜ್ಞತಾ ।
ಅಗ್ನ್ಯರ್ಕಾಂಬುವಿಷಾದೀನಾಂ ಪ್ರತಿಷ್ಟಮ್ಭೋಽಪರಾಜಯಃ ॥೮॥

ಏತಾಶ್ಚೋದ್ದೇಶತಃ ಪ್ರೋಕ್ತಾ ಯೋಗಧಾರಣಸಿದ್ಧಯಃ ।
ಯಯಾ ಧಾರಣಯಾ ಯಾ ಸ್ಯಾದ್ಯಥಾ ವಾ ಸ್ಯಾನ್ನಿಬೋಧ ಮೇ ॥೯॥

ಭೂತಸೂಕ್ಷ್ಮಾತ್ಮನಿ ಮಯಿ ತನ್ಮಾತ್ರಂ ಧಾರಯೇನ್ಮನಃ ।
ಅಣಿಮಾನಮವಾಪ್ನೋತಿ ತನ್ಮಾತ್ರೋಪಾಸಕೋ ಮಮ ॥೧೦॥

ಮಹತ್ಯಾತ್ಮನ್ಮಯಿ ಪರೇ ಯಥಾಸಂಸ್ಥಂ ಮನೋ ದಧತ್ ।
ಮಹಿಮಾನಮವಾಪ್ನೋತಿ ಭೂತಾನಾಂ ಸ ಪೃಥಕ್ ಪೃಥಕ್ ॥೧೧॥

ಪರಮಾಣುಮಯೇ ಚಿತ್ತಂ ಭೂತಾನಾಂ ಮಯಿ ರಞ್ಜಯನ್ ।
ಕಾಲಸೂಕ್ಷ್ಮಾರ್ಥತಾಂ ಯೋಗೀ ಲಘಿಮಾನಮವಾಪ್ನುಯಾತ್ ॥೧೨॥

ಧಾರಯನ್ ಮಯ್ಯಹಂತತ್ತ್ವೇ ಮನೋ ವೈಕಾರಿಕೇಽಖಿಲಮ್ ।
ಸರ್ವೇನ್ದ್ರಿಯಾಣಾಮಾತ್ಮತ್ವಂ ಪ್ರಾಪ್ತಿಂ ಪ್ರಾಪ್ನೋತಿ ಮನ್ಮನಾಃ ॥೧೩॥

ಮಹತ್ಯಾತ್ಮನಿ ಯಃ ಸೂತ್ರೇ ಧಾರಯೇನ್ಮಯಿ ಮಾನಸಮ್ ।
ಪ್ರಾಕಾಮ್ಯಂ ಪಾರಮೇಷ್ಠ್ಯಂ ಮೇ ವಿನ್ದತೇಽವ್ಯಕ್ತಜನ್ಮನಃ ॥೧೪॥

ವಿಷ್ಣೌ ತ್ರ್ಯಧೀಶ್ವರೇ ಚಿತ್ತಂ ಧಾರಯೇತ್ಕಾಲವಿಗ್ರಹೇ ।
ಸ ಈಶಿತ್ವಮವಾಪ್ನೋತಿ ಕ್ಷೇತ್ರ ಕ್ಷೇತ್ರಜ್ಞಚೋದನಾಮ್ ॥೧೫॥

ನಾರಾಯಣೇ ತುರೀಯಾಖ್ಯೇ ಭಗವಚ್ಛಬ್ದಶಬ್ದಿತೇ ।
ಮನೋ ಮಯ್ಯಾದಧದ್ಯೋಗೀ ಮದ್ಧರ್ಮಾ ವಶಿತಾಮಿಯಾತ್ ॥೧೬॥

ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ ವಿಶದಂ ಮನಃ ।
ಪರಮಾನನ್ದಮಾಪ್ನೋತಿ ಯತ್ರ ಕಾಮೋಽವಸೀಯತೇ ॥೧೭॥

ಶ್ವೇತದ್ವೀಪಪತೌ ಚಿತ್ತಂ ಶುದ್ಧೇ ಧರ್ಮಮಯೇ ಮಯಿ ।
ಧಾರಯನ್ ಶ್ವೇತತಾಂ ಯಾತಿ ಷಡೂರ್ಮಿರಹಿತೋ ನರಃ ॥೧೮॥

ಮಯ್ಯಾಕಾಶಾತ್ಮನಿ ಪ್ರಾಣೇ ಮನಸಾ ಘೋಷಮುದ್ವಹನ್ ।
ತತ್ರೋಪಲಬ್ಧಾ ಭೂತಾನಾಂ ಹಂಸೋ ವಾಚಃ ಶೃಣೋತ್ಯಸೌ ॥೧೯॥

ಚಕ್ಷುಸ್ತ್ವಷ್ಟರಿ ಸಂಯೋಜ್ಯ ತ್ವಷ್ಟಾರಮಪಿ ಚಕ್ಷುಷಿ ।
ಮಾಂ ತತ್ರ ಮನಸಾ ಧ್ಯಾಯನ್ವಿಶ್ವಂ ಪಶ್ಯತಿ ಸೂಕ್ಷ್ಮದೃಕ್ ॥೨೦॥

ಮನೋ ಮಯಿ ಸುಸಂಯೋಜ್ಯ ದೇಹಂ ತದನು ವಾಯುನಾ ।
ಮದ್ಧಾರಣಾನುಭಾವೇನ ತತ್ರಾತ್ಮಾ ಯತ್ರ ವೈ ಮನಃ ॥೨೧॥

ಯದಾ ಮನ ಉಪಾದಾಯ ಯದ್ಯದ್ರೂಪಂ ಬುಭೂಷತಿ ।
ತತ್ತದ್ಭವೇನ್ಮನೋರೂಪಂ ಮದ್ಯೋಗಬಲಮಾಶ್ರಯಃ ॥೨೨॥

ಪರಕಾಯಂ ವಿಶನ್ಸಿದ್ಧ ಆತ್ಮಾನಂ ತತ್ರ ಭಾವಯೇತ್ ।
ಪಿಣ್ಡಂ ಹಿತ್ವಾ ವಿಶೇತ್ಪ್ರಾಣೋ ವಾಯುಭೂತಃ ಷಡಙ್ಘ್ರಿವತ್ ॥೨೩॥

ಪಾರ್ಷ್ಣ್ಯಾಽಪೀಡ್ಯ ಗುದಂ ಪ್ರಾಣಂ ಹೃದುರಃಕಣ್ಠಮೂರ್ಧಸು ।
ಆರೋಪ್ಯ ಬ್ರಹ್ಮರನ್ಧ್ರೇಣ ಬ್ರಹ್ಮ ನೀತ್ವೋತ್ಸೃಜೇತ್ತನುಮ್ ॥೨೪॥

ವಿಹರಿಷ್ಯನ್ಸುರಾಕ್ರೀಡೇ ಮತ್ಸ್ಥಂ ಸತ್ತ್ವಂ ವಿಭಾವಯೇತ್ ।
ವಿಮಾನೇನೋಪತಿಷ್ಠನ್ತಿ ಸತ್ತ್ವವೃತ್ತೀಃ ಸುರಸ್ತ್ರಿಯಃ ॥೨೫॥

ಯಥಾ ಸಙ್ಕಲ್ಪಯೇದ್ಬುದ್ಧ್ಯಾ ಯದಾ ವಾ ಮತ್ಪರಃ ಪುಮಾನ್ ।
ಮಯಿ ಸತ್ಯೇ ಮನೋ ಯುಞ್ಜನ್ ತಥಾ ತತ್ಸಮುಪಾಶ್ನುತೇ ॥೨೬॥

ಯೋ ವೈ ಮದ್ಭಾವಮಾಪನ್ನ ಈಶಿತುರ್ವಶಿತುಃ ಪುಮಾನ್ ।
ಕುತಶ್ಚಿನ್ನ ವಿಹನ್ಯೇತ ತಸ್ಯ ಚಾಜ್ಞಾ ಯಥಾ ಮಮ ॥೨೭॥

ಮದ್ಭಕ್ತ್ಯಾ ಶುದ್ಧಸತ್ತ್ವಸ್ಯ ಯೋಗಿನೋ ಧಾರಣಾವಿದಃ ।
ತಸ್ಯ ತ್ರೈಕಾಲಿಕೀ ಬುದ್ಧಿರ್ಜನ್ಮಮೃತ್ಯೂಪಬೃಂಹಿತಾ ॥೨೮॥

ಅಗ್ನ್ಯಾದಿಭಿರ್ನ ಹನ್ಯೇತ ಮುನೇರ್ಯೋಗಮಯಂ ವಪುಃ ।
ಮದ್ಯೋಗಶ್ರಾನ್ತಚಿತ್ತಸ್ಯ ಯಾದಸಾಮುದಕಂ ಯಥಾ ॥೨೯॥

ಮದ್ವಿಭೂತೀರಭಿಧ್ಯಾಯನ್ ಶ್ರೀವತ್ಸಾಸ್ತ್ರ ವಿಭೂಷಿತಾಃ ।
ಧ್ವಜಾತಪತ್ರವ್ಯಜನೈಃ ಸ ಭವೇದಪರಾಜಿತಃ ॥೩೦॥

ಉಪಾಸಕಸ್ಯ ಮಾಮೇವಂ ಯೋಗಧಾರಣಯಾ ಮುನೇಃ ।
ಸಿದ್ಧಯಃ ಪೂರ್ವಕಥಿತಾ ಉಪತಿಷ್ಠನ್ತ್ಯಶೇಷತಃ ॥೩೧॥

ಜಿತೇನ್ದ್ರಿಯಸ್ಯ ದಾನ್ತಸ್ಯ ಜಿತಶ್ವಾಸಾತ್ಮನೋ ಮುನೇಃ ।
ಮದ್ಧಾರಣಾಂ ಧಾರಯತಃ ಕಾ ಸಾ ಸಿದ್ಧಿಃ ಸುದುರ್ಲಭಾ ॥೩೨॥

ಅನ್ತರಾಯಾನ್ ವದನ್ತ್ಯೇತಾ ಯುಞ್ಜತೋ ಯೋಗಮುತ್ತಮಮ್ ।
ಮಯಾ ಸಂಪದ್ಯಮಾನಸ್ಯ ಕಾಲಕ್ಷಪಣಹೇತವಃ ॥೩೩॥

ಜನ್ಮೌಷಧಿತಪೋಮನ್ತ್ರೈರ್ಯಾವತೀರಿಹ ಸಿದ್ಧಯಃ ।
ಯೋಗೇನಾಪ್ನೋತಿ ತಾಃ ಸರ್ವಾ ನಾನ್ಯೈರ್ಯೋಗಗತಿಂ ವ್ರಜೇತ್ ॥೩೪॥

ಸರ್ವಾಸಾಮಪಿ ಸಿದ್ಧೀನಾಂ ಹೇತುಃ ಪತಿರಹಂ ಪ್ರಭುಃ ।
ಅಹಂ ಯೋಗಸ್ಯ ಸಾಙ್ಖ್ಯಸ್ಯ ಧರ್ಮಸ್ಯ ಬ್ರಹ್ಮವಾದಿನಾಮ್ ॥೩೫॥

ಅಹಮಾತ್ಮಾಽನ್ತರೋ ಬಾಹ್ಯೋಽನಾವೃತಃ ಸರ್ವದೇಹಿನಾಮ್ ।
ಯಥಾ ಭೂತಾನಿ ಭೂತೇಷು ಬಹಿರನ್ತಃ ಸ್ವಯಂ ತಥಾ ॥೩೬॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಮ್
ಸಂಹಿತಾಯಾಂ ಏಕಾದಶಸ್ಕನ್ಧೇ ಪಞ್ಚಾದಶೋಽಧ್ಯಾಯಃ

---

## ಅಥ ಷೋಡಶೋऽಧ್ಯಾಯಃ

ಉದ್ಧವ ಉವಾಚ :

ತ್ವಂ ಬ್ರಹ್ಮ ಪರಮಂ ಸಾಕ್ಷಾದನಾದ್ಯನ್ತಮಪಾವೃತಮ್ ।
ಸರ್ವೇಷಾಮಪಿ ಭಾವಾನಾಂ ತ್ರಾಣಸ್ಥಿತ್ಯಪ್ಯಯೋದ್ಭವಃ ॥೧॥

ಉಚ್ಚಾವಚೇಷು ಭೂತೇಷು ದುರ್ಜ್ಞೇಯಮಕೃತಾತ್ಮಭಿಃ ।
ಉಪಾಸತೇ ತ್ವಾಂ ಭಗವನ್ ಯಾಥಾತಥ್ಯೇನ ಬ್ರಾಹ್ಮಣಾಃ ॥೨॥

ಯೇಷು ಯೇಷು ಚ ಭಾವೇಷು ಭಕ್ತ್ಯಾ ತ್ವಾಂ ಪರಮರ್ಷಯಃ ।
ಉಪಾಸೀನಾಃ ಪ್ರಪದ್ಯನ್ತೇ ಸಂಸಿದ್ಧಿಂ ತದ್ವದಸ್ವ ಮೇ ॥೩॥

ಗೂಢಶ್ಚರಸಿ ಭೂತಾತ್ಮಾ ಭೂತಾನಾಂ ಭೂತಭಾವನ ।
ನ ತ್ವಾಂ ಪಶ್ಯನ್ತಿ ಭೂತಾನಿ ಪಶ್ಯನ್ತಂ ಮೋಹಿತಾನಿ ತೇ ॥೪॥

ಯಾಃ ಕಾಶ್ಚ ಭೂಮೌ ದಿವಿ ವೈ ರಸಾಯಾಂ
ವಿಭೂತಯೋ ದಿಕ್ಷು ಮಹಾವಿಭೂತೇ ।
ತಾ ಮಹ್ಯಮಾಖ್ಯಾ ಹ್ಯನುಭಾವಿತಾಸ್ತೇ
ನಮಾಮಿ ತೇ ತೀರ್ಥಪದಾಂಘ್ರಿಪದ್ಮಮ್ ॥೫॥

ಶ್ರೀಭಗವಾನುವಾಚ :

ಏವಮೇತದಹಂ ಪೃಷ್ಟಃ ಪ್ರಶ್ನಂ ಪ್ರಶ್ನವಿದಾಂ ವರ ।
ಯುಯುತ್ಸುನಾ ವಿನಶನೇ ಸಪತ್ನೈರರ್ಜುನೇನ ವೈ ॥೬॥

ಜ್ಞಾತ್ವಾ ಜ್ಞಾತಿವಧಂ ಗರ್ಹ್ಯಮಧರ್ಮಂ ರಾಜ್ಯಹೇತುಕಮ್ ।
ತತೋ ನಿವೃತ್ತೋ ಹನ್ತಾಹಂ ಹತೋऽಯಮಿತಿ ಲೌಕಿಕಃ ॥೭॥

ಸ ತದಾ ಪುರುಷವ್ಯಾಘ್ರೋ ಯುಕ್ತ್ಯಾ ಮೇ ಪ್ರತಿಬೋಧಿತಃ ।
ಅಭ್ಯಭಾಷತ ಮಾಮೇವಂ ಯಥಾ ತ್ವಂ ರಣಮೂರ್ಧನಿ ॥೮॥

ಅಹಮಾತ್ಮೋದ್ಧವಾಮೀಷಾಂ ಭೂತಾನಾಂ ಸುಹೃದೀಶ್ವರಃ ।
ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯಃ ॥೯॥

ಅಹಂ ಗತಿರ್ಗತಿಮತಾಂ ಕಾಲಃ ಕಲಯತಾಮಹಮ್ ।
ಗುಣಾನಾಂ ಚಾಪ್ಯಹಂ ಸಾಮ್ಯಂ ಗುಣಿನ್ಯೌತ್ಪತ್ತಿಕೋ ಗುಣಃ ॥೧೦॥

ಗುಣಿನಾಮಪ್ಯಹಂ ಸೂತ್ರಂ ಮಹತಾಂ ಚ ಮಹಾನಹಮ್ ।
ಸೂಕ್ಷ್ಮಾಣಾಮಪ್ಯಹಂ ಜೀವೋ ದುರ್ಜಯಾನಾಮಹಂ ಮನಃ ॥೧೧॥

ಹಿರಣ್ಯಗರ್ಭೋ ವೇದಾನಾಂ ಮನ್ತ್ರಾಣಾಂ ಪ್ರಣವಸ್ತ್ರಿವೃತ್ ।
ಅಕ್ಷರಾಣಾಮಕಾರೋಽಸ್ಮಿ ಪದಾನಿಚ್ಛನ್ದಸಾಮಹಮ್ ॥೧೨॥

ಇನ್ದ್ರೋಽಹಂ ಸರ್ವದೇವಾನಾಂ ವಸೂನಾಮಸ್ಮಿ ಹವ್ಯವಾಟ್ ।
ಆದಿತ್ಯಾನಾಮಹಂ ವಿಷ್ಣೂ ರುದ್ರಾಣಾಂ ನೀಲಲೋಹಿತಃ ॥೧೩॥

ಬ್ರಹ್ಮರ್ಷೀಣಾಂ ಭೃಗುರಹಂ ರಾಜರ್ಷೀಣಾಮಹಂ ಮನುಃ ।
ದೇವರ್ಷೀಣಾಂ ನಾರದೋಽಹಂ ಹವಿರ್ಧಾನ್ಯಸ್ಮಿ ಧೇನುಷು ॥೧೪॥

ಸಿದ್ಧೇಶ್ವರಾಣಾಂ ಕಪಿಲಃ ಸುಪರ್ಣೋಽಹಂ ಪತತ್ರಿಣಾಮ್ ।
ಪ್ರಜಾಪತೀನಾಂ ದಕ್ಷೋಽಹಂ ಪಿತೄಣಾಮಹಮರ್ಯಮಾ ॥೧೫॥

ಮಾಂ ವಿದ್ಧ್ಯುದ್ಧವ ದೈತ್ಯಾನಾಂ ಪ್ರಹ್ರಾದಮಸುರೇಶ್ವರಮ್ ।
ಸೋಮಂ ನಕ್ಷತ್ರೌಷಧೀನಾಂ ಧನೇಶಂ ಯಕ್ಷರಕ್ಷಸಾಮ್ ॥೧೬॥

ಐರಾವತಂ ಗಜೇನ್ದ್ರಾಣಾಂ ಯಾದಸಾಂ ವರುಣಂ ಪ್ರಭುಮ್ ।
ತಪತಾಂ ದ್ಯುಮತಾಂ ಸೂರ್ಯಂ ಮನುಷ್ಯಾಣಾಂ ಚ ಭೂಪತಿಮ್ ॥೧೭॥

ಉಚ್ಚೈಃಶ್ರವಾಸ್ತುರಙ್ಗಾಣಾಂ ಧಾತೂನಾಮಸ್ಮಿ ಕಾಞ್ಚನಮ್ ।
ಯಮಃ ಸಂಯಮತಾಂ ಚಾಹಂ ಸರ್ಪಾಣಾಮಸ್ಮಿ ವಾಸುಕಿಃ ॥೧೮॥

ನಾಗೇನ್ದ್ರಾಣಾಮನನ್ತೋಽಹಂ ಮೃಗೇನ್ದ್ರಃ ಶೃಙ್ಗಿದಂಷ್ಟ್ರಿಣಾಮ್ ।
ಆಶ್ರಮಾಣಾಮಹಂ ತುರ್ಯೋ ವರ್ಣಾನಾಂ ಪ್ರಥಮೋಽನಘ ॥೧೯॥

ತೀರ್ಥಾನಾಂ ಸ್ರೋತಸಾಂ ಗಙ್ಗಾ ಸಮುದ್ರಃ ಸರಸಾಮಹಮ್ ।
ಆಯುಧಾನಾಂ ಧನುರಹಂ ತ್ರಿಪುರಘ್ನೋ ಧನುಷ್ಮತಾಮ್ ॥೨೦॥

ಧಿಷ್ಣ್ಯಾನಾಮಸ್ಮ್ಯಹಂ ಮೇರುರ್ಗಹನಾನಾಂ ಹಿಮಾಲಯಃ ।
ವನಸ್ಪತೀನಾಮಶ್ವತ್ಥ ಓಷಧೀನಾಮಹಂ ಯವಃ ॥೨೧॥

ಪುರೋಧಸಾಂ ವಸಿಷ್ಠೋಽಹಂ ಬ್ರಹ್ಮಿಷ್ಠಾನಾಂ ಬೃಹಸ್ಪತಿಃ ।
ಸ್ಕನ್ದೋಽಹಂ ಸರ್ವಸೇನಾನ್ಯಾಮಗ್ರಣ್ಯಾಂ ಭಗವಾನಜಃ ॥೨೨॥

ಯಜ್ಞಾನಾಂ ಬ್ರಹ್ಮಯಜ್ಞೋಽಹಂ ವ್ರತಾನಾಮವಿಹಿಂಸನಮ್ ।
ವಾಯ್ವಗ್ನ್ಯರ್ಕಾಮ್ಬುವಾಗಾತ್ಮಾ ಶುಚೀನಾಮಪ್ಯಹಂ ಶುಚಿಃ ॥೨೩॥

ಯೋಗಾನಾಮಾತ್ಮಸಂರೋಧೋ ಮನ್ತ್ರೋಽಸ್ಮಿ ವಿಜಿಗೀಷತಾಮ್ ।
ಆನ್ವೀಕ್ಷಿಕೀ ಕೌಶಲಾನಾಂ ವಿಕಲ್ಪಃ ಖ್ಯಾತಿವಾದಿನಾಮ್ ॥೨೪॥

ಸ್ತ್ರೀಣಾಂ ತು ಶತರೂಪಾಹಂ ಪುಂಸಾಂ ಸ್ವಾಯಮ್ಭುವೋ ಮನುಃ ।
ನಾರಾಯಣೋ ಮುನೀನಾಂ ಚ ಕುಮಾರೋ ಬ್ರಹ್ಮಚಾರಿಣಾಮ್ ॥೨೫॥

ಧರ್ಮಾಣಾಮಸ್ಮಿ ಸಂನ್ಯಾಸಃ ಕ್ಷೇಮಾಣಾಮಬಹಿರ್ಮತಿಃ ।
ಗುಹ್ಯಾನಾಂ ಸೂನೃತಂ ಮೌನಂ ಮಿಥುನಾನಾಮಜಸ್ತ್ವಹಮ್ ॥೨೬॥

ಸಂವತ್ಸರೋಽಸ್ಮ್ಯನಿಮಿಷಾಮೃತೂನಾಂ ಮಧುಮಾಧವೌ ।
ಮಾಸಾನಾಂ ಮಾರ್ಗಶೀರ್ಷೋಽಹಂ ನಕ್ಷತ್ರಾಣಾಂ ತಥಾಭಿಜಿತ್ ॥೨೭॥

ಅಹಂ ಯುಗಾನಾಂ ಚ ಕೃತಂ ಧೀರಾಣಾಂ ದೇವಲೋಽಸಿತಃ ।
ದ್ವೈಪಾಯನೋಽಸ್ಮಿ ವ್ಯಾಸಾನಾಂ ಕವೀನಾಂ ಕಾವ್ಯ ಆತ್ಮವಾನ್ ॥೨೮॥

ವಾಸುದೇವೋ ಭಗವತಾಂ ತ್ವಂ ತು ಭಾಗವತೇಷ್ವಹಮ್ ।
ಕಿಂಪುರುಷಾಣಾಂ ಹನುಮಾನ್ವಿದ್ಯಾಧ್ರಾಣಾಂ ಸುದರ್ಶನಃ ॥೨೯॥

ರತ್ನಾನಾಂ ಪದ್ಮರಾಗೋಽಸ್ಮಿ ಪದ್ಮಕೋಶಃ ಸುಪೇಶಸಾಮ್ ।
ಕುಶೋಽಸ್ಮಿ ದರ್ಭಜಾತೀನಾಂ ಗವ್ಯಮಾಜ್ಯಂ ಹವಿಃಷ್ವಹಮ್ ॥೩೦॥

ವ್ಯವಸಾಯಿನಾಮಹಂ ಲಕ್ಷ್ಮೀಃ ಕಿತವಾನಾಂ ಛಲಗ್ರಹಃ ।
ತಿತಿಕ್ಷಾಸ್ಮಿ ತಿತಿಕ್ಷೂಣಾಂ ಸತ್ತ್ವಂ ಸತ್ತ್ವವತಾಮಹಮ್ ॥೩೧॥

ಓಜಃ ಸಹೋ ಬಲವತಾಂ ಕರ್ಮಾಹಂ ವಿದ್ಧಿ ಸಾತ್ವತಾಮ್ ।
ಸಾತ್ವತಾಂ ನವಮೂರ್ತೀನಾಮಾದಿಮೂರ್ತಿರಹಂ ಪರಾ ॥೩೨॥

ವಿಶ್ವಾವಸುಃ ಪೂರ್ವಚಿತ್ತಿರ್ಗನ್ಧರ್ವಾಪ್ಸರಸಾಮಹಮ್ ।
ಭೂಧರಣಾಮಹಂ ಸ್ಥೈರ್ಯಂ ಗನ್ಧಮಾತ್ರಮಹಂ ಭುವಃ ॥೩೩॥

ಅಪಾಂ ರಸಶ್ಚ ಪರಮಸ್ತೇಜಿಷ್ಠಾನಾಂ ವಿಭಾವಸುಃ ।
ಪ್ರಭಾ ಸೂರ್ಯೇನ್ದುತಾರಾಣಾಂ ಶಬ್ದೋಽಹಂ ನಭಸಃ ಪರಃ ॥೩೪॥

ಬ್ರಹ್ಮಣ್ಯಾನಾಂ ಬಲಿರಹಂ ವೀರಾಣಾಮಹಮರ್ಜುನಃ ।
ಭೂತಾನಾಂ ಸ್ಥಿತಿರುತ್ಪತ್ತಿರಹಂ ವೈ ಪ್ರತಿಸಜ ಮಃ ॥೩೫॥

ಗತ್ಯುಕ್ತ್ಯುತ್ಸರ್ಗೋಪಾದಾನಮಾನನ್ದಸ್ಪರ್ಶಲಕ್ಷಣಮ್ ।
ಆಸ್ವಾದಶ್ರುತ್ಯವಘ್ರಾಣಮಹಂ ಸರ್ವೇನ್ದ್ರಿಯೇನ್ದ್ರಿಯಮ್ ॥೩೬॥

ಪೃಥಿವೀ ವಾಯುರಾಕಾಶ ಆಪೋ ಜ್ಯೋತಿರಹಂ ಮಹಾನ್ ।
ವಿಕಾರಃ ಪುರುಷೋಽವ್ಯಕ್ತಂ ರಜಃ ಸತ್ತ್ವಂ ತಮಃ ಪರಮ್ ॥೩೭॥

ಅಹಮೇತತ್ಪ್ರಸಙ್ಖ್ಯಾನಂ ಜ್ಞಾನಂ ತತ್ತ್ವವಿನಿಶ್ಚಯಃ ।
ಮಯೇಶ್ವರೇಣ ಜೀವೇನ ಗುಣೇನ ಗುಣಿನಾ ವಿನಾ ।
ಸರ್ವಾತ್ಮನಾಪಿ ಸರ್ವೇಣ ನ ಭಾವೋ ವಿದ್ಯತೇ ಕ್ವಚಿತ್ ॥೩೮॥

ಸಙ್ಖ್ಯಾನಂ ಪರಮಾಣೂನಾಂ ಕಾಲೇನ ಕ್ರಿಯತೇ ಮಯಾ ।
ನ ತಥಾ ಮೇ ವಿಭೂತೀನಾಂ ಸೃಜತೋಽಣ್ಡಾನಿ ಕೋಟಿಶಃ ॥೩೯॥

ತೇಜಃ ಶ್ರೀಃ ಕೀರ್ತಿರೈಶ್ವರ್ಯಂ ಹ್ರೀಸ್ತ್ಯಾಗಃ ಸೌಭಗಂ ಭಗಃ ।
ವೀರ್ಯಂ ತಿತಿಕ್ಷಾ ವಿಜ್ಞಾನಂ ಯತ್ರ ಯತ್ರ ಸ ಮೇಽಂಶಕಃ ॥೪೦॥

ಏತಾಸ್ತೇ ಕೀರ್ತಿತಾಃ ಸರ್ವಾಃ ಸಂಕ್ಷೇಪೇಣ ವಿಭೂತಯಃ ।
ಮನೋವಿಕಾರಾ ಏವೈತೇ ಯಥಾ ವಾಚಾಭಿಧೀಯತೇ ॥೪೧॥

ವಾಚಂ ಯಚ್ಛ ಮನೋ ಯಚ್ಛ ಪ್ರಾಣಾನ್ಯಚ್ಛೇನ್ದ್ರಿಯಾಣಿ ಚ ।
ಆತ್ಮಾನಮಾತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ ॥೪೨॥

ಯೋ ವೈ ವಾಙ್ಮನಸೀ ಸಮ್ಯಗಸಂಯಚ್ಛನ್ಧಿಯಾ ಯತಿಃ ।
ತಸ್ಯ ವ್ರತಂ ತಪೋದಾನಂ ಸ್ರವತ್ಯಾಮಘಟಾಮ್ಬುವತ್ ॥೪೩॥

ತಸ್ಮಾನ್ಮನೋವಚಃಪ್ರಾಣಾನ್ ನಿಯಚ್ಛೇನ್ಮತ್ಪರಾಯಣಃ ।
ಮದ್ಭಕ್ತಿಯುಕ್ತಯಾ ಬುದ್ಧ್ಯಾ ತತಃ ಪರಿಸಮಾಪ್ಯತೇ ॥೪೪॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ಏಕಾದಶಸ್ಕನ್ಧೇ ಷೋಡಶೋಽಧ್ಯಾಯಃ

---

## ಅಥ ಸಪ್ತದಶೋಽಧ್ಯಾಯಃ

ಉದ್ಧವ ಉವಾಚ :

ಯಸ್ತ್ವಯಾಭಿಹಿತಃ ಪೂರ್ವಂ ಧರ್ಮಸ್ತ್ವದ್ಭಕ್ತಿಲಕ್ಷಣಃ ।
ವರ್ಣಾಶ್ರಮಾಚಾರವತಾಂ ಸರ್ವೇಷಾಂ ದ್ವಿಪದಾಮಪಿ ॥೧॥

ಯಥಾನುಷ್ಠೀಯಮಾನೇನ ತ್ವಯಿ ಭಕ್ತಿರ್ನೃಣಾಂ ಭವೇತ್ ।
ಸ್ವಧರ್ಮೇಣಾರವಿನ್ದಾಕ್ಷ ತತ್ಸಮಾಖ್ಯಾತುಮರ್ಹಸಿ ॥೨॥

ಪುರಾ ಕಿಲ ಮಹಾಬಾಹೋ ಧರ್ಮಂ ಪರಮಕಂ ಪ್ರಭೋ ।
ಯತ್ತೇನ ಹಂಸರೂಪೇಣ ಬ್ರಹ್ಮಣೇಽಭ್ಯಾತ್ಥ ಮಾಧವ ॥೩॥

ಸ ಇದಾನೀಂ ಸುಮಹತಾ ಕಾಲೇನಾಮಿತ್ರಕರ್ಶನ ।
ನ ಪ್ರಾಯೋ ಭವಿತಾ ಮರ್ತ್ಯಲೋಕೇ ಪ್ರಾಗನುಶಾಸಿತಃ ॥೪॥

ವಕ್ತಾ ಕರ್ತಾವಿತಾ ನಾನ್ಯೋ ಧರ್ಮಸ್ಯಾಚ್ಯುತ ತೇ ಭುವಿ ।
ಸಭಾಯಾಮಪಿ ವೈರಿಞ್ಚ್ಯಾಂ ಯತ್ರ ಮೂರ್ತಿಧರಾಃ ಕಲಾಃ ॥೫॥

ಕರ್ತ್ರಾವಿತ್ರಾ ಪ್ರವಕ್ತ್ರಾ ಚ ಭವತಾ ಮಧುಸೂದನ ।
ತ್ಯಕ್ತೇ ಮಹೀತಲೇ ದೇವ ವಿನಷ್ಟಂ ಕಃ ಪ್ರವಕ್ಷ್ಯತಿ ॥೬॥

ತತ್ತ್ವಂ ನಃ ಸರ್ವಧರ್ಮಜ್ಞ ಧರ್ಮಸ್ತ್ವದ್ಭಕ್ತಿಲಕ್ಷಣಃ ।
ಯಥಾ ಯಸ್ಯ ವಿಧೀಯೇತ ತಥಾ ವರ್ಣಯ ಮೇ ಪ್ರಭೋ ॥೭॥

ಶ್ರೀಶುಕ ಉವಾಚ :

ಇತ್ಥಂ ಸ್ವಭೃತ್ಯಮುಖ್ಯೇನ ಪೃಷ್ಟಃ ಸ ಭಗವಾನ್ ಹರಿಃ ।
ಪ್ರೀತಃ ಕ್ಷೇಮಾಯ ಮರ್ತ್ಯಾನಾಂ ಧರ್ಮಾನಾಹ ಸನಾತನಾನ್ ॥೮॥

ಶ್ರೀಭಗವಾನುವಾಚ :

ಧರ್ಮ್ಯ ಏಷ ತವ ಪ್ರಶ್ನೋ ನಿಃಶ್ರೇಯಸಕರೋ ನೃಣಾಮ್ ।
ವರ್ಣಾಶ್ರಮಾಚಾರವತಾಂ ತಮುದ್ಧವ ನಿಬೋಧ ಮೇ ॥೯॥

ಆದೌ ಕೃತಯುಗೇ ವರ್ಣೋ ನೃಣಾಂ ಹಂಸ ಇತಿ ಸ್ಮೃತಃ ।
ಕೃತಕೃತ್ಯಾಃ ಪ್ರಜಾ ಜಾತ್ಯಾ ತಸ್ಮಾತ್ಕೃತಯುಗಂ ವಿದುಃ ॥೧೦॥

ವೇದಃ ಪ್ರಣವ ಏವಾಗ್ರೇ ಧರ್ಮೋಽಹಂ ವೃಷರೂಪಧೃಕ್ ।
ಉಪಾಸತೇ ತಪೋನಿಷ್ಠಾ ಹಂಸಂ ಮಾಂ ಮುಕ್ತಕಿಲ್ಬಿಷಾಃ ॥೧೧॥

ತ್ರೇತಾಮುಖೇ ಮಹಾಭಾಗ ಪ್ರಾಣಾನ್ಮೇ ಹೃದಯಾತ್ತ್ರಯೀ ।
ವಿದ್ಯಾ ಪ್ರಾದುರಭೂತ್ತಸ್ಯಾ ಅಹಮಾಸಂ ತ್ರಿವೃನ್ಮಖಃ ॥೧೨॥

ವಿಪ್ರಕ್ಷತ್ರಿಯವಿಟ್ಶೂದ್ರಾ ಮುಖಬಾಹೂರುಪಾದಜಾಃ ।
ವೈರಾಜಾತ್ ಪುರುಷಾಜ್ಜಾತಾ ಯ ಆತ್ಮಾಚಾರಲಕ್ಷಣಾಃ ॥೧೩॥

ಗೃಹಾಶ್ರಮೋ ಜಘನತೋ ಬ್ರಹ್ಮಚರ್ಯಂ ಹೃದೋ ಮಮ ।
ವಕ್ಷಃಸ್ಥಾನಾದ್ವನೇ ವಾಸೋ ನ್ಯಾಸಃ ಶೀರ್ಷಣಿ ಸಂಸ್ಥಿತಃ ॥೧೪॥

ವರ್ಣಾನಾಮಾಶ್ರಮಾಣಾಂ ಚ ಜನ್ಮಭೂಮ್ಯನುಸಾರಿಣೀಃ ।
ಆಸನ್ ಪ್ರಕೃತಯೋ ನೄಣಾಂ ನೀಚೈರ್ನೀಚೋತ್ತಮೋತ್ತಮಾಃ ॥೧೫॥

ಶಮೋ ದಮಸ್ತಪಃ ಶೌಚಂ ಸನ್ತೋಷಃ ಕ್ಷಾನ್ತಿರಾರ್ಜವಮ್ ।
ಮದ್ಭಕ್ತಿಶ್ಚ ದಯಾ ಸತ್ಯಂ ಬ್ರಹ್ಮಪ್ರಕೃತಯಸ್ತ್ವಿಮಾಃ ॥೧೬॥

ತೇಜೋ ಬಲಂ ಧೃತಿಃ ಶೌರ್ಯಂ ತಿತಿಕ್ಷೌದಾರ್ಯಮುದ್ಯಮಃ ।
ಸ್ಥೈರ್ಯಂ ಬ್ರಹ್ಮಣ್ಯತೈಶ್ವರ್ಯಂ ಕ್ಷತ್ರಪ್ರಕೃತಯಸ್ತ್ವಿಮಾಃ ॥೧೭॥

ಆಸ್ತಿಕ್ಯಂ ದಾನನಿಷ್ಠಾ ಚ ಅದಮ್ಭೋ ಬ್ರಹ್ಮಸೇವನಮ್ ।
ಅತುಷ್ಟಿರರ್ಥೋಪಚಯೈರ್ವೈಶ್ಯಪ್ರಕೃತಯಸ್ತ್ವಿಮಾಃ ॥೧೮॥

ಶುಶ್ರೂಷಣಂ ದ್ವಿಜಗವಾಂ ದೇವಾನಾಂ ಚಾಪ್ಯಮಾಯಯಾ ।
ತತ್ರ ಲಬ್ಧೇನ ಸನ್ತೋಷಃ ಶೂದ್ರಪ್ರಕೃತಯಸ್ತ್ವಿಮಾಃ ॥೧೯॥

ಅಶೌಚಮನೃತಂ ಸ್ತೇಯಂ ನಾಸ್ತಿಕ್ಯಂ ಶುಷ್ಕವಿಗ್ರಹಃ ।
ಕಾಮಃ ಕ್ರೋಧಶ್ಚ ತರ್ಷಶ್ಚ ಸ್ವಭಾವೋಽನ್ತೇವಸಾಯಿನಾಮ್ ॥೨೦॥

ಅಹಿಂಸಾ ಸತ್ಯಮಸ್ತೇಯಮಕಾಮಕ್ರೋಧಲೋಭತಾ ।
ಭೂತಪ್ರಿಯಹಿತೇಹಾ ಚ ಧರ್ಮೋಽಯಂ ಸಾರ್ವವರ್ಣಿಕಃ ॥೨೧॥

ದ್ವಿತೀಯಂ ಪ್ರಾಪ್ಯಾನುಪೂರ್ವ್ಯಾಜ್ಜನ್ಮೋಪನಯನಂ ದ್ವಿಜಃ ।
ವಸನ್ ಗುರುಕುಲೇ ದಾನ್ತೋ ಬ್ರಹ್ಮಾಧೀಯೀತ ಚಾಹುತಃ ॥೨೨॥

ಮೇಖಲಾಜಿನದಣ್ಡಾಕ್ಷಬ್ರಹ್ಮಸೂತ್ರಕಮಣ್ಡಲೂನ್ ।
ಜಟಿಲೋಽಧೌತದದ್ವಾಸೋಽರಕ್ತಪೀಠಃ ಕುಶಾನ್ ದಧತ್ ॥೨೩॥

ಸ್ನಾನಭೋಜನಹೋಮೇಷು ಜಪೋಚ್ಚಾರೇ ಚ ವಾಗ್ಯತಃ ।
ನಚ್ಛಿನ್ದ್ಯಾನ್ನಖರೋಮಾಣಿ ಕಕ್ಷೋಪಸ್ಥಗತಾನ್ಯಪಿ ॥೨೪॥

ರೇತೋ ನಾವಕಿರೇಜ್ಜಾತು ಬ್ರಹ್ಮವ್ರತಧರಃ ಸ್ವಯಮ್ ।
ಅವಕೀರ್ಣೇಽವಗಾಹ್ಯಾಪ್ಸು ಯತಾಸುಸ್ತ್ರಿಪದೀಂ ಜಪೇತ್ ॥೨೫॥

ಅಗ್ನ್ಯರ್ಕಾಚಾರ್ಯಗೋವಿಪ್ರಗುರುವೃದ್ಧಸುರಾನ್ಶುಚಿಃ ।
ಸಮಾಹಿತ ಉಪಾಸೀತ ಸನ್ಧ್ಯೇ ಚ ಯತವಾಗ್ಜಪನ್ ॥೨೬॥

ಆಚಾರ್ಯಂ ಮಾಂ ವಿಜಾನೀಯಾನ್ನಾವಮನ್ಯೇತ ಕರ್ಹಿಚಿತ್ ।
ನ ಮರ್ತ್ಯಬುದ್ಧ್ಯಾಸೂಯೇತ ಸರ್ವದೇವಮಯೋ ಗುರುಃ ॥೨೭॥

ಸಾಯಂ ಪ್ರಾತರುಪಾನೀಯ ಭೈಕ್ಷ್ಯಂ ತಸ್ಮೈ ನಿವೇದಯೇತ್ ।
ಯಚ್ಚಾನ್ಯದಪ್ಯನುಜ್ಞಾತಮುಪಯುಞ್ಜೀತ ಸಂಯತಃ ॥೨೮॥

ಶುಶ್ರೂಷಮಾಣ ಆಚಾರ್ಯಂ ಸದೋಪಾಸೀತ ನೀಚವತ್ ।
ಯಾನಶಯ್ಯಾಸನಸ್ಥಾನೈರ್ನಾತಿದೂರೇ ಕೃತಾಞ್ಜಲಿಃ ॥೨೯॥

ಏವಂವೃತ್ತೋ ಗುರುಕುಲೇ ವಸೇದ್ಭೋಗವಿವರ್ಜಿತಃ ।
ವಿದ್ಯಾ ಸಮಾಪ್ಯತೇ ಯಾವದ್ಬಿಭ್ರದ್ವ್ರತಮಖಣ್ಡಿತಮ್ ॥೩೦॥

ಯದ್ಯಸೌ ಛನ್ದಸಾಂ ಲೋಕಮಾರೋಕ್ಷ್ಯನ್ಬ್ರಹ್ಮವಿಷ್ಟಪಮ್ ।
ಗುರವೇ ವಿನ್ಯಸೇದ್ದೇಹಂ ಸ್ವಾಧ್ಯಾಯಾರ್ಥಂ ಬೃಹದ್ವ್ರತಃ ॥೩೧॥

ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷು ಮಾಂ ಪರಮ್ ।
ಅಪೃಥಗ್ಧೀರುಪಾಸೀತ ಬ್ರಹ್ಮವರ್ಚಸ್ವ್ಯಕಲ್ಮಷಃ ॥೩೨॥

ಸ್ತ್ರೀಣಾಂ ನಿರೀಕ್ಷಣಸ್ಪರ್ಶಸಂಲಾಪಕ್ಷ್ವೇಲನಾದಿಕಮ್ ।
ಪ್ರಾಣಿನೋ ಮಿಥುನೀಭೂತಾನಗೃಹಸ್ಥೋಽಗ್ರತಸ್ತ್ಯಜೇತ್ ॥೩೩॥

ಶೌಚಮಾಚಮನಂ ಸ್ನಾನಂ ಸನ್ಧ್ಯೋಪಾಸನಮಾರ್ಜವಮ್ ।
ತೀರ್ಥಸೇವಾ ಜಪೋಽಸ್ಪೃಶ್ಯಾಭಕ್ಷ್ಯಸಮ್ಭಾಷ್ಯವರ್ಜನಮ್ ॥೩೪॥

ಸರ್ವಾಶ್ರಮಪ್ರಯುಕ್ತೋಽಯಂ ನಿಯಮಃ ಕುಲನನ್ದನ ।
ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯಸಂಯಮಃ ॥೩೫॥

ಏವಂ ಬೃಹದ್ವ್ರತಧರೋ ಬ್ರಾಹ್ಮಣೋಽಗ್ನಿರಿವ ಜ್ವಲನ್ ।
ಮದ್ಭಕ್ತಸ್ತೀವ್ರತಪಸಾ ದಗ್ಧಕರ್ಮಾಶಯೋಽಮಲಃ ॥೩೬॥

ಅಥಾನನ್ತರಮಾವೇಕ್ಷ್ಯನ್ ಯಥಾ ಜಿಜ್ಞಾಸಿತಾಗಮಃ ।
ಗುರವೇ ದಕ್ಷಿಣಾಂ ದತ್ತ್ವಾ ಸ್ನಾಯಾದ್ಗುರ್ವನುಮೋದಿತಃ ॥೩೭॥

ಗೃಹಂ ವನಂ ವೋಪವಿಶೇತ್ ಪ್ರವ್ರಜೇದ್ವಾ ದ್ವಿಜೋತ್ತಮಃ ।
ಆಶ್ರಮಾದಾಶ್ರಮಂ ಗಚ್ಛೇನ್ನಾನ್ಯಥಾ ಮತ್ಪರಶ್ಚರೇತ್ ॥೩೮॥

ಗೃಹಾರ್ಥೀ ಸದೃಶೀಂ ಭಾರ್ಯಾಮುದ್ವಹೇದಜುಗುಪ್ಸಿತಾಮ್ ।
ಯವೀಯಸೀಂ ತು ವಯಸಾ ತಾಂ ಸವರ್ಣಾಮನುಕ್ರಮಾತ್ ॥೩೯॥

ಇಜ್ಯಾಧ್ಯಯನದಾನಾನಿ ಸರ್ವೇಷಾಂ ಚ ದ್ವಿಜನ್ಮನಾಮ್ ।
ಪ್ರತಿಗ್ರಹೋಽಧ್ಯಾಪನಂ ಚ ಬ್ರಾಹ್ಮಣಸ್ಯೈವ ಯಾಜನಮ್ ॥೪೦॥

ಪ್ರತಿಗ್ರಹಂ ಮನ್ಯಮಾನಸ್ತಪಸ್ತೇಜೋಯಶೋನುದಮ್ ।
ಅನ್ಯಾಭ್ಯಾಮೇವ ಜೀವೇತ ಶಿಲೈರ್ವಾ ದೋಷದೃಕ್ ತಯೋಃ ॥೪೧॥

ಬ್ರಾಹ್ಮಣಸ್ಯ ಹಿ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।
ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನನ್ತಸುಖಾಯ ಚ ॥೪೨॥

ಶಿಲೋಂಛವೃತ್ತ್ಯಾ ಪರಿತುಷ್ಟಚಿತ್ತೋ
ಧರ್ಮಂ ಮಹಾನ್ತಂ ವಿರಜಂ ಜುಷಾಣಃ ।
ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠ-
ನ್ನಾತಿಪ್ರಸಕ್ತಃ ಸಮುಪೈತಿ ಶಾನ್ತಿಮ್ ॥೪೩॥

ಸಮುದ್ಧರನ್ತಿ ಯೇ ವಿಪ್ರಂ ಸೀದನ್ತಂ ಮತ್ಪರಾಯಣಮ್ ।
ತಾನುದ್ಧರಿಷ್ಯೇ ನಚಿರಾದಾಪದ್ಭ್ಯೋ ನೌರಿವಾರ್ಣವಾತ್ ॥೪೪॥

ಸರ್ವಾಃ ಸಮುದ್ಧರೇದ್ರಾಜಾ ಪಿತೇವ ವ್ಯಸನಾತ್ಪ್ರಜಾಃ ।
ಆತ್ಮಾನಮಾತ್ಮನಾ ಧೀರೋ ಯಥಾ ಗಜಪತಿರ್ಗಜಾನ್ ॥೪೫॥

ಏವಂವಿಧೋ ನರಪತಿರ್ವಿಮಾನೇನಾರ್ಕವರ್ಚಸಾ ।
ವಿಧೂಯೇಹಾಶುಭಂ ಕೃತ್ಸ್ನಮಿನ್ದ್ರೇಣ ಸಹ ಮೋದತೇ ॥೪೬॥

ಸೀದನ್ವಿಪ್ರೋ ವಣಿಗ್ವೃತ್ತ್ಯಾ ಪಣ್ಯೈರೇವಾಪದಂ ತರೇತ್ ।
ಖಡ್ಗೇನ ವಾಽಪದಾಕ್ರಾನ್ತೋ ನ ಶ್ವವೃತ್ತ್ಯಾ ಕಥಞ್ಚನ ॥೪೭॥

ವೈಶ್ಯವೃತ್ತ್ಯಾ ತು ರಾಜನ್ಯೋ ಜೀವೇನ್ಮೃಗಯಯಾಽಽಪದಿ ।
ಚರೇದ್ವಾ ವಿಪ್ರರೂಪೇಣ ನ ಶ್ವವೃತ್ತ್ಯಾ ಕಥಞ್ಚನ ॥೪೮॥

ಶೂದ್ರವೃತ್ತಿಂ ಭಜೇದ್ವೈಶ್ಯಃ ಶೂದ್ರಃ ಕಾರುಕಟಕ್ರಿಯಾಮ್ ।
ಕೃಚ್ಛ್ರಾನ್ಮುಕ್ತೋ ನ ಗರ್ಹ್ಯೇಣ ವೃತ್ತಿಂ ಲಿಪ್ಸೇತ ಕರ್ಮಣಾ ॥೪೯॥

ವೇದಾಧ್ಯಾಯಸ್ವಧಾಸ್ವಾಹಾಬಲ್ಯನ್ನಾದ್ಯೈರ್ಯಥೋದಯಮ್ ।
ದೇವರ್ಷಿಪಿತೃಭೂತಾನಿ ಮದ್ರೂಪಾಣ್ಯನ್ವಹಂ ಯಜೇತ್ ॥೫೦॥

ಯದೃಚ್ಛಯೋಪಪನ್ನೇನ ಶುಕ್ಲೇನೋಪಾರ್ಜಿತೇನ ವಾ ।
ಧನೇನಾಪೀಡಯನ್ಭೃತ್ಯಾನ್ ನ್ಯಾಯೇನೈವಾಹರೇತ ತೂನ್ ॥೫೧॥

ಕುಟುಮ್ಬೇಷು ನ ಸಜ್ಜೇತ ನ ಪ್ರಮಾದ್ಯೇತ್ ಕುಟುಮ್ಬ್ಯಪಿ ।
ವಿಪಶ್ಚಿನ್ನಶ್ವರಂ ಪಶ್ಯೇದದೃಷ್ಟಮಪಿ ದೃಷ್ಟವತ್ ॥೫೨॥

ಪುತ್ರದಾರಾಪ್ತಬನ್ಧೂನಾಂ ಸಙ್ಗಮಃ ಪಾನ್ಥಸಙ್ಗಮಃ ।
ಅನುದೇಹಂ ವಿಯನ್ತ್ಯೇತೇ ಸ್ವಪ್ನೋ ನಿದ್ರಾನುಗೋ ಯಥಾ ॥೫೩॥

ಇತ್ಥಂ ಪರಿಮೃಶನ್ಮುಕ್ತೋ ಗೃಹೇಷ್ವತಿಥಿವದ್ವಸನ್ ।
ನ ಗೃಹೈರನುಬಧ್ಯೇತ ನಿರ್ಮಮೋ ನಿರಹಙ್ಕೃತಃ ॥೫೪॥

ಕರ್ಮಭಿರ್ಗೃಹಮೇಧೀಯೈರಿಷ್ಟ್ವಾ ಮಾಮೇವ ಭಕ್ತಿಮಾನ್ ।
ತಿಷ್ಠೇದ್ವನಂ ವೋಪವಿಶೇತ್ ಪ್ರಜಾವಾನ್ವಾ ಪರಿವ್ರಜೇತ್ ॥೫೫॥

ಯಸ್ತ್ವಾಸಕ್ತಮತಿರ್ಗೇಹೇ ಪುತ್ರವಿತ್ತೈಷಣಾತುರಃ ।
ಸ್ತ್ರೈಣಃ ಕೃಪಣಧೀರ್ಮೂಢೋ ಮಮಾಹಮಿತಿ ಬಧ್ಯತೇ ॥೫೬॥

ಅಹೋ ಮೇ ಪಿತರೌ ವೃದ್ಧೌ ಭಾರ್ಯಾ ಬಾಲಾತ್ಮಜಾಽತ್ಮಜಾಃ ।
ಅನಾಥಾ ಮಾಮೃತೇ ದೀನಾಃ ಕಥಂ ಜೀವನ್ತಿ ದುಃಖಿತಾಃ ॥೫೭॥

ಏವಂ ಗೃಹಾಶಯಾಕ್ಷಿಪ್ತಹೃದಯೋ ಮೂಢಧೀರಯಮ್ ।
ಅತೃಪ್ತಸ್ತಾನನುಧ್ಯಾಯನ್ಮೃತೋಽನ್ಧಂ ವಿಶತೇ ತಮಃ ॥೫೮॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಮ್
ಸಂಹಿತಾಯಾಂ ಏಕಾದಶಸ್ಕನ್ಧೇ ಸಪ್ತದಶೋಽಧ್ಯಾಯಃ

---

## ಅಥ ಅಷ್ಟಾದಶೋಽಧ್ಯಾಯಃ

ಶ್ರೀಭಗವಾನುವಾಚ :

ವನಂ ವಿವಿಕ್ಷುಃ ಪುತ್ರೇಷು ಭಾರ್ಯಾಂ ನ್ಯಸ್ಯ ಸಹೈವ ವಾ ।
ವನ ಏವ ವಸೇಚ್ಛಾನ್ತಸ್ತೃತೀಯಂ ಭಾಗಮಾಯುಷಃ ॥೧॥

ಸ್ವಸ್ತಿಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು

ಶ್ರೀ ಸದ್ಗುರು ಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್



ಶ್ರೀಮಹಾಗಣಪತಯೇ ನಮಃ   ಶ್ರೀಮಹಾಸರಸ್ವತ್ಯೈ ನಮಃ   ಶ್ರೀ ಸದ್ಗುರವೇ ನಮಃ



# ಶ್ರೀಮದ್ಭಾಗವತ (ಎಂಟನೆಯ ಸಂಪುಟ)

## (ದಶಮಸ್ಕಂಧ)

ಜನ್ಮಾದ್ಯಸ್ಯ ಯತೋಽನ್ವಯಾದಿತರಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯನ್ತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥

ದಶಮಸ್ಕಂಧ   ೭೭ನೆಯ ಅಧ್ಯಾಯ

### ಶಾಲ್ವನ ಸಂಹಾರ

ಶ್ರೀಶುಕಮಹರ್ಷಿಗಳು ಹೇಳುತ್ತಾರೆ :

**ಸ ತೂಪಸ್ಪೃಶ್ಯ ಸಲಿಲಂ ದಂಶಿತೋ ಧೃತಕಾರ್ಮುಕಃ ।**
**ನಯ ಮಾಂ ದ್ಯುಮತಃ ಪಾರ್ಶ್ವಂ ವೀರಸ್ಯೇತ್ಯಾಹ ಸಾರಥಿಮ್ ॥೧॥**

ಪರೀಕ್ಷಿತಮಹಾರಾಜ! ಬಳಿಕ ಪ್ರದ್ಯುಮ್ನನು ಶುದ್ಧಾಚಮನವನ್ನು ಮಾಡಿ ಕವಚವನ್ನು ತೊಟ್ಟು ಧನುಸ್ಸನ್ನು ಧರಿಸಿ ಸಾರಥಿಗೆ ಹೇಳಿದನು :

"ದಾರುಕಪುತ್ರನೇ! ಶೀಘ್ರವಾಗಿ ನನ್ನನ್ನು ವೀರನಾದ ದ್ಯುಮಂತನ ಬಳಿಗೆ ಕರೆದೊಯ್ಯುವವನಾಗು."

ಮಹಾರಾಜ! ಪ್ರದ್ಯುಮ್ನನ ಆಜ್ಞೆಗೆ ಅನುಸಾರವಾಗಿ ಸಾರಥಿಯು ರಥವನ್ನು ಸಾಲ್ವನ ಮಂತ್ರಿಯಾದ ದ್ಯುಮಂತನ ಬಳಿಗೆ ಒಯ್ದನು. ಆ ಸಮಯದಲ್ಲಿ ದ್ಯುಮಂತನು ಯಾದವಸೈನ್ಯವನ್ನು ತೀಕ್ಷ್ಣವಾದ ಅಸ್ತ್ರಗಳಿಂದ ಸದೆಬಡಿಯುತ್ತಿದ್ದನು. ಪ್ರದ್ಯುಮ್ನನು ಅವನನ್ನು ತಡೆಯುತ್ತಾ, ಎಂಟು ಬಾಣಗಳಿಂದ ದ್ಯುಮಂತನನ್ನು ನಸುನಗುತ್ತಲೇ ಪ್ರಹರಿಸಿದನು. ಪ್ರದ್ಯುಮ್ನನು ನಾಲ್ಕು ಬಾಣಗಳಿಂದ ದ್ಯುಮಂತನ ರಥದಲ್ಲಿದ್ದ ನಾಲ್ಕು

ಕುದುರೆಗಳನ್ನೂ, ಒಂದು ಬಾಣದಿಂದ ಸಾರಥಿಯನ್ನೂ ಸಂಹರಿಸಿ ಮತ್ತೆರಡು ಬಾಣಗಳಿಂದ ಅವನು ಹಿಡಿದಿದ್ದ ಧನುಸ್ಸನ್ನೂ ಅವನ ರಥದ ಮೇಲಿದ್ದ ಬಾವುಟವನ್ನೂ ಕತ್ತರಿಸಿ ಎಂಟನೆಯ ಬಾಣದಿಂದ ದ್ಯುಮಂತನ ತಲೆಯನ್ನೂ ಕತ್ತರಿಸಿಬಿಟ್ಟನು.

ಇತ್ತಲಾಗಿ ಗದ, ಸಾತ್ಯಕಿ, ಸಾಂಬ–ಇವರೇ ಮೊದಲಾದ ಯದು ವಂಶೀಯವೀರರು ಶಾಲ್ವನ ಸೈನ್ಯವನ್ನು ಅಪಾರಸಂಖ್ಯೆಯಲ್ಲಿ ಸಂಹರಿಸುತ್ತಿದ್ದರು. ಅವರಿಂದ ಕತ್ತರಿಸಲ್ಪಟ್ಟ ಸೌಭವಿಮಾನದಲ್ಲಿದ್ದ ಸಾವಿರಾರು ಸೈನಿಕರ ಕತ್ತುಗಳು ತೊಪ-ತೊಪನೆ ಸಮುದ್ರದಲ್ಲಿ ಬೀಳುತ್ತಿದ್ದುವು. ಹೀಗೆ ಯದುವಂಶೀಯ ವೀರರು ಮತ್ತು ಶಾಲ್ವನ ಸೈನಿಕರು ಪರಸ್ಪರವಾಗಿ ಪ್ರಹರಿಸುತ್ತಾ ಇಪ್ಪತ್ತೇಳು ದಿವಸಗಳವರೆಗೆ ಅತ್ಯಂತಘೋರವಾದ ಮತ್ತು ಭಯಂಕರವಾದ ಯುದ್ಧವನ್ನು ಮಾಡುತ್ತಿದ್ದರು.

ಆ ಸಮಯದಲ್ಲಿ ಶ್ರೀಕೃಷ್ಣನು ಧರ್ಮಪುತ್ರನ ಕರೆಯಂತೆ ಹಸ್ತಿನಾ ಪಟ್ಟಣಕ್ಕೆ ಹೋಗಿದ್ದನು. ಶಿಶುಪಾಲನ ವಧೆಯೂ ಆಗಿ ರಾಜಸೂಯ ಯಾಗದ ಅವಭೃಥವೂ ಆದನಂತರ ಕುರುಕುಲದ ವೃದ್ಧರ, ಮುನಿಗಳ, ಕುಂತಿಯ ಮತ್ತು ಅವಳ ಮಕ್ಕಳ ಅನುಮತಿಯನ್ನು ಪಡೆದು ದ್ವಾರಕಾ ಪಟ್ಟಣಕ್ಕೆ ಪ್ರಯಾಣಮಾಡಿದನು. ಆ ಸಮಯದಲ್ಲಿ ಅವನಿಗೆ ಅತಿಘೋರವಾದ ಅಪಶಕುನಗಳು ಗೋಚರವಾದುವು. ದ್ವಾರಾವತಿಗೆ ಪ್ರಯಾಣ ಮಾಡುತ್ತಿದ್ದಾಗ ಶ್ರೀಕೃಷ್ಣನು ಮಾರ್ಗದಲ್ಲಿ ಹೀಗೆ ಯೋಚಿಸಿದನು : "ಯುಧಿಷ್ಠಿರನ ಆಹ್ವಾನದಂತೆ ನಾನು ಹಸ್ತಿನಾಪಟ್ಟಣಕ್ಕೆ ಹೋದೆನು. ರಾಜಸೂಯಯಾಗದ ಸಮಯದಲ್ಲಿ ಪೂಜ್ಯನಾದ ಬಲರಾಮನೂ ಬಂದು ನನ್ನೊಡನೆ ಸೇರಿಕೊಂಡನು. ಆ ಸಮಯದಲ್ಲಿ ನಾವಿಬ್ಬರೂ ದ್ವಾರಕೆಯಲ್ಲಿ ಇರಲಿಲ್ಲ. ಈ ಸಮಯದಲ್ಲಿ ಶಿಶುಪಾಲನ ಪಕ್ಷಪಾತಿಗಳಾದ ರಾಜರು ಸೇಡು ತೀರಿಸಿಕೊಳ್ಳಲು ಅವಶ್ಯವಾಗಿ ದ್ವಾರಕಾಪಟ್ಟಣಕ್ಕೆ ಮುತ್ತಿಗೆ ಹಾಕಿದ್ದಾರೆ."

ದ್ವಾರಾವತಿಗೆ ಪ್ರವೇಶಿಸುತ್ತಲೇ ಈ ಮೊದಲೇ ತಾನು ಊಹಿಸಿದ್ದಂತೆ ತನ್ನ ಕಡೆಯ ವೀರರೆಲ್ಲರೂ ಶಾಲ್ವನ ಸೈನಿಕರೊಡನೆ ಯುದ್ಧದಲ್ಲಿ ತೊಡಗಿರುವುದನ್ನು ನೋಡಿದನು. ಒಡನೆಯೇ ಶ್ರೀಕೃಷ್ಣನು ನಗರದ ರಕ್ಷಣಾ

ಭಾರವನ್ನು ಬಲರಾಮನಿಗೊಪ್ಪಿಸಿ ಸೌಭಪತಿಯಾದ ಶಾಲ್ವನನ್ನು ನೋಡಿ ತನ್ನ ಸಾರಥಿಯಾದ ದಾರುಕನಿಗೆ ಹೇಳಿದನು :

**ರಥಂ ಪ್ರಾಪಯ ಮೇ ಸೂತ ಶಾಲ್ವಸ್ಯಾನ್ತಿಕಮಾಶು ವೈ ।**
**ಸಂಭ್ರಮಸ್ತೇ ನ ಕರ್ತವ್ಯೋ ಮಾಯಾವೀ ಸೌಭರಾಡಯಮ್ ॥**

"ಸೂತನೇ! ನನ್ನ ರಥವನ್ನು ಅತಿಶೀಘ್ರವಾಗಿ ಶಾಲ್ವನ ಸಮೀಪಕ್ಕೆ ಒಯ್ಯುವವನಾಗು. ಈ ಶಾಲ್ವನು ಮಹಾಮಾಯಾವಿ. ಆದರೆ ನೀನು ಅದಕ್ಕಾಗಿ ಭಯಪಡುವ ಕಾರಣವಿಲ್ಲ."

ಶ್ರೀಕೃಷ್ಣನ ಆಜ್ಞೆಯಾದೊಡನೆಯೇ ದಾರುಕನು ಶ್ರೀಕೃಷ್ಣನ ರಥವನ್ನು ಶಾಲ್ವನ ಬಳಿಗೊಯ್ದನು. ಶಾಲ್ವನ ಕಡೆಯ ಸೈನಿಕರೂ ಮತ್ತು ಯದುಸೈನಿಕರೂ–ಶ್ರೀಕೃಷ್ಣನ ರಥದ ಧ್ವಜದಲ್ಲಿ ಕುಳಿತು ಅರುಣನ ತಮ್ಮ ನಾದ ಗರುಡನು ಆಗಮಿಸುತ್ತಿರುವುದನ್ನು ನೋಡಿದರು. ದೂರದಿಂದ ಗರುಡಧ್ವಜವನ್ನು ನೋಡಿದೊಡನೆಯೇ ಶ್ರೀಕೃಷ್ಣನೇ ಆಗಮಿಸಿದನೆಂದು ಯಾದವರೂ ಮತ್ತು ಶತ್ರುಸೈನಿಕರೂ ಭಾವಿಸಿದರು. ಆ ವೇಳೆಗಾಗಲೇ ಶಾಲ್ವನ ಸೈನ್ಯವು ಸಂಪೂರ್ಣವಾಗಿ ನಷ್ಟವಾಗಿ ಹೋಗಿದ್ದಿತು. ಶ್ರೀಕೃಷ್ಣನು ರಣಾಂಗಣಕ್ಕೆ ಆಗಮಿಸಿದುದನ್ನು ನೋಡಿದೊಡನೆಯೇ ಶಾಲ್ವನು ಅತ್ಯಂತಭಯಂಕರವಾಗಿ ಶಬ್ದಮಾಡುತ್ತಿದ್ದ ಶಕ್ತ್ಯಾಯುಧವನ್ನು ಶ್ರೀಕೃಷ್ಣನ ಸಾರಥಿಯ ಮೇಲೆ ಪ್ರಯೋಗಿಸಿದನು. ಹತ್ತು ದಿಕ್ಕುಗಳನ್ನೂ ಬೆಳಗುತ್ತಾ ಉಲ್ಕೆಯಂತೆ ಆಕಾಶಮಾರ್ಗದಲ್ಲಿ ಅತ್ಯಂತ ವೇಗದಿಂದ ಬರುತ್ತಿದ್ದ ಆ ಶಕ್ತ್ಯಾಯುಧವನ್ನು ಶ್ರೀಕೃಷ್ಣನು ಹರಿತವಾದ ಬಾಣಗಳಿಂದ ನೂರಾರು ತುಂಡುಗಳಾಗಿ ಕತ್ತರಿಸಿಬಿಟ್ಟನು. ಪುನಃ ಶ್ರೀಕೃಷ್ಣನು ಹದಿನಾರು ಬಾಣಗಳಿಂದ ಶಾಲ್ವನನ್ನೂ ಪ್ರಹರಿಸಿ ಆಕಾಶದಲ್ಲಿ ಸಂಚರಿಸು ತ್ತಿದ್ದ ಸೌಭವಿಮಾನವನ್ನೂ–ಸೂರ್ಯನು ತನ್ನ ಅಸಂಖ್ಯಾತವಾದ ಕಿರಣ ಗಳಿಂದ ಆಕಾಶವನ್ನು ಮುಚ್ಚಿಬಿಡುವಂತೆ–ಅಸಂಖ್ಯಾತವಾದ ಮತ್ತು ತೀಕ್ಷ್ಣವಾದ ಬಾಣಗಳಿಂದ ಮುಚ್ಚಿಬಿಟ್ಟನು. ಇದಕ್ಕೆ ಪ್ರತಿಯಾಗಿ ಶಾಲ್ವನು ಶಾರ್ಙ್ಗಧನುಸ್ಸಿನಿಂದ ಕೂಡಿದ್ದ ಶ್ರೀಕೃಷ್ಣನ ಎಡ ತೋಳನ್ನು ತೀಕ್ಷ್ಣವಾಗಿದ್ದ ಬಾಣದಿಂದ ಪ್ರಹರಿಸಿದನು. ಇದರಿಂದಾಗಿ ಭಗವಂತನು

ಧರಿಸಿದ್ದ ಶಾರ್ಙ್ಗಧನುಸ್ಸು ಕೆಳಕ್ಕೆ ಬಿದ್ದುಹೋಯಿತು. ಈ ಘಟನೆಯು ಸಮಸ್ತರಿಗೂ ಪರಮಾದ್ಭುತವಾಗಿ ಕಂಡಿತು. ಅದ್ಭುತವಾದ ಆ ದೃಶ್ಯವನ್ನು ನೋಡಿದ ಪ್ರಾಣಿಗಳೆಲ್ಲವೂ ಹಾಹಾಕಾರಮಾಡಿದುವು. ಇಂತಹ ಅದ್ಭುತಸಾಧನೆಯಿಂದ ಕೊಬ್ಬಿದ ಶಾಲ್ವನು ಗಟ್ಟಿಯಾಗಿ ಗರ್ಜನೆಮಾಡುತ್ತಾ ಶ್ರೀಕೃಷ್ಣನಿಗೆ ಹೇಳಿದನು :

**ಯತ್ತ್ವಯಾ ಮೂಢ ನಃ ಸಖ್ಯುರ್ಭ್ರಾತುರ್ಭಾರ್ಯಾ ಹೃತೇಕ್ಷತಾಮ್ ।**
**ಪ್ರಮತ್ತಃ ಸ ಸಭಾಮಧ್ಯೇ ತ್ವಯಾ ವ್ಯಾಪಾದಿತಃ ಸಖಾ ॥೧೭॥**

**ತಂ ತ್ವದ್ಯ ನಿಶಿತೈರ್ಬಾಣೈರಪರಾಜಿತಮಾನಿನಮ್ ।**
**ನಯಾಮ್ಯಪುನರಾವೃತ್ತಿಂ ಯದಿ ತಿಷ್ಠೇರ್ಮಮಾಗ್ರತಃ ॥೧೮॥**

"ಮೂಢನೇ! ನೀನು ನಾವೆಲ್ಲರೂ ನೋಡುತ್ತಿದ್ದಂತೆಯೇ ನಮ್ಮೆಲ್ಲರ ಮಿತ್ರನಾದ, ನನ್ನ ಸಹೋದರನಂತಿದ್ದ ಶಿಶುಪಾಲನ ಭಾರ್ಯೆಯಾಗ ಲಿದ್ದವಳನ್ನು ಅಪಹರಿಸಿದೆ. ಇಷ್ಟು ಸಾಲದೆಂದು ತುಂಬಿದ ಸಭೆಯಲ್ಲಿ ಅಜಾಗರೂಕನಾಗಿದ್ದ ನಮ್ಮ ಮಿತ್ರ ಶಿಶುಪಾಲನನ್ನು ಚಕ್ರಾಯುಧವನ್ನು ಪ್ರಯೋಗಿಸಿ ಸಂಹರಿಸಿದೆ.

ಇಂತಹ ಕುತ್ಸಿತವಾದ ಕಾರ್ಯಗಳನ್ನು ಮಾಡಿಯೂ ನೀನು ನಿನ್ನನ್ನು ಅಜೇಯನೆಂದು ಭಾವಿಸಿಕೊಂಡುಬಿಟ್ಟಿರುವೆ. ಇಂದು ನೀನು ನನಗೆದುರಾಗಿ ಯುದ್ಧಕ್ಕೆ ನಿಂತಿದ್ದೇ ಆದರೆ ನನ್ನ ತೀಕ್ಷ್ಣವಾದ ಬಾಣಗಳಿಂದ ನಿನ್ನನ್ನು ಈ ಲೋಕಕ್ಕೆ ಮರಳದಂತೆ ಸಂಹರಿಸಿಬಿಡುತ್ತೇನೆ."

ಶ್ರೀಕೃಷ್ಣನು ಉತ್ತರಿಸುತ್ತಾನೆ :

**ವೃಥಾ ತ್ವಂ ಕತ್ಥಸೇ ಮನ್ದ ನ ಪಶ್ಯಸ್ಯನ್ತಿಕೇಽನ್ತಕಮ್ ।**
**ಪೌರುಷಂ ದರ್ಶಯನ್ತಿ ಸ್ಮ ಶೂರಾ ಬಹುಭಾಷಿಣಃ ॥೧೯॥**

"ಮೂಢನೇ! ನೀನು ವ್ಯರ್ಥವಾಗಿ ಬಗಳುತ್ತಿರುವೆ. ನಿನ್ನ ಸಮೀಪ ದಲ್ಲಿಯೇ ಯಮರಾಜನು ನಿಂತಿರುವನೆಂಬುದನ್ನು ನೀನು ಅರಿತಿಲ್ಲ. ಶೂರ ರಾದವರು ಯಾವಾಗಲೂ ಹೆಚ್ಚು ಮಾತನಾಡುವುದಿಲ್ಲ. ಯುದ್ಧದಲ್ಲಿ ಅವರು ತಮ್ಮ ಪೌರುಷವನ್ನು ತೋರಿಸುತ್ತಾರೆ."

ಪರೀಕ್ಷಿತಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿ ಅತ್ಯಂತ ಕ್ರುದ್ಧ

ನಾಗಿ, ಅತ್ಯಂತ ವೇಗಶಾಲಿಯಾಗಿದ್ದ ಮತ್ತು ಭಯಂಕರವಾಗಿದ್ದ ತನ್ನ ಗದೆಯನ್ನು ಶಾಲ್ವನ ಕುತ್ತಿಗೆಯಲ್ಲಿ ಪ್ರಹರಿಸಿದನು. ಭಯಂಕರವಾದ ಈ ಪ್ರಹಾರದಿಂದ ಶಾಲ್ವನು ರಕ್ತವನ್ನೇ ಕಕ್ಕಿ ತರತರನೆ ನಡುಗುತ್ತಿದ್ದನು. ಶಾಲ್ವನನ್ನು ಪ್ರಹರಿಸಿದ ಆ ಮಹಾಗದೆಯು ಪುನಃ ಭಗವಂತನನ್ನೇ ಸೇರಿತು. ಅಷ್ಟರಲ್ಲಿಯೇ ಶಾಲ್ವನು ಮಾಯವಾಗಿಬಿಟ್ಟನು. ಮುಹೂರ್ತಕಾಲವು ಕಳೆದನಂತರ ಪುರುಷನೊಬ್ಬನು ಶ್ರೀಕೃಷ್ಣನ ಬಳಿಗೆ ಆಗಮಿಸಿ ಅವನಿಗೆ ತಲೆಬಾಗಿ ನಮಸ್ಕರಿಸಿ ತಾನು ದೇವಕಿಯಿಂದ ಕಳುಹಿಸಲ್ಪಟ್ಟವ ನಾಗಿರುವೆನೆಂದು ತನ್ನ ಪರಿಚಯಮಾಡಿಕೊಂಡು ಬಿಕ್ಕಿ-ಬಿಕ್ಕಿ ಅಳುತ್ತಾ ಶ್ರೀಕೃಷ್ಣನಿಗೆ ಹೇಳಿದನು :

"ಶ್ರೀಕೃಷ್ಣ! ದುಃಖತಪ್ತಳಾಗಿರುವ ದೇವಕಿಯು ನನ್ನ ಮೂಲಕ ಹೇಳಿ ಕಳುಹಿಸಿರುವ ವಾರ್ತೆಯನ್ನು ಯಥಾವತ್ತಾಗಿ ಹೇಳುವೆನು ಕೇಳು :

**ಕೃಷ್ಣ ಕೃಷ್ಣ ಮಹಾಬಾಹೋ ಪಿತಾ ತೇ ಪಿತೃವತ್ಸಲ ।**
**ಬದ್ಧ್ವಾಪನೀತಃ ಶಾಲ್ವೇನ ಸೌನಿಕೇನ ಯಥಾ ಪಶುಃ ॥೨೨॥**

"ಕೃಷ್ಣ! ಕೃಷ್ಣ! ಮಹಾಬಾಹುವೇ! ಪಿತೃವತ್ಸಲನೇ! ಶಾಲ್ವನು ನಿನ್ನ ತಂದೆಯನ್ನು ಬಂಧಿಸಿ ಕಟುಕನು ಪಶುವನ್ನು ವಧ್ಯಸ್ಥಾನಕ್ಕೆ ಸೆಳೆದೊಯ್ಯುವಂತೆ ಸೆಳೆದುಕೊಂಡು ಹೊರಟುಹೋದನಲ್ಲಾ!"

ಪರೀಕ್ಷಿತ! ಅಪ್ರಿಯವಾದ ಈ ಮಾತನ್ನು ಆ ಪುರುಷನಿಂದ ಕೇಳಿ ಶ್ರೀಕೃಷ್ಣನು ಮನುಷ್ಯನ ಸ್ವಭಾವಕ್ಕೆ ಅನುರೂಪವಾಗಿ ಅತ್ಯಂತ ದಯಾಪರನಾಗಿ, ಜೀವನದಲ್ಲೇ ಜುಗುಪ್ಸೆಹೊಂದಿದ ಮುಖಭಾವದಿಂದ ಕೂಡಿದವನಾಗಿ ಪಿತೃಸ್ನೇಹದಿಂದ ಪ್ರೇರಿತನಾಗಿ ಸಾಧಾರಣನಾದೊಬ್ಬ ಮನುಷ್ಯನಂತೆ ಈ ಮಾತನ್ನು ಹೇಳಿದನು :

**ಕಥಂ ರಾಮಮಸಂಭ್ರಾನ್ತಂ ಜಿತ್ವಾಽಜೇಯಂ ಸುರಾಸುರೈಃ ।**
**ಶಾಲ್ವೇನಾಲ್ಪೀಯಸಾ ನೀತಃ ಪಿತಾ ಮೇ ಬಲವಾನ್ ವಿಧಿಃ ॥೨೪॥**

"ನಗರದ ರಕ್ಷಣೆಯ ಭಾರವನ್ನು ಬಲರಾಮನಿಗೆ ಒಪ್ಪಿಸಿ ಬಂದಿದ್ದೆನು. ಅವನಾದರೋ ಯಾವುದೇ ಸಂದರ್ಭದಲ್ಲಿಯೂ ಭ್ರಾಂತನಾಗುವವನಲ್ಲ. ದೇವ-ದಾನವರೇ ಒಟ್ಟಾಗಿ ಯುದ್ಧಕ್ಕೆ ಬಂದರೂ ಅವರಿಂದ ಜಯಿಸಲ್ಪಡ

ತಕ್ಕವನಲ್ಲ. ಅಂತಹ ಮಹಾಪರಾಕ್ರಮಿಯಾದ ಬಲರಾಮನನ್ನು ಯುದ್ಧದಲ್ಲಿ ಜಯಿಸಿ ಅಲ್ಪಬಲನಾದ ಶಾಲ್ವನು ನನ್ನ ತಂದೆಯನ್ನು ಸೆಳೆದುಕೊಂಡು ಹೋಗಿದ್ದಾನೆ. ನಿಶ್ಚಯವಾಗಿಯೂ ವಿಧಿಯೆಂಬುದು ಅತ್ಯಂತಬಲಿಷ್ಠ ವಾದುದು. ಬ್ರಹ್ಮಾದಿಗಳಿಂದಲೂ ಅದರ ನಿಯಮವನ್ನು ಬದಲಾಯಿಸಲು ಶಕ್ಯವೇ ಇಲ್ಲ."

ಶ್ರೀಕೃಷ್ಣನು ಹೀಗೆ ಹೇಳಿಕೊಳ್ಳುತ್ತಿದ್ದ ಸಮಯಕ್ಕೆ ಸರಿಯಾಗಿ ಶಾಲ್ವನು ವಸುದೇವನಂತಿದ್ದನೊಬ್ಬ ಮನುಷ್ಯನನ್ನು ರಣರಂಗಕ್ಕೆ ಸೆಳೆದು ತಂದು ಶ್ರೀಕೃಷ್ಣನೆದುರಿನಲ್ಲಿ ನಿಲ್ಲಿಸಿ ಅವನನ್ನು ಕುರಿತು ಹೇಳಿದನು:

**ಏಷ ತೇ ಜನಿತಾ ತಾತೋ ಯದರ್ಥಮಿಹ ಜೀವಸಿ ।**
**ವಧಿಷ್ಯೇ ವೀಕ್ಷತಸ್ತೇಽಮುಮೀಶಶ್ಚೇತ್ ಪಾಹಿ ಬಾಲಿಶ ॥೨೬॥**

"ಮೂರ್ಖನೇ! ನೀನು ಯಾವನ ರಕ್ಷಣೆಯ ಸಲುವಾಗಿ ಬದುಕಿರು ವೆಯೋ ಅಂತಹ, ನಿನಗೆ ಜನ್ಮದಾತನಾದ ತಂದೆಯೇ ಇವನಾಗಿದ್ದಾನೆ. ಚೆನ್ನಾಗಿ ನೋಡು. ನೀನು ನೋಡುತ್ತಿರುವಂತೆಯೇ ನಾನೀಗ ಇವನನ್ನು ತುಂಡರಿಸುತ್ತೇನೆ. ನಿನಗೇನಾದರೂ ಶಕ್ತಿಯಿದ್ದರೆ ಇವನನ್ನು ರಕ್ಷಿಸಿಕೋ."

ಹೀಗೆ ಭಯಪಡಿಸುತ್ತಾ ಮಾಯಾವಿಯಾದ ಶಾಲ್ವನು ಮಾಯಾ ವಸುದೇವನ ಕತ್ತನ್ನು ಕತ್ತಿಯಿಂದ ಕತ್ತರಿಸಿ ಅದನ್ನೆತ್ತಿಕೊಂಡು ಆಕಾಶದಲ್ಲಿ ನಿಂತಿದ್ದ ಸೌಭವಿಮಾನವನ್ನೇರಿದನು.

ಪರೀಕ್ಷಿತ! ಶ್ರೀಕೃಷ್ಣನು ಸ್ವಯಂಸಿದ್ಧನೂ, ಜ್ಞಾನಸ್ವರೂಪನೂ ಮತ್ತು ಮಹಾನುಭಾವನೂ ಆಗಿದ್ದನು. ಆದರೂ ಈ ಘಟನೆಯನ್ನು ನೋಡಿ ಸುಮಾರು ಒಂದು ಮುಹೂರ್ತಕಾಲದವರೆಗೆ–ತಂದೆಯಾದ ವಸುದೇವನ ವಿಷಯದಲ್ಲಿ ಅತ್ಯಂತ ಪ್ರೀತಿಯಿದ್ದ ಕಾರಣ–ಸಾಧಾರಣಮನುಷ್ಯರಂತೆ ಶೋಕಸಾಗರದಲ್ಲಿ ಮುಳುಗಿಯೇ ಹೋದನು. ಸ್ವಲ್ಪಹೊತ್ತಾದನಂತರ ಶ್ರೀಕೃಷ್ಣನಿಗೆ ತಾನು ಕಂಡಿದ್ದು–ಶಾಲ್ವನಿಗೆ ಮಯನು ಉಪದೇಶಮಾಡಿದ್ದ ಮಾಯಾವಿದ್ಯೆಯ ಪ್ರದರ್ಶನವೆಂಬುದು ತಿಳಿದುಹೋಯಿತು. ಕನಸಿನಲ್ಲಿ ಕಂಡದ್ದೆಲ್ಲಾ ಎಚ್ಚರವಾದೊಡನೆಯೇ ಕಾಣದೇ ಹೋಗುವಂತೆ ಶ್ರೀಕೃಷ್ಣನಿಗೆ ಯಥಾರ್ಥಜ್ಞಾನವಾದೊಡನೆಯೇ ತಾಯಿಯು ಕಳುಹಿಸಿಕೊಟ್ಟ ದೂತ

ನಾಗಲೀ, ತಂದೆಯ ಶರೀರವಾಗಲೀ ಕಾಣಲೇ ಇಲ್ಲ. ಆಕಾಶದಲ್ಲಿ ವಿಮಾನ ದಲ್ಲಿ ಕುಳಿತು ಅಟ್ಟಹಾಸದಿಂದ ಸಂಚರಿಸುತ್ತಿದ್ದ ಶಾಲ್ವನನ್ನು ನೋಡಿ ಅವ ನನ್ನು ಸಂಹರಿಸಲು ನಿಶ್ಚಯಿಸಿ ಪ್ರಯತ್ನಶೀಲನಾದನು.

**ಏವಂ ವದನ್ತಿ ರಾಜರ್ಷೇ ಋಷಯಃ ಕೇ ಚ ನಾನ್ವಿತಾಃ ।**
**ಯತ್ ಸ್ವವಾಚೋ ವಿರುಧ್ಯೇತ ನೂನಂ ತೇ ನ ಸ್ಮರನ್ತ್ಯುತ ॥೩೦॥**

ರಾಜರ್ಷಿಯೇ! ಪರೀಕ್ಷಿತ! ಹಿಂದಿನದನ್ನೂ ಮುಂದಿನದನ್ನೂ ಸಮನ್ವಯಿಸಿ ಹೇಳಲು ಅಸಮರ್ಥರಾದ ಕೆಲವು ಋಷಿಗಳು ಈ ಸಂದರ್ಭ ದಲ್ಲಿ ಉಕ್ತವಾಗಿರುವ ಶ್ರೀಕೃಷ್ಣನ ವಿಮೋಹವನ್ನೇ ಅತಿಶಯಿಸಿ ಹೇಳುತ್ತಾರೆ. ಹಾಗೆ ಹೇಳುವುದರಿಂದ ತಾವು ಈ ಹಿಂದೆ ಹೇಳಿದ್ದ 'ಶ್ರೀಕೃಷ್ಣನು ಮಾಯಾತೀತ', 'ಸರ್ವಜ್ಞ'–ಮುಂತಾದ ವಿಶೇಷಣಗಳಿಗೆ ವಿರೋಧ ವಾಗುತ್ತೆಂಬುದನ್ನು ಅವರು ಬಗೆಯುವುದಿಲ್ಲ. ಶ್ರೀಕೃಷ್ಣನು ಲೀಲಾ ವಿನೋದಕ್ಕಾಗಿ ಹೀಗೆ ಮಾಡಿದನೆಂಬುದನ್ನೂ ಹೇಳುವುದಿಲ್ಲ. ತಂದೆಯ ಶರೀರವನ್ನು ನೋಡಿ ಶ್ರೀಕೃಷ್ಣನು ಕೂಡ ಭ್ರಮಿಸಿದನೆಂದೇ ಅತಿಶಯಿಸಿ ಹೇಳುತ್ತಾರೆ. ಆದರೆ ಇವೆಲ್ಲವೂ ಶ್ರೀಕೃಷ್ಣನ ಲೀಲಾವಿನೋದವೆಂಬುದನ್ನು ನಾವು ಸ್ಪಷ್ಟವಾಗಿ ತಿಳಿಯಬೇಕು.

**ಕ್ವ ಶೋಕಮೋಹೌ ಸ್ನೇಹೋ ವಾ ಭಯಂ ವಾ ಯೇಽಜ್ಞಸಂಭವಾಃ ।**
**ಕ್ವ ಚಾಖಣ್ಡಿತವಿಜ್ಞಾನಜ್ಞಾನೈಶ್ವರ್ಯಸ್ತ್ವಖಣ್ಡಿತಃ ॥೩೧॥**

ಅಜ್ಞಾನದಿಂದುಂಟಾಗುವ ಶೋಕ-ಮೋಹ-ಸ್ನೇಹ-ಭಯಗಳೆಲ್ಲಿ? ಪರಿಪೂರ್ಣವಾದ ಜ್ಞಾನ-ವಿಜ್ಞಾನೈಶ್ವರ್ಯಗಳಿಗೆ ನೆಲೆಯಾದ, ದೇವವಂದ್ಯ ನಾದ, ಪರಿಪೂರ್ಣನಾದ ಶ್ರೀಕೃಷ್ಣನೆಲ್ಲಿ?

**ಯತ್ಪಾದಸೇವೋರ್ಜಿತಯಾಽತ್ಮವಿದ್ಯಯಾ**
**ಹಿನ್ವನ್ತ್ಯನಾದ್ಯಾತ್ಮವಿಪರ್ಯಯಗ್ರಹಮ್ ।**
**ಲಭನ್ತ ಆತ್ಮೀಯಮನನ್ತಮೈಶ್ವರಂ**
**ಕುತೋ ನು ಮೋಹಃ ಪರಮಸ್ಯ ಸದ್ಗತೇಃ ॥೩೨॥**

ದೊಡ್ಡ-ದೊಡ್ಡ ಋಷಿ-ಮುನಿಗಳು ಭಗವಂತನಾದ ಶ್ರೀಕೃಷ್ಣನ ಚರಣಕಮಲಗಳನ್ನು ಸಂಸೇವಿಸುತ್ತಾ ಆತ್ಮಸಾಕ್ಷಾತ್ಕಾರಮಾಡಿಕೊಂಡು

ಆತ್ಮವಿದ್ಯೆಯನ್ನು ಅರಿತುಕೊಳ್ಳುತ್ತಾರೆ ಮತ್ತು ಅನಾದಿಕಾಲದಿಂದಲೂ ಬಂದಿರುವ ಅಜ್ಞಾನರೂಪವಾದ ದೇಹಾತ್ಮಬುದ್ಧಿಯನ್ನು ತೊರೆಯುತ್ತಾರೆ. ಆತ್ಮಸಂಬಂಧವಾದ ಪರಮೈಶ್ವರ್ಯವನ್ನು ಪಡೆದುಕೊಳ್ಳುತ್ತಾರೆ. ಹೀಗೆ ತನ್ನನ್ನು ಆಶ್ರಯಿಸಿರುವ ಸತ್ಪುರುಷರ ಶೋಕ-ಮೋಹಗಳನ್ನು ತೊಲಗಿಸಿ ಪರಮಗತಿಯನ್ನು ಅನುಗ್ರಹಿಸುವ ಪೂರ್ಣಸ್ವರೂಪನಾದ ಶ್ರೀಕೃಷ್ಣನಿಗೆ ಮೋಹವೆಲ್ಲಿಯದು? ಮೋಹವೆಂಬುದು ಹೇಗಿರಲು ಸಾಧ್ಯ? ಆದುದರಿಂದ ಶ್ರೀಕೃಷ್ಣನು 'ವಿಮೋಹಿತನಾದನು, ಮೂರ್ಛಿತನಾದನು, ದುಃಖಿಸಿದನು'– ಎಂಬುದೆಲ್ಲವೂ ಲೀಲಾಮಾನುಷವಿಗ್ರಹನಾದ ಅವನ ಲೀಲೆಗಳೆಂದು ತಿಳಿಯಬೇಕು.

ಪರೀಕ್ಷಿತ! ಶಾಲ್ವನು ಉತ್ಸಾಹಭರಿತನಾಗಿ ಶ್ರೀಕೃಷ್ಣನ ಮೇಲೆ ಪುಂಖಾನುಪುಂಖವಾಗಿ ಶಸ್ತ್ರಗಳ ಮಳೆಗರೆಯಲು ಪ್ರಾರಂಭಿಸಿದನು. ಇದಕ್ಕೆ ಪ್ರತಿಯಾಗಿ ಅಮೋಘವೀರ್ಯವಂತನಾದ ಶ್ರೀಕೃಷ್ಣನು ಕೂಡ ತನ್ನ ತೀಕ್ಷ್ಣವಾದ ಬಾಣಗಳಿಂದ ಶಾಲ್ವನನ್ನು ಬಹಳವಾಗಿ ಗಾಯಗೊಳಿಸಿದನು. ಅವನ ಸೌಭವಿಮಾನವನ್ನು ಕೂಡ ಗದೆಯಿಂದ ಪ್ರಹರಿಸಿದನು. ಶ್ರೀಕೃಷ್ಣನ ಕೈಯಿಂದ ರಭಸದೊಡನೆ ಎಸೆಯಲ್ಪಟ್ಟ ಗದೆಯ ಪ್ರಹಾರದಿಂದಾಗಿ ಸೌಭವಿಮಾನವು ಸಾವಿರಾರು ಚೂರುಗಳಾಗಿ ಒಡೆದು ಸಮುದ್ರದಲ್ಲಿ ಬಿದ್ದು ಹೋಯಿತು. ಸೌಭವಿಮಾನವು ಸಮುದ್ರಕ್ಕೆ ಬಿದ್ದುಹೋಗುವ ಮೊದಲೇ ಶಾಲ್ವನು ವಿಮಾನವನ್ನು ತ್ಯಜಿಸಿ ಗದಾಪಾಣಿಯಾಗಿ ಅತಿಶೀಘ್ರವಾಗಿ ಭೂಮಿಯ ಮೇಲೆ ಶ್ರೀಕೃಷ್ಣನಿಗೆ ಅಭಿಮುಖವಾಗಿ ಧಾವಿಸಿದನು. ಗದಾಪಾಣಿಯಾಗಿ ತನ್ನನ್ನು ಆಕ್ರಮಿಸಲು ಶಾಲ್ವನು ಬರುತ್ತಿರುವುದನ್ನು ಕಂಡು ಶ್ರೀಕೃಷ್ಣನು ಭಲ್ಲಾಯುಧದಿಂದ ಗದೆಯ ಸಹಿತವಾಗಿ ಅವನ ತೋಳನ್ನು ಕತ್ತರಿಸಿಬಿಟ್ಟನು. ಪುನಃ ಶ್ರೀಕೃಷ್ಣನು ಶಾಲ್ವನನ್ನು ಸಂಹರಿಸುವ ಸಲುವಾಗಿ ಪ್ರಳಯಕಾಲದ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಪರಮಾದ್ಭುತವಾದ ಸುದರ್ಶನಚಕ್ರವನ್ನು ಧರಿಸಿ ಸೂರ್ಯನಿಂದ ಕೂಡಿದ ಉದಯಾಚಲದಂತೆ ಪ್ರಕಾಶಿಸಿದನು. ಬಳಿಕ ಕರ್ಣಕುಂಡಲಗಳಿಂದಲೂ ಕಿರೀಟದಿಂದಲೂ ಮಂಡಿತವಾಗಿದ್ದ ಮಹಾ

ಮಾಯಾವಿಯಾದ ಶಾಲ್ವನ ಶಿರಸ್ಸನ್ನು–ಇಂದ್ರನು ವಜ್ರಾಯುಧದಿಂದ ವೃತ್ರಾಸುರನ ಶಿರಸ್ಸನ್ನು ಕತ್ತರಿಸಿಹಾಕಿದಂತೆ–ಶ್ರೀಕೃಷ್ಣನು ಚಕ್ರಾಯುಧ




ದಿಂದ ಕತ್ತರಿಸಿಹಾಕಿಬಿಟ್ಟನು. ಆ ಸಮಯದಲ್ಲಿ ಶಾಲ್ವನ ಸೈನಿಕರೆಲ್ಲರೂ ದುಃಖತಪ್ತರಾಗಿ–'ಅಯ್ಯೋ! ಅಯ್ಯೋ!'–ಎಂದು ಕಿರುಚಿಕೊಂಡರು.

ಪರೀಕ್ಷಿತಮಹಾರಾಜ! ಹೀಗೆ ಪಾಪಿಷ್ಠನಾದ ಶಾಲ್ವನು ಹತನಾಗಿ ಅವನ ವಿಮಾನವು ಗದೆಯಿಂದ ವಿಧ್ವಸ್ತವಾಗಲಾಗಿ ಪರಮಹರ್ಷಿತರಾದ ದೇವತೆಗಳಿಂದ ಬಾರಿಸಲ್ಪಟ್ಟ ದುಂದುಭಿಗಳು ಮೊಳಗಿದುವು. ಶಾಲ್ವನ ವಧೆಯ ಸಮಾಚಾರವನ್ನು ಕೇಳಿದ ದಂತವಕ್ತ್ರನು ತನ್ನ ಮಿತ್ರರಾದ ಶಿಶುಪಾಲನೇ ಮೊದಲಾದವರ ಸಂಹಾರಕ್ಕೆ ಪ್ರತೀಕಾರವೆಸಗಲು ಪರಮ ಕ್ರುದ್ಧನಾಗಿ ದ್ವಾರಕೆಗೆ ಆಗಮಿಸಿದನು.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ದಶಮಸ್ಕಂಧದ ೭೭ನೆಯ ಅಧ್ಯಾಯವು ಮುಗಿಯಿತು.

---

## ದಂತವಕ್ತ್ರ-ವಿದೂರಥರ ಸಂಹಾರ : ತೀರ್ಥಯಾತ್ರೆಯ ಸಮಯದಲ್ಲಿ ಬಲರಾಮನು ಸೂತಪುರಾಣಿಕರನ್ನು ಸಂಹರಿಸಿದುದು

ಶ್ರೀಶುಕಮುನಿಗಳು ಹೇಳುತ್ತಾರೆ :

**ಶಿಶುಪಾಲಸ್ಯ ಶಾಲ್ವಸ್ಯ ಪೌಂಡ್ರಕಸ್ಯಾಪಿ ದುರ್ಮತಿಃ ।**
**ಪರಲೋಕಗತಾನಾಂ ಚ ಕುರ್ವನ್ ಪಾರೋಕ್ಷ್ಯಸೌಹೃದಮ್ ॥೧॥**

**ಏಕಃ ಪದಾತಿಃ ಸಂಕ್ರುದ್ಧೋ ಗದಾಪಾಣಿಃ ಪ್ರಕಮ್ಪಯನ್ ।**
**ಪದ್ಭ್ಯಾಮಿಮಾಂ ಮಹಾರಾಜ ಮಹಾಸತ್ತ್ವೋ ವ್ಯದೃಶ್ಯತ ॥೨॥**

"ಪರೀಕ್ಷಿತಮಹಾರಾಜ! ಪರಲೋಕವನ್ನು ಸೇರಿದ ಶಿಶುಪಾಲ-ಶಾಲ್ವ-ಪೌಂಡ್ರಕನೇ ಮೊದಲಾದವರಿಗೆ ಪರೋಕ್ಷದಲ್ಲಾದರೂ ತನ್ನ ಸ್ನೇಹವನ್ನು ಪ್ರದರ್ಶಿಸಬೇಕೆಂದು, ಸ್ನೇಹಿತರ ಋಣವನ್ನು ತೀರಿಸಬೇಕೆಂದು ನಿಶ್ಚಯಿಸಿದ ದುರ್ಮತಿಯಾದ ದಂತವಕ್ತ್ರನು ಏಕಾಕಿಯಾದ ಪದಾತಿಯಾಗಿ ಯುದ್ಧಕ್ಕೆ ಆಗಮಿಸಿದನು. ಆ ಸಮಯದಲ್ಲಿ ಅವನು ಅತ್ಯಂತ ಕ್ರುದ್ಧನಾಗಿದ್ದನು. ಗದಾಪಾಣಿಯಾಗಿ ಗಡುಸಾದ ತನ್ನ ಹೆಜ್ಜೆಗಳಿಂದ ಭೂಮಿಯನ್ನೇ ನಡುಗಿಸುತ್ತಾ ಬರುತ್ತಿದ್ದ ಮಹಾಶಕ್ತಿಶಾಲಿಯಾದ ದಂತವಕ್ತ್ರನನ್ನು ಜನರು ವೀಕ್ಷಿಸಿದರು. ಹಾಗೆ ಕಡುಕೋಪದಿಂದ ತನ್ನ ಕಡೆಗೆ ಧಾವಿಸಿ ಬರುತ್ತಿದ್ದ ದಂತವಕ್ತ್ರವನ್ನು ನೋಡಿ ಶ್ರೀಕೃಷ್ಣನು ಅತ್ಯಂತ ಶೀಘ್ರವಾಗಿ ಗದೆಯನ್ನೆತ್ತಿಕೊಂಡು ರಥದಿಂದ ಕೆಳಕ್ಕೆ ಧುಮುಕಿ ಸಮುದ್ರವನ್ನು ತೀರವು ತಡೆದು ನಿಲ್ಲಿಸುವಂತೆ ದಂತವಕ್ತ್ರನನ್ನು ತಡೆದು ನಿಲ್ಲಿಸಿದನು. ಶ್ರೀಕೃಷ್ಣನು ಎದುರಾಗಿ ನಿಂತುದನ್ನು ನೋಡಿದೊಡನೆಯೇ ದುರ್ಮದನಾದ ಕರೂಷನರೇಶನಾದ ದಂತವಕ್ತ್ರನು ತನ್ನ ಗದೆಯನ್ನು ಮೇಲೆತ್ತಿ ಶ್ರೀಕೃಷ್ಣನಿಗೆ ಹೇಳಿದನು :

**ದಿಷ್ಟ್ಯಾ ದಿಷ್ಟ್ಯಾ ಭವಾನದ್ಯ ಮಮ ದೃಷ್ಟಿಪಥಂ ಗತಃ ॥೪॥**

**ತ್ವಂ ಮಾತುಲೇಯೋ ನಃ ಕೃಷ್ಣ ಮಿತ್ರಧ್ರುಙ್ಮಾಂ ಜಿಘಾಂಸಸಿ ।**
**ಅತಸ್ತ್ವಾಂ ಗದಯಾ ಮನ್ದ ಹನಿಷ್ಯೇ ವಜ್ರಕಲ್ಪಯಾ ॥೫॥**

**ತರ್ಹ್ಯಾನೃಣ್ಯಮುಪೈಮ್ಯಜ್ಞ ಮಿತ್ರಾಣಾಂ ಮಿತ್ರವತ್ಸಲಃ ।**
**ಬನ್ಧುರೂಪಮರಿಂ ಹತ್ವಾ ವ್ಯಾಧಿಂ ದೇಹಚರಂ ಯಥಾ ॥೬॥**

ಮೂರ್ಖನೇ! ಇಂದು ನೀನು ಸೌಭಾಗ್ಯವಶದಿಂದ, ನನ್ನ ಕಣ್ಣುಗಳಿಗೆ ವಿಷಯನಾಗಿರುವೆ. ನೀನು ನನ್ನ ಸೋದರಮಾವನ ಮಗನೇ ಆದರೂ ನನ್ನ ಮಿತ್ರರಿಗೆ ದ್ರೋಹವೆಸಗಿರುವೆಯಲ್ಲದೇ ನನ್ನನ್ನೂ ಸಂಹರಿಸಲು ಇಚ್ಛಿಸಿರುವೆ. ಆದುದರಿಂದ, ಮೂರ್ಖನೇ! ನಿನ್ನನ್ನು ವಜ್ರಾಯುಧಕ್ಕೆ ಸಮಾನವಾಗಿರುವ ಈ ನನ್ನ ಗದೆಯಿಂದ ಸಂಹರಿಸಿ ಬಿಡುವೆನು. ಹೀಗೆ ಮಾಡಿ ಮಿತ್ರವತ್ಸಲನಾಗಿರುವ ನಾನು, ನನ್ನ ಪ್ರಿಯಸ್ನೇಹಿತರ ಋಣವನ್ನು ಕಳೆದುಕೊಳ್ಳುತ್ತೇನೆ. ಬಂಧು-ಮಿತ್ರರೆಂಬ ವ್ಯಾವಹಾರಿಕ ತಿಳುವಳಿಕೆಯೇ ಇಲ್ಲದ ಪೆದ್ದನೇ! ದೇಹದಲ್ಲಿರುವ ವ್ಯಾಧಿಯನ್ನು ಚಿಕಿತ್ಸೆಗಳಿಂದ ವಿನಾಶಗೊಳಿಸುವಂತೆ–ಬಂಧುರೂಪನಾಗಿರುವ ಶತ್ರುವಾದ ನಿನ್ನನ್ನು ನಿಶ್ಚಯವಾಗಿಯೂ ಸಂಹರಿಸುತ್ತೇನೆ."*

ಪರೀಕ್ಷಿತಮಹಾರಾಜ! ಮಾವಟಿಗನು ಆನೆಯನ್ನು ಅಂಕುಶದಿಂದ ತಿವಿಯುವಂತೆ–ದಂತವಕ್ತ್ರನು ಅತ್ಯಂತಕಠಿಣವಾದ ಇದೇ ತೆರನಾದ ಮಾತುಗಳಿಂದ ಶ್ರೀಕೃಷ್ಣನನ್ನು ಬಾರಿ-ಬಾರಿಗೂ ನಿಂದಿಸುತ್ತಾ ಗದೆಯಿಂದ ಶ್ರೀಕೃಷ್ಣನ ತಲೆಯಲ್ಲಿ ಪ್ರಹರಿಸಿ ಸಿಂಹದಂತೆ ಗಟ್ಟಿಯಾಗಿ ಗರ್ಜಿಸಿದನು. ಆ ದ್ವಂದ್ವಯುದ್ಧದಲ್ಲಿ ಯದುಶ್ರೇಷ್ಠನಾದ ಶ್ರೀಕೃಷ್ಣನು ಗದೆಯಿಂದ ಅಪ್ಪಳಿಸಲ್ಪಟ್ಟರೂ ಐದು ಹೆಜ್ಜೆಗಳಷ್ಟು ಕೂಡ ಹಿಂದಕ್ಕೆ ಸರಿಯಲಿಲ್ಲ. ಮರುಕ್ಷಣದಲ್ಲಿಯೇ ಶ್ರೀಕೃಷ್ಣನು ಅತ್ಯಂತ ಭಾರವಾಗಿದ್ದ ಕೌಮೋದಕೀಗದೆಯಿಂದ ದಂತವಕ್ತ್ರನ ವಕ್ಷಃಸ್ಥಳದಲ್ಲಿ ರಭಸದಿಂದ ಪ್ರಹರಿಸಿದನು. ಗದಾಪ್ರಹಾರ

* ಶಿಶುಪಾಲ–ದಂತವಕ್ತ್ರರು ಶ್ರೀಕೃಷ್ಣನ ಸೋದರತ್ತೆಯರಾದ ; ವಸುದೇವನ ತಂಗಿಯರಾದ ಶ್ರುತಶ್ರವಸೆ ಮತ್ತು ಶ್ರುತದೇವಾ ಎಂಬುವರ ಮಕ್ಕಳು. ಆದುದರಿಂದ ಶ್ರೀಕೃಷ್ಣನಿಗೆ ದಂತವಕ್ತ್ರನು ಸೋದರತ್ತೆಯ ಮಗ. ದಂತವಕ್ತ್ರನಿಗೆ ಶ್ರೀಕೃಷ್ಣನು ಸೋದರಮಾವನ ಮಗ.




ದಿಂದ ಎದೆಯೊಡೆದುಹೋದ ದಂತವಕ್ತ್ರನು ಮುಖದಿಂದ ರಕ್ತವನ್ನೇ ಕಾರುತ್ತಾ, ತಲೆಗೆದರಿಕೊಂಡು, ಕೈಕಾಲುಗಳನ್ನು ವಿಸ್ತಾರವಾಗಿ ಚಾಚಿಕೊಂಡು ಗತಪ್ರಾಣನಾಗಿ ಭೂಮಿಯ ಮೇಲೆ ಬಿದ್ದನು.

**ತತಃ ಸೂಕ್ಷ್ಮತರಂ ಜ್ಯೋತಿಃ ಕೃಷ್ಣಮಾವಿಶದದ್ಭುತಮ್ ।**
**ಪಶ್ಯತಾಂ ಸರ್ವಭೂತಾನಾಂ ಯಥಾ ಚೈದ್ಯವಧೇ ನೃಪ ॥೧೦॥**

ಶಿಶುಪಾಲನ ವಧೆಯ ಸಮಯದಲ್ಲಿ ಗತಪ್ರಾಣನಾದ ಶಿಶುಪಾಲನ ಶರೀರದಿಂದ ಜ್ಯೋತಿಯೊಂದು ಹೊರಬಂದು ಶ್ರೀಕೃಷ್ಣನಲ್ಲಿ ಸೇರಿ ಕೊಂಡಂತೆ–ಸಕಲಪ್ರಾಣಿಗಳೂ ನೋಡುತ್ತಿದ್ದಂತೆಯೇ ಗತಪ್ರಾಣನಾಗಿದ್ದ ದಂತವಕ್ತ್ರನ ಶರೀರದಿಂದ ಹೊರಟ ಅತ್ಯಂತಸೂಕ್ಷ್ಮವಾದೊಂದು ಜ್ಯೋತಿಯು ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಶ್ರೀಕೃಷ್ಣನನ್ನು ಪ್ರವೇಶಿಸಿತು.

ವಿದೂರಥನೆಂಬುವನು ದಂತವಕ್ತ್ರನ ಸಹೋದರ. ಅಣ್ಣನು ಮರಣ ಹೊಂದಿದುದನ್ನು ನೋಡಿ ಅತ್ಯಂತ ಖಿನ್ನನಾಗಿದ್ದನು ಮತ್ತು ಅತ್ಯಂತ ಕ್ರುದ್ಧನೂ ಆಗಿದ್ದನು. ಅವನು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಅಣ್ಣನ ವಧೆಯ ಸೇಡನ್ನು ತೀರಿಸಿಕೊಳ್ಳಲು ಕತ್ತಿ-ಗುರಾಣಿಗಳನ್ನು ಹಿಡಿದು ಶ್ರೀಕೃಷ್ಣ ನನ್ನು ಸಂಹರಿಸುವಸಲುವಾಗಿ ರಣರಂಗಕ್ಕೆ ಧಾವಿಸಿದನು. ಕ್ರೋಧಾಭಿಭೂತ ನಾಗಿ ತನ್ನ ಮೇಲೆ ರಭಸದಿಂದ ಬೀಳಲು ಬರುತ್ತಿದ್ದ ವಿದೂರಥನನ್ನು ನೋಡಿ ಶ್ರೀಕೃಷ್ಣನು ಕತ್ತಿಯಂತೆ ಹರಿತವಾದ ಅಂಚುಗಳಿಂದ ಕೂಡಿದ್ದ

ಚಕ್ರಾಯುಧದಿಂದ ಕಿರೀಟ-ಕುಂಡಲಗಳಿಂದ ಶೋಭಾಯಮಾನವಾಗಿ ಕಾಣು ತ್ತಿದ್ದ ಅವನ ಶಿರಸ್ಸನ್ನು ಕತ್ತರಿಸಿಬಿಟ್ಟನು.

ಪರೀಕ್ಷಿತಮಹಾರಾಜ! ಹೀಗೆ ಶ್ರೀಕೃಷ್ಣನು—ಇತರರಿಂದ ಎದುರಿಸಲು ಅಸಾಧ್ಯರಾಗಿದ್ದ ಶಾಲ್ವನನ್ನೂ ಅವನ ವಿಮಾನವನ್ನೂ, ದಂತವಕ್ತ್ರನನ್ನೂ ಅವನ ತಮ್ಮನಾದ ವಿದೂರಥನನ್ನೂ ಸಂಹರಿಸಿ ದೇವತೆಗಳಿಂದಲೂ ಮಾನವರಿಂದಲೂ ಸ್ತುತಿಸಲ್ಪಡುತ್ತಾ ತಳಿರು-ತೋರಣಗಳಿಂದಲೂ ಪುಷ್ಪ ಗುಚ್ಛಗಳಿಂದಲೂ ಸಮಲಂಕೃತವಾಗಿದ್ದ ದ್ವಾರಕಾಪಟ್ಟಣವನ್ನು ವೃಷ್ಣಿವೀರರಿಂದ ಸಮಾವೃತನಾಗಿ ಪ್ರವೇಶಿಸಿದನು. ಆಗ ದೊಡ್ಡ-ದೊಡ್ಡ ಋಷಿ-ಮುನಿಗಳೂ, ಸಿದ್ಧ-ಗಂಧರ್ವ-ವಿದ್ಯಾಧರರೂ, ಮಹೋರಗರೂ, ಅಪ್ಸರೆಯರೂ, ಪಿತೃಗಣಗಳೂ, ಯಕ್ಷ-ಕಿನ್ನರ-ಚಾರಣರೂ ಶ್ರೀಕೃಷ್ಣನ ವಿಜಯಕೀರ್ತನೆಗಳನ್ನು ಹಾಡುತ್ತಾ ಅವನ ಮೇಲೆ ಪುಷ್ಪಗಳ ಮಳೆಗರೆದರು.

ಪರೀಕ್ಷಿತಮಹಾರಾಜ! ಹೀಗೆ ಯೋಗೇಶ್ವರನಾದ ಮತ್ತು ಜಗ ದೀಶ್ವರನಾದ ಶ್ರೀಕೃಷ್ಣನು ಅನೇಕಪ್ರಕಾರವಾದ ಲೀಲೆಗಳನ್ನು ಆಡುತ್ತಿದ್ದನು. ಇವನ ನಿಜಸ್ವರೂಪವನ್ನು ತಿಳಿಯದಿದ್ದ ಪಶುಸಮಾನರಾದ ಅವಿವೇಕಿಗಳು ಕೆಲವು ವೇಳೆ ಶ್ರೀಕೃಷ್ಣನನ್ನು ಸೋತುಹೋದನೆಂದೂ ಕೆಲವು ವೇಳೆ ಜಯಗಳಿಸಿದನೆಂದೂ ಭಾವಿಸಿಕೊಳ್ಳುತ್ತಿದ್ದರು. ಅವನು ಲೀಲೆಗಾಗಿ ಸೋತವನಂತೆ ಕಾಣುತ್ತಿದ್ದನೆಂಬುದನ್ನು ಅವರು ಮನಗಾಣುತ್ತಿರಲಿಲ್ಲ.

ಒಮ್ಮೆ ಬಲರಾಮನು, ಪಾಂಡವರಿಗೂ-ಕೌರವರಿಗೂ ಯುದ್ಧಕ್ಕಾಗಿ ಸಿದ್ಧತೆಗಳು ಆಗುತ್ತಿರುವುದೆಂಬ ವಾರ್ತೆಯನ್ನು ಕೇಳಿದನು. ಯಾರೊಬ್ಬರ ಪಕ್ಷವನ್ನೂ ವಹಿಸಲು ಅವನಿಗೆ ಇಷ್ಟವಿರಲಿಲ್ಲ. ಅವನು ಮಧ್ಯಸ್ಥ ನಾಗಿದ್ದನು. ಆದುದರಿಂದ ತೀರ್ಥಸ್ನಾನಮಾಡಬೇಕೆಂಬ ನೆಪದಿಂದ ಬಲರಾಮನು ಹೊರಟುಬಿಟ್ಟನು. ಮೊದಲು ಅವನು ಪ್ರಭಾಸತೀರ್ಥ ಕ್ಷೇತ್ರಕ್ಕೆ ಹೋದನು. ಅಲ್ಲವನು ವಿಧಿವತ್ತಾಗಿ ಸ್ನಾನಮಾಡಿ ದೇವ-ಪಿತೃ-ಮಾನವರನ್ನು ಪೂಜಾ-ತರ್ಪಣ-ಅನ್ನದಾನಾದಿಗಳಿಂದ ಸಂತೃಪ್ತಿಗೊಳಿಸಿ ಅಲ್ಲಿಂದ ಮುಂದೆ ಕೆಲವು ಬ್ರಾಹ್ಮಣರೊಡಗೂಡಿ ಪಶ್ಚಿಮವಾಹಿನಿಯಾಗಿದ್ದ ಸರಸ್ವತೀನದಿಯ ತೀರಕ್ಕೆ ಹೋದನು. ಅಲ್ಲಿ ಬಲರಾಮನು ಜೊತೆಯಲ್ಲಿ

ಬಂದಿದ್ದ ಬ್ರಾಹ್ಮಣರೊಡನೆ ಸ್ನಾನ-ಕರ್ಮಾನುಷ್ಠಾನಗಳನ್ನು ಮುಗಿಸಿಕೊಂಡು ಮುಂದೆ ಅನುಕ್ರಮವಾಗಿ ಪೃಥೂದಕ, *ತ್ರಿತಕೂಪ, ಸುದರ್ಶನತೀರ್ಥ, ವಿಶಾಲತೀರ್ಥ, ಬ್ರಹ್ಮತೀರ್ಥ, ಚಕ್ರತೀರ್ಥ ಮತ್ತು ಪೂರ್ವವಾಹಿನಿಯಾದ ಸರಸ್ವತೀತೀರ್ಥ–ಈ ಎಲ್ಲಾ ತೀರ್ಥಕ್ಷೇತ್ರಗಳಿಗೂ ಹೋಗಿ ಸ್ನಾನ-ತರ್ಪಣಾದಿಗಳನ್ನು ಯಥಾವಿಧಿಯಾಗಿ ಮುಗಿಸಿದನು. ಅಲ್ಲಿಂದ ಮುಂದೆ ಬಲ ರಾಮನು ಬ್ರಾಹ್ಮಣರೊಡನೆ ಯಮುನಾನದಿಯ ತೀರದಲ್ಲಿಯೂ ಗಂಗಾನದಿಯ ತೀರದಲ್ಲಿಯೂ ಇದ್ದ ಹಲವಾರು ತೀರ್ಥಕ್ಷೇತ್ರಗಳ ದರ್ಶನವನ್ನು ಮಾಡಿಕೊಂಡು ಮಹರ್ಷಿಗಳು ಸತ್ರಯಾಗಮಾಡುತ್ತಿದ್ದ ನೈಮಿಷಾರಣ್ಯ ಕ್ಷೇತ್ರಕ್ಕೆ ಪ್ರಯಾಣಮಾಡಿದನು. ದೀರ್ಘಕಾಲಸತ್ರಯಾಗದ ಸಂಕಲ್ಪವನ್ನು ಮಾಡಿ ಕುಳಿತಿದ್ದ ಮಹರ್ಷಿಗಳು ಬಲರಾಮನು ಬಂದುದನ್ನು ನೋಡಿ ತಮ್ಮ ಆಸನಗಳಿಂದೆದ್ದು ಮುಂದೆ ಹೋಗಿ ಆತನನ್ನು ಸ್ವಾಗತಿಸಿ ಯಥಾಯೋಗ್ಯವಾಗಿ ಅಭಿನಂದಿಸಿ ಅವನನ್ನೂ ಮತ್ತು ಅವನ ಪರಿವಾರದವರನ್ನೂ ಸತ್ಕರಿಸಿದರು. ಸಪರಿವಾರನಾಗಿ ಸತ್ಕೃತನಾದ ಬಲರಾಮನು ಆಸನದಲ್ಲಿ ಕುಳಿತು, ವ್ಯಾಸಪೀಠದಲ್ಲಿ ಕುಳಿತಿದ್ದ, ಭಗವಾನ್ ವ್ಯಾಸರ ಶಿಷ್ಯನಾದ ರೋಮಹರ್ಷಣನನ್ನು ನೋಡಿದನು. ರೋಮಹರ್ಷಣನು ಸೂತಜಾತಿಯಲ್ಲಿ ಹುಟ್ಟಿದವನಾಗಿದ್ದರೂ ಬ್ರಾಹ್ಮಣರು ಕುಳಿತಿದ್ದುದಕ್ಕಿಂತಲೂ ಎತ್ತರವಾದ ಆಸನದಲ್ಲಿ ಕುಳಿತಿದ್ದುದನ್ನೂ, ತಾನು ಆಗಮಿಸಿದರೂ ಮೇಲೆದ್ದು ಅಭಿನಂದಿಸದೇ ಇದ್ದುದನ್ನೂ ಗಮನಿಸಿ ಬಲರಾಮನು ಕುಪಿತನಾಗಿ ಗುಡುಗಿದನು :

**ಕಸ್ಮಾದಸಾವಿಮಾನ್ವಿಪ್ರಾನಧ್ಯಾಸ್ತೇ ಪ್ರತಿಲೋಮಜಃ ।**
**ಧರ್ಮಪಾಲಾಂಸ್ತಥೈವಾಸ್ಮಾನ್ವಧಮರ್ಹತಿ ದುರ್ಮತಿಃ ॥೨೪॥**

"ಈ ರೋಮಹರ್ಷಣನು [1]ಪ್ರತಿಲೋಮಜಾತಿಯಲ್ಲಿ ಹುಟ್ಟಿದವನಾಗಿ

---

* ತ್ರಿತಕೂಪ : ತ್ರಿತನೆಂಬುವನು, ಮೋಸದಿಂದ ತನ್ನ ಗೋವುಗಳನ್ನು ಸಾಗಿಸಿಕೊಂಡು ಹೋದ ಏಕತ-ದ್ವಿತರೆಂಬ ಸಹೋದರರನ್ನು ಬೆನ್ನಟ್ಟುತ್ತಾ ದಾರಿಯಲ್ಲಿ ತೋಳದ ಭಯದಿಂದ ಬಾವಿಯಲ್ಲಿ ಬಿದ್ದು ದೈವಾನುಗ್ರಹದಿಂದ ಬದುಕಿಬಂದ ಕಾರಣ ಇದಕ್ಕೆ ತ್ರಿತಕೂಪವೆಂದು ಹೆಸರಾಯಿತು. ಈ ತೀರ್ಥವು ಸರಸ್ವತೀನದಿಯ ತೀರದಲ್ಲಿದೆ.

1 ಪ್ರತಿಲೋಮಜ : **ಕ್ಷತ್ರಿಯಾದ್ವಿಪ್ರಕನ್ಯಾಯಾಂ ಸೂತೋ ಭವತಿ ಜಾತಿತಃ ।**

ದ್ದರೂ ಈ ಶ್ರೇಷ್ಠರಾದ ಬ್ರಾಹ್ಮಣರು ಮತ್ತು ಧರ್ಮರಕ್ಷಕರಾದ ನಾವು ಕುಳಿತಿರುವುದಕ್ಕಿಂತಲೂ ಉನ್ನತವಾದ ಪೀಠದಲ್ಲಿ ಕುಳಿತಿರುತ್ತಾನೆ. ಆದು ದರಿಂದ ಇವನಿಗೆ ಮರಣದಂಡನೆಯನ್ನು ವಿಧಿಸುವುದೇ ಸಮುಚಿತವಾಗಿದೆ.

**ಋಷೇರ್ಭಗವತೋ ಭೂತ್ವಾ ಶಿಷ್ಯೋಽಧೀತ್ಯ ಬಹೂನಿ ಚ ।**
**ಸೇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥೨೫॥**

**ಅದಾನ್ತಸ್ಯಾವಿನೀತಸ್ಯ ವೃಥಾ ಪಣ್ಡಿತಮಾನಿನಃ ।**
**ನ ಗುಣಾಯ ಭವನ್ತಿ ಸ್ಮ ನಟಸ್ಯೇವಾಜಿತಾತ್ಮನಃ ॥೨೬॥**

**ಏತದರ್ಥೋ ಹಿ ಲೋಕೇಽಸ್ಮಿನ್ನವತಾರೋ ಮಯಾ ಕೃತಃ ।**
**ವಧ್ಯಾ ಮೇ ಧರ್ಮಧ್ವಜಿನಸ್ತೇ ಹಿ ಪಾತಕಿನೋಽಧಿಕಾಃ ॥೨೭॥**

ಈ ಮೂರ್ಖನು ಭಗವಾನ್ ವ್ಯಾಸಮಹರ್ಷಿಗಳ ಶಿಷ್ಯನಾಗಿ, ಅವರಿಂದ ಇತಿಹಾಸ-ಪುರಾಣಗಳನ್ನೂ ಧರ್ಮಶಾಸ್ತ್ರವೇ ಮೊದಲಾದ ಹಲ ವಾರು ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುತ್ತಾನೆ. ಆದರೆ ಇವನಿಗೆ ಮನಸ್ಸಿನ ಮೇಲೆ ಸಂಯಮವೇ ಇಲ್ಲದಾಗಿದೆ. ಕಲಿತಿರುವ ವಿದ್ಯೆಗೆ ಅನುಗುಣವಾಗಿ ಇವನಲ್ಲಿ ವಿನಯವೆಂಬುದೇ ಇಲ್ಲ. ತಾನೇ ಮಹಾಪಂಡಿತನೆಂದು ಭಾವಿಸಿ ಕೊಂಡುಬಿಟ್ಟಿದ್ದಾನೆ. ನಟನಾದವನ ಎಲ್ಲ ಚೇಷ್ಟೆಗಳೂ ಅಭಿನಯಮಾತ್ರ ವಾಗಿರುವಂತೆ ಇವನು ಮಾಡಿರುವ ಅಧ್ಯಯನವೆಲ್ಲವೂ ಕೇವಲ ತೋರಿಕೆಗೆ ಮಾತ್ರವಾಗಿದೆ. ಇದರಿಂದ ಇವನಿಗೂ ಯಾವ ಲಾಭವೂ ಇಲ್ಲ ; ಇತರರಿಗೂ ಯಾವ ಪ್ರಯೋಜನವೂ ಇಲ್ಲ. ಯಾರು ಧರ್ಮದ ಲಾಂಛನವನ್ನು ಧರಿಸಿ ಧರ್ಮದಪಾಲನೆಯನ್ನು ಮಾಡುವುದಿಲ್ಲವೋ ಅಂತಹವರು ಮಹಾ ಪಾಪಿಗಳೇ ಸರಿ. ಅಂತಹವರು ನನ್ನಿಂದ ವಧಿಸಲ್ಪಡಲು ಯೋಗ್ಯ ರಾಗಿರುತ್ತಾರೆ. ಈ ಜಗತ್ತಿನಲ್ಲಿ ಇಂತಹ ಧರ್ಮಧ್ವಜಿಗಳನ್ನು ಶಿಕ್ಷಿಸುವ ಸಲುವಾಗಿಯೇ ನಾನು ಅವತಾರವನ್ನೆತ್ತಿದ್ದೇನೆ."

ಹೀಗೆ ಹೇಳಿದನಂತರ ಭಗವಂತನಾದ ಬಲರಾಮನು–ತೀರ್ಥ ಯಾತ್ರೆಯ ಕಾರಣದಿಂದ ದುಷ್ಟರ ಸಂಹಾರವನ್ನು ನಿಲ್ಲಿಸಿಬಿಟ್ಟಿದ್ದರೂ

---

ಕ್ಷತ್ರಿಯನಿಂದ ಬ್ರಾಹ್ಮಣ ಸ್ತ್ರೀಯರಲ್ಲಿ ಹುಟ್ಟಿದವನು. ಜಾತಿತಃ ಸೂತನೆನಿಸಿಕೊಳ್ಳು ತ್ತಾನೆ.

ಪ್ರಕೃತಸಂದರ್ಭದಲ್ಲಿ ಅತ್ಯಂತಕುಪಿತನಾಗಿದ್ದು ದರ್ಭೆಯ ಅಗ್ರಭಾಗದಿಂದ ರೋಮಹರ್ಷಣನನ್ನು ಪ್ರಹರಿಸಿದನು. ಕೇವಲ ದರ್ಭಾಗ್ರದ ಪ್ರಹಾರದಿಂದಲೇ ಸೂತನು ಅಸುನೀಗಿದನು. **'ಭವಿತವ್ಯಂ ಭವತ್ಯೇವ ಯದ್ವಿಧೇರ್ಮನಸಿಸ್ಥಿತಮ್'**–ಎಂಬ ಹಿರಿಯರ ನುಡಿಯಂತೆ ವಿಧಿ ನಿಯಮದಂತೆ ಏನಾಗಬೇಕಾಗಿದ್ದಿತೋ ಅದು ಆಗಿಹೋಯಿತು. ರೋಮಹರ್ಷಣನು ಹತನಾದುದನ್ನು ಕಂಡು ಅಲ್ಲಿದ್ದ ಋಷಿಗಳೆಲ್ಲರೂ 'ಅಯ್ಯೋ! ಎಂತಹ ಅಪಚಾರವಾಗಿ ಹೋಯಿತು!'–ಎಂದು ಕೂಗಿ ಕೊಳ್ಳುತ್ತಾ ಖಿನ್ನಮನಸ್ಕರಾದರು ಮತ್ತು ಪ್ರಭುವಾದ ಬಲರಾಮನಿಗೆ ಹೇಳಿದರು : **'ಅಧರ್ಮಸ್ತೇ ಕೃತಃ ಪ್ರಭೋ ।'** ಪ್ರಭುವೇ! ನೀನು ಅಧರ್ಮವನ್ನು ಆಚರಿಸಿಬಿಟ್ಟೆ. ನೀನು ಧರ್ಮಬಾಹಿರವಾದ ಕಾರ್ಯವನ್ನು ಮಾಡಿಬಿಟ್ಟೆ.

**ಅಸ್ಯ ಬ್ರಹ್ಮಾಸನಂ ದತ್ತಮಸ್ಮಾಭಿರ್ಯದುನನ್ದನ ।**
**ಆಯುಶ್ಚಾತ್ಮಾಕ್ಲಮಂ ತಾವದ್ಯಾವತ್ಸತ್ರಂ ಸಮಾಪ್ಯತೇ ॥೩೦॥**

**ಅಜಾನತೈವಾಚರಿತಸ್ತ್ವಯಾ ಬ್ರಹ್ಮವಧೋ ಯಥಾ ।**
**ಯೋಗೇಶ್ವರಸ್ಯ ಭವತೋ ನಾಮ್ನಾಯೋಽಪಿ ನಿಯಾಮಕಃ ॥೩೧॥**

**ಯದ್ಯೇತದ್ಬ್ರಹ್ಮಹತ್ಯಾಯಾಃ ಪಾವನಂ ಲೋಕಪಾವನ ।**
**ಚರಿಷ್ಯತಿ ಭವಾನ್ಲೋಕಸಙ್ಗ್ರಹೋಽನನ್ಯಚೋದಿತಃ ॥೩೨॥**

ಯದುವಂಶಶಿರೋಮಣಿಯೇ! ರೋಮಹರ್ಷಣಸೂತನನ್ನು ಯಜ್ಞದಲ್ಲಿ ಪುರಾಣಹೇಳುವ ಬ್ರಹ್ಮನ ಆಸನದಲ್ಲಿ ನಾವೇ ಕುಳ್ಳಿರಿಸಿದ್ದೆವು. ನಾವು ಪ್ರಾರಂಭಿಸಿರುವ ಸತ್ರಯಾಗವು ಮುಗಿಯುವವರೆಗೂ ಈತನ ಶರೀರಕ್ಕೆ ಯಾವ ವಿಧವಾದ ತೊಂದರೆಯೂ ಆಗದಂತೆ ಆಯುರಾರೋಗ್ಯಗಳನ್ನು ಅನುಗ್ರಹಿಸಿದ್ದೆವು. ಈ ವಿಷಯವನ್ನು ತಿಳಿಯದ ನೀನು ಬ್ರಹ್ಮಹತ್ಯೆಗೆ ಸಮಾನವಾದ ಕಾರ್ಯವನ್ನು ಮಾಡಿಬಿಟ್ಟಿರುವೆ. ಯೋಗೇಶ್ವರನಾದ ನಿನ್ನ ಮೇಲೆ ವೇದಗಳು ಕೂಡ ವಿಧಿ-ನಿಷೇಧಗಳನ್ನು ಹೇರಲಾರವು–ಎಂಬ ವಿಷಯವನ್ನೂ ನಾವು ತಿಳಿದಿರುತ್ತೇವೆ. ಲೋಕವನ್ನು ಪವಿತ್ರಗೊಳಿಸುವ ಸಲುವಾಗಿಯೇ ನಿನ್ನ ಅವತಾರವಾಗಿದೆ. ಆದರೂ ನಮ್ಮದೊಂದು ಪ್ರಾರ್ಥನೆ

ಯಿದೆ. ಯಾರ ಪ್ರೇರಣೆಯೂ ಇಲ್ಲದೆ ಸ್ವೇಚ್ಛೆಯಿಂದಲೇ ನೀನು ಬ್ರಹ್ಮಹತ್ಯಾ ದೋಷಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡುದಾದರೆ ಅದು ಲೋಕಕ್ಕೇ ಒಂದು ಮಾದರಿಯಾಗಿರುತ್ತದೆ.''

ಭಗವಾನ್ ಬಲರಾಮನು ಹೇಳುತ್ತಾನೆ :

**ಕರಿಷ್ಯೇ ವಧನಿರ್ವೇಶಂ ಲೋಕಾನುಗ್ರಹಕಾಮ್ಯಯಾ ।**
**ನಿಯಮಃ ಪ್ರಥಮೇ ಕಲ್ಪೇ ಯಾವಾನ್ಸ ತು ವಿಧೀಯತಾಮ್ ॥**

``ಋಷಿ-ಮುನಿಗಳೇ! ನಾನು ಲೋಕಶಿಕ್ಷಣಕ್ಕಾಗಿ ಮತ್ತು ಲೋಕಾನುಗ್ರಹಕ್ಕಾಗಿ ಬ್ರಹ್ಮಹತ್ಯಾಪಾಪಕ್ಕೆ ಪ್ರಾಯಶ್ಚಿತ್ತವನ್ನು ಅವಶ್ಯವಾಗಿ ಮಾಡಿಕೊಳ್ಳುತ್ತೇನೆ. ಆದುದರಿಂದ ಪ್ರಥಮಶ್ರೇಣಿಯ ಯಾವ ಪ್ರಾಯಶ್ಚಿತ್ತವಿರುವುದೋ ಅದರ ವಿಧಿ-ವಿಧಾನಗಳನ್ನು ಹೇಳಿರಿ.

**ದೀರ್ಘಮಾಯುರ್ಬತೈತಸ್ಯ ಸತ್ತ್ವಮಿನ್ದ್ರಿಯಮೇವ ಚ ।**
**ಆಶಾಸಿತಂ ಯತ್ತದ್ಬ್ರೂತ ಸಾಧಯೇ ಯೋಗಮಾಯಯಾ ॥೩೪॥**

ನೀವು ಈ ರೋಮಹರ್ಷಣನಿಗೆ ಯಾವ ದೀರ್ಘಾಯುಷ್ಯವನ್ನೂ ಶರೀರಬಲವನ್ನೂ, ಇಂದ್ರಿಯಶಕ್ತಿಯನ್ನೂ ಕೊಡಬಯಸಿರುವಿರೋ ಅದನ್ನೂ ನನಗೆ ಹೇಳಿರಿ. ನನ್ನ ಯೋಗಮಾಯೆಯಿಂದ ಅವೆಲ್ಲವನ್ನೂ ಸಾಧಿಸಿಕೊಡುತ್ತೇನೆ.''

ಋಷಿಗಳು ಹೇಳುತ್ತಾರೆ :

**ಅಸ್ತ್ರಸ್ಯ ತವ ವೀರ್ಯಸ್ಯ ಮೃತ್ಯೋರಸ್ಮಾಕಮೇವ ಚ ।**
**ಯಥಾ ಭವೇದ್ವಚಃ ಸತ್ಯಂ ತಥಾ ರಾಮ ವಿಧೀಯತಾಮ್ ॥೩೫॥**

``ಬಲರಾಮ! ನೀನು ಬಿಟ್ಟ ದರ್ಭಾಸ್ತ್ರವೂ ವ್ಯರ್ಥವಾಗಬಾರದು. ನಿನ್ನ ವೀರ್ಯವೂ ವ್ಯರ್ಥವಾಗಬಾರದು. ಇವನ ಮರಣವೂ ವ್ಯರ್ಥವಾಗ ಬಾರದು. ನಾವು ಇವನಿಗೆ ಅನುಗ್ರಹಿಸಿಕೊಟ್ಟಿದ್ದ ವರದಾನವೂ ಸತ್ಯವಾಗಿ

ಪರಿಣಮಿಸಬೇಕು. ನಿನ್ನ ಯೋಗಮಾಯೆಯಿಂದ ಇದನ್ನು ಸಾಧಿಸಿಕೊಡು, ಪ್ರಭುವೇ!"

ಭಗವಂತನು ಹೇಳುತ್ತಾನೆ :

**ಆತ್ಮಾ ವೈ ಪುತ್ರ ಉತ್ಪನ್ನ ಇತಿ ವೇದಾನುಶಾಸನಮ್ ।**
**ತಸ್ಮಾದಸ್ಯ ಭವೇದ್ವಕ್ತಾ ಆಯುರಿನ್ದ್ರಿಯಸತ್ತ್ವವಾನ್ ॥೩೬॥**

**ಕಿಂ ವಃ ಕಾಮೋ ಮುನಿಶ್ರೇಷ್ಠಾ ಬ್ರೂತಾಹಂ ಕರವಾಣ್ಯಥ ।**

"ಮಹರ್ಷಿಗಳೇ! ತಾನೇ ಮಗನ ರೂಪದಲ್ಲಿ ಹುಟ್ಟುವನೆಂದು ವೇದವು ಹೇಳುತ್ತದೆ.* ಆದುದರಿಂದ ರೋಮಹರ್ಷಣನ ಸ್ಥಾನದಲ್ಲಿ ಅವನ ಮಗನು ಕುಳಿತು ನಿಮಗೆ ಪುರಾಣಗಳ ಶ್ರವಣ ಮಾಡಿಸುತ್ತಾನೆ. ಅವನು ನನ್ನ ಅನುಗ್ರಹದಿಂದ ದೀರ್ಘಾಯುಷ್ಮಂತನೂ, ಸತ್ತ್ವಶಾಲಿಯೂ, ಇಂದ್ರಿಯ ಪಟುತ್ವವುಳ್ಳವನೂ ಆಗುತ್ತಾನೆ. ಋಷಿವರ್ಯರೇ! ನಿಮಗೆ ಬೇರೇನಾದರೂ ಅಪೇಕ್ಷೆಯಿದ್ದರೆ ಹೇಳಿರಿ ; ಅದನ್ನೂ ಮಾಡಿಕೊಡುತ್ತೇನೆ. ತಿಳಿಯದೇ ಮಾಡಿರುವ ನನ್ನ ಈ ಅಪರಾಧಕ್ಕೆ ಪ್ರಾಯಶ್ಚಿತ್ತವೇನೆಂಬುದನ್ನು ಹೇಳಿರಿ. ನೀವೆಲ್ಲರೂ ವಿದ್ವಾಂಸರಾಗಿರುವಿರಿ. ನಿಮಗೆ ಈ ವಿಷಯವು ಚೆನ್ನಾಗಿ ತಿಳಿದಿದೆ."

ಋಷಿಗಳು ಹೇಳುತ್ತಾರೆ :

"ಬಲದೇವ! ಇಲ್ವಲನ ಮಗನಾದ ಬಲ್ವಲನೆಂಬ ಹೆಸರಿನ ಭಯಂಕರ ನಾದ ರಾಕ್ಷಸನಿದ್ದಾನೆ. ಅವನು ಪ್ರತಿಪರ್ವಗಳಲ್ಲಿಯೂ ಇಲ್ಲಿಗೆ ಆಗಮಿಸಿ ರಕ್ತ, ಕೀವು, ಅಮೇಧ್ಯ, ಮೂತ್ರ, ಮದ್ಯ, ಮಾಂಸಗಳನ್ನು ಯಜ್ಞವೇದಿಯ ಮೇಲೆ ಸುರಿಸುತ್ತಾ ನಾವು ಮಾಡುವ ಸತ್ರಯಾಗವನ್ನು ಕೆಡಿಸಿ ಹೋಗುತ್ತಾನೆ.

ದಾಶಾರ್ಹನೇ! ನೀನು ಆ ದುಷ್ಟರಾಕ್ಷಸನನ್ನು ಸಂಹರಿಸಬೇಕು. ಇದರಿಂದ ನೀನು ನಮಗೆ ಉತ್ತಮವಾದ ಸೇವೆಮಾಡಿದಂತಾಗುತ್ತದೆ. ಅನಂತರ ನೀನು ಏಕಾಗ್ರಚಿತ್ತನಾಗಿ ತೀರ್ಥಕ್ಷೇತ್ರಗಳಲ್ಲಿ ಸ್ನಾನಮಾಡುತ್ತಾ

---

* ಅಙ್ಗಾದಙ್ಗಾತ್ಸಮ್ಭವಸಿ ಹೃದಯಾದಧಿ ಜಾಯಸೇ ।
ಆತ್ಮಾ ವೈ ಪುತ್ರನಾಮಾಸಿ ಸಜೀವ ಶರದಃಶತಮ್ ॥

ಹನ್ನೆರಡು ಮಾಸಗಳವರೆಗೆ ಭಾರತಯಾತ್ರೆಯನ್ನು ಮಾಡಬೇಕು. ಇದರಿಂದಲೇ ನೀನು ಪಾಪಮುಕ್ತನಾಗಿ ಶುದ್ಧನಾಗುವೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತದಲ್ಲಿ ದಸಮಸ್ಕಂಧದ ೭೮ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೭೯ನೆಯ ಅಧ್ಯಾಯ

## ಬಲರಾಮನಿಂದ ಬಲ್ವಲನ ಸಂಹಾರ : ತೀರ್ಥಯಾತ್ರೆ

ಶ್ರೀಶುಕಮುನಿಗಳು ಹೇಳುತ್ತಾರೆ :

**ತತಃ ಪರ್ವಣ್ಯುಪಾವೃತ್ತೇ ಪ್ರಚಣ್ಡಃ ಪಾಂಸುವರ್ಷಣಃ ।**
**ಭೀಮೋ ವಾಯುರಭೂದ್ರಾಜನ್ ಪೂಯಗನ್ಧಸ್ತು ಸರ್ವಶಃ ॥೧॥**

"ಪರೀಕ್ಷಿತಮಹಾರಾಜ! ಪರ್ವದಿನವು ಹತ್ತಿರಬರುತ್ತಿದ್ದಂತೆಯೇ ಭಯಂಕರವಾದ ಗಾಳಿಯು ಬೀಸತೊಡಗಿತು. ಧೂಳಿನ ಮಳೆಯು ಸುರಿಯತೊಡಗಿತು. ಎಲ್ಲ ಕಡೆಗಳಿಂದಲೂ ಕೀವಿನ ದುರ್ಗಂಧವು ಹರಡುತ್ತಿದ್ದಿತು.

ಬಳಿಕ ಬಲ್ವಲರಾಕ್ಷಸನು ಋಷಿಗಳ ಯಜ್ಞಶಾಲೆಯ ಮೇಲೆ ಮೂತ್ರ-ಪುರಿಷವೇ ಮೊದಲಾದ ಅಪವಿತ್ರವಸ್ತುಗಳ ಮಳೆಯನ್ನು ಸುರಿಸತೊಡಗಿದನು. ಅನಂತರ ತ್ರಿಶೂಲಧರನಾಗಿ ಬಲ್ವಲರಾಕ್ಷಸನೇ ಕಾಣಿಸಿಕೊಂಡನು. ದೊಡ್ಡದಾದ ಶರೀರವನ್ನು ಹೊಂದಿದ್ದ, ಒಡೆದುಹೋದ ಕಾಡಿಗೆಯ ಉಂಡೆಯಂತೆ ಕಡುಗಪ್ಪಾಗಿದ್ದ, ಕಾಯಿಸಿದ ತಾಮ್ರದಂತೆ ಕೆಂಪಾದ ಗಡ್ಡ-ಮೀಸೆಗಳನ್ನು ಹೊಂದಿದ್ದ, ಕೋರೆದಾಡೆಗಳಿಂದಲೂ ಗಂಟಿಕ್ಕಿದ ಹುಬ್ಬುಗಳಿಂದಲೂ ಕೂಡಿ ಭಯಂಕರಮುಖನಾಗಿದ್ದ ಆ ಬಲ್ವಲರಾಕ್ಷಸನನ್ನು ಬಲರಾಮನು ನೋಡಿ–ಶತ್ರುಸೈನ್ಯಗಳನ್ನು ನಾಶಗೊಳಿಸುವ ಮುಸಲಾಯುಧವನ್ನೂ, ದೈತ್ಯರನ್ನು ಧ್ವಂಸಮಾಡಲು ಸಮರ್ಥವಾದ ಹಲಾಯುಧವನ್ನೂ ಸ್ಮರಿಸಿಕೊಂಡನು. ಸ್ಮರಿಸಿದ ಕ್ಷಣದಲ್ಲಿಯೇ ಆ ದಿವ್ಯಾಯುಧಗಳೆರಡೂ ಬಲರಾಮನ ಕೈಗಳನ್ನು ಅಲಂಕರಿಸಿದುವು. ಆ ಸಮಯದಲ್ಲಿ ಬಲರಾಮನು ಅತ್ಯಂತಕ್ರುದ್ಧನಾಗಿ ಬ್ರಾಹ್ಮಣದ್ರೋಹಿಯಾದ

ಆಕಾಶಚರನಾದ ಬಲ್ವಲರಾಕ್ಷಸನನ್ನು ಹಲಾಯುಧದಿಂದ ಸೆಳೆದುಕೊಂಡು ಮುಸಲಾಯುಧದಿಂದ ಅವನ ಶಿರಸ್ಸಿನಲ್ಲಿ ಪ್ರಹರಿಸಿದನು. ರಾಕ್ಷಸನು ಹಣೆ ಯೊಡೆದು ರಕ್ತವನ್ನು ಕಕ್ಕುತ್ತಾ ಗಟ್ಟಿಯಾಗಿ ಕೂಗಿಕೊಳ್ಳುತ್ತಾ–ವಜ್ರಾಘಾತದಿಂದ ಗೈರಿಕಾದಿ ಧಾತುಗಳಿಂದ ವ್ಯಾಪ್ತವಾಗಿ ಕೆಂಪಾಗಿ ಕಾಣುವ ಪರ್ವತವು ಕೆಳಕ್ಕೆ ಬೀಳುವಂತೆ–ಭೂಮಿಯ ಮೇಲೆ ಬಿದ್ದುಬಿಟ್ಟನು. ಮುನಿ ಗಳೆಲ್ಲರೂ ಬಲರಾಮನ ಈ ಸಾಹಸಕ್ಕಾಗಿ ಅವನನ್ನು ಬಗೆ-ಬಗೆಯಾಗಿ ಸ್ತುತಿಸಿ, ಅಮೋಘವಾದ ಆಶೀರ್ವಾದಗಳಿಂದ ಅವನನ್ನು ಹರಸಿದರು. ವೃತ್ರಾ ಸುರಹಂತಕನಾದ ಇಂದ್ರನನ್ನು ದೇವತೆಗಳು ಅಭಿಷೇಚಿಸಿದಂತೆಯೇ ಬಲ ರಾಮನನ್ನು ಋಷಿ-ಮುನಿಗಳು ವಿಧಿವತ್ತಾಗಿ ಅಭಿಷೇಚಿಸಿದರು. ವೃತ್ರಾಸುರನ ಸಂಹಾರವಾದನಂತರ ದೇವತೆಗಳು ಇಂದ್ರನಿಗೆ ಸಮರ್ಪಿಸಿದಂತೆಯೇ ಋಷಿ-ಮುನಿಗಳು ಬಲ್ವಲಸಂಹಾರಕನಾದ ಬಲರಾಮನಿಗೆ ಬಾಡದಿರುವ ಕಮಲಗಳಿಂದ ಕೂಡಿದ್ದ, ಕಾಂತಿಯುಕ್ತವಾಗಿದ್ದ ವೈಜಯಂತೀಮಾಲೆಯನ್ನೂ, ದಿವ್ಯವಾದ ವಸ್ತ್ರಗಳನ್ನೂ, ದಿವ್ಯಾಭರಣಗಳನ್ನೂ ಸಮರ್ಪಿಸಿದರು.

ಬಳಿಕ ಬಲರಾಮನು ನೈಮಿಷಾರಣ್ಯವಾಸಿಗಳಾದ ಋಷಿಗಳ ಅನುಮತಿಯನ್ನು ಪಡೆದು, ಅವರ ಆಜ್ಞಾನುಸಾರವಾಗಿ ಬ್ರಾಹ್ಮಣರೊಡನೆ ಕೌಶಿಕೀನದಿಯ ತೀರಕ್ಕೆ ಪ್ರಯಾಣಮಾಡಿದನು. ಪವಿತ್ರವಾದ ಆ ಕೌಶಿಕೀ ನದಿಯಲ್ಲಿ ಸ್ನಾನ-ತರ್ಪಣಾದಿಗಳನ್ನು ಮುಗಿಸಿಕೊಂಡು ಸರಯೂನದಿಯ ಮೂಲಸ್ಥಾನವಾದ ಮಾನಸಸರೋವರಕ್ಕೆ ಹೋದನು. ಮಾನಸಸರೋವರ ದಲ್ಲಿ ಸ್ನಾನ-ತರ್ಪಣಾದಿಗಳನ್ನು ಮುಗಿಸಿಕೊಂಡು ಸರಯೂನದಿಯ ತೀರ ದಲ್ಲಿಯೇ ಪ್ರಯಾಣಮಾಡುತ್ತಾ ಪ್ರಯಾಗಕ್ಷೇತ್ರಕ್ಕೆ ಆಗಮಿಸಿದನು. ಪ್ರಯಾಗತೀರ್ಥಕ್ಷೇತ್ರದಲ್ಲಿ ಸ್ನಾನಮಾಡಿ, ದೇವ-ಪಿತೃಗಳನ್ನು ಯಥಾ ವಿಧಿಯಾಗಿ ಸಂಪೂಜಿಸಿ ಅಲ್ಲಿಂದ ಮುಂದೆ ಬ್ರಾಹ್ಮಣರೊಡನೆ ಪುಲಹಾಶ್ರಮಕ್ಕೆ ಪ್ರಯಾಣಮಾಡಿದನು. ಅಲ್ಲಿಂದ ಮುಂದಕ್ಕೆ ಪ್ರಯಾಣ ಮಾಡುತ್ತಾ ಹಾದಿಯಲ್ಲಿ ಸಿಕ್ಕಿದ ಗಂಡಕೀ-ಗೋಮತೀ-ವಿಪಾಶಾ-ಶೋಣಾ ಎಂಬ ಪುಣ್ಯನದಿಗಳಲ್ಲಿ ಸ್ನಾನಮಾಡಿ, ತರ್ಪಣಾದಿಗಳನ್ನು ಮುಗಿಸಿ, ಮುಂದೆ ಗಯೆ ಎಂಬ ಪುಣ್ಯಕ್ಷೇತ್ರಕ್ಕೆ ಹೋಗಿ, ಅಲ್ಲಿ ಪಿತೃಗಳಿಗೆ ಶ್ರಾದ್ಧಮಾಡಿ ತರ್ಪಣಾದಿಗಳನ್ನಿತ್ತು ಮುಂದೆ ಪ್ರಯಾಣಮಾಡುತ್ತಾ

ಗಂಗಾ-ಸಾಗರಸಂಗಮಕ್ಕೆ ಹೋದನು. ಅಲ್ಲಿಯೂ ಕೂಡ ಪವಿತ್ರವಾದ ಸಂಗಮಸ್ಥಳದಲ್ಲಿ ಸ್ನಾನ-ತರ್ಪಣಾದಿಗಳನ್ನು ಮುಗಿಸಿಕೊಂಡು ಮಹೇಂದ್ರ ಪರ್ವತಕ್ಕೆ ಹೋಗಿ, ಅಲ್ಲಿ ಪರಶುರಾಮನನ್ನು ಸಂದರ್ಶಿಸಿ, ಅವನಿಗೆ ಅಭಿವಾದನ ಪೂರ್ವಕವಾಗಿ ನಮಸ್ಕರಿಸಿ ಆತನ ಆಶೀರ್ವಾದಾನುಮತಿಗಳನ್ನು ಪಡೆದು ಮುಂದೆ ಅನುಕ್ರಮವಾಗಿ ಸಪ್ತಗೋದಾವರೀ, ವೇಣಾ, ಪಂಪಾ ಸರೋವರ, ಭೀಮರಥೀ—ಇವೇ ಮುಂತಾದ ತೀರ್ಥಕ್ಷೇತ್ರಗಳಿಗೆ ಹೋಗಿ, ಯಥಾವಿಧಿಯಾಗಿ ಸ್ನಾನ-ತರ್ಪಣಾದಿಗಳನ್ನು ಮುಗಿಸಿ ಮುಂದೆ ಪ್ರಯಾಣ ಮಾಡುತ್ತಾ ಸ್ಕಂದಶೈಲಕ್ಕೆ ಹೋಗಿ ಕುಮಾರಸ್ವಾಮಿಯನ್ನು ಸಂದರ್ಶಿಸಿದ ಬಳಿಕ ಮಹಾದೇವನ ನಿವಾಸಸ್ಥಾನವಾದ ಶ್ರೀಶೈಲಕ್ಕೆ ಬ್ರಾಹ್ಮಣರೊಡನೆ ಪ್ರಯಾಣಮಾಡಿದನು. ಅಲ್ಲಿ ಮಲ್ಲಿಕಾರ್ಜುನಸ್ವಾಮಿಯನ್ನು ಸಂದರ್ಶಿಸಿ ಮುಂದೆ ಪ್ರಭುವಾದ ಬಲರಾಮನು ಬ್ರಾಹ್ಮಣರೊಡನೆ ದ್ರವಿಡದೇಶದಲ್ಲಿರುವ ಮಹಾಪುಣ್ಯಪ್ರದವಾದ ವೇಂಕಟಾದ್ರಿಕ್ಷೇತ್ರವನ್ನು ಸಂದರ್ಶಿಸಿದನು. ಅಲ್ಲಿಂದ ಮುಂದೆ ಪ್ರಯಾಣಮಾಡುತ್ತಾ ಕಾಮಕೋಷ್ಣೀಪುರ ಮತ್ತು ಕಾಂಚೀಪುರಗಳೆಂಬ ದಿವ್ಯಕ್ಷೇತ್ರಗಳನ್ನು ಸಂದರ್ಶಿಸಿ ನದಿಗಳಿಗೆಲ್ಲಾ ಶ್ರೇಷ್ಠವೆನಿಸಿದ ಕಾವೇರೀತೀರಕ್ಕೆ ಪ್ರಯಾಣಮಾಡಿದನು. ಆ ಮಹಾ ನದಿಯಲ್ಲಿ ಯಥಾವಿಧಿಯಾಗಿ ಸ್ನಾನ-ತರ್ಪಣಾದಿಗಳನ್ನು ಮುಗಿಸಿಕೊಂಡು ಮುಂದೆ ಮಹಾಪುಣ್ಯಪ್ರದವಾದ ಮತ್ತು ಶ್ರೀಹರಿಯ ಸಾಕ್ಷಾತ್ ಸಾನ್ನಿಧ್ಯ ವಿರುವ ಸುಪ್ರಸಿದ್ಧವಾದ ಶ್ರೀರಂಗವೆಂಬ ಹೆಸರಿನ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಿದನು. ಅಲ್ಲಿ ಶ್ರೀರಂಗನಾಥನನ್ನು ಸಂದರ್ಶಿಸಿ ಅಲ್ಲಿಂದ ಮುಂದೆ ಬ್ರಾಹ್ಮಣರೊಡನೆ ಶ್ರೀಹರಿಯ ಮತ್ತೊಂದು ಕ್ಷೇತ್ರವಾದ ಋಷಭಾ ದ್ರಿಗೆ ಪ್ರಯಾಣಮಾಡಿದನು. ಬಳಿಕ ಬಲರಾಮನು ದಕ್ಷಿಣಮಥುರಾ ಕ್ಷೇತ್ರಕ್ಕೆ ಪ್ರಯಾಣಮಾಡಿ ಮುಂದೆ ಮಹಾಮಹಾಪಾಪಗಳನ್ನೂ ನಿರಸನಗೊಳಿಸುವ ಶ್ರೀರಾಮಸೇತುವೆಂದು ಪ್ರಸಿದ್ಧವಾಗಿರುವ ದಕ್ಷಿಣಸಮುದ್ರದ ತೀರಕ್ಕೆ ಹೋದನು.

ಪರಮಪವಿತ್ರವಾದ ಸಮುದ್ರತೀರದಲ್ಲಿ ಬಲರಾಮನು ಬ್ರಾಹ್ಮಣರಿಗೆ ಹತ್ತು ಸಾವಿರ ಗೋವುಗಳನ್ನು ದಾನವಾಗಿಕೊಟ್ಟನು. ಪುನಃ ಬಲರಾಮನು ರಾಮಸೇತುವಿನಿಂದ ಮುಂದೆ ಪ್ರಯಾಣಮಾಡುತ್ತಾ ಕೃತಮಾಲಾ ಮತ್ತು

ತಾಮ್ರಪರ್ಣೀ ಎಂಬ ಪವಿತ್ರವಾದ ನದಿಗಳಲ್ಲಿ ಸ್ನಾನಮಾಡಿ ತರ್ಪಣಾದಿಗಳನ್ನಿತ್ತು ಏಳು ಕುಲ ಪರ್ವತಗಳಲ್ಲಿ ಒಂದಾಗಿರುವ ಮಲಯಪರ್ವತಕ್ಕೆ ಹೋದನು. ಅಲ್ಲಿದ್ದ ಆಶ್ರಮವೊಂದರಲ್ಲಿ ಸುಖಾಸೀನರಾಗಿದ್ದ ಅಗಸ್ತ್ಯ ಮಹರ್ಷಿಗಳಿಗೆ ಬಲರಾಮನು ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಅವರಿಂದ ಆಶೀರ್ವಾದವನ್ನೂ ಮತ್ತು ಅನುಮತಿಯನ್ನೂ ಪಡೆದು ದಕ್ಷಿಣ ಸಮುದ್ರದ ತೀರಕ್ಕೆ ಹೋದನು. ಅಲ್ಲಿ ಕನ್ಯಾಕುಮಾರೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದ ದುರ್ಗಾದೇವಿಯನ್ನು ಬಲರಾಮನು ಬ್ರಾಹ್ಮಣರೊಡನೆ ಸಂದರ್ಶಿಸಿದನು. ಅನಂತರ ಬಲರಾಮನು ಫಾಲ್ಗುನಕ್ಷೇತ್ರವಾದ ಅನಂತ ಶಯನಕ್ಕೆ ಹೋಗಿ ಪದ್ಮನಾಭಸ್ವಾಮಿಯ ದರ್ಶನ ಮಾಡಿಕೊಂಡು ಮುಂದೆ, ಸರ್ವದಾ ಭಗವಂತನಾದ ವಿಷ್ಣುವಿನ ಸಾನ್ನಿಧ್ಯವಿರುವ ಪಂಚಾಪ್ಸರಸ ಸರೋವರಕ್ಕೆ ಹೋಗಿ ಅಲ್ಲಿ ಯಥಾವಿಧಿಯಾಗಿ ಸ್ನಾನ-ತರ್ಪಣಾದಿಗಳನ್ನು ಮಾಡಿಕೊಂಡು ಆ ಪುಣ್ಯಕ್ಷೇತ್ರದಲ್ಲಿ ಹತ್ತುಸಾವಿರ ಗೋವುಗಳನ್ನು ಬಲರಾಮನು ಬ್ರಾಹ್ಮಣರಿಗೆ ದಾನಮಾಡಿದನು. ಬಳಿಕ ಬಲರಾಮನು ಬ್ರಾಹ್ಮಣರೊಡನೆ ಕೇರಳ ದೇಶಗಳನ್ನೂ ತ್ರಿಗರ್ತದೇಶಗಳನ್ನೂ ದಾಟಿ ಸರ್ವದಾ ಶ್ರೀಶಂಕರನ ದಿವ್ಯಸಾಂನಿಧ್ಯವಿರುವ ಗೋಕರ್ಣಕ್ಷೇತ್ರಕ್ಕೆ ಹೋದನು. ಅಲ್ಲಿ ಗೋಕರ್ಣೇಶ್ವರನನ್ನೂ ದ್ವೈಪಾಯಿನೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದ ಅಂಬಿಕಾದೇವಿಯನ್ನೂ ಸಂದರ್ಶಿಸಿ ಮುಂದೆ ಶೂರ್ಪಾರಕಕ್ಷೇತ್ರಕ್ಕೆ ಹೋದನು. ಅಲ್ಲಿ ವಾಪೀ, ಪಯೋಷ್ಣೀ ಮತ್ತು ನಿರ್ವಿಂಧ್ಯಾ ಎಂಬ ಹೆಸರಿನ ಪುಣ್ಯನದಿಗಳಲ್ಲಿ ಸ್ನಾನಮಾಡಿ ಯಥಾವಿಧಿಯಾಗಿ ತರ್ಪಣಾದಿಗಳನ್ನು ಮಾಡಿ ದಂಡಕಾರಣ್ಯಕ್ಕೆ ತೆರಳಿದನು. ಮುಂದೆ ಪ್ರಯಾಣಮಾಡುತ್ತಾ ಬಲರಾಮನು ನರ್ಮದಾನದಿಯ ತೀರಕ್ಕೆ ಹೋದನು. ಪವಿತ್ರವಾದ ಆ ನದಿಯ ತೀರದಲ್ಲಿಯೇ ಮಾಹಿಷ್ಮತೀ ಎಂಬ ಪಟ್ಟಣವಿದೆ. ಬಲರಾಮನು ಪವಿತ್ರವಾದ ಆ ರೇವಾನದಿಯಲ್ಲಿ ಮಿಂದು ಮುಂದೆ ಹೋಗಿ ಮನುತೀರ್ಥದಲ್ಲಿ ಸ್ನಾನಮಾಡಿ ಪುನಃ ಪ್ರಭಾಸಕ್ಷೇತ್ರಕ್ಕೆ ಹಿಂದಿರುಗಿದನು. ಕೌರವರಿಗೂ ಮತ್ತು ಪಾಂಡವರಿಗೂ ನಡೆದ ಯುದ್ಧದಲ್ಲಿ ಅಸಂಖ್ಯಾತರಾದ ಕ್ಷತ್ರಿಯವೀರರು ಮರಣಹೊಂದಿದರೆಂಬ ವಾರ್ತೆಯು ಬ್ರಾಹ್ಮಣರ ಮೂಲಕವಾಗಿ ಬಲರಾಮನಿಗೆ ತಿಳಿಯಿತು. ಇದರಿಂದಾಗಿ ಭೂಭಾರವು ಕಡಿಮೆಯಾಯಿ

ತೆಂದು ಬಲರಾಮನು ಭಾವಿಸಿಕೊಂಡನು. ಭೀಮ-ದುರ್ಯೋಧನರ ನಡುವೆ ಗದಾಯುದ್ಧವು ನಡೆಯುತ್ತಿದ್ದ ದಿವಸಕ್ಕೆ ಸರಿಯಾಗಿ ಅದನ್ನು ತಡೆಯಬೇಕೆಂಬ ಆಶಯದಿಂದ ಬಲರಾಮನು ಕುರುಕ್ಷೇತ್ರಕ್ಕೆ ಹೋದನು. ಬಲರಾಮನನ್ನು ಕಂಡೊಡನೆಯೇ ಯುಧಿಷ್ಠಿರ, ನಕುಲ-ಸಹದೇವರೂ ಕೃಷ್ಣಾರ್ಜುನರೂ ಬಲರಾಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದರು. ಆದರೆ ಅವನೊಡನೆ ಯುಧಿಷ್ಠಿರಾದಿಗಳು ಯಾವ ಮಾತನ್ನೂ ಆಡಲಿಲ್ಲ. ಬಲರಾಮನು ಏನು ಹೇಳಲು ಬಂದಿರುವನೋ ಎಂದು ಅವರೆಲ್ಲರೂ ಯೋಚಿಸುತ್ತಿದ್ದರು.

ಆ ಸಮಯದಲ್ಲಿ ದುರ್ಯೋಧನ-ಭೀಮಸೇನರಿಬ್ಬರೂ ಕೈಗಳಲ್ಲಿ ಗದೆಗಳನ್ನು ಹಿಡಿದು ಕ್ರೋಧಾಭಿಭೂತರಾಗಿ ಒಬ್ಬನು ಮತ್ತೊಬ್ಬನನ್ನು ಜಯಿಸಬೇಕೆಂಬ ಆಶಯದಿಂದ ಮಂಡಲಾಕಾರವಾಗಿ ವಿಚಿತ್ರವಾದ ಹೆಜ್ಜೆಗಳನ್ನಿಡುತ್ತಾ ಗದೆಗಳನ್ನು ಬೀಸುತ್ತಿದ್ದರು. ಆ ಸಮಯದಲ್ಲಿ ಬಲರಾಮನು ಭೀಮ-ದುರ್ಯೋಧನರನ್ನು ಕುರಿತು ಹೇಳಿದನು :

**ಯುವಾಂ ತುಲ್ಯಬಲೌ ವೀರೌ ಹೇ ರಾಜನ್ ಹೇ ವೃಕೋದರ ।**
**ಏಕಂ ಪ್ರಾಣಾಧಿಕಂ ಮನ್ಯೇ ಉತೈಕಂ ಶಿಕ್ಷಯಾಧಿಕಮ್ ॥೨೬॥**

**ತಸ್ಮಾದೇಕತರಸ್ಯೇಹ ಯುವಯೋಃ ಸಮವೀರ್ಯಯೋಃ ।**
**ನ ಲಕ್ಷ್ಯತೇ ಜಯೋಽನ್ಯೋ ವಾ ವಿರಮತ್ವಫಲೋ ರಣಃ ॥೨೭॥**

“ಭೀಮ-ದುರ್ಯೋಧನರೇ! ನೀವಿಬ್ಬರೂ ಮಹಾವೀರರಾಗಿರುವಿರಿ. ನಿಮ್ಮಲ್ಲಿ ಬಲ-ಪೌರುಷಗಳು ಸಮಾನವಾಗಿವೆ. ನಿಮ್ಮಲ್ಲೊಬ್ಬನು ಬಲದಲ್ಲಿ ಅಧಿಕನಾಗಿದ್ದಾನೆ. ಮತ್ತೊಬ್ಬನು ಶಿಕ್ಷಣದಲ್ಲಿ ಅಧಿಕನಾಗಿದ್ದಾನೆ. ಗದಾಯುದ್ಧದಲ್ಲಿ ವಿಶೇಷವಾದ ಪಾಂಡಿತ್ಯವನ್ನು ಪಡೆದಿರುತ್ತಾನೆ. ಈ ಕಾರಣದಿಂದ ಸಮಾನವೀರ್ಯರಾಗಿರುವ ನಿಮ್ಮಲ್ಲಿ ಜಯಾಪಜಯಗಳ ನಿರ್ಣಯವು ಸಾಧ್ಯವಾಗದೆಂಬುದು ನನ್ನ ಅಭಿಪ್ರಾಯವಾಗಿದೆ. ನಿಮ್ಮ ದ್ವಂದ್ವಯುದ್ಧವು ಯಾವ ವಿಧವಾದ ಫಲವನ್ನೂ ಕೊಡುವುದಿಲ್ಲ. ನಿಷ್ಫಲವಾಗುತ್ತದೆ. ಆದುದರಿಂದ ನೀವೀಗಲೇ ಯುದ್ಧವನ್ನು ನಿಲ್ಲಿಸಿರಿ.”

ಪರೀಕ್ಷಿತಮಹಾರಾಜ! ಬದ್ಧವೈರಿಗಳಾಗಿದ್ದ ಅವರಿಬ್ಬರೂ,

ಇಬ್ಬರಿಗೂ ಹಿತಕರವಾಗಿದ್ದ ಬಲರಾಮನ ಮಾತನ್ನು ಪುರಸ್ಕರಿಸಲಿಲ್ಲ. ಹಿಂದೆ ಪರಸ್ಪರವಾಗಿ ಆಡಿದ್ದ ಕೆಟ್ಟಮಾತುಗಳನ್ನೂ ಮತ್ತು ದುಷ್ಕೃತ್ಯಗಳನ್ನೂ ಸ್ಮರಿಸುತ್ತಾ ಅವರಿಬ್ಬರೂ ಯುದ್ಧೋನ್ಮತ್ತರಾಗಿಯೇ ಇದ್ದರು. ಇದನ್ನು ಗಮನಿಸಿದ ಬಲರಾಮನು **ಲಲಾಟಲಿಖಿತಾ ರೇಖಾಪರಿಮಾರ್ಷ್ಟುಂ ನ ಶಕ್ಯತೇ ।** ಹಣೆಯಬರಹವನ್ನು, ವಿಧಿವಿಹಿತವಾದುದನ್ನು ಯಾರಿಂದಲೂ ವ್ಯತ್ಯಾಸಗೊಳಿಸಲು ಸಾಧ್ಯವಾಗದೆಂದು ನಿಶ್ಚಯಿಸಿ ದ್ವಾರಕೆಗೆ ಪ್ರಯಾಣ ಮಾಡಿದನು. ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಬಂದ ಬಲರಾಮನನ್ನು ಉಗ್ರಸೇನನೇ ಮೊದಲಾದ ಗುರುಜನರೂ ಜ್ಞಾತಿಬಾಂಧವರೂ ಪ್ರೀತ್ಯಾದರಗಳಿಂದ ಸ್ವಾಗತಿಸಿದರು. ಸ್ವಲ್ಪಕಾಲ ಬಂಧುಗಳೊಡನೆ ಸುಖ ವಾಗಿದ್ದ ಬಲರಾಮನು ಪುನಃ ನೈಮಿಷಾರಣ್ಯಕ್ಕೆ ಹೋದನು. ಯುದ್ಧವೇ ಮೊದಲಾದ ಸಮಸ್ತವ್ಯವಹಾರಗಳನ್ನೂ ತ್ಯಜಿಸಿ ಬಂದಿದ್ದ ಯಜ್ಞಾಂಗನೇ ಆಗಿದ್ದ ಬಲರಾಮನಿಂದ ನೈಮಿಷಾರಣ್ಯವಾಸಿಗಳಾದ ಋಷಿಗಳು ಅನೇಕ ವಿಧವಾದ ಯಜ್ಞಗಳನ್ನು ಮಾಡಿಸಿದರು. ಬಳಿಕ ಸರ್ವಸಮರ್ಥನಾದ ಭಗವಾನ್ ಬಲರಾಮನು ನೈಮಿಷಾರಣ್ಯವಾಸಿಗಳಾದ ಋಷಿ-ಮುನಿಗಳಿಗೆ ವಿಶುದ್ಧವಾದ ತತ್ತ್ವಜ್ಞಾನವನ್ನು ಉಪದೇಶಿಸಿದನು. ಇದರ ಪರಿಣಾಮವಾಗಿ ಅವರು ವಿಶ್ವವೆಲ್ಲವೂ ತಮ್ಮಲ್ಲಿಯೇ ಇರುವುದೆಂಬ ಮತ್ತು ವಿಶ್ವವೆಲ್ಲವನ್ನೂ ತಾವು ವ್ಯಾಪಿಸಿಕೊಂಡಿರುವೆವೆಂಬ ಅನುಭವವನ್ನು ಪಡೆದುಕೊಂಡರು. ಬಳಿಕ ಬಲರಾಮನು ತನ್ನ ಪತ್ನಿಯಾದ ರೇವತೀದೇವಿಯೊಡನೆ ಯಜ್ಞಾಂತ ವಾದ ಅವಭೃಥಸ್ನಾನವನ್ನು ಮಾಡಿ ಸುಂದರವಾದ ವಸ್ತ್ರಾಭರಣಗಳನ್ನು ಧರಿಸಿ ಜ್ಞಾತಿಗಳಿಂದಲೂ, ಬಂಧುಗಳಿಂದಲೂ, ಸುಹೃದರಿಂದಲೂ ಸಮಾವೃತನಾಗಿ ಬೆಳದಿಂಗಳಿನಿಂದಲೂ ಮತ್ತು ನಕ್ಷತ್ರಗಳಿಂದಲೂ ಸಮಾವೃತನಾದ ಚಂದ್ರನಂತೆ ರಾರಾಜಿಸಿದನು.

ಪರೀಕ್ಷಿತಮಹಾರಾಜ! ಬಲಶಾಲಿಯಾದ, ಅನಂತನಾದ, ಅಪ್ರ ಮೇಯನಾದ, ಮಾಯಾಮಾನುಷವಿಗ್ರಹನಾದ ಬಲರಾಮನ ಇಂತಹುದೇ ಕಥೆಗಳು ಅಸಂಖ್ಯಾತವಾಗಿವೆ.

**ಯೋಽನುಸ್ಮರೇತ ರಾಮಸ್ಯ ಕರ್ಮಾಣ್ಯದ್ಭುತಕರ್ಮಣಃ ।**
**ಸಾಯಂ ಪ್ರಾತರನನ್ತಸ್ಯ ವಿಷ್ಣೋಃ ಸ ದಯಿತೋ ಭವೇತ್ ॥೩೪॥**

ಅದ್ಭುತಕರ್ಮನಾದ, ಅಂತರಹಿತನಾದ, ಸರ್ವವ್ಯಾಪಕನಾದ ಬಲರಾಮನ ಅದ್ಭುತಕರ್ಮಗಳನ್ನು ಯಾವನು ಸಾಯಂಕಾಲ-ಪ್ರಾತಃ ಕಾಲಗಳಲ್ಲಿ ಸ್ಮರಿಸುವನೋ ಆತನು ವಿಷ್ಣುವಿಗೆ ಪರಮಪ್ರಿಯನಾಗುತ್ತಾನೆ. ಬಲರಾಮನ ಸ್ಮರಣೆಯಿಂದ ವಿಷ್ಣುವು ಸುಪ್ರೀತನಾಗುತ್ತಾನೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ದಶಮಸ್ಕಂಧದ ೭೯ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೮೦ನೆಯ ಅಧ್ಯಾಯ

## ಕುಚೇಲನ ಕಥೆ

ಪರೀಕ್ಷಿತಮಹಾರಾಜನು ಪ್ರಶ್ನಿಸುತ್ತಾನೆ :

**ಭಗವನ್ ಯಾನಿ ಚಾನ್ಯಾನಿ ಮುಕುನ್ದಸ್ಯ ಮಹಾತ್ಮನಃ ।**
**ವೀರ್ಯಾಣ್ಯನನ್ತವೀರ್ಯಸ್ಯ ಶ್ರೋತುಮಿಚ್ಛಾಮಹೇ ಪ್ರಭೋ ॥೧॥**

"ಪೂಜ್ಯರೇ! ಅನಂತವೀರ್ಯನಾದ, ಮಹಾತ್ಮನಾದ, ಮುಕುಂದನ ಇದುವರೆಗೂ ಹೇಳದಿರುವ ಇತರ ಸಾಹಸಕಾರ್ಯಗಳು ಯಾವುಗಳಿವೆಯೋ ಅವೆಲ್ಲವನ್ನೂ ಅನುಕ್ರಮವಾಗಿ ತಮ್ಮಿಂದ ಕೇಳಲು ಬಯಸಿದ್ದೇವೆ.

**ಕೋ ನು ಶ್ರುತ್ವಾಸಕೃದ್ಬ್ರಹ್ಮನ್ನುತ್ತಮಶ್ಲೋಕಸತ್ಕಥಾಃ ।**
**ವಿರಮೇತ ವಿಶೇಷಜ್ಞೋ ವಿಷಣ್ಣಃ ಕಾಮಮಾರ್ಗಣೈಃ ॥೨॥**

ಬ್ರಾಹ್ಮಣೋತ್ತಮರೇ! ಕಾಮನ ಬಾಣಗಳಿಂದ ಸದಾಪೀಡಿಸಲ್ಪಡು ತ್ತಿದ್ದು ನೊಂದಹೃದಯನಾಗಿರುವ ಮತ್ತು ಜೀವನದ ಸಾರವೇನೆಂಬುದನ್ನು ಚೆನ್ನಾಗಿ ತಿಳಿದಿರುವ ಯಾವನು ತಾನೇ ಪವಿತ್ರಕೀರ್ತಿಯಾದ ಶ್ರೀಕೃಷ್ಣನ ಮಂಗಳಮಯವಾದ ಸತ್ಕಥೆಗಳನ್ನು ಹಲವಾರುಬಾರಿ ಕೇಳಿದರೂ ತೃಪ್ತ ನಾದಾನು? ಆ ಕಥಾಮೃತಪಾನವು ಸಾಕೆಂದು ಹೇಳಿಯಾನು?

**ಸಾ ವಾಗ್ಯಯಾ ತಸ್ಯ ಗುಣಾನ್ಗೃಣೀತೇ**
**ಕರೌ ಚ ತತ್ಕರ್ಮಕರೌ ಮನಶ್ಚ ।**

ಸ್ಮರೇದ್ವಸನ್ತಂ ಸ್ಥಿರಜಙ್ಗಮೇಷು
ಶೃಣೋತಿ ತತ್ಪುಣ್ಯಕಥಾಃ ಸ ಕರ್ಣಃ ॥೩॥

ಯಾವುದರಿಂದ ಪರಾತ್ಪರನಾದ ಶ್ರೀಕೃಷ್ಣಭಗವಂತನ ಅನಂತವಾದ ಗುಣಗಳು ಮತ್ತು ಲೀಲೆಗಳು ಗಾನಮಾಡಲ್ಪಡುವುದೋ ಅದಕ್ಕೆ 'ವಾಕ್'-ಎಂದು ಹೆಸರು. ಮಾತಿಗೆ ಸಾರ್ಥಕ್ಯವುಂಟಾಗುವುದು ಭಗವಂತನ ಕೀರ್ತನೆಯಿಂದ ಮಾತ್ರ. ಅಂತೆಯೇ ಸದಾಕಾಲದಲ್ಲಿಯೂ ಭಗವಂತನ ಮತ್ತು ಭಗವದ್ಭಕ್ತರ ಸೇವೆಮಾಡತಕ್ಕುವೇ ಕೈಗಳು. ಕೈಗಳಿಗೆ ಸಾರ್ಥಕ್ಯತೆ ಭಗವಂತನ ಮತ್ತು ಭಾಗವತರ ಸೇವೆಮಾಡುವುದರಿಂದ ಮಾತ್ರವೇ. ಮನಸ್ಸಿರುವುದೂ ಭಗವಂತನ ಧ್ಯಾನಮಾಡುವುದಕ್ಕಾಗಿಯೇ. ಭಗವಂತನು ಮನುಷ್ಯನಿಗೆ ಮನಸ್ಸನ್ನು ಅನುಗ್ರಹಿಸಿರುವುದೇ ಅವನನ್ನು ಚಿಂತಿಸಲೆಂದು. ಭಗವಧ್ಯಾನದಿಂದಲೇ ಮನಸ್ಸಿಗೆ ಸಾರ್ಥಕ್ಯತೆ. ಚರಾಚರ ವಸ್ತುಗಳಲ್ಲಿಯೂ ಪ್ರತಿಷ್ಠಿತನಾಗಿರುವ ಭಗವಂತನನ್ನು ಸದಾಕಾಲದಲ್ಲಿಯೂ ಸ್ಮರಿಸುವುದೇ ಮನಸ್ಸಿನ ಕರ್ತವ್ಯವಾಗಿದೆ. ಉತ್ತಮಶ್ಲೋಕನಾದ ಶ್ರೀಕೃಷ್ಣನ ಪುಣ್ಯತಮವಾದ ಕಥಾಪ್ರಸಂಗಗಳನ್ನು ಅನವರತವಾಗಿ ಕೇಳುವುದರಿಂದಲೇ ಕಿವಿಯ ಸಾರ್ಥಕ್ಯ. ಕೇಳುವ ಶಕ್ತಿಯನ್ನು ಅನುಗ್ರಹಿಸಿರುವ ಆ ಭಗವಂತನ ಕಥಾಮೃತವನ್ನು ಸದಾಕಾಲದಲ್ಲಿಯೂ ಕೇಳುತ್ತಲೇ ಇರಬೇಕು.

ಶಿರಸ್ತು ತಸ್ಯೋಭಯಲಿಙ್ಗಮಾನಮೇ-
ತ್ತದೇವ ಯತ್ಪಶ್ಯತಿ ತದ್ಧಿ ಚಕ್ಷುಃ ।
ಅಙ್ಗಾನಿ ವಿಷ್ಣೋರಥ ತಜ್ಜನಾನಾಂ
ಪಾದೋದಕಂ ಯಾನಿ ಭಜನ್ತಿ ನಿತ್ಯಮ್ ॥೪॥

ಚರಾಚರವಸ್ತುಗಳಲ್ಲಿ ಭಗವಂತನ ಇರುವಿಕೆಯನ್ನು ಗುರುತಿಸಿ ಯಾವುದು ನಮಸ್ಕರಿಸುವುದೋ ಅದೇ ಶಿರಸ್ಸು. ನಾನಾವಿಭೂತಿಗಳ ರೂಪದಲ್ಲಿರುವ ಭಗವಂತನನ್ನು ಗುರುತಿಸಿ ನಮಸ್ಕರಿಸುವುದೇ ಶಿರಸ್ಸಿನ ಸಾರ್ಥಕ್ಯತೆ. ಭಗವಂತನ ಮತ್ತು ಭಗವದ್ವಿಭೂತಿಗಳ ದಿವ್ಯವಿಗ್ರಹಗಳನ್ನು ಯಾವುದು ನೋಡುವುದೋ ಅದೇ ನಿಜವಾದ ಕಣ್ಣು. ದಿವ್ಯಮಂಗಳ ವಿಗ್ರಹ

ಗಳನ್ನು ಕಣ್ತುಂಬಾ ನೋಡಿ ಆನಂದಿಸುವುದರಿಂದಲೇ ಕಣ್ಣುಗಳ ಸಾರ್ಥಕ್ಯತೆ. ಭಗವಂತನ ಮತ್ತು ಭಗವದ್ಭಕ್ತರ ಪಾದೋದಕದ ಸೇವೆಯನ್ನು ಅನುದಿನವೂ ಮಾಡುವುದೇ ನಿಜವಾದ ಶರೀರ. ಭಗವಂತನ ಮತ್ತು ಭಗವದ್ಭಕ್ತರ ಅಮೃತಪ್ರಾಯವಾದ ಪಾದೋದಕವನ್ನು ಪ್ರಾಶನಮಾಡುವುದರಿಂದಲೇ ನಾವು ಹೊಂದಿರುವ ಶರೀರದ ಸಾರ್ಥಕ್ಯತೆ. ಆದುದರಿಂದ ಅಂತಹ ಪರಮಕಾರುಣಿಕನಾದ ಭಗವಂತನ ಮತ್ತು ಭಗವದ್ಭಕ್ತರ ಕಥಾಮೃತಗಳನ್ನು ನನಗೆ ಹೇಳಿರಿ."

ಸೂತರು ಹೇಳುತ್ತಾರೆ :

"ಶೌನಕಾದಿ ಮಹರ್ಷಿಗಳೇ! ಪರೀಕ್ಷಿತಮಹಾರಾಜನು ಈ ಪ್ರಕಾರ ವಾಗಿ ಕೇಳುತ್ತಲೇ ಪೂಜ್ಯರಾದ, ಭಕ್ತ ಶಿರೋಮಣಿಗಳಾದ ಶುಕಮುನಿಗಳ ಮನಸ್ಸು ಶ್ರೀಕೃಷ್ಣನಲ್ಲಿ ಲೀನವಾಗಿಬಿಟ್ಟಿತು. ಹಲವಾರು ಕ್ಷಣಗಳು ಕಳೆದನಂತರ ಅಂತರಂಗದಲ್ಲಾದ ಶ್ರೀಕೃಷ್ಣನ ದಿವ್ಯದರ್ಶನದ ಆನಂದವನ್ನು ಮುಖಾರವಿಂದದಿಂದ ಹೊರಸೂಸುತ್ತಾ ಪ್ರಣವಪೂರ್ವಕವಾಗಿ ಶುಕಮುನಿಗಳು ಪರೀಕ್ಷಿತಮಹಾರಾಜನಿಗೆ ಹೇಳಿದರು :

"ಪರೀಕ್ಷಿತಮಹಾರಾಜ! ಶ್ರೀಕೃಷ್ಣನಿಗೆ ಪರಮಮಿತ್ರನಾದ ಬ್ರಾಹ್ಮಣನೊಬ್ಬನಿದ್ದನು. ಅವನು ಮಹಾಬ್ರಹ್ಮಜ್ಞಾನಿಯಾಗಿದ್ದನು. ವಿಷಯ ಸುಖಗಳಿಂದ ವಿರಕ್ತನಾಗಿದ್ದನು. ಶಾಂತಮನಸ್ಕನೂ, ಜಿತೇಂದ್ರಿಯನೂ ಆಗಿದ್ದನು. ಗೃಹಸ್ಥನಾದನಂತರವೂ ಅವನು ಸಂಗ್ರಹ-ಪ್ರತಿಗ್ರಹಗಳನ್ನು ಮಾಡುತ್ತಿರಲಿಲ್ಲ. ಯದೃಚ್ಛಾಲಾಭಸಂತುಷ್ಟನಾಗಿ ಇದ್ದುಬಿಡುತ್ತಿದ್ದನು. ಅವನಿಗೆ ಉಡಲು ಸರಿಯಾದ ವಸ್ತ್ರಗಳೂ ಇರಲಿಲ್ಲ. ಹೆಸರಿಗೆ ತಕ್ಕಂತೆ ಕುಚೇಲನಾಗಿಯೇ ಇದ್ದನು. ಕುಚೇಲನ ಪತ್ನಿಗೂ ಉಡಲು-ತೊಡಲು ಸರಿಯಾದ ವಸ್ತ್ರಗಳಿರಲಿಲ್ಲ. ಹಸಿದು-ಹಸಿದು ಹೊಟ್ಟೆಗಿಲ್ಲದೆ ನರಪೇತಲಳಾಗಿಬಿಟ್ಟಿದ್ದಳು. ಆದರೆ ಅವಳು ಮಹಾಪತಿವ್ರತೆ. ಗಂಡನಿಗೆ ಮನನೋಯುವಂತೆ ಯಾವತ್ತೂ ಯಾವ ಮಾತನ್ನೂ ಆಡಿದವಳಲ್ಲ. ದಾರಿದ್ರ್ಯದಿಂದ ಬಹಳವಾಗಿ ಕಷ್ಟಪಡುತ್ತಿದ್ದ ಅವಳು ಒಮ್ಮೆ ಭೀತ-ಭೀತ ಳಾಗಿಯೇ ಪತಿಯ ಬಳಿಗೆ ಹೋಗಿ ಹೇಳಿದಳು :

"ಬ್ರಾಹ್ಮಣೋತ್ತಮನೇ! ಸಾಕ್ಷಾತ್ ಲಕ್ಷ್ಮಿಗೆ ಪತಿಯಾದ ಶ್ರೀಕೃಷ್ಣನು ನಿನ್ನ ಪರಮಸ್ನೇಹಿತನಲ್ಲವೇ? ಸಾತ್ವತಶ್ರೇಷ್ಠನಾದ ಭಗವಾನ್ ಶ್ರೀಕೃಷ್ಣನು ಬ್ರಾಹ್ಮಣಪ್ರಿಯನು, ಶರಣಾಗತವತ್ಸಲನು ಮತ್ತು ಸತ್ಪುರುಷರಿಗೆ ಪರಮಾಶ್ರಯನು. ಭಗವಂತನಾದ ಶ್ರೀಕೃಷ್ಣನ ಸಖ್ಯದಿಂದಾಗಿ ಪರಮಭಾಗ್ಯಶಾಲಿಯಾಗಿರುವ ಸ್ವಾಮಿಯೇ! ಅವನ ಬಳಿಗೆ ಈಗಲೇ ಹೋಗು. ಕೌಟುಂಬಿಕಜೀವನದಲ್ಲಿ ಅನ್ನ-ಬಟ್ಟೆಗಳಿಗಾಗಿ ಬಹಳವಾಗಿ ಕಷ್ಟಪಡುತ್ತಿರುವ ಗೆಳೆಯನಾದ ನಿನಗೆ ಶ್ರಿಯಃಪತಿಯು ಹೇರಳವಾದ ಐಶ್ವರ್ಯವನ್ನು ಕೊಡುತ್ತಾನೆ. ಭೋಜ, ವೃಷ್ಣಿ, ಅಂಧಕ– ಇವರೇ ಮೊದಲಾದ ಯಾದವರಿಗೆ ಸ್ವಾಮಿಯಾಗಿರುವ ಶ್ರೀಕೃಷ್ಣನು ಈಗ ದ್ವಾರಕೆಯಲ್ಲೇ ಇದ್ದಾನೆ. ತನ್ನ ಚರಣಕಮಲಗಳನ್ನು ಸ್ಮರಿಸುವ ಭಕ್ತರಿಗೆ ಅವನು ತನ್ನನ್ನೇ ಕೊಟ್ಟುಕೊಂಡು ಬಿಡುತ್ತಾನೆ. ಹೀಗಿರುವಾಗ ಜಗದ್ಗುರು ವಾದ ಶ್ರೀಕೃಷ್ಣನು (ಭಕ್ತರಿಂದ) ವಾಂಛನೀಯವಲ್ಲದ ಪ್ರಾಪಂಚಿಕವಾದ ಸುಖಗಳನ್ನೂ, ಐಶ್ವರ್ಯಗಳನ್ನೂ ದಯಪಾಲಿಸುವುದರಲ್ಲಿ ಆಶ್ಚರ್ಯ ವೇನಿದೆ?"

ಪರೀಕ್ಷಿತ! ಸುದಾಮನೂ ಸುಲಭವಾಗಿ ಒಪ್ಪಿಕೊಳ್ಳಲಿಲ್ಲ. ವಾಂಛ ನೀಯವಲ್ಲದ ಪ್ರಾಪಂಚಿಕವಾದ ವಸ್ತುಗಳನ್ನು, ಪರಮಶ್ರೇಷ್ಠನಾದ ಮಿತ್ರ ನಿಂದ ಕೇಳಿ ಪಡೆದುಕೊಳ್ಳುವುದು ಅವನಿಗೂ ಮೊದಲು ಮೊದಲು 'ಸರಿ' ಎನಿಸಲಿಲ್ಲ. ಆದರೂ ಸುದಾಮನ ಪತ್ನಿಯು ಅವನನ್ನು ಕೃಷ್ಣನಲ್ಲಿಗೆ ಕಳುಹಿಸಿ ಕೊಡುವ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಮೃದುವಾದ ಮಾತುಗಳಿಂದಲೇ ತನ್ನ ಕಷ್ಟ, ಪತಿಯ ಕಷ್ಟ, ಮಕ್ಕಳಿಗೂ ಕಾಲ-ಕಾಲಕ್ಕೆ ಆಹಾರವನ್ನು ಕೊಡಲು ಸಾಧ್ಯವಾಗದೇ ಇರುವುದು–ಈ ಎಲ್ಲ ವಿಷಯಗಳನ್ನೂ ಮನಕರಗುವಂತೆ ವಿಶದವಾಗಿ ಹೇಳಿ ಹೇಳಿ ಕಡೆಗೂ ಗಂಡನನ್ನು ಶ್ರೀಹರಿಯ ಬಳಿಗೆ ಹೋಗಲು ಒಪ್ಪಿಸಿಯೇ ಬಿಟ್ಟಳು. 'ಯಾವುದೇ ಲಾಭವಾಗಲೀ ; ಆಗದೇ ಇರಲಿ ; ಉತ್ತಮಕೀರ್ತಿಯಾದ ಶ್ರೀಕೃಷ್ಣನ ದಿವ್ಯದರ್ಶನವಾದರೂ ಆಗುವುದಲ್ಲವೇ! **ಅಯಂ ಹಿ ಪರಮೋ ಲಾಭಃ** ಇದೇ ಎಲ್ಲಕ್ಕಿಂತಲೂ ಮಿಗಿಲಾದ ಲಾಭ. ಈ ಲಾಭಕ್ಕಿಂತಲೂ ಬೇರೆ ಯಾವುದು ತಾನೇ ಬೇಕಾಗಿದೆ?'–ಹೀಗೆ ನಿಶ್ಚಯಿಸಿ ಕುಚೇಲನು ಪ್ರಯಾಣಮಾಡಲು ಮನಸ್ಸುಮಾಡಿ ಪತ್ನಿಗೆ ಹೇಳಿದನು :

**ಅಪ್ಯಸ್ತ್ಯುಪಾಯನಂ ಕಿಞ್ಚಿದ್ಗೃಹೇ ಕಲ್ಯಾಣಿ ದೀಯತಾಮ್ ॥೧೩॥**

"ಕಲ್ಯಾಣಿ! ನನ್ನ ಗೆಳೆಯನಾದ ಶ್ರೀಕೃಷ್ಣನಿಗೆ ಯಾವುದಾದರೂ ಉಪಾಯನವು ಮನೆಯಲ್ಲಿ ಸ್ವಲ್ಪವಾದರೂ ಇದ್ದರೆ ಅದನ್ನು ಕೊಡು. ಬಹಳ ದಿವಸಗಳನಂತರ ಮಿತ್ರನನ್ನು ನೋಡಲು ಹೋಗುತ್ತಿದ್ದೇನೆ. ಬರಿಗೈಯಲ್ಲಿ ಹೋಗಬಾರದು."

ಆದರೆ ಮನೆಯಲ್ಲಿ ಏನೂ ಇರಲಿಲ್ಲ. ಒಡನೆಯೇ ಸುದಾಮನ ಪತ್ನಿಯು ನಾಲ್ಕು ಮಂದಿ ಬ್ರಾಹ್ಮಣರ ಮನೆಗೆ ಹೋಗಿ ನಾಲ್ಕು ಹಿಡಿ ಅವಲಕ್ಕಿಯನ್ನು ಭಿಕ್ಷೆಮಾಡಿ ತಂದು ನಾಲ್ಕು ಹಿಡಿ ಅವಲಕ್ಕಿಯನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಚಿಂದಿಬಟ್ಟೆಯಲ್ಲಿ ಕಟ್ಟಿ ಗಂಡನಿಗೆ ಕೊಟ್ಟಳು. ವಿಪ್ರಶ್ರೇಷ್ಠನಾದ ಸುದಾಮನು ಆ ಗಂಟುಗಳನ್ನು ಕಂಕುಳಿನಲ್ಲಿಟ್ಟುಕೊಂಡು ದ್ವಾರಕಾಪಟ್ಟಣಕ್ಕೆ ಪ್ರಯಾಣಮಾಡಿದನು. ಇತರ ಕೆಲವು ಬ್ರಾಹ್ಮಣರೊಡನೆ ದ್ವಾರಕಾಪಟ್ಟಣವನ್ನು ಸಮೀಪಿಸಿ, ದ್ವಾರಕೇಶ್ವರನಾದ ಶ್ರೀಕೃಷ್ಣನ ಸಂದರ್ಶನವು ತನಗೆ ಹೇಗಾದೀತೆಂಬುದನ್ನೇ ಚಿಂತಿಸುತ್ತಾ ನಗರದ ರಕ್ಷಣೆಗಾಗಿ ನಿಲ್ಲಿಸಿದ್ದ ಮೂರು ಸೇನಾತುಕಡಿಗಳನ್ನೂ ಮತ್ತು ಮೂರು ಪ್ರಾಕಾರಗಳನ್ನೂ ದಾಟಿ, ಕುಚೇಲನು ಭಗವದ್ಧರ್ಮಪರಿಪಾಲಕರಾಗಿದ್ದ ಅಂಧಕ-ವೃಷ್ಣಿಗಳೇ ಮೊದಲಾದ ಯಾದವರು, ಪ್ರವೇಶಿಸಲು ದುಃಸಾಧ್ಯವಾಗಿದ್ದ ಅರಮನೆಗಳನ್ನೂ ದಾಟಿ, ಅವುಗಳ ಮಧ್ಯಭಾಗದಲ್ಲಿದ್ದ ಶ್ರೀಕೃಷ್ಣನ ಹದಿನಾರು ಸಾವಿರ ಪತ್ನಿಯರಿಂದ ಸಂಪನ್ನವಾಗಿದ್ದ ಅರಮನೆ ಗಳನ್ನು ನೋಡಿದನು. ಅವುಗಳಲ್ಲಿಯೂ ಅಧಿಕವಾದ ಕಾಂತಿಯಿಂದ ಬೆಳಗು ತ್ತಿದ್ದ ದಿವ್ಯವಾದ ಭವನವನ್ನು ಪ್ರವೇಶಿಸಿ ಬ್ರಹ್ಮಾನಂದವನ್ನು ಅನು ಭವಿಸಿದವನಂತೆ ಸುದಾಮನು ಆನಂದಪರವಶನಾದನು. ಆ ಸಮಯದಲ್ಲಿ ಶ್ರೀಕೃಷ್ಣನು ತನ್ನ ಪ್ರಾಣಪ್ರಿಯಳಾದ ರುಕ್ಮಿಣಿಯ ಮಂಚದ ಮೇಲಿದ್ದನು. ಸುದಾಮನನ್ನು ದೂರದಿಂದ ನೋಡಿದೊಡನೆಯೇ ಶ್ರೀಕೃಷ್ಣನು ಮಂಚದಿಂದ ಮೇಲೆದ್ದು ಅವಸರದಿಂದ ಸುದಾಮನ ಬಳಿಗೆ ಹೋಗಿ ಪ್ರಾಣಪ್ರಿಯ ಮಿತ್ರನನ್ನು ಆನಂದದಿಂದ ಗಾಢವಾಗಿ ಆಲಿಂಗಿಸಿಕೊಂಡನು.

ಪರೀಕ್ಷಿತಮಹಾರಾಜ! ಪರಮಾನಂದಸ್ವರೂಪನಾದ ಶ್ರೀಕೃಷ್ಣನು

ತನ್ನ ಪ್ರಿಯಸಖನಾದ ಬ್ರಹ್ಮರ್ಷಿಯ ಅಂಗಸಂಗದಿಂದಾಗಿ ಆನಂದಸಾಗರದಲ್ಲಿ ಮುಳುಗಿಹೋದನು. ಪರಮಪ್ರೀತನಾದ, ಕಮಲನಯನನಾದ ಶ್ರೀಕೃಷ್ಣನು ತನ್ನೆರಡು ಕಣ್ಣುಗಳಿಂದಲೂ ಆನಂದಬಾಷ್ಪಗಳನ್ನು ಸುರಿಸಿದನು. ಸುದಾಮನಿಗಂತೂ ಬಾಯಿಂದ ಮಾತುಗಳೇ ಹೊರಡದಾದುವು. ಬಳಿಕ ಶ್ರೀಕೃಷ್ಣನು ಸುದಾಮನ ಕೈಹಿಡಿದುಕೊಂಡು ಹೋಗಿ ಆತನನ್ನು ತಾನು ಕುಳಿತಿದ್ದ ಪರ್ಯಂಕದ ಮೇಲೆಯೇ ಕುಳ್ಳಿರಿಸಿದನು. ಪ್ರಿಯಸಖನನ್ನು ಸತ್ಕರಿಸಲು ಸಾಮಗ್ರಿಗಳನ್ನು ತಾನೇ ತಂದು ಯಥಾವಿಧಿಯಾಗಿ ಸುದಾಮನನ್ನು ಸತ್ಕರಿಸಿದನು. ಸಮಸ್ತರನ್ನೂ ಪವಿತ್ರಗೊಳಿಸುವ ಲೋಕ ಪಾವನನಾದ ಭಗವಂತನು ತನ್ನ ಪ್ರಿಯಸಖನ ಕಾಲುಗಳನ್ನು ತೊಳೆದು ಆ




ಚರಣತೀರ್ಥವನ್ನು ತಲೆಯಲ್ಲಿ ಧರಿಸಿದನು. ಬಳಿಕ ಶ್ರೀಕೃಷ್ಣನು ಚಂದನ-ಅಗರು-ಕೇಸರಿ ಇವೇ ಮುಂತಾದ ಸುಗಂಧದ್ರವ್ಯಗಳನ್ನು ಸುದಾಮನ ಮೈಗೆ ಹಚ್ಚಿದನು. ಪ್ರಿಯಸಖನನ್ನು ಬಹಳ ದಿವಸಗಳನಂತರ ಕಂಡು ಆನಂದ ಭರಿತನಾಗಿದ್ದ ಶ್ರೀಕೃಷ್ಣನು ಸುಗಂಧಯುಕ್ತವಾದ ಧೂಪವನ್ನು ಹೊತ್ತಿಸಿ ದೀಪಾವಳಿಯಿಂದ ಆತನಿಗೆ ಆರತಿಯನ್ನು ಬೆಳಗಿದನು. ಹೀಗೆ ಬ್ರಾಹ್ಮಣ ಮಿತ್ರನನ್ನು ಯಥಾವಿಧಿಯಾಗಿ ಸಂಪೂಜಿಸಿ, ತಾಂಬೂಲವನ್ನೂ ಗೋವನ್ನೂ ಸಮರ್ಪಿಸಿ ಶ್ರೀಕೃಷ್ಣನು ಸುದಾಮನಿಗೆ ಸ್ವಾಗತವನ್ನು ಬಯಸಿದನು.

ಪರೀಕ್ಷಿತ! ಕುಚೇಲನು ಚಿಂದಿ-ಚಿಂದಿಯಾಗಿದ್ದ ವಸ್ತ್ರವನ್ನು ಉಟ್ಟಿದ್ದನು. ಅವನ ಶರೀರವು ಮಲಿನವೂ ದುರ್ಬಲವೂ ಆಗಿದ್ದಿತು. ಶರೀರ

ದಲ್ಲಿದ್ದ ನರಗಳು ಎದ್ದುಕಾಣುತ್ತಿದ್ದುವು. ಅಂತಹವನಿಗೆ ಸಾಕ್ಷಾತ್ ರುಕ್ಮಿಣೀ ದೇವಿಯೇ ಚಾಮರವನ್ನು ಬೀಸುತ್ತಾ ಅವನ ಸೇವೆಯನ್ನು ಮಾಡುತ್ತಿದ್ದಳು. ಪವಿತ್ರಕೀರ್ತಿಯಾದ ಶ್ರೀಕೃಷ್ಣಭಗವಂತನು ಅತ್ಯಾದರದಿಂದ ಅವಧೂತನೊಬ್ಬನನ್ನು ಸಮಾದರಿಸುತ್ತಿರುವುದನ್ನು ಕಂಡು ಅಂತಃಪುರದ ಸ್ತ್ರೀಯರೆಲ್ಲರೂ ಅಚ್ಚರಿಗೊಂಡರು.

**ಕಿಮನೇನ ಕೃತಂ ಪುಣ್ಯಮವಧೂತೇನ ಭಿಕ್ಷುಣಾ ।**
**ಶ್ರಿಯಾ ಹೀನೇನ ಲೋಕೇಽಸ್ಮಿನ್ ಗರ್ಹಿತೇನಾಧಮೇನ ಚ ॥೨೫॥**
**ಯೋಽಸೌ ತ್ರಿಲೋಕಗುರುಣಾ ಶ್ರೀನಿವಾಸೇನ ಸಮ್ಭೃತಃ ।**
**ಪರ್ಯಙ್ಕಸ್ಥಾಂ ಶ್ರಿಯಂ ಹಿತ್ವಾ ಪರಿಷ್ವಕ್ತೋಽಗ್ರಜೋ ಯಥಾ ॥**

"ಸಖಿಯರೇ! ಈ ಅಚ್ಚರಿಯನ್ನಾದರೂ ಅವಲೋಕಿಸಿರಿ. ಈ ದರಿದ್ರಬ್ರಾಹ್ಮಣನು ಬಟ್ಟೆಯನ್ನುಟ್ಟಿದ್ದರೂ ತೂತಾಗಿರುವ ಬಟ್ಟೆಯಿಂದ ಮೈಯೆಲ್ಲಾ ಕಾಣುತ್ತಿದ್ದು ನಗ್ನನಾದ ಅವಧೂತನಂತೆಯೇ ಇದ್ದಾನೆ. ದಟ್ಟದರಿದ್ರನಾಗಿದ್ದಾನೆ. ಈ ಕಾರಣದಿಂದಲೇ ಲೋಕದ ದೃಷ್ಟಿಯಿಂದ ನಿಂದನೀಯನೂ ಅಧಮನೂ ಆಗಿದ್ದಾನೆ. ಇಂತಹವನು ಮಾಡಿರುವ ಪುಣ್ಯ ವಿಶೇಷವಾದರೂ ಏನಿರಬಹುದು? ಇಂತಹ ಭಿಕ್ಷುಕನನ್ನು ಲೋಕಗುರುವಾದ ಶ್ರೀನಿವಾಸಮೂರ್ತಿಯು ಆದರಿಸಿ ಸತ್ಕರಿಸುತ್ತಿದ್ದಾನೆ. ಪರ್ಯಂಕದಲ್ಲಿ ತನ್ನ ಸೇವೆಯನ್ನು ಮಾಡುತ್ತಿದ್ದ, ಮಹಾಲಕ್ಷ್ಮಿಯ ಸ್ವರೂಪಳಾದ ರುಕ್ಮಿಣೀ ದೇವಿಯನ್ನೂ ಪರಿತ್ಯಜಿಸಿ ಬಾಗಿಲ ಬಳಿಗೆ ಧಾವಿಸಿ ತನ್ನ ಅಣ್ಣನಾದ ಬಲರಾಮನನ್ನು ಆಲಿಂಗಿಸಿಕೊಳ್ಳುವಂತೆ ಈ ದರಿದ್ರಬ್ರಾಹ್ಮಣನನ್ನು ಆಲಿಂಗಿಸಿಕೊಂಡನಲ್ಲಾ! ಇವನ ಲೀಲೆಗಳೆಲ್ಲವೂ ಬಹಳ ವಿಚಿತ್ರವಾಗಿವೆ."

ಪರೀಕ್ಷಿತಮಹಾರಾಜ! ಕೃಷ್ಣ-ಕುಚೇಲರು ಪರಸ್ಪರವಾಗಿ ಕೈಗಳನ್ನು ಹಿಡಿದುಕೊಂಡು ತಾವು ಗುರುಕುಲದಲ್ಲಿದ್ದಾಗ ನಡೆದ ಆನಂದದಾಯಕವಾದ ಕ್ಷಣಗಳನ್ನು ಜ್ಞಾಪಿಸಿಕೊಳ್ಳುತ್ತಾ ಪರಮಹೃಷ್ಟರಾಗಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು.

ಭಗವಂತನು ಹೇಳುತ್ತಾನೆ :

"ಧರ್ಮಜ್ಞನೇ! ಗುರುದಕ್ಷಿಣೆಯನ್ನು ಸಮರ್ಪಿಸಿ ಗುರುಕುಲದಿಂದ ಹಿಂದಿರುಗಿದನಂತರ ವ್ರತಸಮಾವರ್ತನಗಳನ್ನು ಮಾಡಿಕೊಂಡು ನಿನಗೆ

ಅನುರೂಪಳಾದ ಭಾರ್ಯೆಯನ್ನು ನೀನು ವಿವಾಹವಾದೆಯಲ್ಲವೇ! ವಿವಾಹ ವನ್ನು ಮಾಡಿಕೊಂಡು ನೀನು ಗೃಹಸ್ಥಧರ್ಮದಲ್ಲಿದ್ದರೂ ಕೂಡ ನಿನ್ನ ಮನಸ್ಸು ವಿಷಯಭೋಗಗಳಲ್ಲಿ ಆಸಕ್ತನಾಗಿಲ್ಲವೆಂದು ನಾನು ಭಾವಿಸುತ್ತೇನೆ. ವಿದ್ವಾಂಸನೇ! ಧನ-ಕನಕ-ವಸ್ತು-ವಾಹನಗಳಲ್ಲಿ ಕೂಡ ನಿನಗೆ ಯಾವ ವಿಧವಾದ ಪ್ರೀತಿಯೂ ಇಲ್ಲವೆಂಬುದನ್ನೂ ನಾನು ತಿಳಿದಿದ್ದೇನೆ. ವಯಸ್ಯ! ಪ್ರಪಂಚದಲ್ಲಿ ಕೆಲವೇ ಜನರು, ಮಾಯೆಯಿಂದ ನಿರ್ಮಿತವಾದ ವಿಷಯಸಂಬಂಧವಾದ ವಾಸನೆಗಳನ್ನು ದೂರಮಾಡಿ, ವಿಷಯವಾಸನೆಯು ಕಿಂಚಿತ್ತಾದರೂ ಮನಸ್ಸಿನಲ್ಲಿ ಇರದಿದ್ದರೂ ನನ್ನಂತೆ ಲೋಕಸಂಗ್ರಹಕ್ಕಾಗಿ ಕರ್ತವ್ಯಕರ್ಮಗಳನ್ನು ಮಾಡುತ್ತಿರುತ್ತಾರೆ.

ಸನ್ಮಿತ್ರನೇ! ಯಾವ ಗುರುಕುಲದಲ್ಲಿ ದ್ವಿಜನು ತಾನು ತಿಳಿಯಬೇಕಾ ದುದನ್ನು ತಿಳಿದು ಅಜ್ಞಾನಾಂಧಕಾರವನ್ನು ದಾಟುವನೋ ಅಂತಹ ಗುರು ಕುಲದಲ್ಲಿ ನಾವಿಬ್ಬರೂ ಜೊತೆಗೂಡಿದ್ದುದು ನಿನ್ನ ಸ್ಮರಣೆಯಲ್ಲಿರುವುದೇ?

ಪ್ರಿಯಸಖನೇ! ಈ ಪ್ರಪಂಚದಲ್ಲಿ ಈ ಶರೀರಕ್ಕೆ ಕಾರಣನಾದ ಜನ್ಮ ದಾತನಾದ ತಂದೆಯು ಮೊದಲನೆಯ ಗುರು. ಅನಂತರ ಉಪನಯನಾದಿ ಸಂಸ್ಕಾರಗಳನ್ನು ಮಾಡಿ ಸತ್ಕರ್ಮಗಳ ಶಿಕ್ಷಣವನ್ನು ಕೊಡತಕ್ಕವನು ಎರಡ ನೆಯ ಗುರು. ಇವನೂ ನನ್ನಂತೆಯೇ ಪೂಜ್ಯನೇ ಸರಿ. ಈತನು ಮೊದಲ ನೆಯ ಗುರುವಿಗಿಂತಲೂ ಅಧಿಕನಾದವನು. ಜ್ಞಾನೋಪದೇಶಮಾಡಿ ಪರ ಮಾತ್ಮನನ್ನು ಸಾಕ್ಷಾತ್ಕರಿಸಿಕೊಡುವ ಮೂರನೆಯ ಗುರುವು ನಾನೇ ಆಗಿದ್ದೇನೆ. ಹೀಗೆ ವರ್ಣಾಶ್ರಮಿಗಳಿಗೆ ಈ ಮೂವರೂ ಗುರುಗಳಾಗುತ್ತಾರೆ. ಬ್ರಾಹ್ಮಣ ಶ್ರೇಷ್ಠನೇ! ವರ್ಣಾಶ್ರಮಿಗಳಲ್ಲಿ ಯಾರು ಜಗದ್ಗುರುವಾದ ನನ್ನ ಉಪದೇಶ ದಂತೆ ನಡೆದುಕೊಂಡು ಸಂಸಾರಸಾಗರವನ್ನು ಬಹಳ ಸುಲಭವಾಗಿ ದಾಟು ತ್ತಾರೋ ಅಂತಹವರೇ ಪುರುಷಾರ್ಥವನ್ನು ಪಡೆಯುವುದರಲ್ಲಿ ಕೋವಿದರಲ್ಲವೇ!

ಪ್ರಿಯಸಖನೇ! ನಾನು ಸಮಸ್ತಪ್ರಾಣಿಗಳಲ್ಲಿಯೂ ಆತ್ಮಸ್ವರೂಪ ನಾಗಿದ್ದೇನೆ. ಸಮಸ್ತರ ಹೃದಯದಲ್ಲಿಯೂ ಅಂತರ್ಯಾಮಿಯ ರೂಪದಲ್ಲಿ ವಿರಾಜಮಾನನಾಗಿದ್ದೇನೆ. ನನಗೆ ಗೃಹಸ್ಥರ ಧರ್ಮವಾದ ಪಂಚಮಹಾ ಯಜ್ಞಾದಿಗಳನ್ನು ಮಾಡುವುದರಿಂದಾಗಲೀ, ಬ್ರಹ್ಮಚಾರಿಯ ಧರ್ಮವಾದ ವೇದಾಧ್ಯಯನಾದಿಗಳಿಂದಾಗಲೀ, ವಾನಪ್ರಸ್ಥಾಶ್ರಮಧರ್ಮವಾದ ತಪಸ್ಸಿ

ನಿಂದಾಗಲೀ, ಸಂನ್ಯಾಸಿಗಳ ಧರ್ಮವಾದ ವಿರಕ್ತತೆಯಿಂದಾಗಲೀ ತೃಪ್ತಿಯಾಗುವುದಿಲ್ಲ. ಗುರುಶುಶ್ರೂಷೆಯನ್ನು ಮಾಡುವುದರಿಂದಲೇ ನನಗೆ ಬಹಳವಾದ ತೃಪ್ತಿಯುಂಟಾಗುತ್ತದೆ.

ನಾವಿಬ್ಬರೂ ಗುರುಕುಲದಲ್ಲಿದ್ದಾಗ ನಡೆದ ಒಂದು ಪ್ರಸಂಗವು ನಿನ್ನ ಸ್ಮರಣೆಯಲ್ಲಿರುವುದೇ? ಒಮ್ಮೆ ಗುರುಪತ್ನಿಯು ನಮ್ಮಿಬ್ಬರನ್ನೂ ಸೌದೆಯನ್ನು ತರುವ ಸಲುವಾಗಿ ಕಾಡಿಗೆ ಕಳುಹಿಸಿಕೊಟ್ಟಳು. ನಾವಿಬ್ಬರೂ ಭಯಂಕರವಾದ ಕಾಡೊಂದನ್ನು ಪ್ರವೇಶಿಸಿದೆವು. ಆಗ ಮಳೆಗಾಲವಾಗಿರದಿದ್ದರೂ ಭಯಂಕರವಾದ ಬಿರುಗಾಳಿಯು ಬೀಸತೊಡಗಿತು. ಜೊತೆಯಲ್ಲಿಯೇ ಧಾರಾಕಾರವಾಗಿ ಮಳೆಯೂ ಸುರಿಯತೊಡಗಿತು. ಆಕಾಶದಲ್ಲಿ ಮಿಂಚಿನೊಡನೆ ಗುಡುಗು-ಸಿಡಿಲುಗಳು ಆರ್ಭಟಿಸುತ್ತಿದ್ದುವು. ಸೂರ್ಯನಾ




ಗಲೇ ಅಸ್ತಮಿಸಿದ್ದನು. ನಾಲ್ಕು ದಿಕ್ಕುಗಳಲ್ಲಿಯೂ ಗಾಢಾಂಧಕಾರವು ಕವಿದಿದ್ದಿತು. ಅತಿವೃಷ್ಟಿಯಿಂದಾಗಿ ಭೂಮಿಯು ಜಲಮಯವಾಗಿದ್ದುದರಿಂದ 'ಹಳ್ಳವೆಲ್ಲಿದೆ? ತಿಟ್ಟೆಲ್ಲಿದೆ?'–ಎಂಬುದೇ ತಿಳಿಯುತ್ತಿರಲಿಲ್ಲ. ಸಣ್ಣದಾದೊಂದು ಪ್ರಳಯದಂತೆಯೇ ಸರ್ವತ್ರ ಜಲಮಯವಾಗಿದ್ದಿತು. ಬಿರುಗಾಳಿಯೂ, ಜಲಧಾರೆಯೂ ನಮ್ಮನ್ನು ಅಪ್ಪಳಿಸುತ್ತಿದ್ದಿತು. ಆಗ ನಾವಿಬ್ಬರೂ ದಿಕ್ಕುಗಾಣದೆ ಪರಸ್ಪರವಾಗಿ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ಭಯಗೊಂಡವರಾಗಿ ಅರಣ್ಯದಲ್ಲಿ ಸುತ್ತಾಡುತ್ತಿದ್ದೆವು. ಸೂರ್ಯೋದಯವೂ ಆಯಿತು. ರಾತ್ರಿ ನಾವು ಆಶ್ರಮಕ್ಕೆ ಹಿಂದಿರುಗದೇ

ಇದ್ದುದನ್ನು ತಿಳಿದು ನಮ್ಮ ಗುರುಗಳಾದ ಸಾಂದೀಪನಿಗಳು ನಮ್ಮನ್ನು ಹುಡುಕುತ್ತಾ ಅರಣ್ಯಕ್ಕೆ ಬಂದು ಭಯಗೊಂಡಿದ್ದ ಶಿಷ್ಯರಾದ ನಮ್ಮನ್ನು ನೋಡಿ ಹೇಳಿದರು :

**ಅಹೋ ಹೇ ಪುತ್ರಕಾ ಯೂಯಮಸ್ಮದರ್ಥೇಽತಿದುಃಖಿತಾಃ।**
**ಆತ್ಮಾ ವೈ ಪ್ರಾಣಿನಾಂ ಪ್ರೇಷ್ಠಸ್ತಮನಾದೃತ್ಯ ಮತ್ಪರಾಃ ॥೪೦॥**

**ಏತದೇವ ಹಿ ಸಚ್ಛಿಷ್ಯೈಃ ಕರ್ತವ್ಯಂ ಗುರುನಿಷ್ಕೃತಮ್ ।**
**ಯದ್ವೈ ವಿಶುದ್ಧಭಾವೇನ ಸರ್ವಾರ್ಥಾತ್ಮಾರ್ಪಣಂ ಗುರೌ ॥೪೧॥**

"ಏನಚ್ಚರಿ! ಮಕ್ಕಳೇ! ನೀವು ನಮ್ಮ ಸಲುವಾಗಿ ಬಹಳವಾಗಿ ಕಷ್ಟಪಡುತ್ತಿರುವಿರಿ. ಸಮಸ್ತಪ್ರಾಣಿಗಳಿಗೂ ಅವುಗಳ ಶರೀರವು ಅಥವಾ ಪ್ರಾಣವು ಅತ್ಯಂತ ಪ್ರಿಯವಾಗಿರುತ್ತದೆ. ಆದರೆ ನೀವಿಬ್ಬರೂ ನಿಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ದೇಹಸೌಖ್ಯವನ್ನೂ ಲೆಕ್ಕಿಸದೆ ನಮ್ಮ ಸೇವೆಯಲ್ಲಿ ತತ್ಪರರಾಗಿರುವಿರಿ. ಗುರುಗಳ ಋಣದಿಂದ ಮುಕ್ತರಾಗಲು ಸಚ್ಛಿಷ್ಯರಿಗೆ ಇದು ಅನುರೂಪವಾದ ಕಾರ್ಯವೇ ಆಗಿದೆ. ವಿಶುದ್ಧವಾದ ಭಾವದಿಂದ ತಮ್ಮ ಸಮಸ್ತವನ್ನೂ ಶರೀರವನ್ನೂ ಕೂಡ ಗುರುಗಳ ಅಡಿ ದಾವರೆಗಳಲ್ಲಿ ಸಮರ್ಪಿಸಿ ಅವರ ಸೇವೆಯನ್ನು ಮಾಡಬೇಕು.

**ತುಷ್ಟೋಽಹಂ ಭೋ ದ್ವಿಜಶ್ರೇಷ್ಠಾಃ ಸತ್ಯಾಃ ಸನ್ತು ಮನೋರಥಾಃ ।**
**ಛನ್ದಾಂಸ್ಯಯಾತಯಾಮಾನಿ ಭವನ್ತ್ವಿಹ ಪರತ್ರ ಚ ॥೪೨॥**

ದ್ವಿಜಶ್ರೇಷ್ಠರೇ! ನಾನು ನಿಮ್ಮ ವಿಷಯದಲ್ಲಿ ಸಂತುಷ್ಟನಾಗಿದ್ದೇನೆ. ನಿಮ್ಮ ಸಮಸ್ತ ಕಾಮನೆಗಳೂ ಪೂರ್ಣಗೊಳ್ಳಲಿ. ಇಹಲೋಕ-ಪರಲೋಕ ಗಳೆರಡರಲ್ಲೂ ನೀವು ಇಲ್ಲಿ ಮಾಡಿರುವ ವೇದಾಧ್ಯಾಯನವು ನಿಮಗೆ ಹಸ ನಾಗಿ, ವೀರ್ಯವತ್ತಾಗಿ ಉಳಿದಿರಲಿ."

ಸುದಾಮ! ಹೀಗೆ ನಮ್ಮ ಗುರುಗಳು ನಮ್ಮನ್ನು ಹರಸಿದ್ದರು. ನಾವು ಗುರುಕುಲದಲ್ಲಿದ್ದಾಗ ಇಂತಹ ಅನೇಕ ಘಟನೆಗಳು ಸಂಭವಿಸಿದ್ದುವು.

**ಗುರೋರನುಗ್ರಹೇಣೈವ ಪುಮಾನ್ಪೂರ್ಣಃ ಪ್ರಶಾನ್ತಯೇ ॥೪೩॥**

ಪ್ರಿಯಸಖನೇ! ಗುರುವಿನ ಅನುಗ್ರಹದಿಂದ ಮಾತ್ರವೇ ಪುರುಷನು ಪೂರ್ಣವಾಗಿ ಮೋಕ್ಷಕ್ಕೆ ಅಧಿಕಾರಿಯಾಗುತ್ತಾನೆ."

ಸುದಾಮನು ಹೇಳುತ್ತಾನೆ :

**ಕಿಮಸ್ಮಾಭಿರನಿರ್ವೃತ್ತಂ ದೇವದೇವ ಜಗದ್ಗುರೋ ।**
**ಭವತಾ ಸತ್ಯಕಾಮೇನ ಯೇಷಾಂ ವಾಸೋ ಗುರಾವಭೂತ್ ॥೪೪॥**

"ದೇವದೇವನೇ! ಜಗದ್ಗುರುವೇ! ಸತ್ಯಸಂಕಲ್ಪವಾದ ಪರಮಾತ್ಮನಾದ ನಿನ್ನೊಡನೆ ಗುರುಕುಲದಲ್ಲಿ ವಾಸಮಾಡುವ ಸೌಭಾಗ್ಯವು ಸಿಕ್ಕಿದ ನಂತರ ನಾನು ಯಾವ ಕಾರ್ಯವನ್ನು ತಾನೇ ಮಾಡಬೇಕಾಗಿದೆ? ದೇವದೇವನಾದ ನಿನ್ನ ಚಿರಂತನವಾದ ಸಹವಾಸದಿಂದಲೇ ನಾನು ಮಾಡಬೇಕಾಗಿದ್ದ ಕರ್ತವ್ಯಗಳೆಲ್ಲವನ್ನೂ ಮುಗಿಸಿದಂತಾಗಿದೆ.

**ಯಸ್ಯಚ್ಛನ್ದೋಮಯಂ ಬ್ರಹ್ಮ ದೇವ ಆವಪನಂ ವಿಭೋ ।**
**ಶ್ರೇಯಸಾಂ ತಸ್ಯ ಗುರುಷು ವಾಸೋಽತ್ಯನ್ತವಿಡಮ್ಬನಮ್ ॥೪೫॥**

ಧರ್ಮಾರ್ಥಕಾಮ-ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳಿಗೂ ಮೂಲಸ್ರೋತವಾದ ಛಂದೋಮಯವಾದ ವೇದವು ಯಾವನ ಶರೀರದಲ್ಲಿ ಬೀಜರೂಪವಾಗಿರುವುದೋ ಅಂತಹ ಪರಬ್ರಹ್ಮನಾದ ನೀನು ವೇದಾಧ್ಯಯನಕ್ಕಾಗಿ ಗುರುಕುಲದಲ್ಲಿ ವಾಸಮಾಡುತ್ತಿದ್ದೆಯೆಂಬುದು ಅತ್ಯಂತ ವಿಡಂಬನೆಯೇ ಸರಿ. ಲೋಕಹಿತಕ್ಕಾಗಿ ಮಾಡಿರುವ ಅನುಕರಣೆಯೇ ಇದು."

ಮಹಾಪುರಾಣವು ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೦ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೮೧ನೆಯ ಅಧ್ಯಾಯ

## ಸುದಾಮನಿಗೆ ಐಶ್ವರ್ಯಪ್ರಾಪ್ತಿ

ಶುಕಮುನಿಗಳು ಹೇಳುತ್ತಾರೆ :

**ಸ ಇತ್ಥಂ ದ್ವಿಜಮುಖ್ಯೇನ ಸಹ ಸಙ್ಕಥಯನ್ ಹರಿಃ ।**
**ಸರ್ವಭೂತಮನೋಽಭಿಜ್ಞಃ ಸ್ಮಯಮಾನ ಉವಾಚ ತಮ್ ॥೧॥**

**ಬ್ರಹ್ಮಣ್ಯೋ ಬ್ರಾಹ್ಮಣಂ ಕೃಷ್ಣೋ ಭಗವಾನ್ಪ್ರಹಸನ್ಪ್ರಿಯಮ್ ।**
**ಪ್ರೇಮ್ಣಾ ನಿರೀಕ್ಷಣೇನೈವ ಪ್ರೇಕ್ಷನ್ಖಲು ಸತಾಂ ಗತಿಃ ॥೨॥**

"ಪರೀಕ್ಷಿತಮಹಾರಾಜ! ಸಮಸ್ತಪ್ರಾಣಿಗಳ ಮನಸ್ಸಿನಲ್ಲಿರುವ ಅಭಿ

ಪ್ರಾಯಗಳನ್ನೂ ತಿಳಿದುಕೊಂಡಿರುವ, ಬ್ರಾಹ್ಮಣಪ್ರಿಯನಾದ, ಸತ್ಪುರುಷರ ಏಕಮಾತ್ರ ಆಶ್ರಯನಾದ ಶ್ರೀಕೃಷ್ಣನು ಹಿಂದೆ ಹೇಳಿದಂತೆ ತನ್ನ ಪ್ರಿಯ ಸಖನೊಡನೆ ಬಹಳ ಹೊತ್ತಿನವರೆಗೆ ಮಾತನಾಡಿಕೊಂಡಿದ್ದನು. ಆ ಸಮಯದಲ್ಲಿ ಶ್ರೀಕೃಷ್ಣನು ತನ್ನ ಪ್ರಿಯಮಿತ್ರನನ್ನು ಪ್ರೇಮಪೂರ್ಣವಾದ ದೃಷ್ಟಿಯಿಂದ ನೋಡುತ್ತಾ ಚೇತೋಹಾರಿಯಾದ ಮುಗುಳ್ನಗೆಯನ್ನು ಬೀರುತ್ತಾ ವಿನೋದದಿಂದ ಸುದಾಮನಿಗೆ ಹೇಳಿದನು :

**ಕಿಮುಪಾಯನಮಾನೀತಂ ಬ್ರಹ್ಮನ್ ಮೇ ಭವತಾ ಗೃಹಾತ್ ।**
**ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್ ।**
**ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ॥೩॥**

"ಪ್ರಿಯಸಖನೇ! ನನಗಾಗಿ ನೀನು ನಿನ್ನ ಮನೆಯಿಂದ ಯಾವ ಕಾಣಿಕೆಯನ್ನು ತಂದಿರುವೆ? ಸುದಾಮ! ಭಕ್ತರು ಪ್ರೇಮಪೂರ್ವಕವಾಗಿ ತರುವ ಅತ್ಯಲ್ಪವಾದ ಕಾಣಿಕೆಯನ್ನೂ ಕೂಡ ನಾನು ಅಪಾರವಾದ ಅನರ್ಘವಾದ ಕಾಣಿಕೆಯೆಂದು ಭಾವಿಸುತ್ತೇನೆ. ಅಂತೆಯೇ ಭಕ್ತರಲ್ಲದವರು ತಂದೊಪ್ಪಿಸುವ ಅಪಾರವಾದ ಕಾಣಿಕೆಯಿಂದ ನನಗೆ ಯಾವ ವಿಧವಾದ ಸಂತೋಷವೂ ಆಗುವುದಿಲ್ಲ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೪॥**

ಯಾವ ಪುರುಷನು ಭಕ್ತಿಪರವಶನಾಗಿ ನನಗೆ ಒಂದೇ ಒಂದು ಪತ್ರೆಯನ್ನಾಗಲೀ, ಪುಷ್ಪವನ್ನಾಗಲೀ, ಫಲವನ್ನಾಗಲೀ, ನೀರನ್ನಾಗಲೀ ಅರ್ಪಿಸುವನೋ ಅಂತಹ ಶುದ್ಧಾಂತಃಕರಣನಾದ ಭಕ್ತನ ಪ್ರೇಮೋಪಹಾರವನ್ನು ನಾನು ಸ್ವೀಕರಿಸುವುದು ಮಾತ್ರವಲ್ಲದೆ ಅದನ್ನು ಆದರದಿಂದ ಸೇವಿಸುತ್ತೇನೆ."

ಪರೀಕ್ಷಿತಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದರೂ ನಾಚಿಕೆಯಿಂದಾಗಿ ಶ್ರಿಯಃಪತಿಯಾದ ತನ್ನ ಮಿತ್ರನಿಗೆ ತಾನು ತಿರಿದು ತಂದಿದ್ದ ನಾಲ್ಕು ಮುಷ್ಟಿಗಳಷ್ಟು ಅವಲಕ್ಕಿಯನ್ನು ಸುದಾಮನು ಕೊಡಲಿಲ್ಲ. ತಲೆತಗ್ಗಿಸಿಕೊಂಡು ಕುಳಿತುಬಿಟ್ಟನು. ಸಮಸ್ತಪ್ರಾಣಿಗಳ ಮನಸ್ಸಿನಲ್ಲೇ

ನಿರುವುದೆಂಬುದನ್ನು ಸಾಕ್ಷಾತ್ತಾಗಿ ಕಾಣಲು ಸಮರ್ಥನಾದ ಶ್ರೀಕೃಷ್ಣನು ಸುದಾಮನ ಆಗಮನದ ಕಾರಣವನ್ನು ತಿಳಿದುಕೊಂಡನು. ತನ್ನ ಮಿತ್ರನಾಗಿದ್ದರೂ ದರಿದ್ರನಾಗಿ ಹುಟ್ಟಿದುದೇಕೆಂಬುದನ್ನು ಪುನಃ ಚಿಂತಿಸಿ ನೋಡಲು, ಈ ಹಿಂದೆ ತನ್ನ ಪ್ರಿಯಸಖನು ಯಾವಾಗಲೂ ಶ್ರೀಕಾಮನಾಗಿ ತನ್ನನ್ನು ಪ್ರಾರ್ಥಿಸಿಕೊಳ್ಳಲಿಲ್ಲವೆಂಬ ವಿಷಯವೂ ಶ್ರೀಕೃಷ್ಣನಿಗೆ ತಿಳಿದು ಹೋಯಿತು. ಈಗಲೂ ಕೂಡ ತನ್ನ ಪ್ರಿಯಮಿತ್ರನು ಪತಿವ್ರತೆಯಾದ ತನ್ನ ಪತ್ನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಕಾರಣದಿಂದ ಅವಳ ಪ್ರೇರಣೆಯಿಂದ ಶ್ರೀಕಾಮನಾಗಿ ತನ್ನ ಬಳಿಗೆ ಬಂದಿರುವನೆಂಬ ವಿಷಯವೂ ಸರ್ವಭೂತಾತ್ಮನಾದ ಶ್ರೀಕೃಷ್ಣನಿಗೆ ತಿಳಿಯಿತು. ದೇವತೆಗಳಿಗೂ ದುರ್ಲಭವಾದಷ್ಟು ಐಶ್ವರ್ಯಗಳನ್ನು ನಾನು ನನ್ನ ಮಿತ್ರನಿಗೆ ಅನುಗ್ರಹಿಸುವೆನೆಂದು ಶ್ರೀಕೃಷ್ಣನು ನಿಶ್ಚಯಿಸಿದನು. ಹೀಗೆ ನಿಶ್ಚಯಿಸಿ, ಸುದಾಮನ ಹರಿದು ಹೋಗಿದ್ದ ಚಿಂದಿಬಟ್ಟೆಯ ಅಂಚಿನಲ್ಲಿ ಕಟ್ಟಿದ್ದ ನಾಲ್ಕು ಮುಷ್ಟಿ ಅವಲಕ್ಕಿಯ ನಾಲ್ಕು ಗಂಟುಗಳನ್ನೂ ಕಿತ್ತುಕೊಂಡು–"ಸುದಾಮ! ಇದೇನಿದು? ನನಗಾಗಿ ತಂದಿರುವ ಉಪಾಯನವು ಇದೇ ಇರಬಹುದಲ್ಲವೇ!"–ಎಂದು ಹೇಳುತ್ತಾ ಗಂಟನ್ನು ಬಿಚ್ಚಿ ಅವಲಕ್ಕಿಯನ್ನು ಮುಷ್ಟಿಯಲ್ಲಿ ಹಿಡಿದು ಭಕ್ತವತ್ಸಲನಾದ ಶ್ರೀಕೃಷ್ಣನು ಹೇಳಿದನು :

"ಪ್ರಿಯಸಖನೇ! ಈ ಅವಲಕ್ಕಿಯನ್ನು ನೀನು ನನಗಾಗಿಯೇ ತಂದೆಯಲ್ಲವೇ? ಇದು ನನಗೆ ಪರಮಪ್ರಿಯವಾದ ತಿಂಡಿಯಾಗಿದೆ. ನೀನು ತಂದಿರುವ ಅವಲಕ್ಕಿಯು ನನ್ನನ್ನು ಮಾತ್ರವೇ ತೃಪ್ತಿಗೊಳಿಸುವುದಾಗಿಲ್ಲ; ವಿಶ್ವವನ್ನೇ ಇದು ತೃಪ್ತಿಗೊಳಿಸುತ್ತದೆ." ಹೀಗೆ ಹೇಳಿ ಪರಮಕಾರುಣಿಕನಾದ, ಭಕ್ತಪ್ರಿಯನಾದ ಭಗವಂತನು ಮುಷ್ಟಿಯಲ್ಲಿದ್ದ ಅವಲಕ್ಕಿಯನ್ನು ಆನಂದದಿಂದ ಜಗಿದುನುಂಗಿ ಮತ್ತೊಂದು ಮುಷ್ಟಿಯನ್ನೂ ಕೈಗೆ ಸುರಿದು ಕೊಂಡು ಜಗಿಯಲು ಪ್ರಾರಂಭಿಸಿದನು. ಶ್ರೀಕೃಷ್ಣನಲ್ಲಿಯೇ ಅನುರಕ್ತವಾದ ಮನಸ್ಸನ್ನು ಹೊಂದಿದ್ದ, ಲಕ್ಷ್ಮೀದೇವಿಯ ಸ್ವರೂಪಿಣಿಯಾಗಿದ್ದ ರುಕ್ಮಿಣೀದೇವಿಯು ಅಷ್ಟರಲ್ಲಿಯೇ ಮುಂದೆ ತಿನ್ನಲಾಗದಂತೆ ಶ್ರೀಕೃಷ್ಣನ ಕೈಯನ್ನು ಹಿಡಿದು ಹೇಳಿದಳು :

**ಏತಾವತಾಲಂ ವಿಶ್ವಾತ್ಮನ್ಸರ್ವಸಮ್ಪತ್ಸಮೃದ್ಧಯೇ ।**
**ಅಸ್ಮಿನ್ಲೋಕೇಽಥವಾಮುಷ್ಮಿನ್ಪುಂಸಸ್ತ್ವತ್ತೋಷಕಾರಣಮ್ ॥೧೧॥**

"ವಿಶ್ವಾತ್ಮನೇ! ದೇವದೇವ! ಮನುಷ್ಯನಿಗೆ ಈ ಲೋಕದಲ್ಲಿ ಮತ್ತು ಅವಸಾನಾನಂತರದಲ್ಲಿ ಪರಲೋಕದಲ್ಲಿಯೂ ಸಂಪತ್ಸಮೃದ್ಧಿಯನ್ನು ಹೊಂದಲು ನೀನೀಗ ತಿಂದಿರುವ ಒಂದು ಮುಷ್ಟಿ ಅವಲಕ್ಕಿಯೇ ಸಾಕಾಗಿದೆ. ಏಕೆಂದರೆ–ಈ ಒಂದು ಮುಷ್ಟಿ ಅವಲಕ್ಕಿಯಿಂದಲೇ ನೀನು ಪರಮತುಷ್ಟನಾಗಿ ಬಿಟ್ಟಿರುವೆ"*–ಎಂದು ಹೇಳುತ್ತಾ ಶ್ರೀಕೃಷ್ಣನ ಕೈಯಲ್ಲಿದ್ದ ಅವಲಕ್ಕಿಯನ್ನು ರುಕ್ಮಿಣಿಯು ಕಿತ್ತುಕೊಂಡಳು.

ಸುದಾಮನು ಆ ರಾತ್ರಿ ಶ್ರೀಕೃಷ್ಣನ ಅರಮನೆಯಲ್ಲಿಯೇ ಉಳಿದುಕೊಂಡನು. ಶ್ರೀಕೃಷ್ಣನಿತ್ತ ಆದರಪೂರ್ವಕವಾದ ಮೃಷ್ಟಾನ್ನವನ್ನು ಭುಂಜಿಸಿ ರುಚಿಕರವಾದ ಪಾನೀಯಗಳನ್ನು ಕುಡಿದು ಸುದಾಮನು ಆನಂದ

---

* ಶ್ರೀಕೃಷ್ಣನು, ಮಿತ್ರನು ತಂದಿದ್ದ ಒಂದು ಮುಷ್ಟಿ ಅವಲಕ್ಕಿಯಿಂದಲೇ ಪರಮತುಷ್ಟನಾದನೆಂಬುದು ನಿಜ. ಆದರೆ ರುಕ್ಮಿಣಿಯು ತಡೆದುದೇಕೆ?–ಎಂಬುದಕ್ಕೆ ಭಾವುಕರು ಹಲವಾರು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ :

1) ಎರಡನೆಯ ಹಿಡಿಯನ್ನು ತಿಂದು ನನ್ನನ್ನೂ ಈ ಬ್ರಾಹ್ಮಣನ ವಶಕ್ಕೆ ಒಪ್ಪಿಸ ಬೇಡ. ನಾನೂ ಇವನ ಸೇವೆಮಾಡಲು ಹೋಗಬೇಕಾದೀತು.

2) ನಿನ್ನ ಪ್ರಿಯಸಖನು ತಂದಿರುವ ಉಪಾಯನವನ್ನು ನೀನೊಬ್ಬನೇ ತಿನ್ನುವುದು ಸರಿಯೇ? ನಿನ್ನ ಪ್ರೇಯಸಿಯರಾದ ನಾವೆಲ್ಲರೂ ಒಂದೊಂದು ಕಾಳನ್ನಾದರೂ ಹಂಚಿಕೊಂಡು ತಿನ್ನುತ್ತೇವೆ.

3) ಕಟುಕಲ ಅವಲಕ್ಕಿಯನ್ನು ಇನ್ನೂ ತಿಂದುಬಿಟ್ಟರೆ ತನ್ನ ಪತಿಗೆ ಹೊಟ್ಟೇ ನೋವು ಬರುವುದೆಂದು ಭಾವಿಸಿ ರುಕ್ಮಿಣೀದೇವಿಯು ಮುಂದೆ ತಿನ್ನದಂತೆ ತಡೆಹಿಡಿದ ಳಂತೆ.

4) ಒಂದು ಮುಷ್ಟಿ ಅವಲಕ್ಕಿಯನ್ನು ಶ್ರೀಕೃಷ್ಣನು ತಿಂದು ತೃಪ್ತನಾದುದರಿಂದಲೇ ಸುದಾಮನಿಗೆ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಅಪಾರವಾದ ದೇವತೆಗಳಿಗೂ ದುರ್ಲಭವಾದ ಐಶ್ವರ್ಯವು ಸಿಕ್ಕುವಂತಾಯಿತು. ಎರಡನೆಯ ಮುಷ್ಟಿಯನ್ನು ತಿಂದುಬಿಟ್ಟರೆ ಕೊಡಬೇಕಾದದ್ದು ಯಾವುದೂ ಇಲ್ಲದೇ ತನ್ನನ್ನೇ ತಾನು ಕೊಟ್ಟುಕೊಳ್ಳಬೇಕಾಗಬಹುದು.

ಭರಿತನಾಗಿ ತಾನು ಸ್ವರ್ಗದಲ್ಲಿರುವೆನೋ–ಎಂಬಂತೆಯೇ ಭಾವಿಸಿಕೊಂಡನು. ಶ್ರೀಕೃಷ್ಣನ ಅರಮನೆಯಲ್ಲವನು ಸ್ವರ್ಗಸುಖವನ್ನೇ ಅನುಭವಿಸಿದನು.

ರಾತ್ರಿಯು ಕಳೆದು ಬೆಳಗಾಯಿತು. ಸುದಾಮನು ತನ್ನ ಪ್ರಾತಃ ಕರ್ಮಗಳೆಲ್ಲವನ್ನೂ ಮುಗಿಸಿಕೊಂಡು ಪ್ರಯಾಣಕ್ಕೆ ಸಿದ್ಧನಾದನು. ಪರಾತ್ಪರನಾದ ಭಗವಂತನನ್ನು ಸಂದರ್ಶಿಸಬೇಕೆಂಬುದೇ ಸುದಾಮನ ಪರಮ ಗುರಿಯಾಗಿದ್ದಿತು. ಅದರಂತೆ ಆತನನ್ನು ಅವನು ಕಣ್ತುಂಬಾ ನೋಡಿದನು. ಬಾಯ್ತುಂಬಾ ಮಾತನಾಡಿದನು. ದೇವತೆಗಳಿಗೂ ಅಲಭ್ಯವಾದ ಸತ್ಕಾರವನ್ನೂ ಪಡೆದನು. ಸುದಾಮನು ಪ್ರಯಾಣಕ್ಕೆ ಸಿದ್ಧವಾಗುತ್ತಲೇ ಶ್ರೀಕೃಷ್ಣನು ಸ್ವಲ್ಪದೂರದವರೆಗೆ ಅವನನ್ನು ಅನುಸರಿಸಿ ಹೋಗಿ, ಬ್ರಾಹ್ಮಣನಿಗೆ ಅಭಿವಂದಿಸಿ, ಮತ್ತಷ್ಟು ಪ್ರಿಯವಾದ ಮಾತುಗಳನ್ನಾಡಿ, ಗಾಢವಾಗಿ ಮತ್ತೊಮ್ಮೆ ಆಲಿಂಗಿಸಿಕೊಂಡು ಆನಂದಬಾಷ್ಪದೊಡನೆ ಪ್ರಿಯಸಖನನ್ನು ಬೀಳ್ಕೊಟ್ಟನು.

ಆದರೆ ಶ್ರೀಕೃಷ್ಣನಿಗೆ ತನ್ನ ಮಿತ್ರನು ಪತ್ನಿಯ ಪ್ರೇರಣೆಯಂತೆ ಐಶ್ವರ್ಯಕಾಮನಾಗಿ ಬಂದಿರುವನೆಂದು ತಿಳಿದಿದ್ದರೂ ಅವನಿಗೆ ಶ್ರೀಕೃಷ್ಣನು ಐಶ್ವರ್ಯವನ್ನೇನೂ ಹೊರಿಸಿಕಳುಹಿಸಲಿಲ್ಲ. ಸುದಾಮನು ಕೂಡ ನಾಚಿಕೆಯಿಂದಾಗಿ ಲಕ್ಷ್ಮೀಪತಿಯಾದ ಶ್ರೀಕೃಷ್ಣನಿಂದ ಐಶ್ವರ್ಯವನ್ನು ಯಾಚಿಸಲೂ ಇಲ್ಲ. ಮಹಾತ್ಮನಾದ ಶ್ರೀಕೃಷ್ಣನ ದಿವ್ಯದರ್ಶನದಿಂದಲೇ ಆನಂದಭರಿತನಾಗಿ ಶ್ರೀಕೃಷ್ಣನ ಸಮಾಗಮವನ್ನೇ ಅಡಿಗಡಿಗೂ ಸ್ಮರಿಸಿಕೊಳ್ಳುತ್ತಾ ಸುದಾಮನು ಊರಿಗೆ ಪ್ರಯಾಣಮಾಡಿದನು.

"ಅಬ್ಬ! ಎಂತಹ ಅಚ್ಚರಿ! ಎಂತಹ ಆನಂದಾನುಭವ! ಬ್ರಾಹ್ಮಣರನ್ನೇ ತನ್ನ ಇಷ್ಟದೇವತೆಗಳೆಂದು ಭಾವಿಸಿರುವ ಶ್ರೀಕೃಷ್ಣಸ್ವಾಮಿಯ ಬ್ರಾಹ್ಮಣಭಕ್ತಿಯನ್ನು ನಾನಿಂದು ಪ್ರತ್ಯಕ್ಷವಾಗಿ ನೋಡಿದೆನು. ನಿಶ್ಚಯವಾಗಿಯೂ ನಾನೇ ಪರಮಧನ್ಯನು. ಯಾವನ ವಕ್ಷಃಸ್ಥಳದಲ್ಲಿ ಶ್ರೀಲಕ್ಷ್ಮೀದೇವಿಯು ಸದಾ ವಿರಾಜಮಾನಳಾಗಿರುವಳೋ ಅಂತಹ ಲಕ್ಷ್ಮೀರಮಣನು ದಟ್ಟದರಿದ್ರನಾದ ನನ್ನನ್ನು ಬಾಚಿತಬ್ಬಿಕೊಂಡನು.

**ಕ್ವಾಹಂ ದರಿದ್ರಃ ಪಾಪೀಯಾನ್ ಕ್ವ ಕೃಷ್ಣಃ ಶ್ರೀನಿಕೇತನಃ ।**
**ಬ್ರಹ್ಮಬನ್ಧುರಿತಿ ಸ್ಮಾಹಂ ಬಾಹುಭ್ಯಾಂ ಪರಿರಮ್ಭಿತಃ ॥೧೬॥**

ದರಿದ್ರನೂ ಪಾಪಿಷ್ಠನೂ ಆದ ನಾನೆಲ್ಲಿ! ಲಕ್ಷ್ಮೀದೇವಿಗೆ ಪರಮಾಶ್ರಯನಾಗಿರುವ ಶ್ರೀಕೃಷ್ಣನೆಲ್ಲಿ! ಕೇವಲ 'ಜಾತಿಮಾತ್ರ ಬ್ರಾಹ್ಮಣ'– ಎಂಬ ಕಾರಣದಿಂದಾಗಿ ಬ್ರಾಹ್ಮಣಪ್ರಿಯನಾದ ಶ್ರೀಕೃಷ್ಣನು ನನ್ನನ್ನು ಎರಡು ತೋಳುಗಳಿಂದಲೂ ಬಾಚಿ ತಬ್ಬಿಕೊಂಡನು. ಇಷ್ಟುಮಾತ್ರವಲ್ಲ ; ನನ್ನನ್ನು ತನ್ನ ಸೋದರನೆಂದೇ ಭಾವಿಸಿ, ಪ್ರೇಯಸಿಯು ಪವಡಿಸುವ ಹಾಸಿಗೆಯ ಮೇಲೆ ನನ್ನನ್ನು ಕುಳ್ಳಿರಿಸಿದನು. ಹಾದಿನಡೆದು ಬಳಲಿದ್ದ ನನ್ನನ್ನು ಪಟ್ಟದರಾಣಿಯಾದ ರುಕ್ಮಿಣಿಯೇ ಚಾಮರ-ವ್ಯಜನಗಳಿಂದ ಗಾಳಿಯನ್ನೂ ಬೀಸುತ್ತಾ ಉಪಚರಿಸಿದಳು. ದೇವತೆಗಳಿಗೂ ದೇವತೆಯಾದ ಮತ್ತು ಬ್ರಾಹ್ಮಣರನ್ನೇ ತನ್ನ ಇಷ್ಟದೇವತೆಗಳೆಂದು ಭಾವಿಸಿರುವ ಶ್ರೀಕೃಷ್ಣನು ಕಾಲನ್ನೊತ್ತುವುದು, ಗಂಧವನ್ನು ಪೂಸುವುದು, ವಸ್ತ್ರವನ್ನು ಹೊದ್ದಿಸುವುದು–ಇವೇ ಮುಂತಾದ ಸೇವೆಗಳಿಂದ ದೇವತೆಗಳನ್ನು ಆರಾಧಿಸು ವಂತೆಯೇ ನನ್ನನ್ನೂ ಆರಾಧಿಸಿದನು. ಸ್ವರ್ಗಾಪವರ್ಗಗಳ ಪ್ರಾಪ್ತಿ, ಪೃಥ್ವಿ ಯಲ್ಲಿರುವ ಮತ್ತು ರಸಾತಲದಲ್ಲಿರುವ ಸಂಪತ್ತುಗಳ ಪ್ರಾಪ್ತಿ ಮತ್ತು ಸಮಸ್ತಯೋಗನಿಧಿಗಳ ಪ್ರಾಪ್ತಿ–ಈ ಎಲ್ಲವೂ ಶ್ರೀಕೃಷ್ಣನ ಚರಣಾರವಿಂದಗಳ ಪೂಜಾಫಲದಿಂದಲೇ ಲಭಿಸುತ್ತದೆ. ಅವನ ಚರಣಾರವಿಂದಗಳ ಅರ್ಚನೆಯೇ ಇವುಗಳೆಲ್ಲದರ ಪ್ರಾಪ್ತಿಗೆ ಮೂಲಸ್ರೋತವಾಗಿದೆ."

ಲಕ್ಷ್ಮೀಪತಿಯ ನಿವಾಸದಿಂದ ಬರಿಗೈಯಲ್ಲಿ ಹೋಗುತ್ತಿರುವೆನೆಂಬುದು ಸುದಾಮನ ಮನಸ್ಸಿನಲ್ಲಿ ಸುಳಿಯದೇ ಇರಲಿಲ್ಲ. ಅದಕ್ಕೆ ಸಮಾಧಾನವನ್ನು ತಾನೇ ಹೇಳಿಕೊಂಡನು :

**ಅಧನೋಽಯಂ ಧನಂ ಪ್ರಾಪ್ಯ ಮಾದ್ಯನ್ನುಚ್ಚೈರ್ನ ಮಾಂ ಸ್ಮರೇತ್ ।**
**ಇತಿ ಕಾರುಣಿಕೋ ನೂನಂ ಧನಂ ಮೇಽಭೂರಿ ನಾದದಾತ್ ॥೨೦॥**

"ಈ ದರಿದ್ರಬ್ರಾಹ್ಮಣನು ನನ್ನಿಂದ ಅಪಾರವಾದ ಧನವನ್ನು ಪಡೆದುಗರ್ವಿಷ್ಠನಾಗಿ ನನ್ನನ್ನು ಮರೆತುಬಿಡಬಾರದು'–ಎಂಬ ಕಾರಣದಿಂದ ಪರಮಕಾರುಣಿಕನಾಗಿ ನನ್ನ ಗೆಳೆಯನು ನನಗೆ ಸ್ವಲ್ಪವಾದರೂ ಧನವನ್ನು ಅನುಗ್ರಹಿಸಲಿಲ್ಲ–ಹೀಗೆ ಮಾಡಿದ್ದು ಉಚಿತವೇ ಆಗಿದೆ."

ಸುದಾಮನು ಇದೇ ಮುಂತಾಗಿ ಯೋಚಿಸುತ್ತಾ ಶ್ರೀಕೃಷ್ಣನ ಆತಿಥ್ಯ

ವನ್ನು ಬಾರಿ-ಬಾರಿಗೂ ಸ್ಮರಿಸುತ್ತಾ ತನ್ನ ಮನೆಯ ಬಳಿಗೆ ಬಂದನು. ತಾನು ಹಿಂದೆ ವಾಸಮಾಡುತ್ತಿದ್ದ ಜೋಪಡಿಯು ಅಲ್ಲಿ ಕಾಣಿಸಲೇ ಇಲ್ಲ. ಸೂರ್ಯಾಗ್ನಿ-ಚಂದ್ರರ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದ ರತ್ನಖಚಿತವಾದ ಗೋಪುರಗಳಿಂದ ಆ ಸ್ಥಳವು ಸಮಾವೃತವಾಗಿದ್ದಿತು. ಅರಮನೆಗಳ ಸುತ್ತಲೂ ಉಪವನಗಳೂ ಉದ್ಯಾನಗಳೂ ಕಂಗೊಳಿಸುತ್ತಿದ್ದುವು. ಉಪವನೋದ್ಯಾನಗಳಲ್ಲಿದ್ದ ಮರಗಳ ಮೇಲೆ ವಿಧ-ವಿಧವಾದ ಪಕ್ಷಿಗಳು ಕುಳಿತು ಚಿಲಿ-ಪಿಲಿಗುಟ್ಟುತ್ತಿದ್ದುವು. ಅಲ್ಲಿದ್ದ ಸರೋವರಗಳಲ್ಲಿ ಅರಳಿದ ಕನ್ನೈದಿಲೆ, ತಾವರೆ, ಕೆಂದಾವರೆಗಳೂ ಇದ್ದು ಆ ಸರೋವರಗಳು ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿದ್ದುವು. ಹರಿಣಾಕ್ಷಿಯರೂ, ಪುರುಷರೂ ಸುಂದರವಾದ ವಸ್ತ್ರಾಭರಣಗಳಿಂದ ಸಮಲಂಕೃತರಾಗಿ ಅಲ್ಲಲ್ಲಿ ಓಡಾಡುತ್ತಿದ್ದರು. ತನ್ನ ಜೋಪಡಿಯಿದ್ದ ಸ್ಥಳದಲ್ಲಿ ಅಂತಹ ಸರ್ವಾಂಗ ಸುಂದರವಾದ ಅರಮನೆಗಳಿದ್ದುದನ್ನು ಕಂಡು ಸುದಾಮನು ಭ್ರಾಂತನಾದನು.

**ಕಿಮಿದಂ ಕಸ್ಯ ವಾ ಸ್ಥಾನಂ ಕಥಂ ತದಿದಮಿತ್ಯಭೂತ್ ॥೨೬॥**

'ಇದೇನಿದು? ಇದು ಯಾರ ನಿವಾಸ? ನಾವಿದ್ದಮನೆಯೇ ಇದಾ ಗಿದ್ದರೆ ಇದು ಹೇಗಾಯಿತು?'–ಹೀಗೆಲ್ಲಾ ಪರಿಪರಿಯಾಗಿ ಯೋಚಿಸು ತ್ತಿದ್ದನು.

ಆ ವೇಳೆಗೆ ಅಲ್ಲಿದ್ದ ದೇವತೆಗಳಂತೆಯೇ ಪ್ರಕಾಶಮಾನರಾಗಿದ್ದ ನರ ನಾರಿಯರು ಗೀತ-ವಾದ್ಯಗಳ ಸಮೇತರಾಗಿ ಬಂದು ಮಹಾಭಾಗ್ಯಶಾಲಿ ಯಾದ ಸುದಾಮನನ್ನು ಸ್ವಾಗತಿಸಿದರು.

ಪತಿದೇವನು ಆಗಮಿಸಿದುದನ್ನು ಕೇಳಿ ಬ್ರಾಹ್ಮಣನ ಪತ್ನಿಗೆ ಪರಮಾ ನಂದವಾಯಿತು. ಅವನನ್ನು ಇದಿರ್ಗೊಂಡು ಕರೆತರುವ ಸಲುವಾಗಿ ಬ್ರಾಹ್ಮಣಿಯು ಅವಸರದಿಂದಲೂ ಸಂಭ್ರಮದಿಂದಲೂ ಮೇಲೆದ್ದು ಹೊರ ಬಂದಳು. ಆ ಸಮಯದಲ್ಲವಳು ಕಮಲವನದಿಂದ ಆಗಮಿಸಿದ ಸಾಕ್ಷಾತ್ ಲಕ್ಷ್ಮೀದೇವಿಯಂತೆಯೇ ಕಾಣುತ್ತಿದ್ದಳು. ಪ್ರಿಯಕರನನ್ನು ನೋಡಿದೊಡನೆಯೇ ಪ್ರೇಮದ ಔತ್ಸುಕ್ಯದಿಂದ ಆಕೆಯ ಕಣ್ಣುಗಳಲ್ಲಿ ಆನಂದಬಾಷ್ಪವು ಹರಿಯತೊಡಗಿತು. ಕಣ್ಣುಗಳನ್ನು ಮುಚ್ಚಿಕೊಂಡು ಮನಸ್ಸಿನಿಂದಲೇ

ಪತಿದೇವನಿಗೆ ನಮಸ್ಕರಿಸಿದಳು ಮತ್ತು ಮನಸ್ಸಿನಿಂದಲೇ ಅವನನ್ನು ಗಾಢವಾಗಿ ಆಲಿಂಗಿಸಿಕೊಂಡಳು.

ಪರೀಕ್ಷಿತಮಹಾರಾಜ! ಬ್ರಾಹ್ಮಣನ ಪತ್ನಿಯು, ಚಿನ್ನದ ಹಾರಗಳನ್ನು ಧರಿಸಿದ್ದ ಸೇವಕಿಯರ ಮಧ್ಯದಲ್ಲಿ ವಿಮಾನಸ್ಥಳಾದ ದೇವಾಂಗನೆಯಂತೆಯೇ ಅತ್ಯಂತ ಶೋಭಾಯಮಾನಳಾಗಿ ಕಾಣುತ್ತಿದ್ದಳು. ತನ್ನ ಪತ್ನಿಯು ಹಾಗೆ ಕಂಗೊಳಿಸುತ್ತಿರುವುದನ್ನು ನೋಡಿ ಸುದಾಮನು ಅಚ್ಚರಿಗೊಂಡನು. ತನ್ನ ಕಣ್ಣುಗಳನ್ನೇ ನಂಬಲು ಅವನಿಗೆ ಸಾಧ್ಯವಾಗಲಿಲ್ಲ. ಪುನಃ ಪುನಃ ಆತನು ನೋಡಿದನು. ದೇವಕನ್ಯೆಯಂತೆಯೇ ಇದ್ದ ತನ್ನ ಪತ್ನಿಯನ್ನು ನೋಡಿ ಸುದಾಮನು ಪರಮಪ್ರೀತನಾಗಿ–ನೂರಾರು ಮಣಿಸ್ತಂಭಗಳಿಂದ ಕೂಡಿರುವ ಇಂದ್ರನ ಅರಮನೆಯನ್ನು ಶಚೀಪತಿಯಾದ ಇಂದ್ರನು ಶಚೀದೇವಿಯೊಡನೆ ಪ್ರವೇಶಿಸುವಂತೆ–ಸರ್ವಾಂಗಸುಂದರವಾಗಿದ್ದ ಅರಮನೆಯನ್ನು ತನ್ನ ಪತ್ನಿಯೊಡನೆ ಪ್ರವೇಶಿಸಿದನು. ಆ ಅರಮನೆಯಲ್ಲಿ ಹಾಲಿನ ನೊರೆಯಂತೆ ಬೆಳ್ಳಗಿದ್ದ ಹಾಸಿಗೆಗಳೂ, ದಂತದಿಂದ ನಿರ್ಮಿತವಾದ ಮಂಚಗಳೂ, ಸುವರ್ಣಖಚಿತವಾದ ಹೊದ್ದಿಕೆಗಳೂ, ಚಿನ್ನದ ಹಿಡಿಗಳಿದ್ದ ಛತ್ರ-ಚಾಮರ ಗಳೂ, ಸುವರ್ಣಮಯವಾದ ಆಸನಗಳೂ, ಅವುಗಳ ಮೇಲೆ ಮೃದುವಾದ ಮೆತ್ತೆಗಳೂ, ಮೇಲ್ಭಾಗದಲ್ಲಿ ತೂಗುಹಾಕಿದ್ದ ಮುತ್ತಿನ ಗೊಂಚಲುಗಳೂ ಸುಂದರವಾದ ಮೇಲ್ಕಟ್ಟುಗಳೂ ಇದ್ದುವು. ಆ ಅರಮನೆಯ ಸ್ವಚ್ಛವಾಗಿದ್ದ ಮತ್ತು ಸ್ಫಟಿಕಮಣಿಮಯವಾಗಿದ್ದ ಗೋಡೆಗಳಲ್ಲಿಯೂ ಮರಕತಮಣಿ ಮಯವಾಗಿದ್ದ ಗೋಡೆಗಳಲ್ಲಿಯೂ ಈ ರತ್ನನಿರ್ಮಿತವಾದ ಸ್ತ್ರೀವಿಗ್ರಹಗಳಿದ್ದು ಅವುಗಳ ಕೈಗಳಲ್ಲಿ ರತ್ನಖಚಿತವಾದ ದೀಪಗಳು ಕಂಗೊಳಿಸುತ್ತಿದ್ದುವು. ಇಂದ್ರನ ಅರಮನೆಯಂತೆಯೇ ಇದ್ದ ಭವ್ಯವಾದ ಅರಮನೆಯನ್ನೂ, ಅದರಲ್ಲಿದ್ದ ಸಮಸ್ತವಾದ ಸಂಪತ್ತುಗಳ ಸಮೃದ್ಧಿಯನ್ನೂ, ನೋಡಿ ಬ್ರಾಹ್ಮಣನು–ಅದು ಹೇಗೆ ಬಂತೆಂಬುದಕ್ಕೆ ಕಾರಣವನ್ನು ತಿಳಿಯಲಾಗದೇ ಶಾಂತಚಿತ್ತನಾಗಿ ಪುನಃ ಪುನಃ ವಿಚಾರಮಾಡಿದನು.

ನೂನಂ ಬತೈತನ್ಮಮ ದುರ್ಭಗಸ್ಯ
ಶಶ್ವದ್ದರಿದ್ರಸ್ಯ ಸಮೃದ್ಧಿಹೇತುಃ ।

ಮಹಾವಿಭೂತೇರವಲೋಕತೋಽನ್ಯೋ
ನೈವೋಪಪದ್ಯೇತ ಯದೂತ್ತಮಸ್ಯ ॥೩೩॥

“ಭಾಗ್ಯಹೀನನಾದ, ಕಡುಬಡವನಾದ ನನ್ನ ಈ ಸಂಪತ್ಸಮೃದ್ಧಿಗೆ ಕಾರಣವೆಂದರೆ ಪರಮೈಶ್ವರ್ಯಶಾಲಿಯಾದ, ಯದುವಂಶಶಿರೋಮಣಿಯಾದ ಭಗವಾನ್ ಶ್ರೀಕೃಷ್ಣನ ಕೃಪಾಕಟಾಕ್ಷ. ಇದು ಹೊರತಾಗಿ ಬೇರೆ ಯಾವ ಕಾರಣವೂ ಇಲ್ಲ. ಪರಮದಯಾಳುವಾದ ಶ್ರೀಕೃಷ್ಣನ ಕೇವಲ ಕೃಪಾಕಟಾಕ್ಷವೀಕ್ಷಣದಿಂದಲೇ ನನಗೆ ಈ ಅಪಾರವಾದ ಸಂಪತ್ತು ಲಭಿಸಿದೆ.

ನನ್ವಬ್ರುವಾಣೋ ದಿಶತೇ ಸಮಕ್ಷಂ
ಯಾಚಿಷ್ಣವೇ ಭೂರ್ಯಪಿ ಭೂರಿಭೋಜಃ ।
ಪರ್ಜನ್ಯವತ್ತತ್ಸ್ವಯಮೀಕ್ಷಮಾಣೋ
ದಶಾರ್ಹಕಾಣಾಮೃಷಭಃ ಸಖಾ ಮೇ ॥೩೪॥

ದಾಶಾರ್ಹಶ್ರೇಷ್ಠನಾದ, ನನ್ನ ಪ್ರಿಯಸಖನಾದ, ಪೂರ್ಣಕಾಮನಾದ, ಲಕ್ಷ್ಮೀಪತಿಯಾದ, ಅನಂತವಾದ ಭೋಗಸಾಮಗ್ರಿಗಳನ್ನು ಹೊಂದಿರುವ ಶ್ರೀಕೃಷ್ಣನು ಪ್ರತ್ಯಕ್ಷವಾಗಿ ಏನೊಂದೂ ಹೇಳುವುದಿಲ್ಲ. ತಾನೇ ಚೆನ್ನಾಗಿ ಪರಿಶೀಲಿಸಿ, ಯಾಚಿಸುವ ಭಕ್ತನ ಮನಸ್ಸಿನಲ್ಲಿ ಏನಿರುವುದೆಂಬುದನ್ನು ತಿಳಿದು ಅಪಾರವಾದ ಐಶ್ವರ್ಯವನ್ನೇ ಕೊಟ್ಟುಬಿಡುತ್ತಾನೆ. ಈ ವಿಷಯದಲ್ಲಿ ನನ್ನ ಗೆಳೆಯನು ಪರ್ಜನ್ಯನಂತೆ. ಪರ್ಜನ್ಯನು ರಾತ್ರಿಯವೇಳೆಯಲ್ಲಿ ಹೇಳದೇ-ಕೇಳದೇ ಮಳೆಗರೆದು ಬೆಳಗಾದೊಡನೆಯೇ ಉತ್ತು-ಬಿತ್ತಲು ರೈತನಿಗೆ ಅನುಕೂಲಮಾಡಿಕೊಡುತ್ತಾನೆ. ರಾತ್ರಿಯಲ್ಲಿ ಮಳೆಯಾಯಿತೆಂಬುದೇ ರೈತನಿಗೆ ತಿಳಿದಿರುವುದಿಲ್ಲ. ಹಾಗೆಯೇ ನನ್ನ ಮಿತ್ರನು ತನ್ನ ಭಕ್ತರಿಗೆ ಬೇಕಾದುದೆಲ್ಲವನ್ನೂ ಹೇಳದೇ-ಕೇಳದೇ ದಯಪಾಲಿಸುತ್ತಾನೆ. ಅವನನ್ನು ಅನನ್ಯಭಕ್ತಿಯಿಂದ ನೆನೆದರೆ ಸಾಕು. ಭಕ್ತರ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಾನೆ.

ಕಿಞ್ಚಿತ್ಕರೋತ್ಯುರ್ವಪಿ ಯತ್ಸ್ವದತ್ತಂ
ಸುಹೃತ್ಕೃತಂ ಫಲ್ಗ್ವಪಿ ಭೂರಿಕಾರಿ ।
ಮಯೋಪನೀತಾಂ ಪೃಥುಕೈಕಮುಷ್ಟಿಂ
ಪ್ರತ್ಯಗ್ರಹೀತ್ಪ್ರೀತಿಯುತೋ ಮಹಾತ್ಮಾ ॥೩೫॥

ನನ್ನ ಪ್ರಿಯಸಖನಾದ ಕೃಷ್ಣಮೂರ್ತಿಯ ಔದಾರ್ಯವನ್ನು ಎಷ್ಟೆಂದು ಕೊಂಡಾಡಲಿ! ತನ್ನ ಭಕ್ತರಿಗೆ ಅಪಾರವಾಗಿ ಕೊಟ್ಟುಬಿಡುತ್ತಾನೆ. ಆದರೆ ಅಲ್ಪವೇ ಕೊಟ್ಟೆನೆಂದು ಭಾವಿಸಿಕೊಳ್ಳುತ್ತಾನೆ. ಅವನ ಪ್ರಿಯಭಕ್ತರು ಅವನಿಗೆ ಸ್ವಲ್ಪವೇ ಉಪಾಯನವನ್ನು ಕೊಟ್ಟರೂ ಅದನ್ನು ಅಪಾರವೆಂದು ಅವನು ಭಾವಿಸಿಕೊಳ್ಳುತ್ತಾನೆ. ನಾನು ತೆಗೆದುಕೊಂಡು ಹೋಗಿದ್ದ ಒಂದು ಮುಷ್ಟಿ ಅವಲಕ್ಕಿಯನ್ನೇ ಮಹಾತ್ಮನಾದ ಶ್ರೀಕೃಷ್ಣನು ಅತಿ ದೊಡ್ಡ ಕಾಣಿಕೆಯೆಂದು ಭಾವಿಸಿ ಅತ್ಯಾದರದಿಂದ ಸ್ವೀಕರಿಸಿದನು.

**ತಸ್ಯೈವ ಮೇ ಸೌಹೃದಸಖ್ಯಮೈತ್ರೀ**
**ದಾಸ್ಯಂ ಪುನರ್ಜನ್ಮನಿ ಜನ್ಮನಿ ಸ್ಯಾತ್ ।**
**ಮಹಾನುಭಾವೇನ ಗುಣಾಲಯೇನ**
**ವಿಷಜ್ಜತಸ್ತತ್ಪುರುಷಪ್ರಸಙ್ಗಃ ॥೩೬॥**

ಜನ್ಮ-ಜನ್ಮಗಳಲ್ಲಿಯೂ ನನಗೆ ನನ್ನ ಪ್ರಿಯಸಖನಾದ, ಮಹಾನುಭಾವನಾದ, ಸಮಸ್ತಗುಣಗಳಿಗೂ ಏಕಮಾತ್ರನಿವಾಸಸ್ಥಾನನಾದ ಶ್ರೀಕೃಷ್ಣನೊಬ್ಬನ ಸೌಹೃದ-ಸಖ್ಯ-ಮೈತ್ರಿ-ದಾಸ್ಯಗಳು ಲಭಿಸಲಿ. ಶ್ರೀಕೃಷ್ಣನ ಪಾದಾರವಿಂದಗಳಲ್ಲಿಯೇ ವಿಶೇಷವಾದ ಅನುರಾಗವುಳ್ಳ ನನಗೆ ಅವನ ಪ್ರೇಮೀಭಕ್ತರೊಡನೆ ಸಹವಾಸವು ಸದಾ ಲಭಿಸಲಿ.

**ಭಕ್ತಾಯ ಚಿತ್ರಾ ಭಗವಾನ್ ಹಿ ಸಮ್ಪದೋ**
**ರಾಜ್ಯಂ ವಿಭೂತೀರ್ನ ಸಮರ್ಥಯತ್ಯಜಃ ।**
**ಅದೀರ್ಘಬೋಧಾಯ ವಿಚಕ್ಷಣಃ ಸ್ವಯಂ**
**ಪಶ್ಯನ್ನಿಪಾತಂ ಧನಿನಾಂ ಮದೋದ್ಭವಮ್ ॥೩೭॥**

ಧನಿಕರಾದವರಿಗೆ ಧನಮದದಿಂದ ಉಂಟಾಗುವ ಅಧಃಪತನವನ್ನು ನೋಡಿ, ವಿಚಕ್ಷಣನಾದ, ಹುಟ್ಟು-ಸಾವುಗಳಿಲ್ಲದ, ಪರಮಕಾರುಣಿಕನಾದ ಶ್ರೀಹರಿಯು, ಐಶ್ವರ್ಯದಿಂದ ಮುಂದೇನಾಗುವುದೆಂಬುದನ್ನು ತಿಳಿಯುವ ಸಾಮರ್ಥ್ಯವಿಲ್ಲದ ತನ್ನ ಭಕ್ತರಿಗೆ ವಿಚಿತ್ರವಾದ ಸಂಪತ್ತುಗಳನ್ನೂ ರಾಜ್ಯವನ್ನೂ, ಐಶ್ವರ್ಯಗಳನ್ನೂ ದಯಪಾಲಿಸುವುದಿಲ್ಲ. (ನನ್ನನ್ನು ಪರೀಕ್ಷಿಸುವ ಸಲುವಾಗಿಯೇ ಈ ಐಶ್ವರ್ಯವನ್ನು ಕೊಟ್ಟಿರಬಹುದು.)”

ಪರೀಕ್ಷಿತಮಹಾರಾಜ! ಶ್ರೀಕೃಷ್ಣನ ವಿಷಯದಲ್ಲಿ ಅತ್ಯಂತಭಕ್ತಿ ಭಾವದಿಂದಿದ್ದ ಸುದಾಮನು ತನ್ನ ಬುದ್ಧಿಯಲ್ಲಿ ಐಶ್ವರ್ಯಾದಿಗಳು ಅನರ್ಥ ಕಾರಿಗಳೆಂದು ನಿಶ್ಚಯಿಸಿ, ಒಂದೊಂದನ್ನಾಗಿ ಎಲ್ಲವನ್ನೂ ತ್ಯಾಗಮಾಡಲು ಉದ್ದೇಶಿಸಿ ತಾತ್ಕಾಲಿಕವಾಗಿ ಅನಾಸಕ್ತನಾಗಿಯೇ ಪತ್ನಿಯೊಡನೆ ವಿಷಯ ಸುಖಗಳನ್ನು ಅನುಭವಿಸುತ್ತಿದ್ದನು.

**ತಸ್ಯ ವೈ ದೇವದೇವಸ್ಯ ಹರೇರ್ಯಜ್ಞಪತೇಃ ಪ್ರಭೋಃ ।**
**ಬ್ರಾಹ್ಮಣಾಃ ಪ್ರಭವೋ ದೈವಂ ನ ತೇಭ್ಯೋ ವಿದ್ಯತೇ ಪರಮ್ ॥೩೯॥**

ಪರೀಕ್ಷಿತಮಹಾರಾಜ! ಯಜ್ಞಪತಿಯಾದ, ದೇವತೆಗಳಿಗೆಲ್ಲರಿಗೂ ಆರಾಧ್ಯದೇವನಾದ, ಸಮಸ್ತಜಗತ್ತುಗಳಿಗೂ ಪ್ರಭುವಾದ ಆ ಶ್ರೀಹರಿಗೆ ಬ್ರಾಹ್ಮಣರೇ ಪ್ರಭುಗಳು ಮತ್ತು ದೇವತೆಗಳು. ಹೀಗೆ ಪರಾತ್ಪರನಾದ ಶ್ರೀಕೃಷ್ಣನು ಭಾವಿಸಿಕೊಂಡಿದ್ದಾನೆ. ಆದುದರಿಂದ ಬ್ರಾಹ್ಮಣರಿಗಿಂತಲೂ ಶ್ರೇಷ್ಠರಾದವರು ಪ್ರಪಂಚದಲ್ಲಿ ಬೇರೆಯಾರೂ ಇರುವುದಿಲ್ಲ.

ಪರೀಕ್ಷಿತ! ಹೀಗೆ ಭಗವಂತನ ಪ್ರಿಯಮಿತ್ರನಾದ ಸುದಾಮ ಬ್ರಾಹ್ಮಣನು, ಯಾರಿಂದಲೂ ಜಯಿಸಲ್ಪಡದ ಶ್ರೀಹರಿಯು ತನ್ನ ಸೇವಕರಾದ ಭಕ್ತರಿಂದ ಜಯಿಸಲ್ಪಟ್ಟುದನ್ನು ಕಂಡು ಅವನ ಧ್ಯಾನದಲ್ಲಿಯೇ ಸದಾ ನಿರತನಾಗಿರುತ್ತಿದ್ದನು. ಧ್ಯಾನದ ಆವೇಗದಿಂದಾಗಿ ಅವಿದ್ಯೆಯೆಂಬ ಗಂಟು ಬಿಚ್ಚಿಹೋಗಿ ಅವನು ಅತ್ಯಲ್ಪಸಮಯದಲ್ಲಿಯೇ ಸತ್ಪುರುಷರಿಗೆ ಪರಮಾ ಶ್ರಯವಾದ ಭಗವಂತನ ಧಾಮವನ್ನು ಸೇರಿದನು.

**ಏತದ್ಬ್ರಹ್ಮಣ್ಯದೇವಸ್ಯ ಶ್ರುತ್ವಾ ಬ್ರಹ್ಮಣ್ಯತಾಂ ನರಃ ।**
**ಲಬ್ಧಭಾವೋ ಭಗವತಿ ಕರ್ಮಬನ್ಧಾದ್ವಿಮುಚ್ಯತೇ ॥೪೧॥**

ಪರೀಕ್ಷಿತನೇ! ಬ್ರಾಹ್ಮಣರನ್ನು ತನ್ನ ಇಷ್ಟದೇವತೆಗಳೆಂದು ಭಾವಿಸಿರುವ ಭಗವಂತನಾದ ಶ್ರೀಕೃಷ್ಣನ ಬ್ರಾಹ್ಮಣಭಕ್ತಿಯ ಈ ಪ್ರಸಂಗವನ್ನು ಯಾರು ಕೇಳುವರೋ ಅವರು ಭಗವಂತನ ಚರಣಕಮಲಗಳಲ್ಲಿ ಪ್ರೇಮಭಾವವನ್ನು ಹೊಂದಿ ಅವನ ಪರಮಭಕ್ತರಾಗಿ ಕರ್ಮಬಂಧನಗಳಿಂದ ಬಿಡುಗಡೆ ಹೊಂದುತ್ತಾರೆ.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೧ನೆಯ ಅಧ್ಯಾಯವು ಮುಗಿಯಿತು.

---

## ಬಲರಾಮ-ಕೃಷ್ಣರು ಗೋಪ-ಗೋಪಿಯರನ್ನು ಸಂಧಿಸಿದುದು

ಶ್ರೀಶುಕಮುನಿಗಳು ಹೇಳುತ್ತಾರೆ :

**ಅಥೈಕದಾ ದ್ವಾರವತ್ಯಾಂ ವಸತೋ ರಾಮಕೃಷ್ಣಯೋಃ ।**
**ಸೂರ್ಯೋಪರಾಗಃ ಸುಮಹಾನಾಸೀತ್ಕಲ್ಪಕ್ಷಯೇ ಯಥಾ ॥೧॥**

"ಪರೀಕ್ಷಿತಮಹಾರಾಜ! ಬಲರಾಮ-ಕೃಷ್ಣರು ದ್ವಾರಕಾಪಟ್ಟಣದಲ್ಲಿ ವಾಸಮಾಡುತ್ತಿದ್ದಾಗ ಒಮ್ಮೆ ಪ್ರಳಯಕಾಲದೋಪಾದಿಯಲ್ಲಿ ಮಹತ್ತರವಾದ ಪೂರ್ಣಗ್ರಾಸ ಸೂರ್ಯಗ್ರಹಣವುಂಟಾಯಿತು.

ಇದನ್ನು ತಿಳಿದು ಸೂರ್ಯಗ್ರಹಣವಾಗುವ ಮೊದಲೇ ಶ್ರೇಯಃ ಪ್ರಾಪ್ತಿಗಾಗಿ ಎಲ್ಲಕಡೆಗಳಿಂದಲೂ ಜನರು ಸಮಂತಪಂಚಕಕ್ಷೇತ್ರಕ್ಕೆ ಧಾವಿಸಿದರು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪರಶುರಾಮನು ಭೂಮಂಡಲವನ್ನೇ ಕ್ಷತ್ರಿಯರಿಂದ ರಹಿತವನ್ನಾಗಿಮಾಡುತ್ತಾ ರಾಜರ ರಕ್ತದ ಕೋಡಿಯಿಂದಲೇ ಎಲ್ಲಿ ಸಮಂತಪಂಚಕಗಳೆಂಬ ಐದು ಸರೋವರಗಳನ್ನು ನಿರ್ಮಿಸಿದನೋ ಅಂತಹ ಕ್ಷೇತ್ರಕ್ಕೆ ಸೂರ್ಯಗ್ರಹಣದ ಸಮಯದಲ್ಲಿ ಪ್ರಪಂಚದ ಜನರೆಲ್ಲರೂ ಆಗಮಿಸಿದರು. ಸಾಧಾರಣನಾದ ಮನುಷ್ಯನೊಬ್ಬನು ಪಾಪಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವಂತೆ ಮಹಾಶಕ್ತಿಶಾಲಿಯಾದ ಭಗವಾನ್ ಪರಶುರಾಮನು, ತನಗೂ ತಾನುಮಾಡಿದ ಕರ್ಮಕ್ಕೂ ಸಂಬಂಧವಿರದಿದ್ದರೂ, ದುಷ್ಟಕ್ಷತ್ರಿಯರ ಸಂಹಾರದಿಂದ ಅವನಿಗೆ ಪಾಪಲೇಶವಾದರೂ ಇರದಿದ್ದರೂ, ಲೋಕಮರ್ಯಾದೆಯನ್ನು ರಕ್ಷಿಸುವ ಸಲುವಾಗಿ ಅಥವಾ ಲೋಕಶಿಕ್ಷಣಕ್ಕಾಗಿ ಸಮಂತಪಂಚಕಕ್ಷೇತ್ರದಲ್ಲಿಯೇ ಮಹಾಯಜ್ಞವನ್ನು ಮಾಡಿದನು.

ಮಹತ್ತ್ವಪೂರ್ಣವಾದ ಆ ತೀರ್ಥಯಾತ್ರೆಯ ಸಮಯದಲ್ಲಿ ಭಾರತವರ್ಷದ ಸಮಸ್ತಪ್ರಾಂತಗಳ ಪ್ರಜೆಗಳೂ ಕುರುಕ್ಷೇತ್ರಕ್ಕೆ ಆಗಮಿಸಿದರು. ಯದುವಂಶೀಯರಾದ ಅಕ್ರೂರ, ವಸುದೇವ, ಉಗ್ರಸೇನ, ಗದ, ಪ್ರದ್ಯುಮ್ನ, ಸಾಂಬ–ಇವರೇ ಮೊದಲಾದವರು ಸೂರ್ಯಗ್ರಹಣದ ಸಮಯ

ದಲ್ಲಿ ತಮ್ಮ-ತಮ್ಮ ಪಾಪಗಳನ್ನು ನಿವಾರಿಸಿಕೊಳ್ಳುವ ಸಲುವಾಗಿ ಕುರುಕ್ಷೇತ್ರಕ್ಕೆ ಆಗಮಿಸಿದ್ದರು. ಪ್ರದ್ಯುಮ್ನನ ಮಗನಾದ ಅನಿರುದ್ಧ, ಯದುವೀರರ ಸೇನಾಪತಿಯಾದ ಕೃತವರ್ಮಾ ಇವರಿಬ್ಬರೂ, ಸುಚಂದ್ರ, ಶುಕ, ಚಾರಣ–ಇವರೇ ಮುಂತಾದವರೊಡನೆ ನಗರದ ರಕ್ಷಣೆಗಾಗಿ ದ್ವಾರಕೆ ಯಲ್ಲಿಯೇ ಉಳಿದುಕೊಂಡರು. ಮಹಾತೇಜಸ್ವಿಗಳಾಗಿದ್ದ ಯದುವೀರರು ಚಿನ್ನದ ಸರಗಳನ್ನೂ, ಸುಗಂಧದಿಂದ ಯುಕ್ತವಾದ ಪುಷ್ಪಮಾಲೆಗಳನ್ನೂ, ಬಹುಮೂಲ್ಯವಾದ ವಸ್ತುಗಳನ್ನೂ ಮತ್ತು ಕವಚಗಳನ್ನೂ ಧರಿಸಿ ಮತ್ತಷ್ಟು ಶೋಭಾಯಮಾನರಾಗಿ ಕಾಣುತ್ತಿದ್ದರು. ಅವರೆಲ್ಲರೂ ದೇವತೆ ಗಳ ವಿಮಾನಕ್ಕೆ ಸದೃಶವಾದ ರಥಗಳಲ್ಲಿಯೂ, ಸಮುದ್ರದ ಅಲೆಗಳಂತೆ ಚಲಿಸುವ ಕುದುರೆಗಳ ಮೇಲೂ, ಮೇಘಸದೃಶವಾದ ಮತ್ತು ಘೀಳಿಡುತ್ತಿದ್ದ ಆನೆಗಳಮೇಲೂ, ವಿದ್ಯಾಧರರಿಗೆ ಸದೃಶರಾದ ಮನುಷ್ಯರಿಂದ ಒಯ್ಯಲ್ಪಡು ತ್ತಿದ್ದ ಪಲ್ಲಕ್ಕಿಗಳಲ್ಲಿಯೂ ತಮ್ಮ-ತಮ್ಮ ಮಡದಿಯರೊಂದಿಗೆ ಕುಳಿತು ಸ್ವರ್ಗದ ದೇವತೆಗಳಂತೆಯೇ ಕುರುಕ್ಷೇತ್ರಕ್ಕೆ ಪ್ರಯಾಣಮಾಡಿದರು. ಮಹಾಭಾಗ್ಯಶಾಲಿಗಳಾದ ಯದುಕುಮಾರರು ತಮ್ಮ ಪತ್ನಿಯರೊಡನೆ ಸಮಂತಪಂಚಕವನ್ನು ಸೇರಿದನಂತರ ಏಕಾಗ್ರಚಿತ್ತರಾಗಿ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಉಪವಾಸದಿಂದಿದ್ದು ಗ್ರಹಣದ ಪುಣ್ಯಕಾಲವನ್ನು ನಿರೀಕ್ಷಿಸು ತ್ತಿದ್ದರು. ಸೂರ್ಯಗ್ರಹಣವು ಪ್ರಾರಂಭವಾಗುತ್ತಿದ್ದಂತೆ ಯದುವೀರರು ವಸ್ತ್ರಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಮತ್ತು ಚಿನ್ನದ ಸರಗಳಿಂದಲೂ ಸಮಲಂಕೃತವಾದ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದರು. ಗ್ರಹಣದ ಮೋಕ್ಷವಾಗುತ್ತಲೇ ಅವರು ಪರಶುರಾಮನಿಂದ ನಿರ್ಮಿತವಾಗಿದ್ದ ಸಮಂತಪಂಚಕವೆಂಬ ಕುಂಡಗಳಲ್ಲಿ ವಿಧಿವತ್ತಾಗಿ ಸ್ನಾನಮಾಡಿ, ಬ್ರಾಹ್ಮಣರಿಗೆ ಮೃಷ್ಟಾನ್ನವನ್ನೂ ಭೋಜನಮಾಡಿಸಿ, ಶ್ರೀಕೃಷ್ಣನಲ್ಲಿ ತಮಗೆ ಅಚಲವಾದ ಮತ್ತು ನಿರಂತರವಾದ ಭಕ್ತಿಯಿರುವಂತೆ ಆಶೀರ್ವದಿಸಬೇಕೆಂದು ಬ್ರಾಹ್ಮಣರನ್ನು ಪ್ರಾರ್ಥಿಸಿಕೊಂಡರು. **'ಕೃಷ್ಣೇ ವೋ ನಿರನ್ತರಾಭಕ್ತಿ ರಸ್ತು'** 'ಶ್ರೀಕೃಷ್ಣನಲ್ಲಿ ನಿಮಗೆ ನಿರಂತರವಾದ ಭಕ್ತಿಯಿರಲಿ'–ಎಂದು ಬ್ರಾಹ್ಮಣರು ಆಶೀರ್ವದಿಸಿದನಂತರ, ಬ್ರಾಹ್ಮಣರ ಅನುಮತಿಯನ್ನು ಪಡೆದು ತಾವೂ ಭೋಜನಮಾಡಿ, ದಟ್ಟವಾಗಿದ್ದ ವೃಕ್ಷಗಳ ತಣ್ಣನೆಯ ನೆರಳಿನಲ್ಲಿ

ತಮ-ತಮಗೆ ತೋರಿದಂತೆ ಡೇರೆಗಳನ್ನು ಹಾಕಿಕೊಂಡು ವಿಶ್ರಮಿಸಿಕೊಳ್ಳು ತ್ತಿದ್ದರು. ಹೀಗೆ ಸ್ವಲ್ಪಹೊತ್ತು ವಿಶ್ರಮಿಸಿಕೊಂಡನಂತರ ಯದುವೀರರು ಕುರುಕ್ಷೇತ್ರಕ್ಕೆ ಆಗಮಿಸಿದ್ದ ತಮ್ಮ ಹಲವಾರು ಸುಹೃದರನ್ನೂ ಬಂಧುಗಳನ್ನೂ ರಾಜರನ್ನೂ ಸಂದರ್ಶಿಸತೊಡಗಿದರು. ಮತ್ಸ್ಯ, ಉಶೀನರ, ಕೋಸಲ, ವಿದರ್ಭ, ಕುರು, ಸೃಂಜಯ, ಕಾಂಭೋಜ, ಕೈಕಯ, ಮದ್ರ, ಕುಂತಿ, ಆನರ್ತ, ಕೇರಳ–ಇವೇ ಮುಂತಾದ ದೇಶಗಳ ರಾಜರನ್ನೂ ತಮ್ಮ ಮಿತ್ರರಾಜರನ್ನೂ ಮತ್ತು ಶತ್ರುರಾಜರನ್ನೂ ಯಾದವರು ಸಂದರ್ಶಿಸಿದರು. ಇವರೇ ಅಲ್ಲದೇ ಯದುವಂಶೀಯರಿಗೆ ಪರಮಹಿತೈಷಿಗಳಾದ ನಂದನೇ ಮೊದಲಾದ ಗೋಪರನ್ನೂ, ಬಹಳದಿವಸಗಳಿಂದ ಶ್ರೀಕೃಷ್ಣನ ದರ್ಶನಕ್ಕಾಗಿ ಹಾತೊರೆಯುತ್ತಿದ್ದ ಗೋಪಿಯರನ್ನೂ ಯದುಕುಮಾರರು ನೋಡಿದರು. ಬಹಳದಿವಸಗಳನಂತರ ಸಂಭವಿಸಿದ ಈ ಭೇಟಿಯಿಂದಾಗಿ ಯಾದವರು ಮತ್ತು ಗೋಪಾಲರು ಆನಂದಸಾಗರದಲ್ಲಿ ಮುಳುಗಿಹೋದರು. ಅನ್ಯೋನ್ಯ ಸಂದರ್ಶನದಿಂದಲೂ ಮತ್ತು ವಾರ್ತಾಲಾಪಗಳಿಂದಲೂ ಎಲ್ಲರಿಗೂ ಪರಮಾನಂದವಾಯಿತು. ಅವರು ಒಬ್ಬರನ್ನೊಬ್ಬರು ಬಾಚಿ ತಬ್ಬಿಕೊಂಡರು. ಅವರ ಹೃದಯಕಮಲಗಳು ಅರಳಿದುವು. ಆನಂದಬಾಷ್ಪಗಳು ಸುರಿದುವು. ಆನಂದದಿಂದ ಪುಳಕಿತವಾದ ಅವರ ರೋಮಕೋಟಿಗಳು ನಿಮಿರಿನಿಂತುವು. ಆನಂದದಿಂದ ಗದ್ಗದಿತವಾದ ಅವರಿಗೆ ಹೆಚ್ಚು ಮಾತನಾಡಲು ಸಾಧ್ಯವಾಗಲೇ ಇಲ್ಲ. ಆನಂದಸಾಗರದಲ್ಲಿ ಮುಳುಗಿಹೋಗಿದ್ದರು. ಪುರುಷರಂತೆಯೇ ಯದುಸ್ತ್ರೀಯರೂ ಮತ್ತು ಗೋಪಿಯರೂ ಅನಿರೀಕ್ಷಿತವಾದ ಮತ್ತು ಬಹಳ ಕಾಲಾನಂತರದ ಭೇಟಿಯಿಂದಾಗಿ ಆನಂದತುಂದಿಲರಾದರು. ಪರಸ್ಪರವಾಗಿ ಸೌಹಾರ್ದಭಾವವನ್ನು ಸೂಚಿಸುತ್ತಾ, ಮಂದಹಾಸವನ್ನು ಬೀರುತ್ತಾ ಕಡೆಗಣ್ಣಿನ ನೋಟದಿಂದ ಅನುರಾಗವನ್ನು ವ್ಯಕ್ತಪಡಿಸುತ್ತಾ ಪರಸ್ಪರವಾಗಿ ಆನಂದಿಸಿದರು. ಒಬ್ಬರನ್ನೊಬ್ಬರು ತೋಳುಗಳಿಂದ ಬಿಗಿದಪ್ಪಿಕೊಂಡು ಕುಂಕುಮಲಿಪ್ತವಾದ ಕುಚಗಳಿಂದ ಕುಚಗಳನ್ನು ಪರಸ್ಪರವಾಗಿ ಸಂಘಟಿಸುತ್ತಾ ಆನಂದ ಬಾಷ್ಪವನ್ನು ಸುರಿಸುತ್ತಾ ನಲಿದಾಡಿದರು. ಅನಂತರ ಅವರು ತಮಗಿಂತ ಹಿರಿಯರಾದವರಿಗೆ ನಮಸ್ಕಾರಮಾಡಿ ಆಶೀರ್ವಾದವನ್ನೂ ಪಡೆದು ತಮಗಿಂತ ಕಿರಿಯರಾದವರಿಂದ ನಮಸ್ಕಾರಮಾಡಿಸಿಕೊಂಡು,

ಆಶೀರ್ವದಿಸಿದರು. ಪರಸ್ಪರವಾಗಿ ಶ್ರೀಕೃಷ್ಣನ ಲೀಲಾಪ್ರಸಂಗಗಳನ್ನು ಜ್ಞಾಪಿಸಿಕೊಂಡು ಕೊಂಡಾಡುತ್ತಿದ್ದರು.

ಪರೀಕ್ಷಿತಮಹಾರಾಜ! ಕುಂತೀದೇವಿಯು ವಸುದೇವನೇ ಮೊದಲಾದ ತನ್ನ ಸಹೋದರರರನ್ನೂ, ತಂಗಿಯರನ್ನೂ, ಅವರ ಮಕ್ಕಳನ್ನೂ, ತಂದೆ-ತಾಯಿಗಳನ್ನೂ, ಸೋದರರ ಭಾರ್ಯೆಯರನ್ನೂ ಮತ್ತು ಸರ್ವೇಶ್ವರನಾದ ಶ್ರೀಕೃಷ್ಣನನ್ನೂ ನೋಡಿ ಮತ್ತು ಅವರೊಡನೆ ಪ್ರೇಮಾಲಾಪಗಳನ್ನು ಮಾಡಿ ಬಹಳ ಕಾಲದಿಂದ ತನ್ನ ಬಂಧುಗಳನ್ನು ಕಾಣದೇ ಇದ್ದುದರಿಂದ ಉಂಟಾಗಿದ್ದ ಕಳವಳವನ್ನು ಕಳೆದುಕೊಂಡಳು. ಆ ಸಮಯದಲ್ಲಿ ತನ್ನ ದುಃಖದ ಎರಡು ಮಾತುಗಳನ್ನು ತನ್ನ ಸಹೋದರನಾದ ವಸುದೇವನೊಡನೆ ಹೇಳಿಕೊಳ್ಳದೇ ಇರಲು ಕುಂತಿಗೆ ಸಾಧ್ಯವಾಗಲಿಲ್ಲ. ವಸುದೇವನನ್ನು ಕುರಿತು ಕುಂತಿಯು ಹೇಳುತ್ತಾಳೆ :

**ಆರ್ಯ ಭ್ರಾತರಹಂ ಮನ್ಯೇ ಆತ್ಮಾನಮಕೃತಾಶಿಷಮ್ ।**
**ಯದ್ವಾ ಆಪತ್ಸು ಮದ್ವಾರ್ತಾಂ ನಾನುಸ್ಮರಥ ಸತ್ತಮಾಃ ॥೧೯॥**

**ಸುಹೃದೋ ಜ್ಞಾತಯಃ ಪುತ್ರಾ ಭ್ರಾತರಃ ಪಿತರಾವಪಿ ।**
**ನಾನುಸ್ಮರನ್ತಿ ಸ್ವಜನಂ ಯಸ್ಯ ದೈವಮದಕ್ಷಿಣಮ್ ॥೨೦॥**

"ಪೂಜ್ಯನಾದ ಸಹೋದರನೇ! ನಾನು ನಿಶ್ಚಯವಾಗಿಯೂ ನಿರ್ಭಾಗ್ಯಳೇ ಸರಿ. ಏಕೆಂದರೆ ಆಪತ್ತಿನಲ್ಲಿ ಸಿಕ್ಕಿಹಾಕಿಕೊಂಡಿದ್ದ ನನ್ನ ಸಮಾಚಾರವನ್ನು ನೀವುಗಳಾರೂ ಸ್ಮರಿಸಲೂ ಇಲ್ಲ. ನಿಜ! ದೈವವು ಯಾರಿಗೆ ಪ್ರತಿಕೂಲ ವಾಗಿರುವುದೋ ಅಂತಹವರನ್ನು ಸ್ವಜನರಾಗಲೀ, ಸಂಬಂಧಿಗಳಾಗಲೀ, ತಾಯಿ-ತಂದೆಗಳೇ ಆಗಲೀ, ಅಣ್ಣ-ತಮ್ಮಂದಿರೇ ಆಗಲೀ ಮರೆತೇಬಿಡುತ್ತಾರೆ."

ವಸುದೇವನು ಹೇಳುತ್ತಾನೆ :

**ಅಮ್ಬ ಮಾಸ್ಮಾನಸೂಯೇಥಾ ದೈವಕ್ರೀಡನಕಾನ್ನರಾನ್ ।**
**ಈಶಸ್ಯ ಹಿ ವಶೇ ಲೋಕಃ ಕುರುತೇ ಕಾರ್ಯತೇಽಥವಾ ॥೨೧॥**

**ಕಂಸಪ್ರತಾಪಿತಾಃ ಸರ್ವೇ ವಯಂ ಯಾತಾ ದಿಶಂ ದಿಶಮ್ ।**
**ಏತರ್ಹ್ಯೇವ ಪುನಃ ಸ್ಥಾನಂ ದೈವೇನಾಸಾದಿತಾಃ ಸ್ವಸಃ ॥೨೨॥**

"ತಂಗಿ! ನೀನು ನಮ್ಮಲ್ಲಿ ದೋಷವೆಣಿಸಬೇಡ. ನಾವೆಲ್ಲರೂ ದೈವದ ಕೈಯಲ್ಲಿ ಆಟದ ಗೊಂಬೆಗಳು. ಅವನಾಡಿಸಿದಂತೆ ನಾವೂ ಆಡುತ್ತಿರುತ್ತೇವೆ. ಈ ಸಂಪೂರ್ಣವಾದ ಜಗತ್ತು ಕೂಡ ಈಶ್ವರನ ವಶದಲ್ಲಿದ್ದು ಕರ್ಮಗಳನ್ನು ಮಾಡುತ್ತದೆ ಮತ್ತು ಅದರ ಫಲವನ್ನು ಉಪಭೋಗಿಸುತ್ತದೆ. ಕಂಸನಿಂದ ಪೀಡಿಸಲ್ಪಡುತ್ತಿದ್ದ ನಾವು ಅವನ ಉಪಟಳವನ್ನು ತಾಳಲಾರದೆ ದಿಕ್ಕಾಪಾಲಾಗಿ ಹೋಗಿದ್ದೆವು. ಈಗತಾನೇ ನಾವು ಭಗವಂತನ ಕೃಪೆಯಿಂದ ಹಿಂದಿದ್ದ ಸ್ಥಳಗಳಿಗೆ ಆಗಮಿಸಿದ್ದೇವೆ. ಈ ಕಾರಣದಿಂದಾಗಿ ನಮಗೆ ನಿನ್ನ ಕಷ್ಟ-ಸುಖಗಳನ್ನು ವಿಚಾರಿಸಿಕೊಳ್ಳಲು ಸಾಧ್ಯವಾಗಲಿಲ್ಲ"–ಎಂದು ಹೇಳಿ ವಸುದೇವನು ಕುಂತಿಯನ್ನು ಸಮಾಧಾನಗೊಳಿಸಿದನು.

ಪರೀಕ್ಷಿತಮಹಾರಾಜ! ವಸುದೇವ, ಉಗ್ರಸೇನ–ಇವರೇ ಮುಂತಾದ ಯಾದವ ಪ್ರಮುಖರು ಕುರುಕ್ಷೇತ್ರಕ್ಕೆ ಆಗಮಿಸಿದ್ದವರೆಲ್ಲರಿಗೂ ಯಥೋಚಿತವಾದ ಸತ್ಕಾರಗಳನ್ನು ಮಾಡಿದರು. ಅವರೆಲ್ಲರೂ ಭಗವಂತನಾದ ಶ್ರೀಕೃಷ್ಣನನ್ನು ಸಂದರ್ಶಿಸಿ ಪರಮಾನಂದಭರಿತರಾಗಿ ಮಾನಸಿಕವಾದ ಶಾಂತಿಯನ್ನು ಪಡೆದುಕೊಂಡರು.

ಭೀಷ್ಮಪಿತಾಮಹ, ದ್ರೋಣಾಚಾರ್ಯರು, ಧೃತರಾಷ್ಟ್ರ, ದುರ್ಯೋಧನನೇ ಮೊದಲಾದ ನೂರು ಮಂದಿ ಮಕ್ಕಳೊಡನೆ ಗಾಂಧಾರೀದೇವಿ, ಪತ್ನಿಯರಿಂದೊಡಗೂಡಿದ ಯುಧಿಷ್ಠಿರನೇ ಮೊದಲಾದ ಪಂಚಪಾಂಡವರು, ಕುಂತೀ, ಸೃಂಜಯ, ವಿದುರ, ಕೃಪಾಚಾರ್ಯರು, ಕುಂತಿಭೋಜ, ವಿರಾಟ, ಭೀಷ್ಮಕ, ಮಹಾರಾಜ ನಗ್ನಜಿತ್, ಪುರುಜಿತ್, ದ್ರುಪದ, ಶಲ್ಯ, ಧೃಷ್ಟಕೇತು, ಕಾಶೀನರೇಶ, ದಮಘೋಷ, ವಿಶಾಲಾಕ್ಷ, ಮಿಥಿಲಾನರೇಶ, ಮದ್ರನರೇಶ, ಕೇಕಯನರೇಶ, ಯುಧಾಮನ್ಯು, ಸುಶರ್ಮಾ, ಬಾಹ್ಲಿಕ, ಪುತ್ರರಿಂದೊಡಗೂಡಿದ ಯುಧಿಷ್ಠಿರನ ಅನುಯಾಯಿಗಳಾದ ಇತರ ರಾಜರು–ಇವರೆಲ್ಲರೂ, ರಾಣಿಯರೊಡಗೂಡಿದ್ದ ಶ್ರೀಲಕ್ಷ್ಮಿಗೆ ನೆಲೆಯಾಗಿದ್ದ ಭಗವಾನ್ ಶ್ರೀಕೃಷ್ಣನ ದಿವ್ಯಮಂಗಳವಿಗ್ರಹವನ್ನು ನೋಡಿ ಅಚ್ಚರಿಗೊಂಡರು.

ಆಗಮಿಸಿದ್ದ ರಾಜರೂ, ರಾಜಕುಮಾರರೂ ಮತ್ತು ರಾಜಮಹಿಳೆಯರೂ ಬಲರಾಮ-ಕೃಷ್ಣರಿಂದ ಯಥೋಚಿತವಾದ ಉಪಾಯನಗಳನ್ನು ಸ್ವೀಕರಿಸಿ ಆನಂದಭರಿತರಾಗಿ ಶ್ರೀಕೃಷ್ಣ-ಬಲರಾಮರನ್ನೂ ಶ್ರೀಕೃಷ್ಣನ ಅನುಯಾಯಿಗಳಾದ ವೃಷ್ಣಿಗಳನ್ನೂ ಬಹಳವಾಗಿ ಹೊಗಳಿದರು.

**ಅಹೋ ಭೋಜಪತೇ ಯೂಯಂ ಜನ್ಮಭಾಜೋ ನೃಣಾಮಿಹ ।**
**ಯತ್ಪಶ್ಯಥಾಸಕೃತ್ಕೃಷ್ಣಂ ದುರ್ದರ್ಶಮಪಿ ಯೋಗಿನಾಮ್ ॥೨೯॥**

"ಉಗ್ರಸೇನಮಹಾರಾಜ! ಮನುಷ್ಯಲೋಕದಲ್ಲಿ ಜನ್ಮತಾಳಿರುವ ನೀವು ನಿಶ್ಚಯವಾಗಿಯೂ ಧನ್ಯತೆಯನ್ನು ಪಡೆದಿರುವಿರಿ. ಏಕೆಂದರೆ ಯೋಗಿಗಳಿಗೂ ಕಾಣಲು ಅಸಾಧ್ಯನಾದ, ಮಾಯಾಮಾನುಷವಿಗ್ರಹನಾದ, ಭಗವಂತನಾದ ಶ್ರೀಕೃಷ್ಣಮೂರ್ತಿಯ ಶ್ರೀವಿಗ್ರಹವನ್ನು ನೀವು ನಿರಂತರವಾಗಿ ಕಾಣುತ್ತಿರುವಿರಲ್ಲವೇ!

**ಯದ್ವಿಶ್ರುತಿಃ ಶ್ರುತಿನುತೇದಮಲಂ ಪುನಾತಿ**
**ಪಾದಾವನೇಜನಪಯಶ್ಚ ವಚಶ್ಚ ಶಾಸ್ತ್ರಮ್ ।**
**ಭೂಃ ಕಾಲಭರ್ಜಿತಭಗಾಪಿ ಯದಙ್ಘ್ರಿಪದ್ಮ-**
**ಸ್ಪರ್ಶೋತ್ಥಶಕ್ತಿರಭಿವರ್ಷತಿ ನೋಽಖಿಲಾರ್ಥಾನ್ ॥೩೦॥**
**ತದ್ದರ್ಶನಸ್ಪರ್ಶನಾನುಪಥಪ್ರಜಲ್ಪ-**
**ಶಯ್ಯಾಸನಾಶನಸಯೌನಸಪಿಣ್ಡಬನ್ಧಃ ।**
**ಯೇಷಾಂ ಗೃಹೇ ನಿರಯವರ್ತ್ಮನಿ ವರ್ತತಾಂ ವಃ**
**ಸ್ವರ್ಗಾಪವರ್ಗವಿರಮಃ ಸ್ವಯಮಾಸ ವಿಷ್ಣುಃ ॥೩೧॥**

ಯಾವನ ಅಮಲವಾದ ಕೀರ್ತಿಯು ವೇದಪ್ರತಿಪಾದ್ಯವಾಗಿರುವುದೋ ಯಾವನ ಪಾದೋದಕವು ಪವಿತ್ರವಾದ ಗಂಗೆಯೇ ಆಗಿರುವುದೋ ಮತ್ತು ಯಾವನ ಮಾತು ಶಾಸ್ತ್ರವೇ ಆಗಿರುವುದೋ ಅಂತಹ ಶ್ರೀಕೃಷ್ಣನ ಕೀರ್ತಿ-ಪಾದೋದಕ ಮತ್ತು ವಾಕ್ಕುಗಳು ವಿಶ್ವವನ್ನೇ ಪಾವನಗೊಳಿಸುತ್ತವೆ. ಕಾಲವು ಕಳೆದಂತೆ ಪೃಥ್ವಿಯು ಧಾರಣ-ಪೋಷಣೆಗಳ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿದ್ದರೂ ಭಗವಂತನು ಅವತಾರಮಾಡಿರುವ ಕಾರಣ ಅವನ ದಿವ್ಯಪಾದಗಳ ಸ್ಪರ್ಶಸುಖವನ್ನು ಪಡೆದು ಸರ್ವಸಮರ್ಥಳಾಗಿ ನಾವು ಅಪೇಕ್ಷಿಸಿದುದೆಲ್ಲವನ್ನೂ ಮಳೆಗರೆಯುತ್ತಿದ್ದಾಳೆ.

ಉಗ್ರಸೇನ! ಅಂತಹ ದೇವದೇವನಾದ ಶ್ರೀಕೃಷ್ಣನೊಡನೆ ನಿಮಗೆ ವಿವಾಹಸಂಬಂಧವೂ ಇದೆ ; ಗೋತ್ರಸಂಬಂಧವೂ ಇದೆ ; ಇಷ್ಟು ಮಾತ್ರ ವಲ್ಲ ; ನೀವು ಯಾವಾಗಲೂ ಅವನನ್ನು ನೋಡುತ್ತಲೇ ಇರುತ್ತೀರಿ ; ಅವನ ಶ್ರೀವಿಗ್ರಹವನ್ನು ಮುಟ್ಟುತ್ತಲೇ ಇರುತ್ತೀರಿ ; ಅವನೊಡನೆ ಸಂಚರಿಸುತ್ತಿರು ತ್ತೀರಿ ; ಮಾತನಾಡುತ್ತಿರುತ್ತೀರಿ ; ಅವನೊಡನೆ ಮಲಗುತ್ತಿರುತ್ತೀರಿ ; ಅವನ ಜೊತೆಯಲ್ಲಿ ಕುಳಿತು ಭೋಜನಮಾಡುವಿರಿ ; ಪಾನೀಯಗಳನ್ನು ಸೇವಿಸು ವಿರಿ. ಹೀಗೆ ಪರಿಪರಿಯಾಗಿ ಶ್ರೀಕೃಷ್ಣನನ್ನು ನಿರಂತರವಾಗಿ ಸೇವಿಸುವ ನಿಮಗಿಂತಲೂ ಈ ಭುವಿಯಲ್ಲಿ ಧನ್ಯರಾದವರು ಯಾರಿದ್ದಾರೆ? ಯದ್ಯಪಿ ನೀವು ನರಕಕ್ಕೆ ಮಹಾದ್ವಾರವೆನಿಸಿದ ಸಂಸಾರಸಾಗರದಲ್ಲಿ ಬಿದ್ದು ತೊಳಲುತ್ತಿದ್ದರೂ ಸ್ವರ್ಗ-ಮೋಕ್ಷಗಳನ್ನೂ ಬೇಡವೆನಿಸುವ ಸರ್ವವ್ಯಾಪಕ ನಾದ ಮಹಾವಿಷ್ಣುವೇ ನಿಮ್ಮಲ್ಲಿ ಮೂರ್ತಿಮತ್ತಾಗಿ ಶ್ರೀಕೃಷ್ಣನೆಂಬ ಹೆಸರಿನಿಂದ ನೆಲೆಸಿದ್ದಾನೆ."–ಹೀಗೆ ಸಮಸ್ತರಾಜರೂ ಶ್ರೀಕೃಷ್ಣನನ್ನು ಪರಿಪರಿಯಾಗಿ ಹೊಗಳಿದರು.

ಶ್ರೀ ಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಹಿಂದೆ ಹೇಳಿದಂತೆ ನಂದಗೋಪನೂ ಗೋಪಿಯರೊಡನೆ ಸೂರ್ಯಗ್ರಹಣದ ಸಮಯದಲ್ಲಿ ಸ್ನಾನಕ್ಕಾಗಿ ಸಮಂತ ಪಂಚಕಕ್ಷೇತ್ರಕ್ಕೆ ಆಗಮಿಸಿದ್ದನು. ಬಲರಾಮ-ಶ್ರೀಕೃಷ್ಣರಾದಿಯಾಗಿ ಯಾದವರೆಲ್ಲರೂ ಕುರುಕ್ಷೇತ್ರಕ್ಕೆ ಆಗಮಿಸಿರುವರೆಂಬ ವಿಷಯವು ನಂದ ಗೋಪನಿಗೂ ತಿಳಿಯಿತು. ಒಡನೆಯೇ ನಂದಗೋಪನು ಶ್ರೀಕೃಷ್ಣನೇ ಮೊದಲಾದವರನ್ನು ನೋಡುವ ಸಲುವಾಗಿ ಗಾಡಿಗಳಲ್ಲಿ ಸಾಮಗ್ರಿಗಳನ್ನು ತುಂಬಿಕೊಂಡು ಬರುತ್ತಿದ್ದ ಗೋಪಾಲಕರೊಡನೆ ಯಾದವರು ತಂಗಿದ್ದ ಸ್ಥಳಕ್ಕೆ ಆಗಮಿಸಿದನು. ಬಹಳ ದಿವಸಗಳಿಂದ ಕಾಣದಿದ್ದ ನಂದನೇ ಮೊದ ಲಾದ ಗೋಪಾಲರನ್ನು ನೋಡಿ ಯದುವೀರರೆಲ್ಲರೂ ಆನಂದತುಂದಿಲ ರಾದರು. ಮೃತಶರೀರದಲ್ಲಿ ಪುನಃ ಪ್ರಾಣದ ಸಂಚಾರವಾದರೆ ಅದು ಎದ್ದು ನಿಲ್ಲುವಂತೆ ಯದುವೀರರೆಲ್ಲರೂ ಥಟ್ಟನೆ ಮೇಲೆದ್ದು ನಂದಗೋಪನೇ ಮೊದಲಾದವರನ್ನು ಗಾಢವಾಗಿ ಆಲಿಂಗನಮಾಡಿಕೊಂಡರು. ಪ್ರೇಮದಿಂದ ಆರ್ದ್ರಹೃದಯನಾಗಿದ್ದ ವಸುದೇವನು ಆನಂದಭರಿತನಾಗಿ ನಂದಗೋಪ

ನನ್ನು ತಬ್ಬಿಕೊಂಡು ಹಿಂದೆ ಕಂಸನು ಕೊಟ್ಟ ಕ್ಲೇಶಗಳನ್ನೂ ಆ ಸಮಯದಲ್ಲಿ ತನ್ನ ಮಕ್ಕಳನ್ನು ಗೋಕುಲಕ್ಕೆ ಕರೆದೊಯ್ದು ನಂದನ ಮನೆಯಲ್ಲಿ ಬಿಟ್ಟುಬಂದುದನ್ನೂ ಸ್ಮರಿಸಿಕೊಂಡನು. ಶ್ರೀಕೃಷ್ಣ-ಬಲರಾಮರು ತಂದೆಯಾದ ನಂದಗೋಪನನ್ನೂ ತಾಯಿಯಾದ ಯಶೋದೆಯನ್ನೂ ತಬ್ಬಿಕೊಂಡು ನಮಸ್ಕಾರಮಾಡಿದರು. ಪ್ರೇಮೋದ್ರೇಕದಿಂದ ಆನಂದಬಾಷ್ಪಗಳನ್ನು ಸುರಿಸುತ್ತಿದ್ದ ಅವರಿಗೆ ಗಂಟಲು ಕಟ್ಟಿತು. ಯಾವ ಮಾತನ್ನೂ ಆಡಲು ಅವರಿಗೆ ಸಾಧ್ಯವಾಗಲೇ ಇಲ್ಲ. ಮಹಾಭಾಗ್ಯಶಾಲಿನಿಯಾದ ಯಶೋದೆಯೂ ಮತ್ತು ನಂದಗೋಪನೂ ಮಕ್ಕಳಿಬ್ಬರನ್ನೂ ತೊಡೆಯ ಮೇಲೆ ಕುಳ್ಳಿರಿಸಿ ಕೊಂಡು ಗಾಢವಾಗಿ ಆಲಿಂಗಿಸಿಕೊಂಡರು. ಪ್ರೀತಿಯ ಮಕ್ಕಳನ್ನು ಬಹಳ ಕಾಲದಿಂದ ಕಾಣದೇ ಇದ್ದುದರಿಂದ ಉಂಟಾಗಿದ್ದ ದುಃಖವನ್ನು ಇಬ್ಬರೂ ಕಳೆದುಕೊಂಡರು. ವಸುದೇವನ ಪತ್ನಿಯರಾದ ದೇವಕಿ-ರೋಹಿಣಿಯರು ವ್ರಜೇಶ್ವರಿಯಾದ ಯಶೋದೆಯನ್ನು ಗಾಢವಾಗಿ ಆಲಿಂಗಿಸಿಕೊಂಡು ಆನಂದ ಬಾಷ್ಪಗಳನ್ನು ಸುರಿಸಿದರು. ತಮ್ಮ ಹಿಂದಿನ ಮೈತ್ರಿಯನ್ನೂ ಮತ್ತು ಯಶೋದೆಯು ಮಾಡಿದ ಉಪಕಾರವನ್ನೂ ಜ್ಞಾಪಿಸಿಕೊಳ್ಳುತ್ತಾ ಅವರು ಯಶೋದೆಗೆ ಹೇಳಿದರು :

**ಕಾ ವಿಸ್ಮರೇತ ವಾಂ ಮೈತ್ರೀಮನಿವೃತ್ತಾಂ ವ್ರಜೇಶ್ವರಿ ।**
**ಅವಾಪ್ಯಾಪ್ಯೈಂದ್ರಮೈಶ್ವರ್ಯಂ ಯಸ್ಯಾ ನೇಹ ಪ್ರತಿಕ್ರಿಯಾ ॥೩೮॥**

“ಯಶೋದಾದೇವಿ! ನಿನ್ನ ಮತ್ತು ವ್ರಜೇಶ್ವರನಾದ ನಂದಗೋಪನ ಸುಸ್ಥಿರವಾದ ಮೈತ್ರಿಯನ್ನು ಯಾವಳು ತಾನೇ ಮರೆಯುತ್ತಾಳೆ? ಇಂದ್ರನ ಐಶ್ವರ್ಯವನ್ನೇ ಪಡೆದುಕೊಂಡು ನಿಮಗೆ ಕೊಟ್ಟರೂ ನೀವು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರಮಾಡಿದಂತಾಗುವುದಿಲ್ಲ. ಯಾವುದೇ ರೀತಿ ಯಲ್ಲೂ ನೀವು ಮಾಡಿರುವ ಉಪಕಾರವನ್ನು ತೀರಿಸಲು ಸಾಧ್ಯವಾಗುವುದಿಲ್ಲ.

**ಏತಾವದೃಷ್ಟಪಿತರೌ ಯುವಯೋಃ ಸ್ಮ ಪಿತ್ರೋಃ**
**ಸಮ್ಪ್ರೀಣನಾಭ್ಯುದಯಪೋಷಣಪಾಲನಾನಿ ।**
**ಪ್ರಾಪ್ಯೋಷತುರ್ಭವತಿ ಪಕ್ಷ್ಮ ಹ ಯದ್ವದಕ್ಷ್ಣೋ-**
**ರ್ನ್ಯಸ್ತಾವಕುತ್ರ ಚ ಭಯೌ ನ ಸತಾಂ ಪರಃ ಸ್ವಃ ॥೩೯॥**

ಆ ಸಮಯದಲ್ಲಿ ಶಿಶುಗಳಾಗಿದ್ದ ಈ ಬಲರಾಮ-ಕೃಷ್ಣರು ತಾಯಿ-ತಂದೆಗಳನ್ನೇ ಕಂಡಿರಲಿಲ್ಲ. ಇವರ ತಂದೆಯು ಇವರನ್ನು ನ್ಯಾಸರೂಪವಾಗಿ ನಿಮ್ಮಲ್ಲಿ ಬಿಟ್ಟು ಬಂದಿದ್ದನು. ನೀವಿಬ್ಬರೂ ಇವರನ್ನು–ರೆಪ್ಪೆಗಳು ಕಣ್ಣು ಗುಡ್ಡೆಗಳನ್ನು ರಕ್ಷಿಸುವಂತೆ ರಕ್ಷಿಸಿದಿರಿ. ನೀವು ಈ ನನ್ನ ಮಕ್ಕಳನ್ನು ನಿಮ್ಮ ಮಕ್ಕಳೆಂದೇ ಭಾವಿಸಿ ಪ್ರೀತಿಸಿದಿರಿ, ಬೆಳೆಸಿದಿರಿ, ಲಾಲಿಸಿದಿರಿ, ಪಾಲಿಸಿದಿರಿ, ಇವರ ಅಭ್ಯುದಯಕ್ಕಾಗಿ ಶ್ರಮಿಸಿದಿರಿ. ಇವರ ನಾಮಕರಣೋತ್ಸವವನ್ನು ಆಚರಿಸಿದಿರಿ. ಪ್ರತಿವರ್ಷವೂ ಇವರ ಜನ್ಮಮಹೋತ್ಸವವನ್ನು ವಿಜೃಂಭಣೆಯಿಂದಲೂ ಉತ್ಸಾಹದಿಂದಲೂ ಆಚರಿಸುತ್ತಿದ್ದಿರಿ. ನೀವೇ ಇವರ ನಿಜವಾದ ತಂದೆ-ತಾಯಿಗಳಾಗಿ ಬಿಟ್ಟಿದ್ದಿರಿ. ನ್ಯಾಸರೂಪವಾಗಿ ನಿಮ್ಮಲ್ಲಿ ಇಡಲ್ಪಟ್ಟಿದ್ದ ಈ ನಮ್ಮ ಮಕ್ಕಳು ಯಾವ ವಿಧವಾದ ಭಯವೂ ಇಲ್ಲದೆ ನಿಮ್ಮ ಮನೆಯಲ್ಲಿ ಇದ್ದುಬಿಟ್ಟರು. ಸತ್ಪುರುಷರಿಗೆ 'ನಮ್ಮದು- ಬೇರೆಯವರದ್ದು'– ಎಂಬ ಭೇದವಿರುವುದಿಲ್ಲ. ಸತ್ಪುರುಷರಾದ ನೀವು ಅಂತೆಯೇ ನಡೆದುಕೊಂಡಿರುವಿರಿ"–ಇದೇ ಮುಂತಾಗಿ ಮಾತನಾಡುತ್ತಾ ದೇವಕೀ-ರೋಹಿಣಿಯರು ಯಶೋದಾದೇವಿಯನ್ನು ಬಹಳವಾಗಿ ಶ್ಲಾಘಿಸಿ ದರು.

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಗೋಪಿಯರು ಕೂಡ ತಾವು ಬಹಳ ಕಾಲದಿಂದಲೂ ನೋಡಬಯಸಿದ್ದ ಪ್ರಿಯತಮನಾದ, ಜೀವನದ ಸರ್ವಸ್ವರೂಪನಾಗಿದ್ದ ಶ್ಯಾಮಸುಂದರನನ್ನು ಕಣ್ತುಂಬಾ ನೋಡಿದರು. ಆದರೆ ಮಧ್ಯ-ಮಧ್ಯದಲ್ಲಿ ರೆಪ್ಪೆಗಳಾಡುತ್ತಿದ್ದು ಪ್ರಿಯತಮನ ನಿರಂತರವಾದ ದರ್ಶನಕ್ಕೆ ಅಡ್ಡಿಯಾಗುತ್ತಿದ್ದುದರಿಂದ ರೆಪ್ಪೆಗಳನ್ನು ಸೃಷ್ಟಿಸಿದ ಬ್ರಹ್ಮನನ್ನೇ ಶಪಿಸಿದರು. ರೆಪ್ಪೆಗಳ ಉಪಟಳವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಆ ಗೋಪಿಯರು ಆನಂದಕಂದನಾದ ಶ್ಯಾಮಸುಂದರನನ್ನು ತಮ್ಮ ಕಣ್ಣುಗಳೆಂಬ ಬಾಗಿಲುಗಳ ಮೂಲಕವಾಗಿ ಹೃದಯಗುಹೆಗೆ ಸೆಳೆದುಕೊಂಡು ಗಾಢವಾಗಿ ಆಲಿಂಗಿಸಿಕೊಂಡು ಅನಿರ್ವಾಚ್ಯವಾದ ಆನಂದವನ್ನು ಅನುಭವಿಸಿದರು. ಲೀಲಾ ಮಾನುಷವಿಗ್ರಹನಾದ ಶ್ರೀಕೃಷ್ಣನ ತೋಳುಗಳ ತೆಕ್ಕೆಯಲ್ಲಿದ್ದಂತೆಯೇ ಅವರು ತನ್ಮಯರಾಗಿಬಿಟ್ಟರು. ತಮ್ಮನ್ನೇ ತಾವು ಮರೆತುಕೊಂಡುಬಿಟ್ಟರು.

ನಿತ್ಯನಿರಂತರವಾಗಿ ಯೋಗಾಭ್ಯಾಸದಲ್ಲಿಯೇ ಇರುವ ಯೋಗಿಗಳಿಗೂ ಲಭ್ಯವಾಗದ ಆತ್ಮಸಾಕ್ಷಾತ್ಕಾರವನ್ನು ಮುಗ್ಧೆಯರಾದ ಗೋಪಿಕಾಸ್ತ್ರೀಯರು ಪ್ರೇಮಭಕ್ತಿಯಿಂದಲೇ ಪಡೆದುಕೊಂಡರು. ಗೋಪಿಯರು ತನ್ನಲ್ಲಿ ತಾದಾತ್ಮ್ಯಭಾವವನ್ನು ಹೊಂದಿಬಿಟ್ಟಿದ್ದಾರೆಂಬುದನ್ನು ತಿಳಿದು, ಸರ್ವಾಂತರ್ಯಾಮಿಯಾದ ಶ್ರೀಕೃಷ್ಣನು ಏಕಾಂತದಲ್ಲಿ ಅವರ ಬಳಿಗೆ ಹೋಗಿ, ಅವರನ್ನು ಗಾಢವಾಗಿ ಆಲಿಂಗಿಸಿಕೊಂಡು ಅವರ ಕುಶಲಪ್ರಶ್ನೆಗಳನ್ನು ಕೇಳಿ ಮಂದಹಾಸವನ್ನು ಬೀರುತ್ತಾ ಹೇಳಿದನು :

**ಅಪಿ ಸ್ಮರಥ ನಃ ಸಖ್ಯಃ ಸ್ವಾನಾಮರ್ಥಚಿಕೀರ್ಷಯಾ ।**
**ಗತಾಂಶ್ಚಿರಾಯಿತಾನ್ಶತ್ರುಪಕ್ಷಕ್ಷಪಣಚೇತಸಃ ॥೪೨॥**

"ಪ್ರಾಣಸಖಿಯರೇ! ನಾವು ನಮ್ಮ ಬಂಧುಗಳ ಕಾರ್ಯಾರ್ಥವಾಗಿ ವ್ರಜವನ್ನು ಬಿಟ್ಟುಹೊರಟುಹೋದೆವು. ನಿಮ್ಮಂತಹ ಪ್ರೇಯಸಿಯರನ್ನೂ ತೊರೆದು ಶತ್ರುಗಳ ವಿನಾಶಕ್ಕಾಗಿ ಹೋದೆವು. ಹಾಗೆ ಹೋಗಿ ಬಹಳ ದಿವಸಗಳೇ ಕಳೆದುಹೋದುವು. ಈಗಲೂ ನೀವು ನಮ್ಮನ್ನು ಜ್ಞಾಪಕದಲ್ಲಿಟ್ಟುಕೊಂಡಿರುವಿರಾ?

**ಅಪ್ಯವಧ್ಯಾಯಥಾಸ್ಮಾನ್ಸ್ವಿದಕೃತಜ್ಞಾವಿಶಙ್ಕಯಾ ।**
**ನೂನಂ ಭೂತಾನಿ ಭಗವಾನ್ ಯುನಕ್ತಿ ವಿಯುನಕ್ತಿ ಚ ॥೪೩॥**

ಅಥವಾ ಮಾಡಿದ ಉಪಕಾರವನ್ನು ಸ್ಮರಿಸುವವನಲ್ಲವೆಂದು ಭಾವಿಸಿ ನನ್ನನ್ನು ಕಡೆಗಾಣಿಸಿಬಿಟ್ಟಿರುವಿರಾ? ಹಾಗೆ ನನ್ನನ್ನು ತಿಳಿಯಬೇಡಿರಿ. ಸೇರುವಿಕೆಯೂ ಅಗಲುವಿಕೆಯೂ ನಮ್ಮ ಅಧೀನದಲ್ಲಿಲ್ಲ. ಭಗವಂತನೇ ಪ್ರಾಣಿಗಳನ್ನು ಒಂದೆಡೆಯಲ್ಲಿ ಸೇರಿಸುತ್ತಾನೆ. ಪುನಃ ಅಗಲಿಸುತ್ತಾನೆ. ಇದು ನಿಶ್ಚಯ.

**ವಾಯುರ್ಯಥಾ ಘನಾನೀಕಂ ತೃಣಂ ತೂಲಂ ರಜಾಂಸಿ ಚ ।**
**ಸಂಯೋಜ್ಯಾಕ್ಷಿಪತೇ ಭೂಯಸ್ತಥಾ ಭೂತಾನಿ ಭೂತಕೃತ್ ॥೪೪॥**

ಯಾವ ರೀತಿಯಲ್ಲಿ ವಾಯುವು ಮೇಘಗಳ ಸಮೂಹವನ್ನೂ, ಹುಲ್ಲುಕತ್ತೆಯನ್ನೂ, ಹತ್ತಿಯನ್ನೂ, ಧೂಳುಗಳನ್ನೂ ಒಮ್ಮೆ ಒಂದಾಗಿ ಸೇರಿಸಿ

ಮತ್ತೊಮ್ಮೆ ಛಿದ್ರಗೊಳಿಸುತ್ತದೆಯೋ ಹಾಗೆಯೇ ಸೃಷ್ಟಿಕರ್ತನಾದ ಭಗವಂತನು ಪ್ರಾಣಿಗಳಿಗೆ ಸ್ವೇಚ್ಛೆಯಿಂದ ಸಂಯೋಗ-ವಿಯೋಗಗಳನ್ನು ಉಂಟು ಮಾಡುತ್ತಿರುತ್ತಾನೆ.

**ಮಯಿ ಭಕ್ತಿರ್ಹಿ ಭೂತಾನಾಮಮೃತತ್ವಾಯ ಕಲ್ಪತೇ ।**
**ದಿಷ್ಟ್ಯಾ ಯದಾಸೀನ್ಮತ್ಸ್ನೇಹೋ ಭವತೀನಾಂ ಮದಾಪನಃ ॥೪೫॥**

ನನ್ನನ್ನು ಹೊಂದಲೇಬೇಕೆಂದು ನಿಮ್ಮಲ್ಲಿ ಹುಟ್ಟಿರುವ ಸ್ನೇಹವು ನಿಮ್ಮ ಸೌಭಾಗ್ಯದ ಕಾರಣದಿಂದಲೇ ಆಗಿದೆ. ಏಕೆಂದರೆ ನನ್ನ ಮೇಲಿನ ಅನನ್ಯವಾದ ಭಕ್ತಿಯೇ ಪ್ರಾಣಿಗಳಿಗೆ ಅಮೃತತ್ವವನ್ನು ಕಲ್ಪಿಸಿಕೊಡುತ್ತದೆ. ಪರಮಾನಂದವನ್ನೂ ಉಂಟುಮಾಡುತ್ತದೆ.

**ಅಹಂ ಹಿ ಸರ್ವಭೂತಾನಾಮಾದಿರನ್ತೋಽನ್ತರಂ ಬಹಿಃ ।**
**ಭೌತಿಕಾನಾಂ ಯಥಾ ಖಂ ವಾರ್ಭೂರ್ವಾಯುರ್ಜ್ಯೋತಿರಙ್ಗನಾಃ ॥**

ಪ್ರಿಯಗೋಪಿಯರೇ! ಯಾವ ರೀತಿಯಲ್ಲಿ ಘಟ-ಪಟಗಳೇ ಮೊದಲಾದ ಭೌತಿಕಪದಾರ್ಥಗಳಿಗೆ ಪಂಚಭೂತಗಳಾದ ಪೃಥ್ವೀ-ಜಲ-ವಾಯು-ಅಗ್ನಿ-ಆಕಾಶಗಳೇ ಮೂಲಕಾರಣಗಳಾಗಿವೆಯೋ ಮತ್ತು ಅವುಗಳ ಹೊರಗೂ ಮತ್ತು ಒಳಗೂ ಇರುತ್ತವೆಯೋ ಅವುಗಳಲ್ಲಿ ಹಾಸುಹೊಕ್ಕಾಗಿವೆಯೋ ಹಾಗೆಯೇ ನಾನು ಸಮಸ್ತಪ್ರಾಣಿಗಳ ಆದಿಯೂ, ಮಧ್ಯನೂ, ಅಂತ್ಯನೂ ಮತ್ತು ಅವುಗಳ ಹೊರಗೆ ಮತ್ತು ಒಳಗೆ ಇರುವವನೂ ಆಗಿದ್ದೇನೆ.

**ಏವಂ ಹ್ಯೇತಾನಿ ಭೂತಾನಿ ಭೂತೇಷ್ವಾತ್ಮಾಽತ್ಮನಾ ತತಃ ।**
**ಉಭಯಂ ಮಯ್ಯಥ ಪರೇ ಪಶ್ಯತಾಭಾತಮಕ್ಷರೇ ॥೪೭॥**

ಹೀಗೆ ಸಮಸ್ತ ಪ್ರಾಣಿಗಳ ಶರೀರಗಳಲ್ಲಿಯೂ ಈ ಪಂಚಭೂತಗಳು ಕಾರಣರೂಪದಲ್ಲಿ ಉಪಸ್ಥಿತವಾಗಿವೆ. ಆತ್ಮನು ಭೋಕ್ತೃವಿನ ರೂಪದಲ್ಲಿ ಅಥವಾ ಜೀವನ ರೂಪದಲ್ಲಿದ್ದಾನೆ. ನಾನಾದರೋ ಇವೆರಡರಿಂದಲೂ ಬೇರೆಯವನಾಗಿ ಅವಿನಾಶಿಯಾದ ಸತ್ಯಸ್ವರೂಪದಲ್ಲಿರುತ್ತೇನೆ. ಆದುದರಿಂದ ಭೋಗ್ಯ-ಭೋಕ್ತೃಗಳಿಬ್ಬರೂ ಪರಿಪೂರ್ಣನಾದ ನನ್ನಲ್ಲಿ ಇರುವುದೆಂಬುದನ್ನು ನೀವು ಕಂಡುಕೊಳ್ಳಿರಿ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಹೀಗೆ ಶ್ರೀಕೃಷ್ಣನು ತನ್ನ ಪ್ರೇಯಸಿಯರಾದ

ಗೋಪಿಯರಿಗೆ ಅಧ್ಯಾತ್ಮಶಾಸ್ತ್ರದ ಶಿಕ್ಷಣವನ್ನಿತ್ತನು. ಇಂತಹ ದಿವ್ಯವಾದ ಭಗವದುಪದೇಶವನ್ನು ಪದೇ-ಪದೇ ಸ್ಮರಿಸಿಕೊಳ್ಳುತ್ತಿದ್ದಂತೆ ಗೋಪಿಯರ ಜೀವಕೋಶವು (ಜೀವಕ್ಕೆ ಆವರಣ ಪ್ರಾಯವಾಗಿದ್ದ ದುರಭಿಮಾನವು) ನಷ್ಟವಾಗಿಹೋಯಿತು. ಅವರೆಲ್ಲರೂ ಭಗವಂತನ ನಿಜಸ್ವರೂಪವನ್ನು ಕಂಡುಕೊಂಡರು.

ಆನಂದತುಂದಿಲರಾದ ಅವರು ಶ್ರೀಕೃಷ್ಣನನ್ನು ಪುನಃ ಪ್ರಾರ್ಥಿಸಿಕೊಂಡರು.

**ಆಹುಶ್ಚ ತೇ ನಲಿನನಾಭ ಪದಾರವಿನ್ದಂ**
**ಯೋಗೇಶ್ವರೈರ್ಹೃದಿ ವಿಚಿನ್ತ್ಯಗಾಧಬೋಧೈಃ ।**
**ಸಂಸಾರಕೂಪಪತಿತೋತ್ತರಣಾವಲಮ್ಬಂ**
**ಗೇಹಂಜುಷಾಮಪಿ ಮನಸ್ಯುದಿಯಾತ್ಸದಾ ನಃ ॥೪೯॥**

ಕಮಲನಾಭನೇ! ಜ್ಞಾನಸಂಪನ್ನರಾದ ಮಹಾ-ಮಹಾಯೋಗಿಗಳು ತಮ್ಮ ಹೃದಯಕಮಲಗಳಲ್ಲಿ ನಿನ್ನ ದಿವ್ಯವಾದ ಚರಣಕಮಲಗಳನ್ನು ಸದಾ ಧ್ಯಾನಮಾಡುತ್ತಿರುತ್ತಾರೆ. ಸಂಸಾರಕೂಪದಲ್ಲಿ ಬಿದ್ದಿರುವವರ ಉದ್ಧಾರಕ್ಕೆ ನಿನ್ನ ಚರಣಕಮಲವು ಏಕಮಾತ್ರ ಅವಲಂಬನವಾಗಿದೆ. ನಾವು ನಮ್ಮ ಮನೆಗಳಲ್ಲಿ ಯಾವುದೇ ಕಾರ್ಯಗಳನ್ನು ಮಾಡುತ್ತಿದ್ದರೂ ನಿನ್ನ ದಿವ್ಯಚರಣಕಮಲಗಳು ನಮ್ಮ ಹೃದಯಗಳಲ್ಲಿ ವಿರಾಜಿಸುತ್ತಿರುವಂತೆಯೂ ಕ್ಷಣಮಾತ್ರವಾದರೂ ನಾವು ಆ ದಿವ್ಯಚರಣಕಮಲಗಳನ್ನು ಮರೆಯ ದಿರುವಂತೆಯೂ ದಯಮಾಡಿ ಅನುಗ್ರಹಿಸು."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ *೮೨ನೆಯ ಅಧ್ಯಾಯವು ಮುಗಿಯಿತು.

---

* ವೈಷ್ಣವತೋಷಿಣೀ ವ್ಯಾಖ್ಯಾನಕಾರರಾದ ಶ್ರೀ ಸನಾತನಗೋಸ್ವಾಮಿಗಳು ಈ ೮೨ನೆಯ ಅಧ್ಯಾಯದ ಪ್ರಕರಣವು ಬಲರಾಮನು ವ್ರಜಯಾತ್ರೆಯನ್ನು ಕೈಗೊಂಡನಂತರ (೬೫ನೆಯ ಅಧ್ಯಾಯ) ಯುಧಿಷ್ಠಿರನ ರಾಜಸೂಯಯಾಗದ ಮೊದಲು (೭೪ನೆಯ ಅಧ್ಯಾಯ) ನಡೆದಿದ್ದುದೆಂದು ಹೇಳಿದ್ದಾರೆ. ೮೨ನೆಯ

# ಶ್ರೀಕೃಷ್ಣನ ಪಟ್ಟಮಹಿಷಿಯರೊಡನೆ ದ್ರೌಪದಿಯ ಮಾತುಕತೆ

ಶ್ರೀಶುಕಮುನಿಗಳು ಹೇಳುತ್ತಾರೆ :

**ತಥಾನುಗೃಹ್ಯ ಭಗವಾನ್ ಗೋಪೀನಾಂ ಸ ಗುರುರ್ಗತಿಃ ।**
**ಯುಧಿಷ್ಠಿರಮಥಾಪೃಚ್ಛತ್ಸರ್ವಾಂಶ್ಚ ಸುಹೃದೋಽವ್ಯಯಮ್ ॥೧॥**

“ಪರೀಕ್ಷಿತಮಹಾರಾಜ! ಗೋಪಿಯರಿಗೆ ಪರಮಗುರುವೂ ಪರಮಾಶ್ರಯನೂ ಆದ ಶ್ರೀಕೃಷ್ಣನು ನಾನು ಹಿಂದೆ ಹೇಳಿದರೀತಿಯಲ್ಲಿ ಗೋಪಿಯರಿಗೆ ಅಧ್ಯಾತ್ಮಶಿಕ್ಷಣವನ್ನು ಕೊಟ್ಟು ಅನುಗ್ರಹಿಸಿ ಯುಧಿಷ್ಠಿರನ ಮತ್ತು ಇತರ ಸಮಸ್ತಸುಹೃದರ ಕುಶಲಗಳನ್ನೂ ಕೇಳಿದನು.

ಲೋಕನಾಥನಾದ ಶ್ರೀಕೃಷ್ಣನಿಂದ ಸತ್ಕೃತರಾಗಿ ಕುಶಲಪ್ರಶ್ನೆ ಮಾಡಲ್ಪಟ್ಟು ಮತ್ತು ಆ ಭಗವಂತನ ದಿವ್ಯಪಾದಾರವಿಂದಗಳ ದರ್ಶನಮಾತ್ರದಿಂದಲೇ ಸಮಸ್ತವಾದ ಪಾಪಗಳಿಂದಲೂ ವಿಮುಕ್ತರಾದ ಯುಧಿಷ್ಠಿರನೇ ಮೊದಲಾದವರು ಪರಮಹೃಷ್ಟರಾಗಿ ವಾಸುದೇವನಿಗೆ ಹೇಳಿದರು :

**ಕುತೋಽಶಿವಂ ತ್ವಚ್ಚರಣಾಮ್ಬುಜಾಸವಂ**
**ಮಹನ್ಮನಸ್ತೋ ಮುಖನಿಃಸೃತಂ ಕ್ವಚಿತ್ ।**

---

ಅಧ್ಯಾಯದಲ್ಲಿ ಬರುವ ಕಥಾಭಾಗದಲ್ಲಿ ದುರ್ಯೋಧನನೇ ಮೊದಲಾದ ಕೌರವರೂ ಧೃತರಾಷ್ಟ್ರ-ಯುಧಿಷ್ಠಿರ-ಭೀಷ್ಮ-ದ್ರೋಣರೂ ಕುರುಕ್ಷೇತ್ರಗಳಲ್ಲಿ ಅತ್ಯಂತ ಸ್ನೇಹದಿಂದ ವರ್ತಿಸಿದರೆಂದು ಹೇಳಿದೆ. ರಾಜಸೂಯಯಾಗದನಂತರ (೭೪ನೆಯ ಅಧ್ಯಾಯವಾದನಂತರ) ಅಂತಹ ಸ್ನೇಹಮಿಲನಕ್ಕೆ ಅವಕಾಶವೇ ಇಲ್ಲ. ರಾಜಸೂಯ ಯಾಗದಲ್ಲಿಯೇ ದುರ್ಯೋಧನನ ಮಾತ್ಸರ್ಯದ ಅಂಕುರುವಾಗುತ್ತದೆ. ಅನಂತರ ಪಾಂಡವರೊಡನೆ ಮೋಸದ ಪಗಡೆಯಾಟವನ್ನಾಡಿ ಅವರೆಲ್ಲರನ್ನೂ ಕಾಡಿಗೆ ಕಳುಹಿಸುತ್ತಾನೆ. ಆದುದರಿಂದ ಈ ಪ್ರಕರಣವು ೬೫ನೆಯ ಅಧ್ಯಾಯದಿಂದ ೭೪ನೆಯ ಅಧ್ಯಾಯದ ಮಧ್ಯದಲ್ಲಿ ನಡೆದಿರಬೇಕು. ಸೂರ್ಯಗ್ರಹಣವು ರಾಜಸೂಯಯಾಗದ ನಂತರ ಬಂದಿರಲಾರದು–ಎಂದು ವ್ಯಾಖ್ಯಾನಿಸಿದ್ದಾರೆ.

**ಪಿಬನ್ತಿ ಯೇ ಕರ್ಣಪುಟೈರಲಂ ಪ್ರಭೋ**
**ದೇಹಂಭೃತಾಂ ದೇಹಕೃದಸ್ಮೃತಿಚ್ಛಿದಮ್ ॥೩॥**

ಸ್ವಾಮಿಯೇ! ಮಹಾಪುರುಷರು ಸರ್ವಕಾಲದಲ್ಲಿಯೂ ತಮ್ಮ ಮನಸ್ಸಿನಿಂದಲೇ ನಿನ್ನ ಪಾದಾರವಿಂದಗಳ ದಿವ್ಯರಸವನ್ನು ಪಾನಮಾಡುತ್ತಿರುತ್ತಾರೆ. ಕೆಲವು ವೇಳೆ ಅವರ ಮುಖಾರವಿಂದದಿಂದ ನಿನ್ನ ಲೀಲಾಪ್ರಸಂಗಗಳು ಪ್ರವಚನರೂಪವಾಗಿ ಆ ದಿವ್ಯವಾದ ಪಾದಾರವಿಂದಮಕರಂದರಸವು ಹೊರಚೆಲ್ಲುತ್ತದೆ. ಯಾವುದೇ ಪ್ರಾಣಿಯಾಗಲೀ, ಆ ಸಾಧುಪುರುಷರ ಮುಖಾರವಿಂದದಿಂದ ಹೊರಬರುವ ಭಗವಲ್ಲೀಲಾಮೃತವನ್ನು ಪಾನ ಮಾಡಿದ್ದೇ ಆದರೆ ಆ ದಿವ್ಯಾಮೃತವು, ಹುಟ್ಟು-ಸಾವುಗಳ ಚಕ್ರದಲ್ಲಿ ಸಿಕ್ಕಿಸುವ ಪುನಃ-ಪುನಃ ದೇಹಗಳನ್ನುಂಟುಮಾಡುವ ಮರೆವನ್ನು ಅಥವಾ ಅವಿದ್ಯೆಯನ್ನು ನಷ್ಟಗೊಳಿಸಿಬಿಡುತ್ತದೆ. ಅಂತಹ ಅದ್ಭುತವಾದ ಲೀಲಾಮೃತವನ್ನೂ ಕಿವಿಗಳ ಮೂಲಕವಾಗಿ ಹೀರಿಕೊಳ್ಳುವವರಿಗೆ ಅಮಂಗಳದ ಭಯವಾದರೂ ಎಲ್ಲಿಯದು?

**ಹಿತ್ವಾಽತ್ಮಧಾಮವಿಧುತಾತ್ಮಕೃತತ್ರ್ಯವಸ್ಥ-**
**ಮಾನನ್ದಸಮ್ಪ್ಲವಮಖಣ್ಡಮಕುಣ್ಠಬೋಧಮ್ ।**
**ಕಾಲೋಪಸೃಷ್ಟನಿಗಮಾವನ ಆತ್ತಯೋಗ-**
**ಮಾಯಾಕೃತಿಂ ಪರಮಹಂಸಗತಿಂ ನತಾಃ ಸ್ಮ ॥೪॥**

ದೇವೇಶನೇ! ನೀನು ಜ್ಞಾನಸ್ವರೂಪನಾಗಿರುವೆ ; ಅಖಂಡನಾಗಿರುವೆ ; ಆನಂದಸಮುದ್ರನಾಗಿರುವೆ. ಬುದ್ಧಿಕೃತಗಳಾದ ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನೂ ನಿನ್ನ ಸ್ವಯಂಪ್ರಕಾಶವು ನಿರಸನಗೊಳಿಸುತ್ತದೆ. ಪರಮಹಂಸರಿಗೆ ನೀನು ಏಕಮಾತ್ರ ಆಶ್ರಯವಾಗಿರುವೆ. ಕಾಲವಶದಿಂದ ಮಲಿನವಾದ ವೇದಗಳನ್ನು ಉದ್ಧರಿಸಲು ನೀನು ಆತ್ಮಧಾಮವನ್ನು ಬಿಟ್ಟು ಯೋಗಮಾಯೆಯಿಂದ ಮಾಯಾಮಾನುಷವಿಗ್ರಹನಾಗಿ ಅವತರಿಸಿರುವೆ. ಅಂತಹ ಅಚಿಂತ್ಯರೂಪನಾದ, ಸ್ವಯಂಪ್ರಕಾಶನಾದ, ಆನಂದಸಮುದ್ರನಾದ ನಿನಗೆ ನಮಸ್ಕರಿಸುತ್ತೇವೆ.”

ಪರೀಕ್ಷಿತಮಹಾರಾಜ! ಹೀಗೆ ಯುಧಿಷ್ಠಿರಾದಿಗಳು ಶ್ರೀಕೃಷ್ಣನನ್ನು

ಸ್ತುತಿಸುತ್ತಿದ್ದಾಗ ರುಕ್ಮಿಣಿಯೇ ಮೊದಲಾದ ಯಾದವಸ್ತ್ರೀಯರೂ ದ್ರೌಪದೀಯೇ ಮೊದಲಾದ ಕೌರವಸ್ತ್ರೀಯರೂ ಒಟ್ಟಾಗಿ ಕುಳಿತು ಭಗವಂತನ ತ್ರಿಲೋಕವಿಖ್ಯಾತವಾದ ಲೀಲಾಪ್ರಸಂಗಗಳನ್ನು ಕೀರ್ತಿಸುತ್ತಿದ್ದರು. ನಾನೀಗ ಅವರು ಭಗವಂತನ ವಿಷಯವಾಗಿ ಆಡಿಕೊಳ್ಳುತ್ತಿದ್ದ ಮಾತುಗಳನ್ನು ವಿವರವಾಗಿ ಹೇಳುವೆನು ; ಏಕಾಗ್ರಚಿತ್ತನಾಗಿ ಕೇಳು :

ದ್ರೌಪದಿಯು ಹೇಳುತ್ತಾಳೆ :

"ಎಲೌ ರುಕ್ಮಿಣಿಯೇ! ಜಾಂಬವತೀ! ಸತ್ಯೇ! ಸತ್ಯಭಾಮೇ! ಕಾಲಿಂದೀ! ಶೈಬ್ಯೇ! ಲಕ್ಷ್ಮಣೇ! ರೋಹಿಣೀ! ಮತ್ತು ಶ್ರೀಕೃಷ್ಣ ಭಗವಂತನ ಇತರ ಪತ್ನಿಯರೇ ನಿಮ್ಮೆಲ್ಲರ ಪ್ರಿಯವಲ್ಲಭನಾದ ಶ್ರೀಕೃಷ್ಣನು ತನ್ನ ಮಾಯೆಯಿಂದ ಲೋಕಾಚಾರವನ್ನು ಅನುಕರಣಮಾಡುತ್ತಾ ಯಾವ ರೀತಿಯಲ್ಲಿ ನಿಮ್ಮೆಲ್ಲರನ್ನೂ ಮದುವೆಯಾದನು? ಇದನ್ನು ಕೇಳುವ ಉತ್ಸುಕತೆಯು ನನಗಿದೆ. ನಿಮ್ಮ-ನಿಮ್ಮ ವಿವಾಹಪ್ರಸಂಗಗಳನ್ನು ಹೇಳಿರಿ."

ರುಕ್ಮಿಣಿಯು ಹೇಳುತ್ತಾಳೆ :

"ದ್ರೌಪದೀದೇವಿ! ಜರಾಸಂಧನೇ ಮೊದಲಾದ ಸಮಸ್ತರಾಜರೂ ನನ್ನ ವಿವಾಹವು ಶಿಶುಪಾಲನೊಡನೆ ಆಗಬೇಕೆಂದು ನಿರ್ಧರಿಸಿದ್ದರು. ಈ ಕಾರಣದಿಂದಲೇ ಅವರು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಯುದ್ಧಮಾಡಲು ಸಿದ್ಧರಾಗಿಯೇ ಬಂದಿದ್ದರು. ಆ ಸಮಯದಲ್ಲಿ ನನ್ನ ಪ್ರಾಣಸಖನು-ಸಿಂಹವು ಕುರಿಯ ಮಂದೆಗೆ ನುಗ್ಗಿ ತನ್ನ ಭಾಗವನ್ನು ಅಪಹರಿಸಿಕೊಂಡು ಹೋಗುವಂತೆ–ಆ ರಾಜರ ಮಧ್ಯದಿಂದ ನನ್ನನ್ನು ಅಪಹರಿಸಿದನು. ಸಮಸ್ತ ಸಂಪತ್ತಿಗೂ ಮತ್ತು ಸೌಂದರ್ಯಕ್ಕೂ ಆಶ್ರಯವಾದ ಆ ಭಗವಂತನ ಚರಣ ಕಮಲಗಳೇ ಜನ್ಮ-ಜನ್ಮಗಳಲ್ಲಿಯೂ ನನ್ನ ಆರಾಧನೆಗೆ ಲಭಿಸುವಂತಾಗಲಿ."

**ತಚ್ಛ್ರೀನಿಕೇತಚರಣೋऽಸ್ತು ಮಮಾರ್ಚನಾಯ ॥೮॥**

ಸತ್ಯಭಾಮೆಯು ಹೇಳುತ್ತಾಳೆ :

"ದ್ರುಪದಪುತ್ರಿ! ನನ್ನ ತಂದೆಯು ಕಾಡಿನಲ್ಲಿ ತನ್ನ ತಮ್ಮನಾದ ಪ್ರಸೇನನು ಮರಣಹೊಂದಿದುದಕ್ಕಾಗಿ ಅತ್ಯಂತ ದುಃಖಿತನಾಗಿದ್ದನು.

ಸ್ಯಮಂತಕಮಣಿಯ ಸಲುವಾಗಿ ಶ್ರೀಕೃಷ್ಣನೇ ಅವನನ್ನು ಸಂಹರಿಸಿರಬಹುದೆಂದೂ ನನ್ನ ತಂದೆಯು ಶಂಕಿಸಿದನು. ತನ್ನ ಮೇಲೆ ಬಂದ ಮಿಥ್ಯಾಪವಾದವನ್ನು ಹೋಗಲಾಡಿಸಿಕೊಳ್ಳುವ ಸಲುವಾಗಿ ನನ್ನ ಪ್ರಿಯತಮನು ಅರಣ್ಯಕ್ಕೆ ಹೋಗಿ ಋಕ್ಷರಾಜನಾದ ಜಾಂಬವಂತನೊಡನೆ ಯುದ್ಧಮಾಡಿ ಜಯಗಳಿಸಿ ಅವನಲ್ಲಿದ್ದ ಸ್ಯಮಂತಕಮಣಿಯನ್ನು ತಂದು ನನ್ನ ತಂದೆಗೆ ಒಪ್ಪಿಸಿದನು. ಭಗವಂತನ ಮೇಲೆ ಮಿಥ್ಯಾಪವಾದವನ್ನು ಹೊರಿಸಿದ್ದಕ್ಕಾಗಿ ಭಯಗೊಂಡ ನಮ್ಮ ತಂದೆಯು ನನ್ನನ್ನು ಬೇರೆಯವರಿಗೆ ಕೊಟ್ಟು ಮದುವೆ ಮಾಡಲು ವಾಗ್ದಾನ ಮಾಡಿದ್ದರೂ ಸ್ಯಮಂತಕಮಣಿಯೊಡನೆ ನನ್ನನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದನು. ಹೀಗೆ ಯದುಕುಲಾವತಂಸನಾದ ಶ್ರೀಕೃಷ್ಣನೊಡನೆ ನನ್ನ ವಿವಾಹವಾಯಿತು."

ಅನಂತರ ಜಾಂಬವತಿಯು ಹೇಳುತ್ತಾಳೆ :

"ಪಾಂಚಾಲಿ! ಋಕ್ಷರಾಜನಾದ ನನ್ನ ತಂದೆ ಜಾಂಬವಂತನಿಗೆ ಶ್ರೀಕೃಷ್ಣನು ತನ್ನ ಸ್ವಾಮಿಯಾದ ಸೀತಾಪತಿಯಾದ ಶ್ರೀರಾಮನೇ ಎಂಬುದು ಮೊದಲು ತಿಳಿಯಲಿಲ್ಲ. ಶ್ರೀಕೃಷ್ಣನು ಸಾಮಾನ್ಯಮಾನವನೆಂದೇ ಭಾವಿಸಿ ಅವನೊಡನೆ ಇಪ್ಪತ್ತೇಳು ದಿವಸಗಳವರೆಗೆ ಎಡೆಬಿಡದೆ ಯುದ್ಧಮಾಡಿದನು. ಅವನ ಅದ್ಭುತವಾದ ಪರಾಕ್ರಮವನ್ನು ಇಪ್ಪತ್ತೇಳು ದಿವಸಗಳವರೆಗೆ ಪರೀಕ್ಷಿಸಿ ತಿಳಿದನಂತರ ಶ್ರೀಕೃಷ್ಣನು ತನ್ನ ಪ್ರಭುವಾದ ಶ್ರೀರಾಮಚಂದ್ರನೇ ಆಗಿದ್ದಾನೆಂಬುದನ್ನು ದೃಢಪಡಿಸಿಕೊಂಡು, ಶ್ರೀಕೃಷ್ಣನ ಚರಣಕಮಲಗಳನ್ನು ಹಿಡಿದುಕೊಂಡು ದಂಡಪ್ರಣಾಮ ಮಾಡಿ, ಸ್ಯಮಂತಕಮಣಿಯೊಡನೆ ನನ್ನನ್ನೂ ಅವನಿಗೆ ಸಮರ್ಪಿಸಿದನು. ಈ ರೀತಿಯಲ್ಲಿ ನಾನು ಜಗದಾನಂದಕಂದನಾದ ಶ್ರೀಕೃಷ್ಣನಿಗೆ ದಾಸಿಯಾದೆನು."

ಕಾಲಿಂದಿಯು ಹೇಳುತ್ತಾಳೆ :

"ಪಾಂಚಾಲರಾಜಕುಮಾರಿ! ಭಗವಂತನ ಚರಣಗಳನ್ನು ಸ್ಪರ್ಶಿಸಬೇಕೆಂಬ ಮತ್ತು ಅವನ ಚರಣದಾಸಿಯಾಗಬೇಕೆಂಬ ಅಭಿಲಾಷೆಯಿಂದ ನಾನು ತಪಸ್ಸುಮಾಡುತ್ತಿದ್ದ ವಿಷಯವು, ಸಮಸ್ತಪ್ರಾಣಿಗಳಲ್ಲಿಯೂ ಅಂತರಾತ್ಮನರೂಪದಲ್ಲಿರುವ ಶ್ರೀಕೃಷ್ಣಸ್ವಾಮಿಗೆ ತಿಳಿದು, ತನ್ನ ಸಖನಾದ

ಅರ್ಜುನನೊಡನೆ ಯಮುನಾ ನದಿಯ ತೀರಕ್ಕೆ ಬಂದು ನನ್ನನ್ನು ಪರಿಗ್ರಹಿಸಿದನು. ಇಂದು ನಾನು ಅವನ ಮನೆಯ ಕಸಗುಡಿಸುವ ದಾಸಿಯಾಗಿದ್ದು ಆನಂದತುಂದಿಲಳಾಗಿದ್ದೇನೆ."

ಮಿತ್ರವಿಂದೆಯು ಹೇಳುತ್ತಾಳೆ :

"ದ್ರೌಪದಿ! ನನ್ನ ಸೋದರರು ನನ್ನ ಸ್ವಯಂವರವನ್ನು ಏರ್ಪಡಿಸಿದ್ದರು. ಹಲವಾರು ರಾಜಕುಮಾರರೂ ಸ್ವಯಂವರಕ್ಕೆ ಆಗಮಿಸಿದ್ದರು. ನನ್ನ ಸಹೋದರರಿಗೆ ನನ್ನನ್ನು ಶ್ರೀಕೃಷ್ಣನಿಗೆ ಮದುವೆ ಮಾಡಿಕೊಡಲು ಇಷ್ಟವಿರಲಿಲ್ಲ. ಆದುದರಿಂದ ಅವನಿಗೆ ಆಹ್ವಾನವನ್ನೂ ಕಳುಹಿಸಿರಲಿಲ್ಲ. ಆದರೆ ನನ್ನ ಮನಸ್ಸಿನ ಆಶಯವೇನೆಂಬುದು ನನ್ನ ಸ್ವಾಮಿಗೆ ತಿಳಿದಿತ್ತು. ಅವನೂ ಸ್ವಯಂವರಕ್ಕೆ ಆಗಮಿಸಿದನು. ಸಿಂಹವು ನಾಯಿಗಳ ಮಧ್ಯದಲ್ಲಿರುವ ತನ್ನ ಭಾಗವನ್ನು ಅಪಹರಿಸಿಕೊಂಡು ಹೋಗುವಂತೆ–ಅಲ್ಲಿ ನೆರದಿದ್ದ ರಾಜಕುಮಾರರನ್ನೂ ಮತ್ತು ನನಗೆ ಅಪಕಾರವೆಸಗಲು ಆಶಿಸಿದ್ದ ನನ್ನ ಸಹೋದರರನ್ನೂ ಪರಾಜಯಗೊಳಿಸಿ, ನನ್ನನ್ನು ಅಪಹರಿಸಿಕೊಂಡು ಬಂದು ಸಂಪದ್ಭರಿತವಾಗಿದ್ದ ದ್ವಾರಕಾಪಟ್ಟಣದಲ್ಲಿ ನನ್ನನ್ನು ವಿಜೃಂಭಣೆಯಿಂದ ವಿವಾಹವಾದನು. ಈಗಿನಂತೆ ನನಗೆ ಪ್ರತಿಜನ್ಮದಲ್ಲಿಯೂ ಭಗವಂತನ ಪಾದಗಳನ್ನು ತೊಳೆಯುವ ಸೇವೆಯೇ ಲಭಿಸಲಿ. ಇದು ನನ್ನ ಜೀವನದ ಆಶೆಯಾಗಿದೆ."

ಸತ್ಯೆಯು ಹೇಳುತ್ತಾಳೆ :

"ಪಾಂಚಾಲರಾಜಕುಮಾರಿ! ನನ್ನ ತಂದೆಯು ಸ್ವಯಂವರಕ್ಕೆ ಆಗಮಿಸುವ ರಾಜಕುಮಾರರ ಬಲ-ಪೌರುಷಗಳನ್ನು ಪರೀಕ್ಷಿಸುವ ಸಲುವಾಗಿ ಬಲಿಷ್ಠವಾಗಿದ್ದ, ಪರಾಕ್ರಮದಿಂದ ಸಂಪನ್ನವಾಗಿದ್ದ ಮತ್ತು ತೀಕ್ಷ್ಣವಾದ ಕೊಂಬುಗಳಿಂದ ಭಯಂಕರವಾಗಿ ಕಾಣುತ್ತಿದ್ದ ಏಳು ಹೋರಿಗಳನ್ನು ಸಿದ್ಧಗೊಳಿಸಿದ್ದನು. ರಾಜಕುಮಾರರು ಅವುಗಳನ್ನು ಹಿಡಿದು ಪಳಗಿಸಿ ಬಂಧಿಸಬೇಕಾಗಿದ್ದಿತು. ಹಾಗೆ ಬಂಧಿಸಿದವರಿಗೆ ಮಾತ್ರವೇ ನನ್ನನ್ನು ಕೊಟ್ಟು ವಿವಾಹಮಾಡಬೇಕೆಂಬುದು ನನ್ನ ತಂದೆಯ ಆಶಯವಾಗಿದ್ದಿತು. ನನ್ನ ಕೈಹಿಡಿಯಲು ಬಂದಿದ್ದ ಹಲವಾರು ರಾಜಕುಮಾರರನ್ನು ಆ ಹೋರಿಗಳು ಛಿನ್ನ-ಭಿನ್ನಗೊಳಿಸಿದ್ದುವು. ಆದರೆ ನನ್ನ ಪ್ರಭುವಾದ ಶ್ರೀಕೃಷ್ಣನು ಆ

ಏಳು ಹೋರಿಗಳನ್ನೂ–ಬಾಲಕರು ಮೇಕೆಯ ಮರಿಗಳನ್ನು ಹಿಡಿದು ಕಟ್ಟು ವಂತೆ–ಆಟವಾಡುತ್ತಲೇ ಬಂಧಿಸಿದನು. ಹೀಗೆ ಪ್ರಿಯತಮನು ವೀರ್ಯ ಶುಲ್ಕಳಾದ ನನ್ನನ್ನು ಮದುವೆಯಾಗಿ ಚತುರಂಗಸೇನಾಸಮೇತನಾಗಿ ಹಲ ವಾರು ದಾಸೀ-ದಾಸರೊಡನೆ ದ್ವಾರಕೆಗೆ ಆಗಮಿಸಿದನು. ಮಾರ್ಗದಲ್ಲಿಯೂ ಕೂಡ ನನ್ನನ್ನು ಮದುವೆಯಾಗಲು ಆಶಿಸಿದ್ದ ಹಲವಾರು ರಾಜಕುಮಾರರು ಶ್ರೀಕೃಷ್ಣನನ್ನು ತಡೆದು ಯುದ್ಧಮಾಡಿದರು. ಅವರೆಲ್ಲರನ್ನೂ ಶ್ರೀಕೃಷ್ಣನು ಪರಾಜಯಗೊಳಿಸಿ ದ್ವಾರಕೆಯನ್ನು ಸೇರಿದನು. ಜನ್ಮ-ಜನ್ಮಗಳಲ್ಲಿಯೂ ಅವನ ಸೇವೆ ಮಾಡುವ ಸೌಭಾಗ್ಯವು ಸಿಕ್ಕಲೆಂಬುದು ನನ್ನ ಜೀವನದ ಬಯಕೆಯಾಗಿದೆ."

ಬಳಿಕ ಭದ್ರೆಯು ಹೇಳುತ್ತಾಳೆ :

"ಕೃಷ್ಣೇ! ಭಗವಾನ್ ಶ್ರೀಕೃಷ್ಣನು ನನ್ನ ಸೋದರಮಾವನ ಮಗನು. ಅವನು ಚಿರಪರಿಚಿತನಾಗಿದ್ದುದರಿಂದ ನನ್ನ ಮನಸ್ಸು ಅವನಲ್ಲಿಯೇ ಅನುರಕ್ತವಾಗಿ ಬಿಟ್ಟಿದ್ದಿತು. ಇದನ್ನು ತಿಳಿದ ನನ್ನ ತಂದೆಯು ಶ್ರೀಕೃಷ್ಣನನ್ನೇ ಕರೆಯಿಸಿ ಅಕ್ಷೌಹಿಣೀ ಸೈನ್ಯದೊಡನೆಯೂ ಸಾವಿರಾರು ದಾಸೀ-ದಾಸ ರೊಡನೆಯೂ ನನ್ನನ್ನು ಜಗದಾನಂದಕಂದನ ಪಾದಾರವಿಂದಗಳಲ್ಲಿ ಅರ್ಪಿಸಿಬಿಟ್ಟನು. ನನ್ನ ಕರ್ಮಾನುಸಾರವಾಗಿ ನಾನೆಲ್ಲಿಯೇ ಜನ್ಮವನ್ನು ತಾಳಿದರೂ ನನಗೆ ನನ್ನ ಪ್ರಿಯತಮನ ಪಾದಾರವಿಂದಗಳ ಸ್ಪರ್ಶವಾಗುತ್ತಲೇ ಇರಬೇಕು. ಮಾಧವನ ಚರಣಾರವಿಂದಗಳ ಸೇವೆಯನ್ನು ನಾನು ಸದಾ ಮಾಡುತ್ತಲೇ ಇರಬೇಕು. ಇದೇ ನನ್ನ ಸತತವಾದ ಪ್ರಾರ್ಥನೆಯಾಗಿದೆ ಮತ್ತು ಇದರಿಂದಲೇ ನನಗೆ ಪರಮಕಲ್ಯಾಣವಾಗುವುದೆಂದೂ ಭಾವಿಸಿದ್ದೇನೆ."

ಅನಂತರ ಲಕ್ಷ್ಮಣೆಯು ಹೇಳುತ್ತಾಳೆ :

"ಮಹಾರಾಣಿ! ಶ್ರೀಕೃಷ್ಣನು ಹುಟ್ಟಿದ್ದು, ಬೆಳೆದದ್ದು, ಅವನ ಪರಮಾದ್ಭುತವಾದ ಲೀಲಾಪ್ರಸಂಗಗಳು–ಇವೆಲ್ಲವನ್ನೂ ಗಾಯನರೂಪ ವಾಗಿ ಹಲವಾರು ಬಾರಿ ಮಹರ್ಷಿಗಳಾದ ನಾರದರಿಂದ ಕೇಳಿದ ನನ್ನ ಮನಸ್ಸು ಮುಕುಂದನಲ್ಲಿಯೇ ಲೀನವಾಗಿ ಹೋಯಿತು. ಮಹಾದೇವಿಯಾದ

ಲಕ್ಷ್ಮಿಯೂ ಕೂಡ ಚೆನ್ನಾಗಿ ವಿಮರ್ಶಿಸಿ ಲೋಕಪಾಲಕರೆಲ್ಲರನ್ನೂ ತ್ಯಜಿಸಿ ಭಗವಂತನನ್ನು ವರಿಸಿರುವಳೆಂಬ ವಾರ್ತೆಯನ್ನೂ ನಾರದರಿಂದ ಕೇಳಿದ ನಂತರ ನನ್ನ ಮನಸ್ಸು ಭಗವಂತನ ಚರಣಾರವಿಂದಗಳಲ್ಲಿಯೇ ಆಸಕ್ತವಾಗಿ ಬಿಟ್ಟಿತು. ಮಗಳನ್ನು ಅತಿಶಯವಾಗಿ ಪ್ರೀತಿಸುತ್ತಿದ್ದ ನನ್ನ ತಂದೆ ಬೃಹತ್ಸೇನನು ನನ್ನ ಅಭಿಪ್ರಾಯವನ್ನು ತಿಳಿದು ನನ್ನ ಆಸೆಯನ್ನು ಪೂರ್ಣಗೊಳಿಸುವ ಸಲುವಾಗಿ ಒಂದು ಉಪಾಯ ಮಾಡಿದನು.

ಯಾವ ರೀತಿಯಲ್ಲಿ ಅರ್ಜುನನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡ ಬೇಕೆಂದಿದ್ದ ದ್ರುಪದರಾಜನು ಅರ್ಜುನನಿಂದ ಮಾತ್ರವೇ ಭೇದಿಸಲು ಸಾಧ್ಯ ವಾಗುವುದಾಗಿದ್ದ ಮತ್ಸ್ಯಯಂತ್ರವನ್ನು ಸಿದ್ಧಗೊಳಿಸಿದನೋ ಅದೇರೀತಿ ಯಲ್ಲಿ ನನ್ನ ತಂದೆಯು ಶ್ರೀಕೃಷ್ಣನೊಬ್ಬನಿಂದ ಮಾತ್ರವೇ ಭೇದಿಸಲು ಸಾಧ್ಯವಾಗುವ ಮತ್ಸ್ಯಯಂತ್ರವನ್ನು ನನ್ನ ಸ್ವಯಂವರಕ್ಕಾಗಿ ಸಜ್ಜು ಗೊಳಿಸಿದನು. ಆದರೆ ದ್ರುಪದನು ಸಿದ್ಧಗೊಳಿಸಿದ್ದ ಮತ್ಸ್ಯಯಂತ್ರಕ್ಕೂ ನನ್ನ ತಂದೆಯು ಸಿದ್ಧಗೊಳಿಸಿದ್ದ ಮತ್ಸ್ಯಯಂತ್ರಕ್ಕೂ ಒಂದೇ ವ್ಯತ್ಯಾಸ. ನಿನ್ನ ಸ್ವಯಂವರಕ್ಕಾಗಿ ಸಿದ್ಧಗೊಳಿಸಿದ್ದ ಮತ್ಸ್ಯಯಂತ್ರವು ಹೊರಗಡೆ ಮಾತ್ರ ಮರೆಯಾಗಿತ್ತು. ಸ್ತಂಭದ ಬುಡದಿಂದ ನೋಡಿದರೆ ಮೇಲಿನ ಗುರಿಕಾಣುತ್ತಿದ್ದಿತು. ನನ್ನ ಸ್ವಯಂವರಕ್ಕಾಗಿ ಸಜ್ಜುಗೊಳಿಸಿದ್ದ ಮತ್ಸ್ಯ ಯಂತ್ರವು ಒಳಗಿನಿಂದಲೂ ಮರೆಯಾಗಿತ್ತು. ಕೆಳಗಿದ್ದ ಉದಕುಂಭದಲ್ಲಿ ಮಾತ್ರವೇ ಕಾಣುತ್ತಿದ್ದು ಕೆಳಗೆ ನೋಡುತ್ತಾ ಮೇಲಿದ್ದ ಲಕ್ಷ್ಯವನ್ನು ಭೇದಿಸಬೇಕಾಗಿದ್ದಿತು.

ನನ್ನ ಸ್ವಯಂವರದ ಸಮಾಚಾರವು ತಿಳಿದೊಡನೆಯೇ ಅಸ್ತ್ರ-ಶಸ್ತ್ರಗಳ ವಿದ್ಯೆಯಲ್ಲಿ ಪಾರಂಗತರಾಗಿದ್ದ ಭೂಮಂಡಲದ ಸಾವಿರಾರು ರಾಜರು ತಮ್ಮ ಪುರೋಹಿತರೊಡನೆ ನನ್ನ ತಂದೆಯ ರಾಜಧಾನಿಗೆ ಆಗಮಿಸಿದರು. ನನ್ನ ತಂದೆಯೂ ಆಗಮಿಸಿದ ಸಮಸ್ತರಾಜರಿಗೂ ಅವರವರ ಬಲ-ಪೌರುಷಗಳಿಗೆ ಮತ್ತು ವಯಸ್ಸಿಗೆ ಅನುಗುಣವಾಗಿ ಯಥಾವಿಧಿಯಾಗಿ ಸತ್ಕರಿಸಿದನು.

ಬಳಿಕ ಆ ರಾಜರು ನನ್ನನ್ನು ಪಡೆದುಕೊಳ್ಳುವ ಆಶಯದಿಂದ ಸ್ವಯಂವರಮಂಟಪದಲ್ಲಿದ್ದ ಧನುರ್ಬಾಣಗಳನ್ನು ಒಬ್ಬೊಬ್ಬರಾಗಿ ಎತ್ತಲು

ಪ್ರಯತ್ನಿಸಿದರು. ಅವರಲ್ಲಿ ಕೆಲವರು ಧನುಸ್ಸನ್ನು ಎತ್ತಲಾಗದೆಯೇ ಕೆಳಕ್ಕೆ ಹಾಕಿದರು. ಮತ್ತೆ ಕೆಲವರು ಮೇಲಕ್ಕೆತ್ತಿದರೂ ನಾಣನ್ನು ಸೆಳೆದುಕಟ್ಟಲು ಅಸಮರ್ಥರಾದರು. ಕೆಲವರು ಬಿಲ್ಲನ್ನು ಬಗ್ಗಿಸಿ ನಾಣನ್ನು ತುದಿಯವರೆಗೆ ಸೆಳೆದು ಕಟ್ಟುತ್ತಿದ್ದಾಗ ಕೈತಪ್ಪಿ ಬಿಲ್ಲಿನಿಂದಲೇ ಪ್ರಹರಿಸಲ್ಪಟ್ಟವರಾಗಿ ಕೆಳಕ್ಕೆ ಬಿದ್ದುಹೋದರು. ಮಹಾ-ಮಹಾಧನುರ್ಧಾರಿಗಳೆಂದು ಪ್ರಸಿದ್ಧರಾಗಿದ್ದ ಜರಾಸಂಧ, ಅಂಬಷ್ಠನರೇಶ, ಶಿಶುಪಾಲ, ಭೀಮಸೇನ, ದುರ್ಯೋಧನ, ಕರ್ಣ–ಇವರೇ ಮುಂತಾದವರು ಹೆದೆಯನ್ನೇನೋ ಏರಿಸಿ ಬಾಣವನ್ನು ಹೂಡಿದರು. ಆದರೆ ಅವರಿಗೆ ಲಕ್ಷ್ಯವು ಎಲ್ಲಿರುವುದೆಂಬುದೇ ತಿಳಿಯಲಿಲ್ಲ. ಪಾಂಡುವೀರನಾದ ಮತ್ತು ನಿನ್ನ ಪ್ರಿಯತಮನಾದ ಅರ್ಜುನನೂ ಕೂಡ ಬಿಲ್ಲನ್ನೆತ್ತಿ ಹೆದೆಯೇರಿಸಿ ಧನುಸ್ಸಿನಲ್ಲಿ ಬಾಣವನ್ನೂ ಜೋಡಿಸಿ ಲಕ್ಷ್ಯವನ್ನೂ ಭಾಂಡದಲ್ಲಿದ್ದ ನೀರಿನ ಮೂಲಕವಾಗಿ ಗುರುತಿಸಿ ಪ್ರಯೋಗಿಸಿದನು. ಆದರೆ ಅವನು ಬಿಟ್ಟಬಾಣವು ಲಕ್ಷ್ಯವನ್ನು ಮುಟ್ಟಿಕೊಂಡು ಹೋಯಿತೇ ಹೊರತು ಭೇದಿಸಲಿಲ್ಲ ; ಕೆಳಕ್ಕೆ ಬೀಳಿಸಲಿಲ್ಲ. ಹೀಗೆ ತಮ್ಮ ವೀರ್ಯ-ಶೌರ್ಯಗಳ ಬಗೆಗೆ ಅಭಿಮಾನಿಗಳಾಗಿದ್ದ ರಾಜರೆಲ್ಲರೂ ಭಗ್ನದರ್ಪರಾಗಿ, ಭಗ್ನಮನೋ ರಥರಾಗಿ ಹಿಂದಿರುಗಿದನಂತರ ಉಳಿದ ರಾಜರು ನನ್ನನ್ನು ಪಡೆದುಕೊಳ್ಳ ಬೇಕೆಂಬ ಆಸೆಯನ್ನೂ ಮತ್ತು ಮತ್ಸ್ಯಯಂತ್ರಭೇದನದ ಪ್ರಯತ್ನವನ್ನೂ ತೊರೆದು ಹೊರಟುಹೋದರು. ಆ ಸಮಯದಲ್ಲಿ ಲೀಲಾಮಾನುಷವಿಗ್ರಹ ನಾದ ಭಗವಂತನು ಆಸನದಿಂದ ಮೇಲೆದ್ದು ಬಂದು ಅನಾಯಾಸವಾಗಿ ಧನುಸ್ಸನ್ನು ಮೇಲೆತ್ತಿ, ಶಿಂಜಿನಿಯ್ನು ಸೆಳೆದುಕಟ್ಟಿ, ಬಾಣವನ್ನು ಜೋಡಿಸಿ ಉದಕುಂಭದಲ್ಲಿ ಕಾಣುತ್ತಿದ್ದ ಲಕ್ಷ್ಯವನ್ನು ಗುರುತಿಸಿ ಬಾಣವನ್ನು ಪ್ರಯೋ ಗಿಸಿ ಕ್ಷಣಮಾತ್ರದಲ್ಲಿ ಮತ್ಸ್ಯವನ್ನು ಕೆಳಕ್ಕೆ ಕೆಡುಹಿದನು. ಆ ಸಮಯವು ಅತ್ಯಂತ ಶುಭಕರವಾದ ಅಭಿಜನ್ಮುಹೂರ್ತವಾಗಿದ್ದಿತು. ಸೂರ್ಯನು ಅಭಿ ಜನ್ಮುಹೂರ್ತದಲ್ಲಿದ್ದನು. ದೇವ-ದುಂದುಭಿಗಳು ಮೊಳಗಿದುವು. 'ಶ್ರೀಕೃಷ್ಣ ನಿಗೆ ಜಯವಾಗಲಿ! ವಾಸುದೇವನಿಗೆ ಜಯವಾಗಲಿ! ಮುಕುಂದನಿಗೆ ಜಯವಾಗಲಿ'–ಎಂಬ ಜಯಕಾರಶಬ್ದಗಳು ಭೂಮಂಡಲದಲ್ಲಿ ಸರ್ವತ್ರ ಕೇಳಿಬರುತ್ತಿದ್ದಿತು. ದೇವತೆಗಳು ಆನಂದತುಂದಿಲರಾಗಿ ನನ್ನ ಪ್ರಿಯ

ತಮನ ಮೇಲೆ ಹೂಮಳೆಗರೆದರು. ಆ ಸಮಯದಲ್ಲಿ ನಾನು ಸ್ವಯಂವರ ಮಂಟಪವನ್ನು ಪ್ರವೇಶಿಸಿದೆನು. ನಾನು ನಡೆದುಹೋಗುತ್ತಿದ್ದಾಗ ಕಾಲುಗಳಲ್ಲಿದ್ದ ಕಾಲಂದುಗೆಗಳು ಝಣ-ಝಣಿಸುತ್ತಿದ್ದುವು. ಹೊಸದಾದ ರೇಷ್ಮೆಯ ಸೀರೆಯನ್ನುಟ್ಟು ದುಕೂಲವನ್ನು ಹೊದೆದಿದ್ದೆನು. ತುರುಬಿಗೆ ಹೂದಂಡೆಯನ್ನು ಮುಡಿದುಕೊಂಡಿದ್ದೆನು. ಕೈಯಲ್ಲಿ ಸ್ವರ್ಣಮಯವಾದ ಹಾರವನ್ನು ಹಿಡಿದಿದ್ದೆನು. ನಾಚಿಕೆಯಿಂದ ಕೂಡಿದ ಕಿರುನಗೆಯನ್ನು ಬೀರುತ್ತಿದ್ದೆನು. ಬಳಿಕ ನಾನು ಮುಂಗುರುಳುಗಳಿಂದಲೂ ಕುಂಡಲಗಳ ಕಾಂತಿಯಿಂದಲೂ ಬೆಳಗುತ್ತಿದ್ದ ನನ್ನ ಮುಖವನ್ನು ಮೇಲೆತ್ತಿ ಶುಭ್ರವಾದ ಮಂದಹಾಸದಿಂದ ಕೂಡಿದ ಕಡೆಗಣ್ಣಿನ ನೋಟದಿಂದ ಸುತ್ತಲೂ ನೆರೆದಿದ್ದ ರಾಜರನ್ನು ವೀಕ್ಷಿಸಿ ಮೆಲ್ಲ-ಮೆಲ್ಲನೆ ಮುನ್ನಡೆದು ಶ್ರೀಕೃಷ್ಣನಲ್ಲಿಯೇ ಅನುರಕ್ತವಾದ ಮನಸ್ಸಿನಿಂದ ಕೂಡಿದ್ದ ನಾನು ಜಗದಾನಂದಕಂದನ ಕಂಬುಕಂಠದಲ್ಲಿ ಪುಷ್ಪಹಾರವನ್ನು ಹಾಕಿದೆನು. ಮೃದಂಗ-ಪಟಹ-ಶಂಖ-ನಗಾರಿ—ಇವೇ ಮುಂತಾದ ಮಂಗಳವಾದ್ಯಗಳು ಮೊಳಗಿದುವು. ನಟ-ನರ್ತಕಿಯರು ನಾಟ್ಯವಾಡುತ್ತಿದ್ದರು. ಗಾಯಕರು ಕರ್ಣಾನಂದಕರವಾಗಿ ಹಾಡುತ್ತಿದ್ದರು.

ಯಾಜ್ಞಸೇನಿ! ಹೀಗೆ ನಾನು ಸರ್ವೇಶ್ವರನಾದ ಶ್ರೀಕೃಷ್ಣಸ್ವಾಮಿಯ ಕೊರಳಿಗೆ ಸ್ವಯಂವರಮಾಲಿಕೆಯನ್ನು ಹಾಕಿ ಅವನನ್ನು ವರಿಸಲಾಗಿ ಕಾಮಪೀಡಿತರಾಗಿದ್ದ ರಾಜರು ಅದನ್ನು ಸಹಿಸಿಕೊಳ್ಳಲಾರದೆ ಶ್ರೀಕೃಷ್ಣನೊಡನೆ ಸ್ಪರ್ಧಿಸಲು ಸಿದ್ಧವಾಗಿ ನಿಂತರು, ಶ್ರೀಕೃಷ್ಣನ ಪೌರುಷವನ್ನು ಪ್ರತ್ಯಕ್ಷವಾಗಿ ಕಂಡಿದ್ದರೂ ಕಾಮಮೋಹಿತರಾಗಿದ್ದ ರಾಜರು ಶ್ರೀಕೃಷ್ಣನೊಡನೆ ಸ್ಪರ್ಧೆಗಿಳಿದರು. ಒಡನೆಯೇ ಚತುರ್ಭುಜನಾದ ಶ್ರೀಕೃಷ್ಣಸ್ವಾಮಿಯು ಶ್ರೇಷ್ಠವಾದ ನಾಲ್ಕು ಕುದುರೆಗಳಿಂದ ಹೂಡಲ್ಪಟ್ಟಿದ್ದ ರಥದಲ್ಲಿ ನನ್ನನ್ನು ಕುಳ್ಳಿರಿಸಿಕೊಂಡು ಕವಚವನ್ನು ತೊಟ್ಟು, ಶಾರ್ಙ್ಗಧನುಸ್ಸನ್ನು ಹಿಡಿದು, ಯುದ್ಧಸನ್ನದ್ಧನಾಗಿ ನಿಂತನು. ಸಿಂಹವು ಜಿಂಕೆಗಳ ಗುಂಪಿನ ಮಧ್ಯದಲ್ಲಿ ನುಗ್ಗಿಹೋಗುವಂತೆ ಶ್ರೀಕೃಷ್ಣನ ಸಾರಥಿಯಾದ ದಾರುಕನು ಸ್ವರ್ಣಮಯವಾದ ಸಾಮಗ್ರಿಗಳಿಂದ ಸಂಪನ್ನವಾಗಿದ್ದ ದಿವ್ಯ ರಥವನ್ನು ರಾಜರುಗಳು ನೋಡುತ್ತಿರುವಂತೆಯೇ ಮುನ್ನುಗ್ಗಿಸಿದನು. ಸ್ಪರ್ಧಿ

ಸಲು ಹೊರಟಿದ್ದ ರಾಜಸಮೂಹದಲ್ಲಿ ಕೆಲವು ರಾಜರು ಮಾತ್ರ ಆಯುಧಗಳನ್ನು ಹಿಡಿದು ಯುದ್ಧಸನ್ನದ್ಧರಾಗಿ ಸಿಂಹವನ್ನು ಗ್ರಾಮಸಿಂಹಗಳು (ನಾಯಿಗಳು) ಹಿಂಬಾಲಿಸುವಂತೆ ನಾವು ಕುಳಿತಿದ್ದ ರಥವನ್ನು ಹಿಂಬಾಲಿಸಿದರು. ಶ್ರೀಕೃಷ್ಣನು ಒಡನೆಯೇ ರಥವನ್ನು ನಿಲ್ಲಿಸಿ ರಾಜರನ್ನು ಎದುರಿಸಿ ಯುದ್ಧಮಾಡತೊಡಗಿದನು. ಶಾರ್ಙ್ಗಧನುಸ್ಸಿನಿಂದ ಹೊರಟ ಬಾಣಗಳ ಸಮೂಹಗಳಿಂದ ಹಲವು ರಾಜರ ತೋಳುಗಳು, ಕೆಲವರ ತೊಡೆಗಳು, ಕೆಲವರ ಕುತ್ತಿಗೆಗಳು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುವು. ಹಲವಾರು ರಾಜರು ಪ್ರಾಣಗಳನ್ನು ತೊರೆದರು. ಅಳಿದುಳಿದವರು ಪಲಾಯನಮಾಡಿದರು. ಸೂರ್ಯನನ್ನು ಮರೆಮಾಡುವ ಧ್ವಜಪಟಗಳಿಂದಲೂ, ಚಿತ್ರ-ವಿಚಿತ್ರವಾದ ತೋರಣಗಳಿಂದಲೂ ಅತಿಶಯವಾಗಿ ಅಲಂಕರಿಸಲ್ಪಟ್ಟಿದ್ದ, ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ ಹೊಗಳಲ್ಪಡುತ್ತಿದ್ದ ಕುಶಸ್ಥಲಿಯನ್ನು (ದ್ವಾರಕೆಯನ್ನು)–ಸೂರ್ಯನು ತನ್ನ ನೆಲೆಯನ್ನು ಸೇರುವಂತೆ–ಯಾದವೇಂದ್ರನಾದ ಶ್ರೀಕೃಷ್ಣನು ಪ್ರವೇಶಿಸಿದನು. ನನ್ನ ಮನೋರಥವು ಪೂರ್ಣ ವಾಗಲಾಗಿ ನನ್ನ ತಂದೆಯು ಆನಂದಭರಿತನಾದನು. ತನ್ನ ಸುಹೃದರಿಗೂ, ಹಿತೈಷಿಗಳಿಗೂ, ಜ್ಞಾತಿಬಾಂಧವರಿಗೂ ಬಹುಮೂಲ್ಯವಾದ ವಸ್ತ್ರಾಭರಣಗಳನ್ನೂ, ಶಯ್ಯಾಸನಗಳನ್ನೂ, ವಿಚಿತ್ರವಾದ ಸಾಮಗ್ರಿಗಳನ್ನೂ ಮದುವೆಯ ಪಾರಿತೋಷಿಕವಾಗಿ ಕೊಟ್ಟನು. ಪಾಂಚಾಲಿ! ಭಗವಂತನು ಪರಿಪೂರ್ಣನು. ಅವನಲ್ಲಿಲ್ಲದ ವಸ್ತುವೇ ಪ್ರಪಂಚದಲ್ಲಿ ಯಾವುದೂ ಇಲ್ಲ. ಆದರೂ ನನ್ನ ತಂದೆಯು ಪ್ರೇಮಪರವಶನಾಗಿ ನನ್ನ ಪ್ರಿಯತಮನಿಗೆ ಹಲವಾರು ದಾಸಿಯರನ್ನೂ, ಸಮಸ್ತವಾದ ಐಶ್ವರ್ಯಗಳನ್ನೂ, ಗಜ-ರಥಾಶ್ವ-ಪದಾತಿಸೈನಿಕರನ್ನೂ, ಬಹುಮೂಲ್ಯವಾದ ಅಸ್ತ್ರ-ಶಸ್ತ್ರಗಳನ್ನೂ ಭಕ್ತಿಭಾವದಿಂದ ಸಮರ್ಪಿಸಿದನು. ಮಹಾರಾಣಿ! ನಾವೆಲ್ಲರೂ ಪೂರ್ವಜನ್ಮದಲ್ಲಿ ಎಲ್ಲದರಲ್ಲಿಯೂ ಆಸಕ್ತಿಯನ್ನು ತೊರೆದು ಶ್ರೀಕೃಷ್ಣನನ್ನೇ ಸೇರಬೇಕೆನ್ನುವ ಏಕೈಕಧ್ಯೇಯದಿಂದ ಕಠಿಣವಾದ ತಪಸ್ಸನ್ನೇ ಮಾಡಿರಬೇಕು. ಅದರ ಫಲವಾಗಿಯೇ ನಾವೀಗ ಈ ಜನ್ಮದಲ್ಲಿ ಪ್ರತ್ಯಕ್ಷವಾಗಿ ಆತ್ಮಾರಾಮನಾದ ಶ್ರೀಕೃಷ್ಣನ ಗೃಹದಾಸಿಯರಾಗಿದ್ದೇವೆ."

ಪರೀಕ್ಷಿತಮಹಾರಾಜ! ಹೀಗೆ ಶ್ರೀಕೃಷ್ಣನ ಅಷ್ಟಮಹಿಷಿಯರು

ದ್ರೌಪದಿಯು ಕೇಳಿದಂತೆ ತಮ್ಮ ವಿವಾಹದ ರೋಚಕಕಥೆಗಳನ್ನು ಹೇಳಿದ ನಂತರ ಶ್ರೀಕೃಷ್ಣನ ಹದಿನಾರು ಸಾವಿರ ಪತ್ನಿಯರೂ ತಾವು ಶ್ರೀಕೃಷ್ಣನನ್ನು ಸೇರಿದ ಕಥೆಯನ್ನು* ಹೇಳುತ್ತಾರೆ.

"ದ್ರೌಪದೀದೇವಿ! ಶ್ರೀಕೃಷ್ಣನು ಭೌಮಾಸುರನನ್ನೂ ಅವನ ಅನುಯಾಯಿಗಳನ್ನೂ ಯುದ್ಧದಲ್ಲಿ ಸಂಹರಿಸಿದನು. ನರಕಾಸುರನು ದಿಗ್ವಿಜಯದ ಸಮಯದಲ್ಲಿ ಸಾವಿರಾರು ರಾಜರನ್ನು ಗೆದ್ದು ಅವನ ಪುತ್ರಿಯರಾದ ನಮ್ಮನ್ನು ಸೆರೆಹಿಡಿದು ತಂದು ತನ್ನ ಅರಮನೆಯ ಅಂತಃಪುರಗಳಲ್ಲಿ ಬಂಧಿಸಿ ಇಟ್ಟಿರುವನೆಂಬುದನ್ನು ತಿಳಿದು ಶ್ರೀಕೃಷ್ಣನು ನಮ್ಮೆಲ್ಲರನ್ನೂ ಬಿಡುಗಡೆ ಮಾಡಿದನು. ಅನಂತರ ಸಂಸಾರದಿಂದ ಬಿಡುಗಡೆ ಹೊಂದಿಸುವ ಅವನ ದಿವ್ಯವಾದ ಪಾದಾರವಿಂದಗಳನ್ನೇ ಸರ್ವದಾ ಸ್ಮರಿಸುತ್ತಿದ್ದ ನಮ್ಮನ್ನು ಆಪ್ತಕಾಮನಾದ ಶ್ರೀಕೃಷ್ಣಸ್ವಾಮಿಯು ಮದುವೆಯಾದನು.

**ನ ವಯಂ ಸಾಧ್ವಿ ಸಾಮ್ರಾಜ್ಯಂ ಸ್ವಾರಾಜ್ಯಂ ಭೌಜ್ಯಮಪ್ಯುತ ।**
**ವೈರಾಜ್ಯಂ ಪಾರಮೇಷ್ಠ್ಯಂ ಚ ಆನನ್ತ್ಯಂ ವಾ ಹರೇಃ ಪದಮ್ ॥೪೧॥**

**ಕಾಮಯಾಮಹ ಏತಸ್ಯ ಶ್ರೀಮತ್ಪಾದರಜಃಶ್ರಿಯಃ ।**
**ಕುಚಕುಙ್ಕುಮಗನ್ಧಾಢ್ಯಂ ಮೂರ್ಧ್ನಾ ವೋಢುಂ ಗದಾಭೃತಃ ॥೪೨॥**

ಸಾಧ್ವಿಯೇ! ನಮಗೆ ಸಾಮ್ರಾಜ್ಯವಾಗಲೀ (ಚಕ್ರವರ್ತಿನಿಯ

---

* ಶ್ರೀಕೃಷ್ಣನ ವಿವಾಹಪ್ರಕರಣದಲ್ಲಿ (ಅಧ್ಯಾಯ ೫೮) ಅಷ್ಟಮಹಿಷಿಯರ ಹೆಸರಿದ್ದು ರೋಹಿಣಿ ಎಂಬುವಳ ಹೆಸರು ಇರುವುದಿಲ್ಲ. ಶ್ರೀಕೃಷ್ಣನ ಸಂತತಿಯ ವರ್ಣನೆಯಲ್ಲಿ (ಅಧ್ಯಾಯ–೬೧) ಅಷ್ಟಮಹಿಷಿಯರೊಡನೆ ಒಂಬತ್ತನೆಯದಾಗಿ ರೋಹಿಣಿಯ ಹೆಸರು ಬಂದು ಅವಳಿಗೆ ದೀಪ್ತಿಮಂತ ಮತ್ತು ತಾಮ್ರತಪ್ತ ಇವರೇ ಮುಂತಾದ ಮಕ್ಕಳಿದ್ದರೆಂದು ಹೇಳಿದೆ. ಪುನಃ ೮೩ನೆಯ ಅಧ್ಯಾಯದಲ್ಲಿ ದ್ರೌಪದಿಯು ಶ್ರೀಕೃಷ್ಣನ ಪತ್ನಿಯರ ವಿವಾಹಪ್ರಸಂಗವನ್ನು ಪ್ರಶ್ನಿಸುವಾಗ ರೋಹಿಣಿಯನ್ನು ಸಂಬೋಧಿಸುತ್ತಾಳೆ. (ಶ್ಲೋಕ–೬) ವಿವಾಹಪ್ರಸಂಗದ ಕಥನದಲ್ಲಿ ಅಷ್ಟಮಹಿಷಿಯರು ಮಾತ್ರ ಉತ್ತರಿಸುತ್ತಾರೆ. ರೋಹಿಣಿಯು ಉತ್ತರಿಸುವುದಿಲ್ಲ. ಆದುದರಿಂದ ಇತರ ೧೬೦೯೯ ಕೃಷ್ಣಪತ್ನಿಯರ ವಿವಾಹಪ್ರಸಂಗವನ್ನು ಅವರ ಪರವಾಗಿ ಅವರಲ್ಲೊಬ್ಬಳಾದ ರೋಹಿಣಿಯು ಹೇಳಿದಳೆಂದು ಒಬ್ಬ ವ್ಯಾಖ್ಯಾನಕಾರರು ವ್ಯಾಖ್ಯಾನಿಸಿದ್ದಾರೆ.

ಪದವಿಯಾಗಲೀ) ಸ್ವಾರಾಜ್ಯವಾಗಲೀ (ಇಂದ್ರ ಪದವಿಯಾಗಲೀ) ಭೌಜ್ಯವಾಗಲೀ (ತ್ರೈಲೋಕ್ಯಾಧಿಪತ್ಯವಾಗಲೀ) ವೈರಾಜ್ಯವಾಗಲೀ (ಅಣಿಮಾದಿ ಅಷ್ಟಸಿದ್ಧಿಗಳಾಗಲೀ) ಪಾರಮೇಷ್ಠ್ಯವಾಗಲೀ (ಬ್ರಹ್ಮಪದವಿಯಾಗಲೀ) ಮೋಕ್ಷವಾಗಲೀ, ಶ್ರೀಹರಿಯ ಪರಮಪದವಾಗಲೀ ಅಪೇಕ್ಷಿತವಲ್ಲ. ಶ್ರೀದೇವಿಯ ಕುಚಕುಂಕುಮದಿಂದ ಸುಗಂಧಿತವಾದ ಶ್ರೀಕೃಷ್ಣನ ಸುಕೋಮಲವಾದ ಪಾದಾರವಿಂದಗಳ ಧೂಳಿಯನ್ನು ಸದಾ ತಲೆಯಲ್ಲಿ ಧರಿಸಿಕೊಂಡಿರಲು ಬಯಸುತ್ತೇವೆ.

**ವ್ರಜಸ್ತ್ರಿಯೋ ಯದ್ವಾಞ್ಛನ್ತಿ ಪುಲಿನ್ದ್ಯಸ್ತೃಣವೀರುಧಃ ।**
**ಗಾವಶ್ಚಾರಯತೋ ಗೋಪಾಃ ಪಾದಸ್ಪರ್ಶಂ ಮಹಾತ್ಮನಃ ॥೪೩॥**

ಜಗದಾನಂದಕಂದನಾದ ಶ್ರೀಕೃಷ್ಣನು ಹಸುಗಳನ್ನು ಮೇಯಿಸುವಾಗ ಅವನ ಕಾಲಿನ ಯಾವ ಧೂಳಿಯನ್ನು ಸ್ಪರ್ಶಿಸಬೇಕೆಂದು ಗೊಲ್ಲತಿಯರೂ ಬೇಡತಿಯರೂ ಅಪೇಕ್ಷಿಸುತ್ತಿದ್ದರೋ, ಮನುಷ್ಯರು ಮಾತ್ರವಲ್ಲದೆ ಹುಲ್ಲು-ಬಳ್ಳಿಗಳೂ ಯಾರ ಪಾದಸ್ಪರ್ಶವನ್ನು ಬಯಸುತ್ತಿದ್ದುವೋ ಅಂತೆಯೇ ಅವನ ದಿವ್ಯಪಾದಾರವಿಂದಗಳ ಧೂಳಿಯನ್ನು ನಾವೂ ಕೂಡ ನಮ್ಮ ತಲೆಗಳಲ್ಲಿ ಧರಿಸಲು ಸದಾ ಅಪೇಕ್ಷಿಸುತ್ತೇವೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ೮೩ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೮೪ನೆಯ ಅಧ್ಯಾಯ

## ವಸುದೇವನ ಯಜ್ಞೋತ್ಸವ

ಶ್ರೀಶುಕಮಹಾಮುನಿಗಳು ಹೇಳುತ್ತಾರೆ :

**ಶ್ರುತ್ವಾ ಪೃಥಾ ಸುಬಲಪುತ್ರ್ಯಥ ಯಾಜ್ಞಸೇನೀ**
**ಮಾಧವ್ಯಥ ಕ್ಷಿತಿಪಪತ್ನ್ಯ ಉತ ಸ್ವಗೋಪ್ಯಃ ।**
**ಕೃಷ್ಣೇऽಖಿಲಾತ್ಮನಿ ಹರೌ ಪ್ರಣಯಾನುಬನ್ಧಂ**
**ಸರ್ವಾ ವಿಸಿಸ್ಮ್ಯುರಲಮಶ್ರುಕಲಾಕುಲಾಕ್ಷ್ಯಃ ॥೧॥**

"ಪರೀಕ್ಷಿತಮಹಾರಾಜ! ಸರ್ವಾತ್ಮನಾದ, ಭಕ್ತಜನಭಯಾಪಹಾರಿ

ಯಾದ ಶ್ರೀಕೃಷ್ಣನ ವಿಷಯದಲ್ಲಿ ಅವನ ಪತ್ನಿಯರಾದ ರುಕ್ಮಿಣಿಯೇ ಮೊದಲಾದವರಿಗೆ ಎಂತಹ ಅನುಪಮವಾದ ಪ್ರೇಮಾನುಬಂಧವಿರುವುದೆಂಬು ದನ್ನು ಅವರ ಬಾಯಿಂದಲೇ ಕೇಳಿ ಕುಂತೀ, ಗಾಂಧಾರೀ, ದ್ರೌಪದೀ, ಸುಭದ್ರಾ ಇವರೇ ಮೊದಲಾದ ರಾಜಮಹಿಷಿಯರು ಅಚ್ಚರಿಗೊಂಡು ಆನಂದಬಾಷ್ಪವನ್ನು ಸುರಿಸಿದರು. ಹೀಗೆ ಸ್ತ್ರೀಯರು–ಸ್ತ್ರೀಯರೊಡನೆ ಪುರುಷರು–ಪುರುಷರೊಡನೆ ಆರಾಮವಾಗಿ ಮಾತನಾಡಿಕೊಳ್ಳುತ್ತಿದ್ದಾಗ ಶ್ರೀಕೃಷ್ಣನನ್ನೂ ಮತ್ತು ಬಲರಾಮನನ್ನೂ ಸಂದರ್ಶಿಸುವ ಸಲುವಾಗಿ ಅನೇಕ ಋಷಿ-ಮುನಿಗಳು ಅಲ್ಲಿಗೆ ಆಗಮಿಸಿದರು.

ಕೃಷ್ಣದ್ವೈಪಾಯನವ್ಯಾಸರು, ದೇವರ್ಷಿಗಳಾದ ನಾರದರು, ಚ್ಯವನರು, ಅಸಿತ-ದೇವಲರು, ವಿಶ್ವಾಮಿತ್ರರು, ಶತಾನಂದ-ಭಾರದ್ವಾಜರು, ಗೌತಮರು, ಶಿಷ್ಯಸಮೇತರಾದ ಭಗವಾನ್ ಪರಶುರಾಮರು, ವಸಿಷ್ಠ-ಗಾಲವರು, ಭೃಗು-ಪುಲಸ್ತ್ಯರು, ಕಶ್ಯಪ-ಅತ್ರಿ-ಮಾರ್ಕಂಡೇಯರು, ಬೃಹಸ್ಪತಿಗಳು, ದ್ವಿತ-ತ್ರಿತ-ಏಕತರು, ಸನಕ-ಸನಂದನ-ಸನಾತನ-ಸನತ್ಕುಮಾರರು, ಅಂಗಿರಸರು ಅಗಸ್ತ್ಯ-ಯಾಜ್ಞವಲ್ಕ್ಯ-ವಾಮದೇವ–ಇವರೇ ಮೊದಲಾದ ಮಹಾ-ಮಹಾ ಋಷಿ-ಮುನಿಗಳು ಆಗಮಿಸಿದುದನ್ನು ನೋಡಿ ಬಹಳ ಹೊತ್ತಿನಿಂದಲೂ ಅಲ್ಲಿಯೇ ಕುಳಿತಿದ್ದ ಯುಧಿಷ್ಠಿರನೇ ಮೊದಲಾದ ಪಾಂಡವರೂ, ಶ್ರೀಕೃಷ್ಣ-ಬಲರಾಮರೂ, ಅಲ್ಲಿ ನೆರೆದಿದ್ದ ಇತರ ರಾಜರೂ ಒಡನೆಯೇ ಮೇಲೆದ್ದು ನಿಂತು ವಿಶ್ವವಂದ್ಯರಾದ ಆ ಋಷಿ-ಮುನಿಗಳಿಗೆ ಸಾಷ್ಟಾಂಗ ಪ್ರಣಾಮಮಾಡಿದರು. ಬಳಿಕ ಶ್ರೀಕೃಷ್ಣ-ಬಲರಾಮರೂ ಮತ್ತು ಅಲ್ಲಿ ಸೇರಿದ್ದ ರಾಜರೂ ಋಷಿ-ಮುನಿಗಳನ್ನು ಆದರದಿಂದ ಸ್ವಾಗತಿಸಿ, ಶುಭಾಸನಗಳನ್ನಿತ್ತು, ಅರ್ಘ್ಯ-ಪಾದ್ಯ-ಪುಷ್ಪಮಾಲೆಗಳಿಂದಲೂ ಧೂಪ-ದೀಪ-ಚಂದನಾದಿಗಳಿಂದಲೂ ಹಣ್ಣು-ಹಂಪಲುಗಳಿಂದಲೂ ವಿಧಿವತ್ತಾಗಿ ಸತ್ಕರಿಸಿದರು.

ಋಷಿ-ಮುನಿಗಳೆಲ್ಲರೂ ಸುಖಾಸನಗಳಲ್ಲಿ ಕುಳಿತನಂತರ ಸಭಾಸದರೂ ಮೌನದಿಂದ ಕುಳಿತಿರಲಾಗಿ ಸಮಸ್ತರಿಗೂ ಕೇಳಿಸುವಂತೆ ಧರ್ಮದ ರಕ್ಷಣೆಗಾಗಿಯೇ ಅವತರಿಸಿದ್ದ ಭಗವಾನ್ ಶ್ರೀಕೃಷ್ಣನು ಋಷಿ-ಮುನಿಗಳನ್ನು ಕುರಿತು ಹೇಳಿದನು :

"ಪೂಜ್ಯರಾದ ಋಷಿಶ್ರೇಷ್ಠರೇ! ನಾವಿಂದು ಧನ್ಯರಾಗಿ ಹೋದೆವು.

ನಮ್ಮ ಜನ್ಮವು ಸಾರ್ಥಕ್ಯವನ್ನು ಹೊಂದಿತು. ನಾವು ಹುಟ್ಟಿದ್ದಕ್ಕೆ ಪೂರ್ಣಫಲವನ್ನು ಪಡೆದುಕೊಂಡೆವು. ದೇವತೆಗಳಿಗೂ ಸುದುರ್ಲಭವಾದ ಮಹಾ-ಮಹಾ ಯೋಗೇಶ್ವರರ ದರ್ಶನವು ಇಂದು ನಮಗೆ ಯಾವುದೇ ಪ್ರಯತ್ನವೂ ಇಲ್ಲದೆ ಲಭಿಸಿತಲ್ಲವೇ? ಯಾರು ತೀರ್ಥಯಾತ್ರೆಗಳೇ ಮೊದಲಾದ ಅಲ್ಪವಾದ ತಪಸ್ಸನ್ನು ಮಾಡುತ್ತಿರುವರೋ ಮತ್ತು ಇಷ್ಟ ದೇವತೆಯನ್ನು ಸಮಸ್ತಪ್ರಾಣಿಗಳ ಹೃದಯದಲ್ಲಿಯೂ ಕಾಣಲಾಗದೇ ಕೇವಲ ವಿಗ್ರಹಗಳಲ್ಲಿ ಪರಮಾತ್ಮನನ್ನು ಕಾಣುವರೋ–ಅಂತಹವರಿಗೆ ತಮ್ಮಂತಹ ಮಹಾತ್ಮರ ದರ್ಶನ-ಸ್ಪರ್ಶನ, ಕುಶಲಪ್ರಶ್ನೆ, ಪ್ರಣಾಮ-ಪಾದಪೂಜನಗಳ ಸದವಕಾಶವು ಹೇಗೆತಾನೇ ಲಭಿಸೀತು? ಇಂದು ನಮಗೆ ಅಂತಹ ಸದವಕಾಶವು ಲಭಿಸಿದ್ದು ಭಾಗ್ಯೋದಯವಲ್ಲವೇ?

**ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನನ್ತ್ಯುರುಕಾಲೇನ ದರ್ಶನಾದೇವ ಸಾಧವಃ ॥೧೧॥**

ಜಲರೂಪವಾಗಿರುವುದೆಲ್ಲಾ ತೀರ್ಥಗಳಾಗಿ ಬಿಡುವುದಿಲ್ಲ. ಮಣ್ಣು ಅಥವಾ ಕಲ್ಲುಗಳೂ ದೇವತಾವಿಗ್ರಹಗಳಾಗಿಬಿಡುವುದಿಲ್ಲ. ನಿಜವಾದ ಅರ್ಥ ದಲ್ಲಿ ಸತ್ಪುರುಷರೇ ತೀರ್ಥವೂ ದೇವತೆಗಳೂ ಆಗಿರುತ್ತಾರೆ. ಸತ್ಪುರುಷರ ಸೇವನೆಯಿಂದಲೇ ನೀರಿನ ಮಡುಗಳು ತೀರ್ಥಗಳಾಗಿ ಪರಿಣಮಿಸುತ್ತವೆ. ಮಣ್ಣಿನ ಮತ್ತು ಕಲ್ಲಿನವಿಗ್ರಹಗಳೂ ಸತ್ಪುರುಷರು ಪೂಜಿಸುವುದರಿಂದ ಮತ್ತು ಸೇವೆಮಾಡುವುದರಿಂದ ದೇವತ್ವವನ್ನು ಹೊಂದುತ್ತವೆ. ಹಾಗೆ ಸತ್ಪುರುಷರ ಸೇವೆಯಿಂದ ಸರೋವರಗಳು ತೀರ್ಥತ್ವವನ್ನೂ ಮತ್ತು ವಿಗ್ರಹಗಳು ದೇವತ್ವವನ್ನೂ ಪಡೆದುಕೊಂಡರೂ ತೀರ್ಥಗಳಾಗಲೀ ದೇವತಾ ವಿಗ್ರಹಗಳಾಗಲೀ ಒಡನೆಯೇ ಫಲವನ್ನು ಕೊಟ್ಟುಬಿಡುವುದಿಲ್ಲ. ತೀರ್ಥಕ್ಷೇತ್ರ ಗಳಲ್ಲಿ ಮೂರು ದಿವಸಗಳಾದರೂ ಉಪವಾಸದಿಂದಿದ್ದು ಸೇವಿಸಬೇಕಾಗು ತ್ತದೆ. ದೇವತಾವಿಗ್ರಹಗಳನ್ನೂ ಹಲವಾರು ದಿವಸಗಳವರೆಗೆ ನಮಸ್ಕಾರ ಪುರಸ್ಕಾರಗಳಿಂದ ಸೇವಿಸಬೇಕಾಗುತ್ತದೆ. ಆದರೆ ಸರೋವರಗಳನ್ನೂ ತೀರ್ಥೀಕರಿಸುವ, ವಿಗ್ರಹಗಳಲ್ಲಿಯೂ ದೇವತಾಸಾಂನಿಧ್ಯವನ್ನು ಉಂಟು ಮಾಡುವ ಸತ್ಪುರುಷರ ವಿಷಯವು ಹಾಗಲ್ಲ. ಅಂತಹ ಸತ್ಪುರುಷರು

ಕೇವಲ ದರ್ಶನಮಾತ್ರದಿಂದಲೇ ದರ್ಶನಮಾಡುವವರನ್ನು ಪುನೀತರನ್ನಾಗಿ ಮಾಡುತ್ತಾರೆ. ಅಂತಹ ಅದ್ಭುತವಾದ ಶಕ್ತಿಯು ಸತ್ಪುರುಷರಲ್ಲಿದೆ.

**ನಾಗ್ನಿರ್ನ ಸೂರ್ಯೋ ನ ಚ ಚನ್ದ್ರತಾರಕಾ**
**ನ ಭೂರ್ಜಲಂ ಖಂ ಶ್ವಸನೋಽಥ ವಾಙ್ಮನಃ ।**
**ಉಪಾಸಿತಾ ಭೇದಕೃತೋ ಹರನ್ತ್ಯಘಂ**
**ವಿಪಶ್ಚಿತೋ ಘ್ನನ್ತಿ ಮುಹೂರ್ತಸೇವಯಾ ॥೧೨॥**

ಅಗ್ನಿ-ಸೂರ್ಯರಾಗಲೀ, ಚಂದ್ರ-ನಕ್ಷತ್ರಗಳಾಗಲೀ, ಭೂಮಿಯಾಗಲೀ, ಜಲವಾಗಲೀ, ಆಕಾಶವಾಗಲೀ, ವಾಯುವಾಗಲೀ, ವಾಙ್ಮನಸ್ಸುಗಳ ಅಧಿದೇವತೆಗಳಾಗಲೀ, ಉಪಾಸಕನ ಪಾಪವನ್ನು ಸಂಪೂರ್ಣವಾಗಿ ತೊಡೆದು ಹಾಕಲಾರವು. ಈ ದೇವತೆಗಳೆಲ್ಲರೂ ಉಪಾಸ್ಯ-ಉಪಾಸಕರೆಂಬ ಭೇದವನ್ನು ಕಲ್ಪಿಸುತ್ತಾರೆ. ಈ ಭೇದಭಾವದಿಂದಾಗಿ ಪಾಪಗಳು ಸಂಪೂರ್ಣವಾಗಿ ನಾಶವಾಗುವುದಿಲ್ಲ. ಆದರೆ ಆತ್ಮಜ್ಞಾನಿಗಳನ್ನು ಮುಹೂರ್ತಕಾಲ ಸೇವಿಸಿದರೂ ಆತ್ಮಜ್ಞಾನವುಂಟಾಗಿ ಭೇದಭಾವವು ಅಳಿಸಿಹೋಗಿ ಪಾಪಗಳ ನಿರಸನವು ಕ್ಷಣಮಾತ್ರದಲ್ಲಿ ಆಗಿಬಿಡುತ್ತದೆ.

**ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ**
**ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ ।**
**ಯತ್ತೀರ್ಥಬುದ್ಧಿಃ ಸಲಿಲೇ ನ ಕರ್ಹಿಚಿ-**
**ಜ್ಜನೇಷ್ವಭಿಜ್ಞೇಷು ಸ ಏವ ಗೋಖರಃ ॥೧೩॥**

ಋಷಿಸತ್ತಮರೇ! ಯಾವನಿಗೆ ವಾತ-ಪಿತ್ತ-ಶ್ಲೇಷ್ಮಗಳೆಂಬ ಮೂರು ಧಾತುಗಳಿಂದ ಕೂಡಿದ ಶವರೂಪವಾದ ದೇಹದಲ್ಲಿ ತಾನೆಂಬ ಅಭಿಮಾನವಿರುತ್ತದೆಯೋ, ಹೆಂಡತಿ-ಮಕ್ಕಳು ಮತ್ತು ಬಂಧು-ಬಳಗದವರಲ್ಲಿ ತನ್ನವರೆಂಬ ಬುದ್ಧಿಯಿರುತ್ತದೆಯೋ, ಭೂಮಿಯ ವಿಕಾರಗಳಾದ ಕಲ್ಲು-ಮಣ್ಣಿನ ವಿಗ್ರಹಗಳಲ್ಲಿ ಪೂಜ್ಯಬುದ್ಧಿಯಿರುತ್ತದೆಯೋ, ನೀರಿನ ಹೊಂಡದಲ್ಲಿ ತೀರ್ಥವೆಂಬ ಬುದ್ಧಿಯಿರುತ್ತದೆಯೋ, ಇದಕ್ಕೆ ಪ್ರತಿಯಾಗಿ ಆತ್ಮಜ್ಞಾನವನ್ನು ಪಡೆದುಕೊಂಡಿರುವವರಲ್ಲಿ ಒಮ್ಮೆಯಾದರೂ ಅವರಿಗೆ–ಜ್ಞಾನಿಗಳು ಪರಮ ಪಾವನರೆಂಬ ಬುದ್ಧಿಯುಂಟಾಗುವುದಿಲ್ಲವೋ ಅಂತಹವರು ಗೋರೂಪದ ಕತ್ತೆಗಳೇ ಸರಿ.”

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಎಷ್ಟು ದೂರ ಯೋಚಿಸಿದರೂ ತಮಗೆ ಅನ್ವಯಿಸದೇ ಇರತಕ್ಕ ತೀಕ್ಷ್ಣಮತಿಯಾದ ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ಭ್ರಾಂತರಾದ ಮುನಿಗಳು ಮರುಮಾತನ್ನಾಡದೆ ಸುಮ್ಮನೇ ಕುಳಿತು ಬಿಟ್ಟರು. ಲೋಕಪಾವನನಾದ ಶ್ರೀಕೃಷ್ಣಪರಮಾತ್ಮನು ಇಂತಹ ಹೆಗ್ಗಳಿಕೆಯ ಮಾತನ್ನಾಡಿಬಿಟ್ಟರೆ ಎಂತಹವರಿಗೇ ಆದರೂ ನಾಚಿಕೆಯಾಗುವುದಿಲ್ಲವೇ? ಋಷಿ-ಮುನಿಗಳಿಗೂ ಶ್ರೀಕೃಷ್ಣನ ಹೊಗಳಿಕೆಗಳ ಮಾತುಗಳನ್ನು ಕೇಳಿ ಇದೇ ವಿಧವಾದ ಪರಿಣಾಮವುಂಟಾಯಿತು. ಋಷಿ-ಮುನಿಗಳೆಲ್ಲರೂ ಸೇರಿ ಬಹಳ ಹೊತ್ತಿನವರೆಗೆ ಹೀಗೆ ಮಾತನಾಡಲು ಶ್ರೀಕೃಷ್ಣನ ಆಶಯ ವೇನಿರಬಹುದೆಂಬುದರ ಬಗೆಗೆ ಬಹುವಾಗಿ ಚರ್ಚಿಸಿದರು. ಕಟ್ಟಕಡೆಗೆ ಲೋಕಸಂಗ್ರಹಾರ್ಥವಾಗಿ–ಲೋಕದ ಸಾಮಾನ್ಯಜನರು ಸತ್ಪುರುಷರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸುವ ಸಲುವಾಗಿ ಪರಮಾತ್ಮನು ಹೀಗೆ ಮಾತನಾಡಿದನೆಂದು ನಿಶ್ಚಯಿಸಿ ಮುಗುಳ್ನಗೆಯೊಡನೆ ಲೋಕಗುರುವಾದ ಶ್ರೀಕೃಷ್ಣನಿಗೆ ಹೇಳಿದರು :

"ಭಗವಂತ! ನಿನ್ನ ಮಾಯೆಯಿಂದ ಪ್ರಜಾಪತಿಗಳಿಗೂ ಅಧೀಶ್ವರರಾದ ಮರೀಚಿಯೇ ಮೊದಲಾದ ಮಹಾಮಹಾತತ್ತ್ವಜ್ಞಾನಿಗಳಾದ ನಾವು ವಿಮೋಹಿತರಾಗಿಬಿಟ್ಟಿದ್ದೇವೆ. ನೀನು ಸ್ವಯಂ ಭಗವಂತನೇ ಆಗಿದ್ದರೂ ಲೀಲಾಮಾನುಷವಿಗ್ರಹನಾಗಿ ನಿನ್ನ ನಿಜಸ್ವರೂಪವನ್ನು ಮರೆಮಾಡುತ್ತಾ ಸಾಮಾನ್ಯಜೀವಿಯಂತೆ ನಿನ್ನನ್ನು ತೋರಿಸಿಕೊಳ್ಳುತ್ತಿರುವೆ. ನಿಶ್ಚಯವಾಗಿಯೂ ನಿನ್ನ ಲೀಲೆಯು ಅತ್ಯಂತ ವಿಚಿತ್ರವೂ ಆಶ್ಚರ್ಯಕರವೂ ಆಗಿದೆ.

ಯಾವ ರೀತಿಯಲ್ಲಿ ಭೂಮಿಯು ಒಂದೇ ಆಗಿದ್ದರೂ ಕಲ್ಲು-ಮಣ್ಣು-ವೃಕ್ಷ–ಮುಂತಾದ ವಿಕಾರಗಳನ್ನು ಹೊಂದಿ ಹಲವಾರು ಸ್ವರೂಪಗಳನ್ನೂ ಹೆಸರುಗಳನ್ನೂ ಪಡೆದುಕೊಳ್ಳುತ್ತದೆಯೋ, ಅದೇ ರೀತಿಯಲ್ಲಿ ನೀನು ನಿಷ್ಕರ್ಮನಾದ 'ಏಕಮೇವಾದ್ವಿತೀಯ' ಬ್ರಹ್ಮಸ್ವರೂಪನೇ ಆಗಿದ್ದರೂ ಹಲ ವಾರು ರೂಪಗಳನ್ನು ಧರಿಸಿ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳೆಂಬ ಮೂರು ಕಾರ್ಯಗಳನ್ನೂ ಸಂಪನ್ನಗೊಳಿಸುವೆ. ಆದರೆ ಆ ಕರ್ಮಗಳ ಲೇಪವು ನಿನಗಿರುವುದಿಲ್ಲ. ಕರ್ಮಗಳನ್ನು ಮಾಡಿಯೂ ಅಕರ್ಮನಾಗಿರುವೆ. ಪರಿ

ಪೂರ್ಣನಾದ ನಿನ್ನ ಲೀಲೆಗಳೆಲ್ಲವೂ ಕೇವಲ ಅಣಕವೇ ಸರಿ. ದೇವೇಶ! ನೀನು ಪ್ರಕೃತಿಗಿಂತಲೂ ಅತೀತನಾದ ಪರಬ್ರಹ್ಮಪರಮಾತ್ಮನಾಗಿರುವೆ. ಆದರೂ ಹಲವಾರು ಸಮಯಗಳಲ್ಲಿ ಭಕ್ತಜನರ ರಕ್ಷಣಾರ್ಥವಾಗಿ ಮತ್ತು ದುಷ್ಟರ ದಮನಕ್ಕಾಗಿ ವಿಶುದ್ಧಸತ್ತ್ವಮಯನಾಗಿ ಅವತರಿಸಿ ನಿನ್ನ ಲೀಲೆಗಳ ಮೂಲಕವಾಗಿ ಸನಾತನವೈದಿಕಧರ್ಮವನ್ನು ಸಂರಕ್ಷಿಸುವೆ. ನೀನು ವರ್ಣಾಶ್ರಮಗಳ ಸ್ವರೂಪನೇ ಆಗಿರುವೆ. ವೇದವು ನಿನ್ನ ಪರಿಶುದ್ಧವಾದ ಹೃದಯವೇ ಆಗಿದೆ. ತಪಸ್ಸು-ಸ್ವಾಧ್ಯಾಯ ಮತ್ತು ಇಂದ್ರಿಯನಿಗ್ರಹಗಳ ಮೂಲಕವಾಗಿ ನಿನ್ನ ಪರಿಶುದ್ಧವಾದ ಹೃದಯವೇ ಆಗಿರುವ ವೇದಗಳಿಂದ, ವ್ಯಕ್ತಪ್ರಪಂಚವನ್ನೂ ಅವ್ಯಕ್ತಪ್ರಕೃತಿಯನ್ನೂ ವ್ಯಕ್ತಾವ್ಯಕ್ತಗಳಿಗೂ ಆಚೆ ಇರುವ ಸತ್ತಾರೂಪವಾದ ಪರಬ್ರಹ್ಮಪರಮಾತ್ಮನನ್ನೂ ತಿಳಿಯ ಬಹುದಾಗಿದೆ.

ವೇದವೇದ್ಯನೇ! ಪರಮಾತ್ಮನೇ! ವೇದಕ್ಕೆ ಆಧಾರಭೂತನಾಗಿರುವ ನಿನ್ನ ಸ್ವರೂಪದ ಪ್ರಾಪ್ತಿಗೆ ಬ್ರಾಹ್ಮಣನೇ ಸ್ಥಾನಭೂತನಾಗಿದ್ದಾನೆ. ಈ ಕಾರಣದಿಂದಲೇ ನೀನು ಬ್ರಾಹ್ಮಣರನ್ನು ಸಮ್ಮಾನಿಸುವೆ ಮತ್ತು ಬ್ರಾಹ್ಮಣ ಭಕ್ತರಲ್ಲಿ ಅಗ್ರಗಣ್ಯನೂ ಆಗಿರುವೆ.

**ಅದ್ಯ ನೋ ಜನ್ಮಸಾಫಲ್ಯಂ ವಿದ್ಯಾಯಾಸ್ತಪಸೋ ದೃಶಃ ।**
**ತ್ವಯಾ ಸಙ್ಗಮ್ಯ ಸದ್ಗತ್ಯಾ ಯದನ್ತಃ ಶ್ರೇಯಸಾಂ ಪರಃ ॥೨೦॥**

ದೇವದೇವ! ನೀನು ಸಮಸ್ತವಾದ ಶ್ರೇಯಸ್ಸುಗಳಿಗೂ ಚರಮಸ್ಥಾನ ನಾಗಿರುವೆ. ಸತ್ಪುರುಷರಿಗೆ ಏಕಮಾತ್ರ ಆಶ್ರಯನಾಗಿರುವೆ. ಅಂತಹ ಪರಮಪುರುಷಪುರುಷೋತ್ತಮನಾದ ನಿನ್ನೊಡನೆ ಸೇರಿದ ಕಾರಣ ನಮ್ಮ ಹುಟ್ಟು ಸಾರ್ಥಕ್ಯವನ್ನು ಹೊಂದಿತು. ನಾವು ಕಲಿತ ವಿದ್ಯೆ-ಆಚರಿಸಿದ ತಪಸ್ಸು-ಗಳಿಸಿದ ಯಶಸ್ಸು-ಎಲ್ಲವೂ ಸಾಫಲ್ಯವನ್ನು ಹೊಂದಿದುವು.

**ನಮಸ್ತಸ್ಮೈ ಭಗವತೇ ಕೃಷ್ಣಾಯಾಕುಣ್ಠಮೇಧಸೇ ।**
**ಸ್ವಯೋಗಮಾಯಯಾಚ್ಛನ್ನಮಹಿಮ್ನೇ ಪರಮಾತ್ಮನೇ ॥೨೧॥**

ಪ್ರಭುವೇ! ನಿನ್ನ ಜ್ಞಾನವು ಅನಂತವಾಗಿದೆ. ನೀನು ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮಪರಮಾತ್ಮನೇ ಆಗಿರುವೆ. ಆದರೆ ನೀನು ನಿನ್ನ

ಅಚಿಂತ್ಯವಾದ ಯೋಗಮಾಯೆಯ ಮೂಲಕವಾಗಿ ನಿನ್ನ ಮಹಾಮಹಿಮೆಯಿಂದ ಕೂಡಿದ ನಿಜಸ್ವರೂಪವನ್ನು ಮರೆಮಾಡಿಕೊಂಡಿರುವೆ. ಅಂತಹ ಪರಮಪುರುಷಪರಮಾತ್ಮನಾದ ನಿನಗೆ ನಮಸ್ಕಾರಮಾಡುತ್ತೇವೆ. ಈ ಸಭೆಯಲ್ಲಿ ಉಪಸ್ಥಿತರಾಗಿರುವ ರಾಜರಾಗಲೀ, ನಿನ್ನ ಒಡನಾಡಿಗಳಾಗಿ ನಿನ್ನೊಡನೆ ಆಹಾರ-ವಿಹಾರ-ಸಂಚಾರಗಳನ್ನು ಮಾಡುವ ಯದುವಂಶೀಯರಾಗಲೀ ನಿನ್ನ ನಿಜಸ್ವರೂಪವನ್ನು ತಿಳಿದವರಾಗಿಲ್ಲ. ಏಕೆಂದರೆ : ನೀನು ಸರ್ವಾಂತರ್ಯಾಮಿಯೂ ಜಗತ್ತಿಗೆ ನಿಯಾಮಕನೂ ಮತ್ತು ಆದಿಕಾರ ಣನೂ ಆಗಿದ್ದರೂ ಮಾಯೆಯೆಂಬ ತೆರೆಯಿಂದ ಮುಚ್ಚಲ್ಪಟ್ಟಿರುವೆಯಾದ ಕಾರಣ ನಿನ್ನ ನಿಜಸ್ವರೂಪವನ್ನು ಯಾರೂ ಅರಿಯರು.

**ಯಥಾ ಶಯಾನಃ ಪುರುಷ ಆತ್ಮಾನಂ ಗುಣತತ್ತ್ವದೃಕ್ ।**
**ನಾಮಮಾತ್ರೇನ್ದ್ರಿಯಾಭಾತಂ ನ ವೇದ ರಹಿತಂ ಪರಮ್ ॥೨೪॥**

**ಏವಂ ತ್ವಾ ನಾಮಮಾತ್ರೇಷು ವಿಷಯೇಷ್ವಿನ್ದ್ರಿಯೇಹಯಾ ।**
**ಮಾಯಯಾ ವಿಭ್ರಮಚ್ಚಿತ್ತೋ ನ ವೇದ ಸ್ಮೃತ್ಯುಪಪ್ಲವಾತ್ ॥೨೫॥**

ಕನಸ್ಸನ್ನು ಕಾಣುತ್ತಿರುವ ಪುರುಷನು ಕನಸ್ಸಿನಲ್ಲಿ ಕಾಣುವ ಪದಾರ್ಥಗಳನ್ನೂ ಅನುಭವಿಸುವ ಸುಖ-ದುಃಖಗಳನ್ನೂ ಸತ್ಯವಾದುವೆಂದೇ ಭಾವಿಸುತ್ತಾನೆ. ಹೆಸರಿಗೆ ಮಾತ್ರ ಸತ್ಯದಂತೆ ಮನಸ್ಸಿಗೆ ತೋರುವ ತನ್ನ ಸ್ವಪ್ನ ಶರೀರವನ್ನೇ ತನ್ನ ನಿಜವಾದ ಶರೀರವೆಂದು ಭಾವಿಸುತ್ತಾನೆ. ಕನಸ್ಸು ಮುಗಿಯುವವರೆಗೂ ಅವನಿಗೆ ಬೇರೊಂದು ಜಾಗ್ರತಶರೀರವು ತನಗಿರುವುದೆಂಬ ಭಾವನೆಯು ಉಂಟಾಗುವುದಿಲ್ಲ. ಅದೇ ರೀತಿಯಲ್ಲಿ ಜಾಗ್ರದವಸ್ಥೆಯಲ್ಲಿಯೂ ಇಂದ್ರಿಯಗಳ ಪ್ರವೃತ್ತಿರೂಪವಾದ ಮಾಯೆಯಿಂದ ಜನರ ಚಿತ್ತವು ವಿಮೋಹಿತವಾಗಿ ನಾಮಮಾತ್ರದ ವಿಷಯಗಳಲ್ಲಿ ಸುತ್ತಾಡುತ್ತಿರುತ್ತದೆ. ಹೀಗೆ ಜೀವನು ಭ್ರಾಂತಮನಸ್ಕನಾಗಿ ಸ್ವರೂಪಾನುಭವದ ವಿನಾಶದಿಂದ ನಿನ್ನನ್ನು ತಿಳಿಯುವುದಿಲ್ಲ.

ಮಾನವರ ಸಮಸ್ತಪಾಪರಾಶಿಗಳನ್ನೂ ತೊಳೆದುಹಾಕುವ ಗಂಗಾಮಾತೆಗೆ ಆಶ್ರಯಸ್ಥಾನವಾದ ನಿನ್ನ ದಿವ್ಯಪಾದಕಮಲಗಳನ್ನು ಮಹಾಮಹಾ ಋಷಿ-ಮುನಿಗಳು ಪರಿಪಕ್ವವಾದ ಯೋಗಸಾಧನೆಗಳ ಮೂಲಕವಾಗಿ ತಮ್ಮ

ಹೃತ್ಕಮಲಗಳಲ್ಲಿ ಧರಿಸುತ್ತಾರೆ. ನಮ್ಮೆಲ್ಲರ ಸೌಭಾಗ್ಯದಿಂದಾಗಿ ಅಂತಹ ದಿವ್ಯವಾದ ಪಾದಕಮಲಗಳ ದರ್ಶನವು ಇಂದು ನಮಗಾಗಿದೆ.

ಪ್ರಭುವೇ! ನಾವು ನಿನ್ನ ಭಕ್ತರಾಗಿದ್ದೇವೆ. ನಮ್ಮನ್ನು ಅನುಗ್ರಹಿಸು. ಅತಿಶಯವಾದ ಭಕ್ತಿಯಿಂದ ಜೀವದ ಆವರಣರೂಪವಾಗಿರುವ ಅಹಂಕಾರ ವನ್ನು ನಷ್ಟಗೊಳಿಸಿಕೊಂಡಿರುವ ಮಹಾತ್ಮರು ನಿನ್ನ ಪರಮಪದವನ್ನು ಸೇರುತ್ತಾರೆ."

ಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಮಹಾತ್ಮರಾದ ಆ ಋಷಿ-ಮುನಿಗಳು ಹೀಗೆ ಶ್ರೀಕೃಷ್ಣಪರಮಾತ್ಮನನ್ನು ಸ್ತೋತ್ರಮಾಡಿ ಶ್ರೀಕೃಷ್ಣನ ಮತ್ತು ಧೃತ ರಾಷ್ಟ್ರ-ಯುಧಿಷ್ಠಿರಾದಿಗಳ ಅನುಮತಿಯನ್ನು ಪಡೆದು ತಮ್ಮ-ತಮ್ಮ ಆಶ್ರಮ ಗಳಿಗೆ ಹೊರಡಲು ಮನಸ್ಸುಮಾಡಿದರು. ಮಹಾಯಶೋವಂತನಾದ ವಸುದೇವನು ಋಷಿ-ಮುನಿಗಳು ಹೊರಡಲು ಅನುವಾಗುತ್ತಿರುವುದನ್ನು ನೋಡಿ ಅವರ ಬಳಿಗೆ ಹೋಗಿ ಅವರೆಲ್ಲರ ಪಾದಕಮಲಗಳನ್ನು ಹಿಡಿದು ಸಾಷ್ಟಾಂಗಪ್ರಣಾಮಮಾಡಿ ಅತ್ಯಂತವಿನೀತನಾಗಿ ನಿವೇದಿಸಿಕೊಂಡನು:

**ನಮೋ ವಃ ಸರ್ವದೇವೇಭ್ಯ ಋಷಯಃ ಶ್ರೋತುಮರ್ಹಥ ।**
**ಕರ್ಮಣಾ ಕರ್ಮನಿರ್ಹಾರೋ ಯಥಾ ಸ್ಯಾನ್ನಸ್ತದುಚ್ಯತಾಮ್ ॥೨೯॥**

"ಋಷಿ-ಮುನಿಗಳೇ! ನೀವು ಸಮಸ್ತದೇವತಾಸ್ವರೂಪರಾಗಿರುವಿರಿ. ನಿಮ್ಮೆಲ್ಲರಿಗೂ ನಾನು ಸಾಷ್ಟಾಂಗಪ್ರಣಾಮಮಾಡುತ್ತೇನೆ. ನನ್ನ ಈ ಪ್ರಾರ್ಥನೆಯನ್ನು ಕೇಳಿರಿ. ಕರ್ಮದ ಅನುಷ್ಠಾನದಿಂದಲೇ ಕರ್ಮಗಳು ನಾಶಹೊಂದುವುದು ಹೇಗೆ? ತಾವು ದಯಮಾಡಿ ಈ ವಿಷಯವನ್ನು ತಿಳಿಯಪಡಿಸಿರಿ."

ಋಷಿಸಮೂಹದಲ್ಲಿದ್ದ ಪೂಜ್ಯರಾದ ನಾರದರು ಹೇಳುತ್ತಾರೆ :

"ವಿಪ್ರಶ್ರೇಷ್ಠರೇ! ವಸುದೇವನು ಸರ್ವಜ್ಞನಾದ ಶ್ರೀಕೃಷ್ಣನನ್ನು ತನ್ನ ಮಗನನ್ನಾಗಿ ಭಾವಿಸಿಕೊಂಡು ಶುದ್ಧವಾದ ಮನಸ್ಸಿನಿಂದ ಶ್ರೇಯಸ್ಸಿನ ಸಾಧನವನ್ನು ನಮ್ಮಿಂದ ಕೇಳಿ ತಿಳಿಯಲು ಅಪೇಕ್ಷಿಸಿದ್ದಾನೆ. ಇದರಲ್ಲಿ

ಆಶ್ಚರ್ಯಕರವಾದ ವಿಷಯವೇನೂ ಇಲ್ಲ. ಲೋಕದ ಸ್ವಭಾವವೇ ಈ ರೀತಿಯಾಗಿದೆ :

**ಸಂನಿಕರ್ಷೋ ಹಿ ಮರ್ತ್ಯಾನಾಮನಾದರಣಕಾರಣಮ್ ।**
**ಗಾಙ್ಗಂ ಹಿತ್ವಾ ಯಥಾನ್ಯಾಮ್ಭಸ್ತತ್ರತ್ಯೋ ಯಾತಿ ಶುದ್ಧಯೇ ॥೩೧॥**

ಪ್ರಪಂಚದಲ್ಲಿ ಅತಿಪರಿಚಯವಿರುವುದು ; ಅತಿಸಮೀಪದಲ್ಲಿರುವುದು, ಅನಾದರಕ್ಕೂ ತಿರಸ್ಕಾರಕ್ಕೂ ಕಾರಣವಾಗುತ್ತದೆ. ಗಂಗಾನದಿಯ ತೀರದಲ್ಲಿರುವವನು ಶರೀರಶುದ್ಧಿಗಾಗಿ ಅನ್ಯನದಿಗಳನ್ನು ಅರಸಿಕೊಂಡು ಹೋಗುವಂತೆ–ಜ್ಞಾನಸಿದ್ಧನಾದ ಶ್ರೀಕೃಷ್ಣನು ಪಕ್ಕದಲ್ಲಿಯೇ ಇದ್ದರೂ ವಸುದೇವನು ಮೋಕ್ಷಧರ್ಮವನ್ನು ನಮ್ಮಿಂದ ಕೇಳಿ ತಿಳಿಯಲು ಬಯಸಿದ್ದಾನೆ. ಶ್ರೀಕೃಷ್ಣನ ಸ್ವರೂಪಜ್ಞಾನವು ಸನಾತನವಾದುದು ; ಶಾಶ್ವತವಾದುದು. ಕಾಲಾನುಕ್ರಮವಾಗಿ ನಡೆಯುವ ಸೃಷ್ಟಿ-ಸ್ಥಿತಿ-ಲಯಗಳಿಂದಲೂ ಅದು ನಾಶವಾಗತಕ್ಕದ್ದಲ್ಲ. ಮಿಂಚಿನಂತೆ ಬೆಳಗಿ ಸ್ವತಃ ಮರೆಯಾಗತಕ್ಕದ್ದಲ್ಲ. ದೊಣ್ಣೆಯಿಂದ ಗಡಿಗೆಯು ಧ್ವಂಸವಾಗುವಂತೆ ಇನ್ನೊಂದರಿಂದ ಶ್ರೀಕೃಷ್ಣನ ವಿಭೂತಿಯು ಅಳಿದುಹೋಗುವುದೂ ಇಲ್ಲ. ವೃದ್ಧಿ-ಹ್ರಾಸಾದಿ ಗುಣಗಳಿಂದ ದೇಹವು ರೂಪಾಂತರವನ್ನು ಪಡೆಯುವಂತೆ–ಆ ಜ್ಞಾನವು ಬದಲಾಯಿಸಿ ವಿಕಾರಹೊಂದುವುದೂ ಇಲ್ಲ. ಇನ್ನು ಬೇರೆ ಯಾವುದರಿಂದಲೂ ಭಗವಂತನ ಸ್ವರೂಪಜ್ಞಾನವು ನಷ್ಟವಾಗಿಹೋಗುವುದಿಲ್ಲ. ಅವನ ಜ್ಞಾನಮಯ ಸ್ವರೂಪವು ಅವಿದ್ಯೆಯಿಂದಾಗಲೀ, ರಾಗ-ದ್ವೇಷಾದಿ ಕ್ಲೇಶಗಳಿಂದಾಗಲೀ, ಪುಣ್ಯ-ಪಾಪಮಯವಾದ ಕರ್ಮಗಳಿಂದಾಗಲೀ, ಸುಖ-ದುಃಖವೇ ಮೊದಲಾದ ಕರ್ಮಫಲಗಳಿಂದಾಗಲೀ, ಸತ್ತ್ವವೇ ಮೊದಲಾದ ಗುಣಗಳ ಪ್ರವಾಹದಿಂದಾಗಲೀ ನಾಶಹೊಂದುವುದಿಲ್ಲ. ಅವನು ಈಶ್ವರನೂ ಅದ್ವಿತೀಯನೂ ಆಗಿದ್ದಾನೆ. ಅವನ ಜ್ಞಾನಕ್ಕೆ ಯಾವುದರಿಂದಲೂ ತಡೆ ಇಲ್ಲ. ಆದರೆ ಅವನು ಮನುಷ್ಯಶರೀರವನ್ನು ಧರಿಸಿದ್ದಾಗ ತನ್ನ ವೈಭವಗಳೇ ಆದ ಪ್ರಾಣಾದಿಗಳಿಂದಲೂ ಸತ್ತ್ವವೇ ಮೊದಲಾದ ಗುಣಗಳಿಂದಲೂ–ಸೂರ್ಯದೇವನು ಮೇಘ-ಹಿಮ-ಗ್ರಹಣಗಳಿಂದ ಮುಚ್ಚಲ್ಪಡುವಂತೆ ಮುಚ್ಚಲ್ಪಟ್ಟಿರುತ್ತಾನೆ. ಅಂತಹ ಕಾಲದಲ್ಲಿ ಮೂರ್ಖಜನರು ಸೂರ್ಯನೇ ಇಲ್ಲವೆಂದು ಭಾವಿಸಿಕೊಳ್ಳುವಂತೆ ಶ್ರೀಕೃಷ್ಣನು ಸಾಕ್ಷಾತ್ ಪರಮಾತ್ಮನೆಂಬುದನ್ನೂ ತನ್ನ ಐಶ್ವರ್ಯ

ಗಳಿಂದ ಉಪಗೂಢನಾಗಿರುವನೆಂಬುದನ್ನೂ ಸಾಮಾನ್ಯಮನುಷ್ಯರು ತಿಳಿಯುವುದಿಲ್ಲ. ಶ್ರೀಕೃಷ್ಣನೂ ಸಾಮಾನ್ಯಮಾನವನೆಂದು ತಿಳಿಯುತ್ತಾರೆ.”

ಪರೀಕ್ಷಿತಮಹಾರಾಜ! ಬಳಿಕ ಋಷಿ-ಮುನಿಗಳು ಶ್ರೀಕೃಷ್ಣ-ಬಲ ರಾಮ ಮತ್ತು ಯುಧಿಷ್ಠಿರನೇ ಮೊದಲಾದ ರಾಜರ ಸಮ್ಮುಖದಲ್ಲಿ ವಸು ದೇವನನ್ನು ಸಂಬೋಧಿಸಿ ಹೇಳಿದರು :

**ಕರ್ಮಣಾ ಕರ್ಮನಿರ್ಹಾರ ಏಷ ಸಾಧು ನಿರೂಪಿತಃ ।**
**ಯಚ್ಛ್ರದ್ಧಯಾ ಯಜೇದ್ವಿಷ್ಣುಂ ಸರ್ವಯಜ್ಞೇಶ್ವರಂ ಮಖೈಃ ॥೩೫॥**

“ವಸುದೇವ! ಸಮಸ್ತಯಜ್ಞಗಳಿಗೂ ಅಧೀಶ್ವರನಾದ, ವ್ಯಾಪಕನಾದ ಮಹಾವಿಷ್ಣುವನ್ನು ಶ್ರದ್ಧೆಯಿಂದ ಯಜ್ಞಗಳ ಮೂಲಕವಾಗಿ ಆರಾಧಿಸುವ ಕರ್ಮದಿಂದ ಕರ್ಮಗಳ ಮತ್ತು ಕರ್ಮಫಲಗಳ ವಿನಾಶವಾಗುವುದೆಂದು ಶಾಸ್ತ್ರಗಳಲ್ಲಿ ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. ತ್ರಿಕಾಲಜ್ಞರಾದ ಜ್ಞಾನಿಗಳು ಶಾಸ್ತ್ರದೃಷ್ಟಿಯಿಂದ ಇಂತಹ ನಿಷ್ಕಾಮನೆಯಿಂದ ಮಾಡುವ ಭಗವದಾರಾಧನೆಯೇ ಮನಶ್ಶಾಂತಿಗೆ ಉಪಾಯವೆಂದೂ ಮೋಕ್ಷಸಾಧನೆಗೆ ಅತ್ಯಂತಸುಗಮವಾದ ಮಾರ್ಗವೆಂದೂ ಮನಸ್ಸಿಗೆ ಆನಂದೋಲ್ಲಾಸ ವನ್ನುಂಟುಮಾಡುವ ಧರ್ಮವೆಂದೂ ಹೇಳಿದ್ದಾರೆ. ಭಗವತ್ಕೃಪೆಯಿಂದ ದೊರೆತ ಶುದ್ಧವಾದ ಧನದಿಂದ ಶ್ರದ್ಧಾಪೂರ್ವಕವಾಗಿ ಯಜ್ಞಗಳ ಮೂಲಕ ಪುರುಷೋತ್ತಮನಾದ ಭಗವಂತನನ್ನು ಆರಾಧಿಸುವುದೇ ಬ್ರಹ್ಮ-ಕ್ಷತ್ರ-ವೈಶ್ಯಗೃಹಸ್ಥರಿಗೆ ಶ್ರೇಷ್ಠವಾದ, ಮಂಗಳದಾಯಕವಾದ ಮಾರ್ಗವಾಗಿದೆ.

ವಸುದೇವ! ಯಜ್ಞಮಾಡುವುದರಿಂದಲೂ ದಾನಮಾಡುವುದ ರಿಂದಲೂ ಧನದ ಆಸೆಯನ್ನು ತೊರೆಯಬೇಕು. ಗೃಹಸ್ಥಾಶ್ರಮದಲ್ಲಿ ಸುಖೋಪಭೋಗಗಳನ್ನು, ಹಲವಾರು ಕಷ್ಟ-ನಷ್ಟಗಳನ್ನು ಅನುಭವಿಸುತ್ತಾ ಇದು ಬಗೆಹರಿಯದ ಬದುಕೆಂಬುದನ್ನು ಮನಗಂಡು ಹೆಂಡತಿ-ಮಕ್ಕಳ ಮೇಲಿನ ಮೋಹವನ್ನು ತೊರೆಯಬೇಕು. ಕಾಲಾನುಕ್ರಮವಾಗಿ ಎಲ್ಲವೂ ಕ್ಷಯಿಸಿಹೋಗುವುದೆಂಬ ನಿಶ್ಚಯದಿಂದ ದೇಹದ ಮೇಲಿನ ಆಸೆಯನ್ನೂ ವಿದ್ವಾಂಸನಾದವನು ಪರಿತ್ಯಜಿಸಬೇಕು. ಸ್ವರ್ಗವೇ ಮೊದಲಾದ ಉತ್ತಮ ಲೋಹಗಳ ಆಸೆಯನ್ನೂ ತೊರೆಯಬೇಕು. ಹೀಗೆ ವಿಚಾರಮಾಡಿಯೇ ಧೀರ

ರಾದ ವಿದ್ವಾಂಸರು ಗ್ರಾಮಗಳಲ್ಲಿ ಇರಬೇಕೆನ್ನುವ ಆಸೆಯನ್ನು ತೊರೆದು ಅರಣ್ಯಕ್ಕೆ ಹೋಗುತ್ತಾರೆ.

ವಸುದೇವ! ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು ದೇವರ್ಷಿ-ಪಿತೃಗಳ ಋಣಗಳನ್ನು ಹೊತ್ತು ಈ ಭುವಿಯಲ್ಲಿ ಹುಟ್ಟಿರುತ್ತಾರೆ. ಯಜ್ಞಗಳನ್ನು ಮಾಡುವುದರಿಂದಲೂ, ಅಧ್ಯಯನಮಾಡುವುದರಿಂದಲೂ ಮತ್ತು ಸಂತಾನ ವನ್ನು ಪಡೆಯುವುದರಿಂದಲೂ ಅವರು ಈ ಮೂರು ಋಣಗಳಿಂದಲೂ ಮುಕ್ತರಾಗುತ್ತಾರೆ. ಈ ಮೂರು ಋಣಗಳನ್ನು ತೀರಿಸದೇ ಸಂಸಾರವನ್ನು ಬಿಟ್ಟು ಹೋಗುವ ದ್ವಿಜರಿಗೆ ಅಧಃಪತನವಾಗುತ್ತದೆ. ವಸುದೇವ! ನೀನೀಗ ವೇದಾಧ್ಯಯನವನ್ನು ಮಾಡಿ ಋಷಿಋಣದಿಂದಲೂ ಮಕ್ಕಳನ್ನು ಪಡೆದು ಪಿತೃಋಣದಿಂದಲೂ ಮುಕ್ತನಾಗಿರುವೆ. ಈಗ ನೀನು ಯಜ್ಞವನ್ನು ಮಾಡಿ ದೇವಋಣವನ್ನು ತೀರಿಸಿ ಗೃಹತ್ಯಾಗಮಾಡಿ ಪರಮಾತ್ಮನಿಗೆ ಶರಣಾಗತನಾಗು. ಆನಕದುಂದುಭಿಯೇ! ನೀನು ನಿಶ್ಚಯವಾಗಿಯೂ ಪರಮಭಕ್ತಿಯಿಂದ ಜಗದೀಶ್ವರನಾದ ಶ್ರೀಹರಿಯನ್ನು ಚೆನ್ನಾಗಿ ಆರಾಧಿಸಿರುವೆ. ಈ ಕಾರಣದಿಂದಲೇ ಅವನು ನಿನಗೆ ಮಗನಾಗಿ ಹುಟ್ಟಿದ್ದಾನೆ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಮನನಶೀಲನಾದ ವಸುದೇವನು ಋಷಿ-ಮುನಿಗಳ ಈ ಮಾತನ್ನು ಕೇಳಿ ಅವರ ಪಾದಾರವಿಂದಗಳಲ್ಲಿ ಮುಡಿಯನ್ನಿಟ್ಟು ನಮಸ್ಕರಿಸಿ ಅವರನ್ನು ಪ್ರಸನ್ನಗೊಳಿಸಿದನು ಮತ್ತು ಯಜ್ಞದ ಋತ್ವಿಕ್ ಪದವಿಯನ್ನೂ ಅವರಿಗೆ ವಹಿಸಿಕೊಟ್ಟನು. ಹೀಗೆ ವಸುದೇವನಿಂದ ಧರ್ಮಪೂರ್ವಕವಾಗಿ ವರಣಮಾಡಲ್ಪಟ್ಟ ಋಷಿ-ಮುನಿಗಳು ಧರ್ಮಕ್ಷೇತ್ರ ವಾದ ಕುರುಕ್ಷೇತ್ರದಲ್ಲಿ ಪರಮಧಾರ್ಮಿಕನಾದ ವಸುದೇವನ ಮೂಲಕವಾಗಿ ಉತ್ತಮೋತ್ತಮವಾದ ಸಾಮಗ್ರಿಗಳಿಂದ ಯುಕ್ತವಾದ ಹಲವಾರು ಯಜ್ಞ ಗಳನ್ನು ಮಾಡಿಸಿದರು. ವಸುದೇವನು ಯಜ್ಞದೀಕ್ಷೆಯನ್ನು ಕೈಗೊಂಡೊಡ ನೆಯೇ ಯದುವಂಶೀಯರಾಜಕುಮಾರರು ಸ್ನಾನಮಾಡಿ, ಸುಂದರವಾದ ಮತ್ತು ಶುಭ್ರವಾದ ವಸ್ತ್ರಗಳನ್ನುಟ್ಟು, ಕಮಲಪುಷ್ಪಗಳ ಮಾಲೆಗಳನ್ನು ಧರಿಸಿ ಚೆನ್ನಾಗಿ ಸಿಂಗರಿಸಿಕೊಂಡರು. ಅಂತೆಯೇ ವಸುದೇವನ ಪತ್ನಿಯರು

ಸುಂದರವಾದ ಸೀರೆಗಳನ್ನುಟ್ಟು, ಸುಗಂಧದ್ರವ್ಯಗಳನ್ನು ಮೈಗೆ ಹಚ್ಚಿಕೊಂಡು, ಚಿನ್ನದ ಹಾರಗಳಿಂದ ಸಮಲಂಕೃತರಾಗಿ ಪರಮಾನಂದಭರಿತರಾಗಿ ಕೈಗಳಲ್ಲಿ ಮಂಗಳದ್ರವ್ಯಗಳನ್ನು ತೆಗೆದುಕೊಂಡು ಯಜ್ಞಶಾಲೆಯನ್ನು ಪ್ರವೇಶಿಸಿದರು.

ಆ ಸಮಯದಲ್ಲಿ ಮೃದಂಗ-ಪಟಹ-ಶಂಖ-ಭೇರಿ-ನಗಾರಿ ಇವೇ ಮುಂತಾದ ಮಂಗಳವಾದ್ಯಗಳು ಮೊಳಗುತ್ತಿದ್ದುವು. ನಟ-ನರ್ತಕಿಯರು ನಾಟ್ಯವಾಡುತ್ತಿದ್ದರು. ಸೂತ-ಮಾಗಧರು ಯದುವಂಶೀಯರನ್ನು ಸ್ತೋತ್ರಮಾಡುತ್ತಿದ್ದರು. ಶ್ರೋತೃಸುಖಾವಹವಾದ ಕಂಠಮಾಧುರ್ಯವುಳ್ಳ ಗಂಧರ್ವಸ್ತ್ರೀಯರು ತಮ್ಮ ಗಂಡಂದಿರೊಡನೆ ಸೇರಿಕೊಂಡು ಸಂಗೀತವನ್ನು ಹಾಡುತ್ತಿದ್ದರು.

ಆ ಸಮಯದಲ್ಲಿ ಯಜ್ಞದ ಋತ್ವಿಜರು ಯಥಾವಿಧಿಯಾಗಿ ವಸುದೇವನ ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಿ, ಶರೀರಕ್ಕೆ ಬೆಣ್ಣೆಯನ್ನು ಲೇಪಿಸಿ, ಆತನಿಗೆ ಅವನ ಹದಿನೆಂಟು ಪತ್ನಿಯರೊಡನೆ–ನಕ್ಷತ್ರಗಳೊಡನೆ ಚಂದ್ರನಿಗೆ ದೇವತೆಗಳು ಅಭಿಷೇಕಮಾಡಿದಂತೆ–ಅಭಿಷೇಕಮಾಡಿದರು. ಯಜ್ಞದೀಕ್ಷಿತನಾಗಿ ಕೃಷ್ಣಾಜಿನವನ್ನು ಹೊದ್ದುಕೊಂಡಿದ್ದ ವಸುದೇವನು ಸುಂದರವಾದ ಸೀರೆಗಳಿಂದಲೂ, ಚಿನ್ನದ ಬಳೆಗಳಿಂದಲೂ, ರತ್ನಹಾರಗಳಿಂದಲೂ, ಸುಂದರವಾದ ಕಾಲಂದುಗೆಗಳಿಂದಲೂ, ಫಳ-ಫಳಿಸುತ್ತಿದ್ದ ಕರ್ಣಾಭರಣಗಳಿಂದಲೂ ಸಮಲಂಕೃತರಾಗಿದ್ದ ತನ್ನ ಪತ್ನಿಯರೊಡನೆ ಬಹಳವಾಗಿ ವಿಜೃಂಭಿಸಿದನು. ಪರೀಕ್ಷಿತಮಹಾರಾಜ! ವಸುದೇವನ ಋತ್ವಿಜರು ಮತ್ತು ಸದಸ್ಯರು ಹಿಂದೆ ಇಂದ್ರನು ಮಾಡಿದ ಯಜ್ಞದಲ್ಲಿ ಭಾಗವಹಿಸಿದ್ದ ಋತ್ವಿಜರಂತೆ ಮತ್ತು ಸದಸ್ಯರಂತೆ ರೇಷ್ಮೆಯ ವಸ್ತ್ರಗಳನ್ನುಟ್ಟು ರತ್ನಖಚಿತವಾದ ಆಭರಣಗಳಿಂದ ಸಮಲಂಕೃತರಾಗಿ ಕಂಗೊಳಿಸುತ್ತಿದ್ದರು. ಸಮಸ್ತಜೀವಕೋಟಿಗೂ ಪ್ರಭುಗಳಾದ ಬಲರಾಮ-ಕೃಷ್ಣರು ತಮ್ಮ-ತಮ್ಮ ಬಂಧುಗಳಿಂದಲೂ, ಮಕ್ಕಳಿಂದಲೂ, ಮಡದಿಯರಿಂದಲೂ ಪರಿವೃತರಾಗಿ ತಮ್ಮದೇ ಆದ ವೈಭವದಿಂದ ರಾರಾಜಿಸಿದರು. ಬಳಿಕ ವಸುದೇವನು ಪ್ರತಿಯಜ್ಞದಲ್ಲಿಯೂ ಯಥಾವಿಧಿಯಾಗಿ ಗಾರ್ಹಪತ್ಯವೇ ಮೊದಲಾದ ಅಗ್ನಿತ್ರಯಗಳ ಉಪಾಸನೆಯೇ ಮುಖ್ಯಲಕ್ಷ್ಯವಾಗಿರುವ ಜ್ಯೋತಿಷ್ಟೋಮ, ದರ್ಶ,

ಪೂರ್ಣಮಾಸ–ಇವೇ ಮೊದಲಾದ ಪ್ರಕೃತಿಯಾಗಗಳಿಂದಲೂ ಸೂರ್ಯ ಸತ್ರವೇ ಮುಂತಾದ ವಿಕೃತಿಯಾಗಗಳಿಂದಲೂ ದ್ರವ್ಯ-ಜ್ಞಾನ ಮತ್ತು ಕ್ರಿಯೆಗಳಿಗೆ ಈಶ್ವರನಾದ ಯಜ್ಞಪುರುಷನನ್ನು* ಆರಾಧಿಸಿದರು. ಅನಂತರ ಆನಕದುಂದುಭಿಯು ಸಮುಚಿತವಾದ ಕಾಲದಲ್ಲಿ ವೇದೋಕ್ತವಿಧಿಗೆ ಅನುಸಾರವಾಗಿ ರೇಷ್ಮೆಯ ವಸ್ತ್ರಗಳಿಂದಲೂ, ರತ್ನಹಾರಗಳಿಂದಲೂ ಸಮ ಲಂಕೃತರಾಗಿದ್ದ ಋತ್ವಿಜರನ್ನು ಪುಷ್ಪ-ಗಂಧಗಳಿಂದ ಮತ್ತೂ ಅಲಂಕರಿಸಿ ಹೇರಳವಾದ ಹಣವನ್ನೂ, ಗೋವುಗಳನ್ನೂ, ಭೂಮಿಯನ್ನೂ, ಕನ್ಯೆ ಯರನ್ನೂ ದಕ್ಷಿಣೆಯಾಗಿ ಕೊಟ್ಟನು.

ಬಳಿಕ ಮಹರ್ಷಿಗಳು ಪತ್ನೀಸಂಯಾಜ ಮತ್ತು ಆವಭೃಥ್ಯಗಳೆಂಬ ಯಜ್ಞಾಂಗಕರ್ಮಗಳನ್ನು ವಸುದೇವನಿಂದಲೂ ಅವನ ಪತ್ನಿಯರಿಂದಲೂ ಮಾಡಿಸಿ, ಆತನನ್ನು ಮುಂದೆಮಾಡಿಕೊಂಡು ಪರಶುರಾಮನು ನಿರ್ಮಿಸಿದ್ದ ಸಮಂತಪಂಚಕಸರೋವರಗಳಲ್ಲಿ ಅವಭೃಥಸ್ನಾನಮಾಡಿದರು. ಸಚೇಲರಾಗಿ ಸ್ನಾನಮಾಡಿದನಂತರ ವಸುದೇವನೂ ಮತ್ತು ಅವನ ಪತ್ನಿಯರೂ ತಾವು ಉಟ್ಟಿದ್ದ ವಸ್ತ್ರಗಳನ್ನೂ ಮತ್ತು ತೊಟ್ಟಿದ್ದ ಆಭರಣಗಳನ್ನೂ ವಂದಿ- ಮಾಗಧರಿಗೆ ಕೊಟ್ಟುಬಿಟ್ಟರು. ಅನಂತರ ವಸುದೇವನು ನೂತನವಸ್ತ್ರಾ ಭರಣಗಳಿಂದ ಸಮಲಂಕೃತನಾಗಿ ಬ್ರಾಹ್ಮಣರಿಂದ ಹಿಡಿದು ನಾಯಿಯವರೆಗಿನ ಸಮಸ್ತಪ್ರಾಣಿಗಳಿಗೂ ಮೃಷ್ಟಾನ್ನವನ್ನು ಭೋಜನಮಾಡಿಸಿ ಗೌರವಿಸಿದನು. ಪತ್ನೀ-ಪುತ್ರರಿಂದೊಡಗೂಡಿದ್ದ ಹತ್ತಿರದ ಬಂಧುಗಳೂ ಆಗಿದ್ದ ವಿದರ್ಭ-ಕೋಸಲ - ಕುರು - ಕಾಶಿ - ಕೇಕಯ - ಸೃಂಜಯದೇಶಗಳ ರಾಜ ಕುಮಾರರನ್ನು ಅಧಿಕವಾದ ಬಹುಮಾನಗಳನ್ನಿತ್ತು ಗೌರವಿಸಿದನು. ಸದಸ್ಯರನ್ನೂ, ಯಾಜಕರನ್ನೂ, ದೇವತೆಗಳನ್ನೂ, ಮನುಷ್ಯರನ್ನೂ, ಭೂತ ಗಣಗಳನ್ನೂ, ಪಿತೃದೇವತೆಗಳನ್ನೂ, ಚಾರಣರನ್ನೂ–ಹಲವಾರು ಅಮೂಲ್ಯ

---

* ಯಜ್ಞಪುರುಷ–ಮಹಾವಿಷ್ಣು. ಯಜ್ಞೋ ವೈ ವಿಷ್ಣುಃ (ಶ್ರುತಿ) ಯಜ್ಞೇನ ಯಜ್ಞಮಯಜನ್ತದೇವಾಃ (ಶ್ರುತಿ) ಯಜ್ಞೋ ಯಜ್ಞಪತಿರ್ಯಜ್ವಾ (ವಿಷ್ಣು ಸಹಸ್ರನಾಮ) ಬ್ರಹ್ಮಾವಿಷ್ಣೂ ರುದ್ರಹುತಾಶೌ ರವಿಚನ್ದ್ರೌ ಇನ್ದ್ರೋ ವಾಯುರ್ಯಜ್ಞ ಇತಿ. (ಶ್ರೀಶಂಕರಭಗವತ್ಪಾದರ ಹರಿಮೀಡೇ ಸ್ತೋತ್ರ )

ವಾದ ಪಾರಿತೋಷಿಕಗಳನ್ನಿತ್ತು ಸಮ್ಮಾನಿಸಿದನು. ಅವರೆಲ್ಲರೂ ಶ್ರೀನಿಕೇತನನಾದ ಶ್ರೀಕೃಷ್ಣನ ಅನುಮತಿಯನ್ನು ಪಡೆದು ಯಜ್ಞವನ್ನು ಬಹಳವಾಗಿ ಪ್ರಶಂಸೆಮಾಡುತ್ತಾ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು. ಆ ಸಮಯದಲ್ಲಿ ಧೃತರಾಷ್ಟ್ರ-ವಿದುರ-ಯುಧಿಷ್ಠಿರರೂ, ಭೀಮಾರ್ಜುನ-ನಕುಲ-ಸಹದೇವರೂ, ಭೀಷ್ಮಪಿತಾಮಹರೂ, ದ್ರೋಣಾಚಾರ್ಯರೂ, ಕುಂತೀ-ನಾರದರೂ ಭಗವಾನ್ ವ್ಯಾಸಮುನಿಗಳೂ ಮತ್ತು ಇತರ ಸ್ವಜನರೂ-ಸಂಬಂಧಿಗಳೂ ಹಿತೈಷಿಗಳೂ ಆಗಿದ್ದ ಯಾದವರನ್ನು ಬಿಟ್ಟುಹೋಗಲು ಸಾಧ್ಯವಾಗದೆ ವಿರಹವ್ಯಥೆಯನ್ನು ಅನುಭವಿಸುತ್ತಿದ್ದರು. ಬಿಟ್ಟುಹೋಗುವುದು ಅನಿವಾರ್ಯವಾಗಿದ್ದುದರಿಂದ ಯದುವೀರರನ್ನು ಗಾಢವಾಗಿ ಆಲಿಂಗಿಸಿಕೊಂಡು ಅವರೆಲ್ಲರ ಅನುಮತಿಯನ್ನು ಪಡೆದು ಅತ್ಯಂತ ಕಷ್ಟದಿಂದ ತಮ್ಮ ದೇಶಗಳಿಗೆ ಹಿಂದಿರುಗಿದರು. ಹಾಗೆಯೇ ಯಜ್ಞವನ್ನು ನೋಡಲು ಬಂದಿದ್ದ ಇತರರೂ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು.

ಪರೀಕ್ಷಿತಮಹಾರಾಜ! ಶ್ರೀಕೃಷ್ಣ-ಬಲರಾಮರಿಂದಲೂ ಮತ್ತು ಉಗ್ರಸೇನಮಹಾರಾಜನಿಂದಲೂ ಅಮೂಲ್ಯವಾದ ವಸ್ತುಗಳಿಂದ ಸುಸತ್ಕೃತನಾದ, ಬಂಧುವತ್ಸಲನಾದ ನಂದಗೋಪನು ಗೋಪಾಲರೊಡನೆ ಬಹಳ ದಿವಸಗಳವರೆಗೆ ಅಲ್ಲಿಯೇ ಇದ್ದನು.

ವಸುದೇವನು ಮನೋರಥವೆಂಬ ಮಹಾಸಾಗರವನ್ನು ಅನಾಯಾಸವಾಗಿ ದಾಟಿಬಿಟ್ಟನು. ಕಷ್ಟಸಾಧ್ಯವೆನಿಸಿದ ಮಹಾಯಜ್ಞವು ನಿರಾತಂಕವಾಗಿ ಸಮಾಪ್ತಿಗೊಂಡಿತು. ಇದರಿಂದಾಗಿ ವಸುದೇವನಿಗೆ ಉಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಸುಹೃದರಿಂದ ಸುತ್ತುವರಿಯಲ್ಪಟ್ಟಿದ್ದ ಪ್ರಸನ್ನಚಿತ್ತನಾಗಿದ್ದ ವಸುದೇವನು ನಂದಗೋಪನ ಕೈಹಿಡಿದುಕೊಂಡು ಹೇಳಿದನು :

**ಭ್ರಾತರೀಶಕೃತಃ ಪಾಶೋ ನೃಣಾಂ ಯಃ ಸ್ನೇಹಸಂಜ್ಞಿತಃ ।**
**ತಂ ದುಸ್ತ್ಯಜಮಹಂ ಮನ್ಯೇ ಶೂರಾಣಾಮಪಿ ಯೋಗಿನಾಮ್ ॥೬೧॥**

"ಸಹೋದರ! ಭಗವಂತನು ಮನುಷ್ಯರಿಗೆ ಒಂದು ಬಂಧನವನ್ನು ಕಲ್ಪಿಸಿಬಿಟ್ಟಿದ್ದಾನೆ. ಅದಕ್ಕೆ ಸ್ನೇಹವೆಂದು ಹೆಸರು. ಈ ಸ್ನೇಹಸಂಬಂಧ

ವನ್ನು ತ್ಯಜಿಸಲು ಶೂರರಿಗಾಗಲೀ, ಶೂರರಾದ ಯೋಗಿಗಳಿಗಾಗಲೀ ಸಾಧ್ಯವಾಗದೆಂದು ನಾನು ಭಾವಿಸುತ್ತೇನೆ. ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲರಿಯದ ಮೂಢರಾದ ನಮ್ಮ ವಿಷಯದಲ್ಲಿ ಸಾಧುಶ್ರೇಷ್ಠರಾದ ನೀವು ಅಸದೃಶವಾದ ಸ್ನೇಹವನ್ನು ಇಟ್ಟುಕೊಂಡಿರುವಿರಿ. ಈ ಸ್ನೇಹದಿಂದ ಯಾವುದೇ ಪ್ರತಿಫಲವಿಲ್ಲ–ಎಂಬುದನ್ನು ತಿಳಿದಿದ್ದರೂ ನಮ್ಮಲ್ಲಿ ನಿಮ್ಮ ನಿರ್ವ್ಯಾಜಸ್ನೇಹವು ಅಚಲವಾಗಿಯೇ ಉಳಿದಿದೆ. ಹಿಂದೆ ನಾವು ಕಂಸನ ಕಾರಾಗೃಹದಲ್ಲಿಯೇ ಇದ್ದುದರಿಂದ ಯಾವುದೇ ಉಪಕಾರವನ್ನು ಮಾಡಲೂ ಅಶಕ್ಯವಾಗಿದ್ದಿತು. ಈಗಲಾದರೋ ಧನಮದದಿಂದ ಕುರುಡರಾಗಿಬಿಟ್ಟಿರುವ ನಾವು, ನೀವು ನಮ್ಮ ಮುಂದೆಯೇ ಇದ್ದರೂ ಕಣ್ಣೆತ್ತಿ ನೋಡುತ್ತಿಲ್ಲ. ಮಾನದನೇ! ನಂದಗೋಪ! ಶ್ರೇಯಸ್ಕಾಮನಾದವನಿಗೆ ರಾಜ್ಯಲಕ್ಷ್ಮಿಯು ಸಿಕ್ಕಬಾರದು. ಏಕೆಂದರೆ : ರಾಜ್ಯಲಕ್ಷ್ಮಿಯನ್ನು ಪಡೆದವನು ಮದಾಂಧನಾಗಿ ಬಿಡುತ್ತಾನೆ. ಅವನು ತನ್ನ ಜನರನ್ನಾಗಲೀ, ಬಂಧುಗಳನ್ನಾಗಲೀ ಕಣ್ಣೆತ್ತಿಯೂ ನೋಡುವುದಿಲ್ಲ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಹೀಗೆ ಹೇಳುತ್ತಿದ್ದಂತೆಯೇ ವಸುದೇವನ ಹೃದಯವು ಪ್ರೇಮದಿಂದ ಗದ್ಗದವಾಯಿತು. ನಂದಗೋಪನ ಮೈತ್ರಿಯನ್ನೂ ಅವನು ಹಿಂದೆ ಮಾಡಿದ ಉಪಕಾರವನ್ನೂ ಸ್ಮರಿಸಿಕೊಂಡು ವಸುದೇವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಗಳ-ಗಳನೆ ಅತ್ತುಬಿಟ್ಟನು. ಮುಂದೆ ಮಾತನಾಡಲಿಲ್ಲ. ಶ್ರೀಕೃಷ್ಣ-ಬಲರಾಮರ ಪ್ರೇಮಪಾಶದಿಂದ ಬಂಧಿಸಲ್ಪಟ್ಟಿದ್ದ ನಂದಗೋಪನು ತನ್ನ ಗೆಳೆಯನಾದ ವಸುದೇವನನ್ನು ಸಮಾಧಾನಗೊಳಿಸಲು–'ಇಂದು ಹೋಗಿಬರುವೆನು-ನಾಳೆ ಹೊರಟೇ ತೀರುತ್ತೇನೆ'–ಎಂದೆನ್ನುತ್ತಲೇ ಮೂರು ಮಾಸಗಳವರೆಗೂ ಯದುವೀರರಿಂದ ಸಮ್ಮಾನಿತನಾಗಿ ವಸುದೇವನ ಜೊತೆಯಲ್ಲಿಯೇ ಇದ್ದುಬಿಟ್ಟನು.

ಬಳಿಕ ನಂದಗೋಪನಿಗೂ ಅವನ ಜೊತೆಯಲ್ಲಿ ಬಂದಿದ್ದ ಗೋಕುಲದ ಜನರಿಗೂ ಮತ್ತು ನಂದಗೋಪನ ಬಂಧುಗಳಿಗೂ ಯಾದವರು ಬಹುಮೂಲ್ಯವಾದ ಆಭರಣಗಳನ್ನೂ, ರೇಷ್ಮೆಯ ಪಟ್ಟವಸ್ತ್ರಗಳನ್ನೂ, ನಾನಾಪ್ರಕಾರ

ವಾದ ಉತ್ತಮೋತ್ತಮವಾದ ಸಾಮಗ್ರಿಗಳನ್ನೂ ಮತ್ತು ಅವರು ಬಯಸಿದ ಕಾಮನಾವಸ್ತುಗಳನ್ನೂ ಕೊಟ್ಟು ತೃಪ್ತಿಪಡಿಸಿದರು. ಇಷ್ಟುಮಾತ್ರವಲ್ಲದೆ ವಸುದೇವನೂ, ಉಗ್ರಸೇನನೂ, ಶ್ರೀಕೃಷ್ಣ-ಬಲರಾಮರೂ, ಉದ್ಧವನೂ, ಪ್ರತ್ಯೇಕ-ಪ್ರತ್ಯೇಕವಾಗಿ ಅನೇಕ ಪ್ರಕಾರವಾದ ಪಾರಿತೋಷಿಕಗಳನ್ನು ನಂದಗೋಪನಿಗೆ ಪ್ರೇಮಪುರಸ್ಸರವಾಗಿ ನೀಡಿದರು. ಅವರೆಲ್ಲರೂ ಕೊಟ್ಟ ಸಾಮಗ್ರಿಗಳನ್ನು ತೆಗೆದುಕೊಂಡು ಅವರೆಲ್ಲರ ಅನುಮತಿಯನ್ನೂ ಪಡೆದು ನಂದಗೋಪನು ಸಪರಿವಾರನಾಗಿ ವ್ರಜಕ್ಕೆ ಪ್ರಯಾಣಮಾಡಿದನು. ಹಾಗೆ ಪ್ರಯಾಣಮಾಡುವಾಗ ನಂದಗೋಪನ, ಗೋಪಾಲರ ಮತ್ತು ಗೋಪಿಯರ ಮನಸ್ಸುಗಳೆಲ್ಲವೂ ಶ್ರೀಗೋವಿಂದನ ಚರಣಾಂಬುಜಗಳಲ್ಲಿಯೇ ಲೀನವಾಗಿ ಬಿಟ್ಟಿದ್ದುವು. ಎಷ್ಟೇ ಪ್ರಯತ್ನಿಸಿದರೂ ಅವನ ಪಾದಕಮಲಗಳಿಂದ ಮನಸ್ಸನ್ನು ಹೊರತೆಗೆದುಕೊಳ್ಳಲು ಅವರಿಗೆ ಸಾಧ್ಯವಾಗಲೇ ಇಲ್ಲ. ಕಡೆಗೆ ಮನಸ್ಸಿಲ್ಲದೆಯೇ ಅವರೆಲ್ಲರೂ ಮಥುರಾಪಟ್ಟಣಕ್ಕೆ ಪ್ರಯಾಣಮಾಡಿದರು. ಬಂಧು-ಮಿತ್ರರೆಲ್ಲರೂ ಹೊರಟುಹೋದನಂತರ ಶ್ರೀಕೃಷ್ಣನನ್ನೇ ಏಕಮಾತ್ರ ಇಷ್ಟದೇವನೆಂದು ಭಾವಿಸಿದ್ದ ಯಾದವರು ವರ್ಷಾಕಾಲವು ಸನ್ನಿಹಿತ ವಾಗಿದ್ದುದನ್ನು ಕಂಡು ದ್ವಾರಾವತಿಗೆ ಪ್ರಯಾಣಮಾಡಿದರು. ದ್ವಾರಕೆಯನ್ನು ಸೇರಿದನಂತರ ಯದುವೀರರು ದ್ವಾರಕೆಯಲ್ಲಿದ್ದ ಪ್ರಜೆಗಳಿಗೆ ವಸುದೇವನು ಆಚರಿಸಿದ ಯಜ್ಞಮಹೋತ್ಸವವನ್ನೂ ತೀರ್ಥಯಾತ್ರಾಪ್ರಸಂಗದಲ್ಲಿ ಸ್ವಜನರೊಡನೆ, ಸಂಬಂಧಿಗಳೊಡನೆ ಮತ್ತು ಮಿತ್ರರೊಡನೆ ಭೇಟಿಯಾದ ವಿಷಯವನ್ನೂ ಅವರೊಡನೆ ನಡೆದ ಸಂಭಾಷಣೆಗಳನ್ನೂ ವಿವರಿಸಿ ಹೇಳಿದರು.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೪ನೆಯ ಅಧ್ಯಾಯವು ಮುಗಿಯಿತು.

---

## ಭಗವಂತನು ವಸುದೇವನಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದುದು : ಶ್ರೀಕೃಷ್ಣನು ಗತಿಸಿ ಹೋಗಿದ್ದ ದೇವಕಿಯ ಆರು ಮಕ್ಕಳನ್ನೂ ಹಿಂದಕ್ಕೆ ತಂದುದು

ಶ್ರೀಬಾದರಾಯಣಿಗಳು ಹೇಳುತ್ತಾರೆ :

**ಅಥೈಕದಾಽತ್ಮಜೌ ಪ್ರಾಪ್ತೌ ಕೃತಪಾದಾಭಿವನ್ದನೌ ।**
**ವಸುದೇದವೋಽಭಿನನ್ದ್ಯಾಹ ಪ್ರೀತ್ಯಾ ಸಙ್ಕರ್ಷಣಾಚ್ಯುತೌ ॥೧॥**

"ಪರೀಕ್ಷಿತಮಹಾರಾಜ! ದೈನಂದಿನಪದ್ಧತಿಯಂತೆ ಶ್ರೀಕೃಷ್ಣ-ಬಲರಾಮರು ಪ್ರಾತಃಕಾಲದಲ್ಲಿ ನಮಸ್ಕಾರಮಾಡುವ ಸಲುವಾಗಿ ತಂದೆ-ತಾಯಿಗಳ ಬಳಿಗೆ ಹೋದರು. ತಂದೆ-ತಾಯಿಗಳಾದ ವಸುದೇವ-ದೇವಕಿಯರಿಗೆ ಕೃಷ್ಣ-ಬಲರಾಮರು ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿದ ನಂತರ ವಸುದೇವನು ಅತ್ಯಂತಪ್ರೇಮದಿಂದ ಮಕ್ಕಳಿಬ್ಬರನ್ನೂ ಪ್ರಶಂಸೆ ಮಾಡುತ್ತಾ ಹೇಳಿದನು.

ವಸುದೇವನು ಮಹಾ-ಮಹಾಋಷಿಮುನಿಗಳ ಮುಖಾರವಿಂದದಿಂದ ಬಲರಾಮ-ಕೃಷ್ಣರ ಮಹಿಮಾಸೂಚಕವಾದ ಹಲವಾರು ಪ್ರಕರಣಗಳನ್ನು ಕೇಳಿದ್ದನು ಮತ್ತು ಐಶ್ವರ್ಯಪೂರ್ಣವಾದ ಅವರ ಚರಿತ್ರೆಗಳನ್ನು ಪ್ರತ್ಯಕ್ಷವಾಗಿಯೂ ಕಂಡಿದ್ದನು. ವಸುದೇವನಿಗೆ ತನ್ನ ಮಕ್ಕಳು ಸಾಧಾರಣರಲ್ಲವೆಂದೂ ಭಗವತ್ಸ್ವರೂಪರೆಂದೂ ದೃಢವಾದ ವಿಶ್ವಾಸವಿದ್ದಿತು. ಇದರಿಂದಾಗಿ ವಸುದೇವನು ತನ್ನ ಮಕ್ಕಳನ್ನು ಪ್ರೇಮಪೂರ್ವಕವಾಗಿ ಸಂಬೋಧಿಸಿ ಹೇಳಿದನು :

**ಕೃಷ್ಣ ಕೃಷ್ಣ ಮಹಾಯೋಗಿನ್ ಸಙ್ಕರ್ಷಣ ಸನಾತನ ।**
**ಜಾನೇ ವಾಮಸ್ಯ ಯತ್ಸಾಕ್ಷಾತ್ ಪ್ರಧಾನಪುರುಷೌ ಪರೌ ॥೩॥**

"ಮಹಾಯೋಗೇಶ್ವರನಾದ ಕೃಷ್ಣನೇ! ಸನಾತನನಾದ ಸಂಕರ್ಷಣನೇ! ನೀವಿಬ್ಬರೂ ಪ್ರಕೃತಿ-ಪುರುಷಸ್ವರೂಪರೆಂದೂ ಸಾಕ್ಷಾತ್ ಈಶ್ವರರೆಂದೂ ನಾನು ತಿಳಿದಿರುತ್ತೇನೆ.

**ಯತ್ರ ಯೇನ ಯತೋ ಯಸ್ಯ ಯಸ್ಮೈ ಯದ್ಯದ್ಯಥಾ ಯದಾ ।**
**ಸ್ಯಾದಿದಂ ಭಗವಾನ್ ಸಾಕ್ಷಾತ್ಪ್ರಧಾನಪುರುಷೇಶ್ವರಃ ॥೪॥**

ಈ ಜಗತ್ತು ಯಾವಾಗಲೇ ಬಂದಿರಲಿ! ಹೇಗೇ ಬಂದಿರಲಿ! ನಿನ್ನಲ್ಲಿಯೇ ಇದು ಸೃಷ್ಟಿಯಾದದ್ದು, ನಿನ್ನಿಂದಲೇ ಸೃಷ್ಟಿಯಾದದ್ದು, ನಿನ್ನ ದೆಸೆ ಯಿಂದಲೇ ಇದು ಹೊರಬಂದದ್ದು. ಇದು ನಿನಗಾಗಿಯೇ ಸೃಷ್ಟಿಯಾಗಿದೆ. ನಿನ್ನ ಸಂಬಂಧದಿಂದಲೇ ಇದರ ಸೃಷ್ಟಿಯಾಗಿದೆ. ಅಧಿಕರಣ (ಆಧಾರ) ಪ್ರಯೋಜ್ಯಕರ್ತೃ, ಕರಣ-ಕಾರಣ, ಉಪಾದಾನ, ಸಂಬಂಧ, ಉದ್ದಿಶ್ಯ, ಕರ್ಮ, ಪ್ರಯೋಜ್ಯಕರ್ತೃ–ಇವೆಲ್ಲವೂ, ಜಗತ್ತಿನ ಪ್ರಕಾರ ಕಾಲ ಮುಂತಾದುವೂ, ಇದರ ಆಗುಹೋಗುಗಳೂ ಎಲ್ಲವೂ ಪ್ರಧಾನಪುರುಷೇಶ್ವರನಾದ ನೀನೇ ಆಗಿರುವೆ.

**ಏತನ್ನಾನಾವಿಧಂ ವಿಶ್ವಮಾತ್ಮಸೃಷ್ಟಮಧೋಕ್ಷಜ ।**
**ಆತ್ಮನಾನುಪ್ರವಿಶ್ಯಾತ್ಮನ್ಪ್ರಾಣೋ ಜೀವೋ ಬಿಭರ್ಷ್ಯಜಃ ॥೫॥**

ಇಂದ್ರಿಯಾತೀತನೇ! ಜನ್ಮ-ಸ್ಥಿತಿಯೇ ಮೊದಲಾದ ಭಾವವಿಕಾರ ಗಳಿಂದ ರಹಿತನಾಗಿರತಕ್ಕ ಪರಮಾತ್ಮನೇ! ಈ ಚಿತ್ರ-ವಿಚಿತ್ರವಾದ ಜಗತ್ತನ್ನು ನೀನೇ ನಿರ್ಮಾಣಮಾಡಿರುವೆ. ಹಾಗೆ ಸೃಷ್ಟಿಸಿರುವ ಜಗತ್ತಿನಲ್ಲಿ ನೀನೇ ಆತ್ಮಸ್ವರೂಪದಿಂದ ಅನುಪ್ರವೇಶಮಾಡಿರುವೆ. ನೀನು ಪ್ರಾಣಶಕ್ತಿಯ ಮೂಲಕವಾಗಿಯೂ ಜ್ಞಾನಶಕ್ತಿಯ ಮೂಲಕವಾಗಿಯೂ ಈ ಜಗತ್ತಿನ ಪಾಲನೆ-ಪೋಷಣೆಗಳನ್ನು ಮಾಡುತ್ತಿರುವೆ.

**ಪ್ರಾಣಾದೀನಾಂ ವಿಶ್ವಸೃಜಾಂ ಶಕ್ತಯೋ ಯಾಃ ಪರಸ್ಯ ತಾಃ ।**
**ಪಾರತನ್ತ್ರ್ಯಾದ್ವೈ ಸಾದೃಶ್ಯಾದ್ದ್ವಯೋಶ್ಚೇಷ್ಟೈವ ಚೇಷ್ಟತಾಮ್ ॥೬॥**

ಕ್ರಿಯಾಶಕ್ತಿಪ್ರಧಾನವಾದ ಪ್ರಾಣವೇ ಮೊದಲಾದುವುಗಳಿಗೆ ಜಗತ್ತಿನ ವಸ್ತುಗಳನ್ನು ಸೃಷ್ಟಿಸುವ ಯಾವ ಸಾಮರ್ಥ್ಯವಿರುವುದೋ ಆ ಸಾಮರ್ಥ್ಯವು ಅವುಗಳ ಸಾಮರ್ಥ್ಯವಲ್ಲ. ಆ ಸಾಮರ್ಥ್ಯವು ನಿನ್ನದೇ ಆಗಿದ್ದು ಅವುಗಳಲ್ಲಿರುವಂತೆ ಭಾಸವಾಗುತ್ತದೆ. ಲಕ್ಷ್ಯವನ್ನು ಭೇದಿಸುವ ಸಾಮರ್ಥ್ಯವು ಬಾಣವನ್ನು ಪ್ರಯೋಗಿಸುವ ಯೋಧನದೇ ಹೊರತು, ಬಾಣದ್ದಲ್ಲ. ಆದರೆ ಬಾಣವೇ ಸ್ವಸಾಮರ್ಥ್ಯದಿಂದ ಲಕ್ಷ್ಯವನ್ನು ಭೇದಿಸಿದಂತೆ

ಭಾಸವಾಗುತ್ತದೆ. ನಿನಗೆ ಸಮಾನವಾದ ಚೇತನವು ಯಾವುದೂ ಇಲ್ಲ. ನಿನ್ನನ್ನೂ ಬಿಟ್ಟು ಉಳಿದೆಲ್ಲವೂ ಅಚೇತನಗಳೇ ಆಗಿವೆ. ನಿನ್ನ ಅನು ಪ್ರವೇಶದಿಂದಾಗಿ ಅಚೇತನವಾದ ವಸ್ತುಗಳೂ ನಿನಗೆ ಸಮಾನವಾಗಿರುವಂತೆ ಕಾಣುತ್ತವೆ. ನಿನ್ನಂತೆ ಅವು ಸ್ವತಂತ್ರವಾದುವುಗಳಲ್ಲ. ಚೇಷ್ಟಾಶೀಲವಾದ ಪ್ರಾಣಗಳಲ್ಲಿ ಕೇವಲ ಚೇಷ್ಟೆಯಿರುವುದೇ ಹೊರತು ಅವುಗಳಲ್ಲಿ ಯಾವ ಶಕ್ತಿಯೂ ಇಲ್ಲ. ಗಾಳಿಯು ಬೀಸಿದಾಗ ಗಿಡ-ಮರ-ಬಳ್ಳಿಗಳು ಅಳ್ಳಾಡುವಂತೆ ನಿನ್ನ ಅನುಪ್ರವೇಶವಾದಾಗ ಪ್ರಾಣವೇ ಮೊದಲಾದುವುಗಳು ಚೇಷ್ಟೆ ಮಾಡುತ್ತವೆ.

**ಕಾನ್ತಿಸ್ತೇಜಃ ಪ್ರಭಾ ಸತ್ತಾ ಚನ್ದ್ರಾಗ್ನ್ಯರ್ಕರ್ಕ್ಷವಿದ್ಯುತಾಮ್ ।**
**ಯತ್ ಸ್ಥೈರ್ಯಂ ಭೂಭೃತಾಂ ಭೂಮೇರ್ವೃತ್ತಿರ್ಗನ್ಧೋಽರ್ಥತೋ ಭವಾನ್ ॥೭॥**

ಪ್ರಭುವೇ! ಚಂದ್ರನ ಕಾಂತಿ, ಅಗ್ನಿಯ ತೇಜಸ್ಸು, ಸೂರ್ಯನ ಪ್ರಭೆ, ನಕ್ಷತ್ರ-ಮಿಂಚುಗಳಲ್ಲಿರುವ ಮಿನುಗುವಿಕೆ, ಪರ್ವತದ ಸ್ಥಿರತೆ, ಭೂಮಿಯ ಧರಿಸುವಿಕೆ ಮತ್ತು ಗಂಧ ಇವೆಲ್ಲವೂ ವಾಸ್ತವವಾಗಿ ನಿನ್ನ ಶಕ್ತಿಗಳೇ ಆಗಿವೆ.

**ತರ್ಪಣಂ ಪ್ರಾಣನಮಪಾಂ ದೇವ ತ್ವಂ ತಾಶ್ಚ ತದ್ರಸಃ ।**
**ಓಜಃ ಸಹೋ ಬಲಂ ಚೇಷ್ಟಾ ಗತಿರ್ವಾಯೋಸ್ತವೇಶ್ವರ ॥೮॥**

ದೇವನೇ! ನೀರಿನಲ್ಲಿ–ಪಾನಮಾಡಿದವರನ್ನು ತೃಪ್ತಿಗೊಳಿಸುವ, ಜೀವನಕ್ಕೆ ಆಧಾರಭೂತವಾದ ಮತ್ತು ಶುದ್ಧಿಗೊಳಿಸುವ–ಯಾವ ಗುಣ ಗಳಿವೆಯೋ ಆ ಗುಣಗಳೆಲ್ಲವೂ ನಿನ್ನ ವಿಭಿನ್ನಸ್ವರೂಪಗಳೇ ಆಗಿವೆ. ಜಲ ಮತ್ತು ಅದರ ರಸವೂ ಕೂಡ ನೀನೇ ಆಗಿರುವೆ. ವಾಯುವಿನಲ್ಲಿರುವ ಇಂದ್ರಿಯಶಕ್ತಿ, ಅಂತಃಕರಣಶಕ್ತಿ, ಶರೀರಶಕ್ತಿ, ಚೇಷ್ಟೆ, ಗಮನಶಕ್ತಿ–ಈ ಶಕ್ತಿಗಳೆಲ್ಲವೂ ನಿನ್ನವುಗಳೇ ಆಗಿವೆ.

**ದಿಶಾಂ ತ್ವಮವಕಾಶೋಽಸಿ ದಿಶಃ ಖಂ ಸ್ಫೋಟ ಆಶ್ರಯಃ ।**
**ನಾದೋ ವರ್ಣಸ್ತ್ವಮೋಙ್ಕಾರ ಆಕೃತೀನಾಂ ಪೃಥಕ್ಕೃತಿಃ ॥೯॥**

ದಿಕ್ಕುಗಳಲ್ಲಿರುವ ಅವಕಾಶವು ನೀನೇ ಆಗಿರುವೆ. ದಿಕ್ಕುಗಳು ಆಕಾಶ, ಅದಕ್ಕೆ ಆಶ್ರಯಭೂತವಾದ ಸ್ಫೋಟ, ಸದಾವಾಕ್ಕು ಎಲ್ಲವೂ

ನೀನೇ ಆಗಿರುವೆ. (ಪಶ್ಯಂತೀ ವಾಕ್) ಓಂಕಾರ (ಮಧ್ಯಮಾ ವಾಕ್) ಅರ್ಥವನ್ನು ಪೃಥಕ್ಕರಿಸಿ ಬೋಧಿಸುವ ವರ್ಣಾತ್ಮಕ ವೈಖರೀ ವಾಕ್* ಇವೆಲ್ಲವೂ ನೀನೇ ಆಗಿರುವೆ.

**ಇನ್ದ್ರಿಯಂ ತ್ವಿನ್ದ್ರಿಯಾಣಾಂ ತ್ವಂ ದೇವಾಶ್ಚ ತ್ವದನುಗ್ರಹಃ ।**
**ಅವಬೋಧೋ ಭವಾನ್ ಬುದ್ಧೇರ್ಜೀವಸ್ಯಾನುಸ್ಮೃತಿಃ ಸತೀ ॥೧೦॥**

ಇಂದ್ರಿಯಗಳು, ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳು ಮತ್ತು ಇಂದ್ರಿಯಗಳ ಅಧಿದೇವತೆಗಳು, ಆ ದೇವತೆಗಳ ಅಧಿಷ್ಠಾನಶಕ್ತಿಯೂ ಎಲ್ಲವೂ ನೀನೇ ಆಗಿರುವೆ. ಬುದ್ಧಿಯ ನಿಶ್ಚಯಾತ್ಮಕಶಕ್ತಿಯೂ ಮತ್ತು ಜೀವನ ವಿಶುದ್ಧಸ್ಮೃತಿಶಕ್ತಿಯೂ ನೀನೇ ಆಗಿರುವೆ.

**ಭೂತಾನಾಮಸಿ ಭೂತಾದಿರಿನ್ದ್ರಿಯಾಣಾಂ ಚ ತೈಜಸಃ ।**
**ವೈಕಾರಿಕೋ ವಿಕಲ್ಪಾನಾಂ ಪ್ರಧಾನಮನುಶಾಯಿನಾಮ್ ॥೧೧॥**

ಪೃಥಿವ್ಯಾದಿ ಮಹಾಭೂತಗಳಿಗೆ ಕಾರಣವಾದ ತಾಮಸಾಹಂಕಾರವೂ, ಕಿವಿಯೇ ಮೊದಲಾದ ಇಂದ್ರಿಯಗಳಿಗೆ ಕಾರಣವಾದ ರಾಜಸಾಹಂಕಾರವೂ, ಅಧಿದೈವ-ಅಧ್ಯಾತ್ಮ-ಅಧಿಭೂತ ಎಂಬ ಭೇದದಿಂದ ಕಲ್ಪಿತವಾದ ದೇವತೆ

---

* ಮೂಲಾಧಾರದಿಂದ ಹುಟ್ಟುವ ನಾದರೂಪವರ್ಣಕ್ಕೆ ಅರ್ಥಬೋಧಕಶಬ್ದ ನಿಷ್ಪತ್ತಿಯವರೆಗೆ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಅವಸ್ಥೆಗಳುಂಟಾಗುತ್ತವೆ. ಪರಾ : ತಾನು ತಿಳಿದುಕೊಂಡ ವಿಷಯವನ್ನು ಇತರರಿಗೆ ಹೇಳಲು ಅದನ್ನು ತಿಳಿಸುವ ಶಬ್ದೋಚ್ಚಾರಣೆಗಾಗಿ ಚೇತನನಿಂದ ಪ್ರೇರಿತವಾದ ಮನಸ್ಸು. ಮಣಿಪೂರ (ನಾಭಿ) ಸ್ಥಿತವಾದ ಅನಲವನ್ನು ಚಲಿಸುವಂತೆ ಮಾಡುವುದು. ಅದರಿಂದ ಚಲಿತವಾದ ಅನಲವು ಆ ಜಾಗದಲ್ಲಿರುವ ಅನಿಲವನ್ನು ಚಲಿಸುವಂತೆ ಮಾಡುವುದು. ಚಲಿತವಾದ ಆ ವಾಯುವಿನಿಂದ ಅಲ್ಲೇ ಸೂಕ್ಷ್ಮರೂಪವಾಗಿ ನಾದವು ಉತ್ಪನ್ನವಾಗುವುದು. ಈ ಸೂಕ್ಷ್ಮರೂಪವಾದ ನಾದಕ್ಕೆ ಪರಾ ಎಂದು ಸಂಜ್ಞೆ. ಪಶ್ಯನ್ತಿ : ಈ ಸೂಕ್ಷ್ಮರೂಪವಾದ ನಾದವು ನಾಭಿಪ್ರದೇಶದವರೆಗೂ ಚಲಿಸಿದಾಗ ಅದರ ಸಂಬಂಧದಿಂದ ಉಂಟಾದ ಶಬ್ದವು ಪಶ್ಯಂತೀ–ಎಂದು ಕರೆಯಲ್ಪಡುವುದು. ಮೂಲಾಧಾರದಿಂದ ಹೊರಟು ಹೃದಯವನ್ನು ಮುಟ್ಟುವ ನಾದ ರೂಪವಾದ ವರ್ಣ. ಮಧ್ಯಮಾ : ಈ ನಾದವು ಹೃದಯದೇಶಕ್ಕೆ ಪ್ರಸರಿಸಿದಾಗ ಅದರ ಸಂಬಂಧದಿಂದ ಉತ್ಪನ್ನವಾಗುವ ಶಬ್ದವು ಮಧ್ಯಮಾ ಎಂಬ ಸಂಜ್ಞೆಯನ್ನು ಹೊಂದುವುದು. ಇದು ಮೂರನೆಯ ಅವಸ್ಥೆ. ಇದು ಧ್ವನ್ಯಾತ್ಮಕವಾದುದರಿಂದ

ಗಳಿಗೆ ಕಾರಣವಾದ ಸಾತ್ತ್ವಿಕಾಹಂಕಾರವೂ ಅವಿದ್ಯೆಯಲ್ಲಡಗಿರುವ ಜನರಿಗೆ ಕಾರಣವಾದ ಪ್ರಧಾನವೂ (ಮೂಲಪ್ರಕೃತಿಯೂ ನೀನೇ ಆಗಿರುವೆ.

**ನಶ್ವರೇಷ್ವಿಹ ಭಾವೇಷು ತದಸಿ ತ್ವಮನಶ್ವರಮ್ ।**
**ಯಥಾ ದ್ರವ್ಯವಿಕಾರೇಷು ದ್ರವ್ಯಮಾತ್ರಂ ನಿರೂಪಿತಮ್ ॥೧೨॥**

ಚಿನ್ನದಸರ, ಬಳೆ, ಗಡಿಗೆ ಮುಂತಾದುವುಗಳು ಚಿನ್ನದ ಮತ್ತು ಮಣ್ಣಿನ ವಿಕಾರಗಳು. ಈ ವಿಕಾರಗಳು ನಶ್ವರವಾದುವುಗಳು. ಅವುಗಳನ್ನು ಕರಗಿಸಿಬಿಟ್ಟರೆ ಪುನಃ ಚಿನ್ನ, ಮಣ್ಣುಗಳೇ ಉಳಿಯುತ್ತವೆ. ಅಂತೆಯೇ ನಾಶವಾಗುವ ಪದಾರ್ಥಗಳಲ್ಲಿ ನಾಶವಿಲ್ಲದೆ ಯಾವುದು ಉಳಿದುಕೊಂಡಿರು ವುದೋ ಅಂತಹ ಪಾರಮಾರ್ಥಿಕವಾದ ಸತ್ತಾಸ್ವರೂಪನು ನೀನೇ ಆಗಿರುವೆ.

**ಸತ್ತ್ವಂ ರಜಸ್ತಮ ಇತಿ ಗುಣಾಸ್ತದ್ವೃತ್ತಯಶ್ಚ ಯಾಃ ।**
**ತ್ವಯ್ಯದ್ಧಾ ಬ್ರಹ್ಮಣಿ ಪರೇ ಕಲ್ಪಿತಾ ಯೋಗಮಾಯಯಾ ॥೧೩॥**

ಪ್ರಭುವೇ! ಸತ್ತ್ವ-ರಜಸ್ತಮೋಗುಣಗಳು ಮತ್ತು ಅವುಗಳ ಪರಿ ಣಾಮಗಳು ಪರಬ್ರಹ್ಮಪರಮಾತ್ಮನಾದ ನಿನ್ನ ಯೋಗಮಾಯೆಯ ಮೂಲಕ ವಾಗಿಯೇ ಕಲ್ಪಿತವಾಗಿವೆ.

**ತಸ್ಮಾನ್ನ ಸನ್ತ್ಯಮೀ ಭಾವಾ ಯರ್ಹಿ ತ್ವಯಿ ವಿಕಲ್ಪಿತಾಃ ।**
**ತ್ವಂ ಚಾಮೀಷು ವಿಕಾರೇಷು ಹ್ಯನ್ಯದಾಽವ್ಯಾವಹಾರಿಕಃ ॥೧೪॥**

ನಿರ್ವಿಕಾರನಾದ ನಿನ್ನಲ್ಲಿ ಕಲ್ಪಿತವಾದಾಗ ಮತ್ತು ಈ ವಿಕಾರಗಳಲ್ಲಿ ನೀನು ಅನುಪ್ರವೇಶಮಾಡಿದಾಗ ಈ ವಿಕಾರಗಳು ಸತ್ಯವಾಗಿರುವಂತೆಯೇ ತೋರುತ್ತವೆ. ವಾಸ್ತವವಾಗಿ ಜಗದ್ವಿಕಾರಗಳು ಸತ್ಯವಲ್ಲ. ಪರಮಕಾರಣ ನಾದ ನೀನು ಅವುಗಳಲ್ಲಿ ಅನುಗತನಾಗಿರುವವರೆಗೂ ಅವು ವ್ಯಾವಹಾರಿಕ

---

ಕಿವಿಗಳನ್ನು ಮುಚ್ಚಿಕೊಂಡರೆ ಕದಾಚಿತ್ ನಮಗೂ ಕೇಳಲು ಸಾಧ್ಯವಾಗಬಹುದು. ವೈಖರೀ : ಬಾಯವರೆಗೂ ಬಂದ ಆ ಧ್ವನಿಯು ಕಂಠದೇಶಕ್ಕೆ ಬಂದು ತಲೆಯವರೆಗೂ ಹೋದಾಗ ತಲೆಯ ಹೊಡೆತದಿಂದ ಹಿಂತಿರುಗಿ ಮುಖದಲ್ಲಿ ತಾನು ಹುಟ್ಟುವ ಎಂಟುಸ್ಥಾನಗಳಲ್ಲಿ ಅಭಿಹತನಾಗಿ ಹುಟ್ಟುವ ಶಬ್ದವು ವೈಖರೀ ಅವಸ್ಥೆಯುಳ್ಳದ್ದು. ಈ ವೈಖರೀ ಅವಸ್ಥೆಯಲ್ಲಿ ಶಬ್ದನಿಷ್ಪತ್ತಿಯುಂಟಾಗಿ ಆ ಶಬ್ದವು ಅರ್ಥಬೋಧನ ಸಮರ್ಥವಾಗುವುದು. **ವೈಖರೀ ಶಬ್ದನಿಷ್ಪತ್ತಿಃ ಮಧ್ಯಮಾ ಶ್ರುತಿಗೋಚರಾ । ದ್ಯೋತಿತಾರ್ಥಾ ತು ಪಶ್ಯನ್ತೀ ಸೂಕ್ಷ್ಮಾ ವಾಗನಪಾಯನೀ ॥**

ಸತ್ಯವಾಗಿ ತೋರುವುವು. ವ್ಯವಹಾರವಡಗಿದ ಕೂಡಲೇ ವ್ಯವಹಾರಕ್ಕೊಳಪಡದ ನೀನು ಮಾತ್ರ ಉಳಿಯುವೆ. ನೀನಿಲ್ಲದೇ ಪ್ರಪಂಚವಿಲ್ಲ. ಪ್ರಪಂಚವಿಲ್ಲದೇ ಪರಬ್ರಹ್ಮಸ್ವರೂಪದಿಂದ ನೀನಿರುವೆ.*

**ಗುಣಪ್ರವಾಹ ಏತಸ್ಮಿನ್ನಬುಧಾಸ್ತ್ವಖಿಲಾತ್ಮನಃ ।**
**ಗತಿಂ ಸೂಕ್ಷ್ಮಾವಬೋಧೇನ ಸಂಸರನ್ತೀಹ ಕರ್ಮಭಿಃ ॥೧೫॥**

ಈ ಜಗತ್ತು ಸತ್ತ್ವ-ರಜಸ್ಸು ಮತ್ತು ತಮಸ್ಸುಗಳೆಂಬ ಗುಣಗಳ ಪ್ರವಾಹದಿಂದ ತುಂಬಿಹೋಗಿದೆ. ದೇಹ-ಇಂದ್ರಿಯ ಅಂತಃಕರಣ-ಸುಖ-ದುಃಖ-ರಾಗ-ಲೋಭಾದಿಗಳೇ ಈ ಮೂರು ಗುಣಗಳ ಕಾರ್ಯವಾಗಿದೆ. ಅಜ್ಞಾನಿಯಾದ ಯಾವನು ನಿನ್ನ ಸರ್ವಾತ್ಮಕವಾದ ಸೂಕ್ಷ್ಮಸ್ವರೂಪವನ್ನು ತಿಳಿಯುವುದಿಲ್ಲವೋ ಅಂತಹವನು ದೇಹಾಭಿಮಾನರೂಪವಾದ ಅಜ್ಞಾನದ ಕಾರಣದಿಂದ ನಾನಾಪ್ರಕಾರವಾದ ಕರ್ಮಗಳಲ್ಲಿ ತೊಡಗಿ ಹುಟ್ಟು-ಸಾವುಗಳೆಂಬ ಚಕ್ರದಲ್ಲಿ ಸಿಕ್ಕಿಹಾಕಿಕೊಂಡು ನರಳುತ್ತಿರುತ್ತಾನೆ.

**ಯದೃಚ್ಛಯಾ ನೃತಾಂ ಪ್ರಾಪ್ಯ ಸುಕಲ್ಪಾಮಿಹ ದುರ್ಲಭಾಮ್ ।**
**ಸ್ವಾರ್ಥೇ ಪ್ರಮತ್ತಸ್ಯ ವಯೋ ಗತಂ ತ್ವನ್ಮಾಯಯೇಶ್ವರ ॥೧೬॥**

ಪರಮೇಶ್ವರನೇ! ನನ್ನ ಶುಭಪ್ರಾರಬ್ಧಕರ್ಮಕ್ಕೆ ಅನುಸಾರವಾಗಿ ಅಥವಾ ನಿನ್ನ ಇಚ್ಛೆಗೆ ಅನುಸಾರವಾಗಿ ಇಂದ್ರಿಯ ಸಾಮರ್ಥ್ಯದಿಂದ ಯುಕ್ತವಾದ ಅತ್ಯಂತ ದುರ್ಲಭವಾದ ಮನುಷ್ಯಶರೀರವನ್ನೇನೋ ಪಡೆದು

---

* ಇದೇ ಅಭಿಪ್ರಾಯವಿರುವ ಶ್ಲೋಕಗಳು ಗೀತೆಯಲ್ಲಿ ಹೀಗಿವೆ : (ಅಧ್ಯಾಯ-೯)

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥೪॥**

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥೫॥**

ಅವ್ಯಕ್ತರೂಪನಾದ ನನ್ನಿಂದ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆ. ಇಲ್ಲಿರುವ ಸಮಸ್ತಜೀವರಾಶಿಗಳೂ ನನ್ನಲ್ಲಿವೆ. ನಾನು ಅವುಗಳಲ್ಲಿಲ್ಲ. ನಿಜವಾಗಿ ಹೇಳಬೇಕೆಂದರೆ ಯಾವ ಜೀವರಾಶಿಗಳೂ ನನ್ನಲ್ಲಿಲ್ಲ. ಪರಮಾಶ್ಚರ್ಯಕರವಾದ ನನ್ನ ಈ ಯೋಗೈಶ್ವರ್ಯವನ್ನು ನೀನು ನೋಡು. ಜೀವರಾಶಿಗಳನ್ನು ಕಾಪಾಡುವವನು ನಾನೇ ಆದರೂ ಅವುಗಳಲ್ಲಿ ನಾನಿಲ್ಲ. (ಅವುಗಳನ್ನು ಅವಲಂಬಿಸಿಲ್ಲ.)

ಕೊಂಡಿರುತ್ತೇನೆ. ಆದರೆ ನಿನ್ನ ಮಾಯೆಗೆ ಒಳಗಾಗಿ ಸಾರ್ಥಕಸಾಧನೆಯಲ್ಲಿ ಪ್ರಮತ್ತವಾಗಿರುವ ನನ್ನ ಆಯುಷ್ಯವೂ ಕೂಡ ವ್ಯರ್ಥವಾಗಿ ಕಳೆದು ಹೋಗುತ್ತಿದೆ.

**ಅಸಾವಹಂ ಮಮೈವೈತೇ ದೇಹೇ ಚಾಸ್ಯಾನ್ವಯಾದಿಷು ।**
**ಸ್ನೇಹಪಾಶೈರ್ನಿಬಧ್ನಾತಿ ಭವಾನ್ ಸರ್ವಮಿದಂ ಜಗತ್ ॥೧೭॥**

'ಈ ಶರೀರವು ನನ್ನದು'–ಎಂದು ದೇಹದಲ್ಲಿಯೂ ಮತ್ತು 'ಇವರು ನಮ್ಮವರು'–ಎಂದು ದೇಹಾನುಬಂಧಿಗಳಾದ ಪತ್ನೀ-ಪುತ್ರರಲ್ಲಿಯೂ ಅಹಂಕಾರ, ಮಮಕಾರಗಳನ್ನು ಕಲ್ಪಿಸಿ ಈ ಅಖಂಡವಾದ ಜಗತ್ತನ್ನೇ ನೀನು ಸ್ನೇಹಪಾಶದಿಂದ ಬಂಧಿಸಿಬಿಟ್ಟಿರುವೆ.

**ಯುವಾಂ ನ ನಃ ಸುತೌ ಸಾಕ್ಷಾತ್ಪ್ರಧಾನಪುರುಷೇಶ್ವರೌ ।**
**ಭೂಭಾರಕ್ಷತ್ರಕ್ಷಪಣ ಅವತೀರ್ಣೌ ತಥಾಽತ್ಥ ಹ ॥೧೮॥**

ನೀವಿಬ್ಬರೂ ನನ್ನ ಮಕ್ಕಳಲ್ಲವೆಂಬುದನ್ನು ನಾನು ತಿಳಿದಿರುತ್ತೇನೆ. ಪ್ರಕೃತಿಗೂ-ಜೀವಕೋಟಿಗೂ ಸಾಕ್ಷಾತ್ ಈಶ್ವರರಾಗಿರುವಿರಿ. ಭೂಭಾರ ಭೂತರಾದ ಕ್ಷತ್ರಿಯರನ್ನು ವಿನಾಶಮಾಡುವ ಸಲುವಾಗಿಯೇ ನೀವು ಈ ಭುವಿಯಲ್ಲಿ ಅವತರಿಸಿರುವಿರಿ. ಕೃಷ್ಣ! ನೀನೇ ಈ ವಿಷಯವನ್ನು ನನಗೆ ಹೇಳಿರುವೆ.

**ತತ್ತೇ ಗತೋಽಸ್ಮ್ಯರಣಮದ್ಯ ಪದಾರವಿನ್ದ-**
**ಮಾಪನ್ನ ಸಂಸೃತಿಭಯಾಪಹಮಾರ್ತಬನ್ಧೋ ।**
**ಏತಾವತಾಲಮಲಮಿನ್ದ್ರಿಯಲಾಲಸೇನ**
**ಮರ್ತ್ಯಾತ್ಮದೃಕ್ ತ್ವಯಿ ಪರೇ ಯದಪತ್ಯಬುದ್ಧಿಃ ॥**

ಹೇ ದೀನಬಂಧುವೇ! ಶರಣಾಗತವತ್ಸಲನೇ! ಶರಣಾಗತನ ಸಂಸಾರ ಭಯವನ್ನು ನೀಗುವ ನಿನ್ನ ದಿವ್ಯವಾದ ಚರಣಾರವಿಂದಗಳಲ್ಲಿ ಶರಣಾಗತ ನಾಗುತ್ತೇನೆ. ನನಗಿನ್ನು ಈ ಪ್ರಾಪಂಚಿಕವಿಷಯಗಳಲ್ಲಿ ಭೋಗಲಾಲಸೆಯನ್ನು ಸಾಕುಮಾಡು. ನಶ್ವರವಾದ ಈ ಶರೀರವನ್ನೇ ನಾನೆಂದು ಭಾವಿಸಿ ದೇಹಾತ್ಮಬುದ್ಧಿಯನ್ನುಹೊಂದಿ ಸರ್ವೇಶ್ವರನಾದ ನಿನ್ನನ್ನು ನನ್ನ ಮಗನೆಂದೇ ಭಾವಿಸಿಕೊಂಡುಬಿಟ್ಟೆನು.

**ಸೂತೀಗೃಹೇ ನನು ಜಗಾದ ಭವಾನಜೋ ನೌ**
**ಸಂಜಜ್ಞ ಇತ್ಯನುಯುಗಂ ನಿಜಧರ್ಮಗುಪ್ತ್ಯೈ ।**
**ನಾನಾತನೂರ್ಗಗನವದ್ವಿದಧಜ್ಜಹಾಸಿ**
**ಕೋ ವೇದ ಭೂಮ್ನ ಉರುಗಾಯ ವಿಭೂತಿಮಾಯಾಮ್ ॥**

ಶ್ರೀಹರಿಯೇ! ಹುಟ್ಟುಸಾವುಗಳಿಲ್ಲದ ನೀನು ನಿನ್ನ ಧರ್ಮವನ್ನು ಪರಿಪಾಲಿಸುವುದಕ್ಕಾಗಿ ಪ್ರತಿಯುಗದಲ್ಲಿಯೂ ನಿಮ್ಮಿಬ್ಬರಿಗೂ ಮಗನಾಗಿ ಹುಟ್ಟುವೆನು–ಎಂದು ನೀನು ಹುಟ್ಟಿದೊಡನೆಯೇ ಪ್ರಸವಗೃಹದಲ್ಲಿ ನಮ್ಮಿಬ್ಬರಿಗೂ ಹೇಳಿದೆಯಲ್ಲವೇ? ಆಕಾಶದಂತೆ ನಿರ್ಲಿಪ್ತನಾಗಿರುವ ನೀನು ನಾನಾ ಅವತಾರಗಳನ್ನು ಧರಿಸುವೆ ಮತ್ತು ಪರಿತ್ಯಜಿಸುವೆ. ವ್ಯಾಪಕವಾದ ನಿನ್ನ ಲೀಲೈಶ್ವರ್ಯಗಳನ್ನು ಯಾರು ತಾನೇ ತಿಳಿದಿರುತ್ತಾರೆ?"

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ವಸುದೇವನ ಈ ಮಾತುಗಳನ್ನು ಕೇಳಿ ಯದುಕುಲತಿಲಕನಾದ, ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನು ವಿನಯದಿಂದ ತಲೆತಗ್ಗಿಸಿಕೊಂಡು ನಸುನಗುತ್ತಾ ಸುಮಧುರವಾದ ಮಾತಿನಿಂದ ಹೇಳಿದನು :

"ತಂದೆಯೇ! ನಾವು ನಿನ್ನ ಮಕ್ಕಳೇ ಆಗಿದ್ದೇವೆ. ನಮ್ಮನ್ನು ಕುರಿತೇ ನೀನು ಈ ತತ್ತ್ವಜ್ಞಾನದ ಉಪದೇಶವನ್ನು ಮಾಡಿರುವೆ. ನೀನು ಹೇಳಿರುವ ಒಂದೊಂದು ಮಾತು ಕೂಡ ಯುಕ್ತಿಯುಕ್ತವಾಗಿರುವುದೆಂದೇ ನಾವು ಭಾವಿಸಿದ್ದೇವೆ.

**ಅಹಂ ಯೂಯಮಸಾವಾರ್ಯ ಇಮೇ ಚ ದ್ವಾರಕೌಕಸಃ ।**
**ಸರ್ವೇಽಪ್ಯೇವಂ ಯದುಶ್ರೇಷ್ಠ ವಿಮೃಶ್ಯಾಃ ಸಚರಾಚರಮ್ ॥೨೩॥**

ಯದುಶ್ರೇಷ್ಠನೇ! ನಾನು, ನೀವು, ನಮ್ಮ ಅಣ್ಣನಾದ ಈ ಬಲರಾಮ, ದ್ವಾರಕಾಪಟ್ಟಣದ ಈ ಪ್ರಜೆಗಳು, ಸ್ಥಾವರ-ಜಂಗಮಾತ್ಮಕವಾದ ಜಗತ್ತು ಸಮಸ್ತವೂ ಬ್ರಹ್ಮವಸ್ತುವೆಂದೇ ವಿಮರ್ಶಿಸಿ ತಿಳಿಯಬೇಕು.

**ಆತ್ಮಾ ಹ್ಯೇಕಃ ಸ್ವಯಂಜ್ಯೋತಿರ್ನಿತ್ಯೋಽನ್ಯೋ ನಿರ್ಗುಣೋ ಗುಣೈಃ**
**ಆತ್ಮಸೃಷ್ಟೈಸ್ತತ್ಕೃತೇಷು ಭೂತೇಷು ಬಹುಧೇಯತೇ ॥೨೪॥**

ಅದ್ವಿತೀಯನೂ, ಸ್ವಯಂಜ್ಯೋತಿಯೂ ಆಗಿರುವ ಆತ್ಮನೊಬ್ಬನೇ ಇರತಕ್ಕವನು. ತನ್ನಿಂದಲೇ ಸೃಷ್ಟಿಸಲ್ಪಟ್ಟ ಸತ್ತ್ವಾದಿಗುಣಗಳಿಂದ ಪಂಚ ಭೂತಾತ್ಮಕಶರೀರಗಳಲ್ಲಿ ಜೀವರೂಪದಿಂದ ಅನುಪ್ರವೇಶಮಾಡಿ ಒಬ್ಬನೇ ಆಗಿದ್ದರೂ ಅನೇಕರಂತೆಯೂ, ಸ್ವಯಂಪ್ರಕಾಶನಾದರೂ ದುರ್ದರ್ಶನ ನಾದರೂ ನೋಡಬಹುದಾದವನಂತೆಯೂ, ಶಾಶ್ವತನಾದರೂ ಅನಿತ್ಯ ನಂತೆಯೂ, ವಿಲಕ್ಷಣನಾದರೂ ವಿಲಕ್ಷಣನಲ್ಲದವನಂತೆಯೂ, ನಿರ್ಗುಣ ನಾದರೂ ಸಗುಣನಂತೆಯೂ ಹಲವು ಬಗೆಯಾಗಿ ಕಾಣಿಸಿಕೊಳ್ಳುತ್ತಾನೆ.

**ಖಂ ವಾಯುರ್ಜ್ಯೋತಿರಾಪೋ ಭೂಸ್ತತ್ಕೃತೇಷು ಯಥಾಶಯಮ್ ।**
**ಆವಿಸ್ತಿರೋಽಲ್ಪಭೂರ್ಯೇಕೋ ನಾನಾತ್ವಂ ಯಾತ್ಯಸಾವಪಿ ॥೨೫॥**

ಪಂಚಮಹಾಭೂತಗಳಾದ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿಗಳು ಅವುಗಳ ವಿಕಾರಗಳೇ ಆದ ಘಟ-ಪಟಾದಿವಸ್ತುಗಳಲ್ಲಿ ಉಪಾಧಿ ಗನುಸಾರವಾಗಿ ಆವಿರ್ಭವಿಸುತ್ತವೆ. ಪುನಃ ಮರೆಯಾಗುತ್ತವೆ. ದೊಡ್ಡದಾಗಿ ಕಾಣುತ್ತವೆ. ಚಿಕ್ಕದಾಗಿಯೂ ಕಾಣುತ್ತವೆ. ಆದರೆ ವಾಸ್ತವವಾಗಿ ಅವೆಲ್ಲವೂ ಒಂದೇ ಆಗಿರುತ್ತವೆ. (ನೀರನ್ನು ಸಾವಿರಾರು ತಂಬಿಗೆಗಳಲ್ಲಿ ತುಂಬಿಡಬಹುದು. ಅದಕ್ಕೆ ಸಾವಿರಾರು ತಂಬಿಗೆ ನೀರು ಎಂಬ ಹೆಸರು ಬರುತ್ತದೆ. ಅದೆಲ್ಲವನ್ನೂ ಒಂದು ಕಡಾಯಿಗೆ ಬಗ್ಗಿಸಿಬಿಟ್ಟರೆ ಅದೆಲ್ಲವೂ ಒಂದೇ ಆಗುತ್ತದೆ. ಒಂದು ದೀಪದಿಂದ ಸಾವಿರಾರು ದೀಪಗಳು ಹೊತ್ತಿಕೊಳ್ಳುತ್ತವೆ. ಕಡೆಗೆ ಮಹಾಜ್ಯೋತಿಯಲ್ಲೇ ಎಲ್ಲವೂ ಐಕ್ಯವಾಗಿ ಹೋಗುತ್ತವೆ. ಒಂದೇ ಎಂಬುದು ಸಿದ್ಧಾಂತ. ನಾನಾತ್ವವೆಂಬುದು ಕಲ್ಪನೆ. ಹಾಗೆಯೇ ಏಕಮೇವಾದ್ವಿತೀಯನಾದ ಆತ್ಮನೂ ಚರಾ-ಚರಪ್ರಾಣಿಗಳಲ್ಲಿ ಅನುಪ್ರವೇಶಮಾಡಿ ಬಹುರೂಪ ನಾಗಿರುವಂತೆ ಕಾಣಿಸಿಕೊಳ್ಳುತ್ತಾನೆ. ಆದರೆ ಅವನು ಒಬ್ಬನೇ ಆಗಿದ್ದಾನೆ. ಈ ದೃಷ್ಟಿಯಿಂದ 'ನಾನೇ ಎಲ್ಲವೂ ಆಗಿದ್ದೇನೆ' ಎಂಬ ನಿನ್ನ ಮಾತು ಸಮುಚಿತವಾಗಿಯೇ ಇವೆ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಭಗವಾನ್ ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ವಸುದೇವನಿಗೆ ನಾನಾತ್ವಬುದ್ಧಿಯು ಹೊರಟುಹೋಯಿತು.

ಬ್ರಹ್ಮಾನಂದದಲ್ಲಿ ಮುಳುಗಿಹೋದನು. ಮಾತು ನಿಂತುಹೋಯಿತು. ಮನಸ್ಸೂ ನಿರ್ವಿಷಯವಾಯಿತು. ಕುರುಶ್ರೇಷ್ಠನೇ! ಆ ಸಮಯದಲ್ಲಿ ಸಮಸ್ತದೇವತಾಸ್ವರೂಪಳಾದ ದೇವಕಿಯೂ ಅಲ್ಲಿಯೇ ಕುಳಿತಿದ್ದಳು. ಅವಳು ಬಹಳ ಹಿಂದೆಯೇ ತನ್ನ ಮಕ್ಕಳಾದ ಶ್ರೀಕೃಷ್ಣ-ಬಲರಾಮರು ಗುರು ಪುತ್ರನನ್ನು ಯಮಲೋಕದಿಂದ ಕರೆದು ತಂದರೆಂಬ ವಾರ್ತೆಯನ್ನು ಕೇಳಿ ಅಚ್ಚರಿಗೊಂಡಿದ್ದಳು. ಈ ಸಮಯದಲ್ಲಿ ಅವಳಿಗೆ ಕಂಸನಿಂದ ಕೊಲ್ಲಲ್ಪಟ್ಟಿದ್ದ ತನ್ನ ಆರು ಹಸುಳೆಗಳ ಸ್ಮರಣೆಯುಂಟಾಯಿತು. ಒಡನೆಯೇ ಮನಸ್ಸು ಕಳ ವಳಗೊಂಡಿತು. ಕಣ್ಣುಗಳಲ್ಲಿ ನೀರುತುಂಬಿಕೊಂಡಿತು. ಕರುಣಾಜನಕವಾದ ಮಾತುಗಳಿಂದ ಆಕೆಯು ಶ್ರೀಕೃಷ್ಣ-ಬಲರಾಮರನ್ನು ಸಂಬೋಧಿಸಿ ಹೇಳಿದಳು:

**ರಾಮ ರಾಮಾಪ್ರಮೇಯಾತ್ಮನ್ ಕೃಷ್ಣ ಯೋಗೇಶ್ವರೇಶ್ವರ ।**
**ವೇದಾಹಂ ವಾಂ ವಿಶ್ವಸೃಜಾಮೀಶ್ವರಾವಾದಿಪೂರುಷೌ ॥೨೯॥**

"ಅಪ್ರಮೇಯಾತ್ಮನಾದ ಲೋಕಾಭಿರಾಮನಾದ ಬಲರಾಮನೇ! ಯೋಗೇಶ್ವರರಿಗೂ ಈಶ್ವರನಾದ ಶ್ರೀಕೃಷ್ಣನೇ! ನೀವಿಬ್ಬರೂ ಪ್ರಜಾಪತಿಗಳಿಗೂ ಈಶ್ವರರಾದ ಆದಿ ಪುರುಷರೆಂಬುದನ್ನು ನಾನು ತಿಳಿದಿರುತ್ತೇನೆ.

**ಕಾಲವಿಧ್ವಸ್ತಸತ್ತ್ವಾನಾಂ ರಾಜ್ಞಾಮುಚ್ಛಾಸ್ತ್ರವರ್ತಿನಾಮ್ ।**
**ಭೂಮೇರ್ಭಾರಾಯಮಾಣಾನಾಮವತೀರ್ಣೌ ಕಿಲಾದ್ಯ ಮೇ ॥೩೦॥**

ಕಾಲದ ಮಹಿಮೆಯಿಂದ ವಿಧ್ವಸ್ತವಾದ ಸತ್ತ್ವಗುಣವುಳ್ಳ (ಸತ್ತ್ವ ಗುಣದಿಂದ ಹೀನರಾದ, ರಾಜಸ-ತಾಮಸಿಗಳಾದ) ಈ ಕಾರಣದಿಂದಲೇ ಶಾಸ್ತ್ರೀಯನಿರ್ದೇಶಗಳನ್ನು ಉಲ್ಲಂಘಿಸುತ್ತಿರುವ, ಸ್ವೇಚ್ಛಾಚಾರಿಗಳಾದ, ಭೂಮಿಗೆ ಭಾರವಾಗಿ ಪರಿಣಮಿಸಿರುವ ರಾಜರನ್ನು ಸಂಹರಿಸುವ ಸಲು ವಾಗಿಯೇ ನೀವಿಬ್ಬರೂ ನನ್ನ ಗರ್ಭದಲ್ಲಿ ಅವತರಿಸಿರುವರೆಂಬ ವಿಷಯ ವನ್ನೂ ನಾನು ತಿಳಿದಿರುತ್ತೇನೆ.

**ಯಸ್ಯಾಂಶಾಂಶಾಂಶಭಾಗೇನ ವಿಶ್ವೋತ್ಪತ್ತಿಲಯೋದಯಾಃ ।**
**ಭವನ್ತಿ ಕಿಲ ವಿಶ್ವಾತ್ಮಂಸ್ತಂ ತ್ವಾದ್ಯಾಹಂ ಗತಿಂ ಗತಾ ॥೩೧॥**

ವಿಶ್ವಾತ್ಮನೇ! ಶ್ರೀಕೃಷ್ಣ! ನಿನ್ನ ಪುರುಷೋತ್ತಮರೂಪದ ಅಂಶ ದಿಂದ ಹುಟ್ಟಿದ ಮಾಯೆಯಿಂದ ಗುಣಗಳ ಉತ್ಪತ್ತಿಯಾಗುತ್ತದೆ. ಅವುಗಳ

ಲೇಶಮಾತ್ರವಾದ ಅಂಶದಿಂದ ಜಗತ್ತಿನ ಉತ್ಪತ್ತಿ-ವಿಕಾಸ ಮತ್ತು ಲಯಗಳಾಗುತ್ತವೆ. ಹೀಗೆ ನಿನ್ನ ಅಂಶದ ಅಂಶದಿಂದಲೇ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಾಗುತ್ತವೆ. ನಿನ್ನ ಮಹಿಮೆಯು ಅಪಾರವಾದುದು ; ಅಪ್ರಮೇಯವಾದುದು. ಈಗ ನಾನು ಅಂತಃಕರಣಪೂರ್ವಕವಾಗಿ ನಿನಗೆ ಶರಣಾಗತಳಾಗಿದ್ದೇನೆ.

ನಂದಕಿಶೋರ! ನಿಮ್ಮ ಗುರುಗಳಾದ ಸಾಂದೀಪನಿಗಳ ಮಗನು ಮರಣಹೊಂದಿ ಬಹಳ ದಿವಸಗಳೇ ಕಳೆದುಹೋಗಿದ್ದುವು. ಅವರ ಆಜ್ಞೆಗೆ ಅನುಸಾರವಾಗಿ ಮತ್ತು ಕಾಲದ ಪ್ರೇರಣೆಯಿಂದ ನೀವಿಬ್ಬರೂ ಯಮರಾಜನ ಪಟ್ಟಣಕ್ಕೆ ಹೋಗಿ ಅವನ ವಶದಲ್ಲಿದ್ದ ಗುರುಪುತ್ರನನ್ನು ಕರೆತಂದು ನಿಮ್ಮ ಗುರುಗಳಿಗೆ ಗುರುದಕ್ಷಿಣೆಯ ರೂಪದಲ್ಲಿ ಸಮರ್ಪಿಸಿದಿರಿ—ಎಂಬುದನ್ನು ನಾನು ಕೇಳಿದ್ದೇನೆ. ಮಹಾಮಹಾಯೋಗೇಶ್ವರರಿಗೂ ಈಶ್ವರರಾದ ನೀವು ನನಗೂ ಅಂತಹುದೇ ಕಾರ್ಯವನ್ನು ಮಾಡಿಕೊಡಬೇಕಾಗಿದೆ. ನಿಮ್ಮಿಂದ ಕರೆತರಲ್ಪಡುವ, ಕಂಸನಿಂದ ಕೊಲ್ಲಲ್ಪಟ್ಟ ನನ್ನ ಮಕ್ಕಳನ್ನು ನಾನು ನೋಡುವ ಅಪೇಕ್ಷೆಯುಳ್ಳವಳಾಗಿದ್ದೇನೆ."

ಶುಕಮಹರ್ಷಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ದೇವಕೀದೇವಿಯ ಈ ಮಾತುಗಳನ್ನು ಕೇಳಿ ಶ್ರೀಕೃಷ್ಣ-ಬಲರಾಮರಿಬ್ಬರೂ ಯೋಗಮಾಯೆಯನ್ನು ಆಶ್ರಯಿಸಿ ಸುತಲ* ಲೋಕವನ್ನು ಪ್ರವೇಶಿಸಿದರು.

ಜಗತ್ತಿಗೇ ಆತ್ಮಸ್ವರೂಪನಾದ, ತಮಗೂ ಇಷ್ಟದೇವತೆಯಾದ ಶ್ರೀಕೃಷ್ಣಪರಮಾತ್ಮನು ಬಲರಾಮನೊಡನೆ ತನ್ನ ಸುತಲಲೋಕಕ್ಕೆ ಬಂದುದನ್ನು ನೋಡಿದೊಡನೆಯೇ ಬಲಿಚಕ್ರವರ್ತಿಯ ಮನಸ್ಸು ಆನಂದ ಸಾಗರದಲ್ಲಿ ಮುಳುಗಿಹೋಯಿತು. ಒಡನೆಯೇ ಬಲಿಯು ಪರಿವಾರಸಮೇತ

---

* ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ ಮತ್ತು ಪಾತಾಲಗಳೆಂಬ ಸಪ್ತ ಪಾತಾಲಲೋಕಗಳಲ್ಲಿ ಮೂರನೆಯ ಲೋಕ ಸುತಲ. ಇದನ್ನು ಆರನೆಯ ಲೋಕವೆಂದೂ ಕೆಲವರು ಹೇಳುತ್ತಾರೆ. ಇದು ಬಲಿಚಕ್ರವರ್ತಿಯ ವಾಸ ಸ್ಥಾನ.

ನಾಗಿ ಮೇಲೆದ್ದು ನಿಂತು ಭಗವಂತನ ಪಾದಾರವಿಂದಗಳಲ್ಲಿ ಸಾಷ್ಟಾಂಗ ಪ್ರಣಾಮಮಾಡಿದನು. ಮಹಾನಂದಭರಿತನಾಗಿದ್ದ ದೈತ್ಯರಾಜನಾದ ಬಲಿಯು ಶ್ರೀಕೃಷ್ಣ-ಬಲರಾಮರನ್ನು ಶ್ರೇಷ್ಠವಾದ ಸಿಂಹಾಸನಗಳಲ್ಲಿ ಕುಳ್ಳಿರಿಸಿದನು. ಅವರು ಸುಖಾಸೀನರಾದನಂತರ ಅವರಿಬ್ಬರ ದಿವ್ಯಪಾದಾರವಿಂದಗಳನ್ನು ತೊಳೆದು ಬ್ರಹ್ಮಪರ್ಯಂತವಾಗಿ ಸಮಸ್ತಜಗತ್ತನ್ನೂ ಪವಿತ್ರಗೊಳಿಸಲು ಸಮರ್ಥವಾದ ಆ ದಿವ್ಯಚರಣತೀರ್ಥವನ್ನು ಪರಿವಾರದವರ ತಲೆಗಳ ಮೇಲೂ ಚುಮುಕಿಸಿ ತಾನೂ ತನ್ನ ತಲೆಯಲ್ಲಿ ಭಕ್ತಿಭಾವದಿಂದ ಧರಿಸಿದನು. ಬಳಿಕ ದೈತ್ಯರಾಜನು ಶ್ರೀಕೃಷ್ಣ-ಬಲರಾಮರನ್ನು ಬಹುಮೂಲ್ಯವಾದ ವಸ್ತುಗಳಿಂದಲೂ, ಆಭರಣಗಳಿಂದಲೂ, ಚಂದನ-ತಾಂಬೂಲ-ಧೂಪ-ದೀಪಗಳಿಂದಲೂ ಸಮಾರಾಧಿಸಿ, ಮೃಷ್ಟಾನ್ನವನ್ನೂ ಭೋಜನ ಮಾಡಿಸಿ ತನ್ನದೆಂದೆನಿಸಿದ್ದ ರಾಜ್ಯ-ಸಮಸ್ತಪರಿವಾರ-ಬೊಕ್ಕಸ ಮತ್ತು ಶರೀರವನ್ನು ಕೂಡ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಸಮರ್ಪಿಸಿಬಿಟ್ಟನು.

ಪರೀಕ್ಷಿತಮಹಾರಾಜ! ಭಕ್ತಿಪರವಶನಾದ ದೈತ್ಯರಾಜನು ಬಾರಿ-ಬಾರಿಗೂ ಭಗವಂತನ ಚರಣಕಮಲಗಳನ್ನು ವಕ್ಷಃಸ್ಥಳದಲ್ಲಿಯೂ ತಲೆಯ ಮೇಲೂ ಧರಿಸಿ ಆತ್ಮಾನಂದವನ್ನು ಅನುಭವಿಸುತ್ತಿದ್ದನು. ಕಣ್ಣುಗಳಿಂದ ಆನಂದಬಾಷ್ಪವು ಧಾರಾಕಾರವಾಗಿ ಸುರಿಯುತ್ತಿದ್ದಿತು. ರೋಮಾಂಚನ ವುಂಟಾಗಿ ರೋಮಕೋಟಿಗಳು ನಿಮಿರಿನಿಂತಿದ್ದುವು. ಗದ್ಗದಕಂಠದಿಂದ ಭಗವಂತನನ್ನು ಸ್ತೋತ್ರಮಾಡತೊಡಗಿದನು.

**ನಮೋಽನನ್ತಾಯ ಬೃಹತೇ ನಮಃ ಕೃಷ್ಣಾಯ ವೇಧಸೇ ।**
**ಸಾಂಖ್ಯ ಯೋಗವಿತಾನಾಯ ಬ್ರಹ್ಮಣೇ ಪರಮಾತ್ಮನೇ ॥೩೯॥**

“ಬಲದೇವ! ನೀನು ಅನಂತನಾಗಿರುವೆ. ಮಹತೋಮಹೀಯನೂ ಆಗಿರುವೆ. ಜಗತ್ತನ್ನು ತಲೆಯಲ್ಲಿ ಧರಿಸಿರುವ ಶೇಷನೇ ನಿನ್ನಲ್ಲಿ ಅಂತ ರ್ಭೂತನಾಗಿದ್ದಾನೆ. ಸಚ್ಚಿದಾನಂದಸ್ವರೂಪಿಯಾದ ಕೃಷ್ಣನೇ! ಸಕಲ ಜಗತ್ತನ್ನೂ ನೀನೇ ಸೃಷ್ಟಿಮಾಡಿರುವೆ. ಜ್ಞಾನಯೋಗ-ಭಕ್ತಿಯೋಗಗಳ ಪ್ರವರ್ತಕನು ನೀನೇ ಆಗಿರುವೆ. ಪರಬ್ರಹ್ಮಪರಮಾತ್ಮನೇ ನೀನಾಗಿರುವೆ. ನಾನು ನಿಮ್ಮಿಬ್ಬರನ್ನೂ ನಮಸ್ಕರಿಸುತ್ತೇನೆ.

**ದರ್ಶನಂ ವಾಂ ಹಿ ಭೂತಾನಾಂ ದುಷ್ಪ್ರಾಪಂ ಚಾಪ್ಯದುರ್ಲಭಮ್ ।**
**ರಜಸ್ತಮಃಸ್ವಭಾವಾನಾಂ ಯನ್ನಃ ಪ್ರಾಪ್ತೌ ಯದೃಚ್ಛಯಾ ॥೪೦॥**

ನಿಮ್ಮ ದರ್ಶನವು ಪ್ರಾಣಿಮಾತ್ರಕ್ಕೆ ಅತ್ಯಂತದುರ್ಲಭವಾದುದು. ಆದರೂ ನಿಮ್ಮ ಕೃಪೆಯಿಂದಾಗಿ ನಿಮ್ಮ ದಿವ್ಯದರ್ಶನವು ನಮಗೆ ಸುಲಭವಾಗಿ ಲಭಿಸಿದೆ. ನೀವಿಂದು ಕೃಪೆದೋರಿ ರಜಸ್ತಮೋಗುಣಗಳಾದ, ದೈತ್ಯರಾದ ನಮಗೂ ದಿವ್ಯದರ್ಶನವನ್ನು ನೀಡಲು ಸ್ವೇಚ್ಛೆಯಿಂದಲೇ ಬಂದಿರುವಿರಿ.

**ದೈತ್ಯದಾನವಗನ್ಧರ್ವಾಃ ಸಿದ್ಧವಿದ್ಯಾಧ್ರಚಾರಣಾಃ ।**
**ಯಕ್ಷರಕ್ಷಃಪಿಶಾಚಾಶ್ಚ ಭೂತಪ್ರಮಥನಾಯಕಾಃ ॥೪೧॥**

**ವಿಶುದ್ಧಸತ್ತ್ವಧಾಮ್ನ್ಯದ್ಧಾ ತ್ವಯಿ ಶಾಸ್ತ್ರ ಶರೀರಿಣಿ ।**
**ನಿತ್ಯಂ ನಿಬದ್ಧವೈರಾಸ್ತೇ ವಯಂ ಚಾನ್ಯೇ ಚ ತಾದೃಶಾಃ ॥೪೨॥**

**ಕೇಚನೋದ್ಬದ್ಧವೈರೇಣ ಭಕ್ತ್ಯಾ ಕೇಚನ ಕಾಮತಃ ।**
**ನ ತಥಾ ಸತ್ತ್ವಸಂರಬ್ಧಾಃ ಸಂನಿಕೃಷ್ಟಾಃ ಸುರಾದಯಃ ॥೪೩॥**

ಪ್ರಭುವೇ! ಸಾಕ್ಷಾತ್ ವೇದಮಯವೂ ವಿಶುದ್ಧಸತ್ತ್ವರೂಪವೂ ಆಗಿರುವ ನಿನ್ನ ಶ್ರೀವಿಗ್ರಹವನ್ನು ನಾವು, ನಮಗೆ ಸಮಾನರಾದ ಇತರ ದೈತ್ಯರೂ ದ್ವೇಷಿಸುತ್ತೇವೆ. ಅಂತೆಯೇ ದಾನವರೂ, ಗಂಧರ್ವರೂ, ಸಿದ್ಧ-ವಿದ್ಯಾಧರ-ಚಾರಣರೂ, ಯಕ್ಷ-ರಾಕ್ಷಸ-ಪಿಶಾಚರೂ, ಭೂತಗಣ-ಪ್ರಮಥ ಗಣಗಳೂ ಬಹಳವಾಗಿಯೇ ದ್ವೇಷಿಸುತ್ತಾರೆ. ಈ ಕಾರಣದಿಂದ ನಿನ್ನನ್ನು ದ್ವೇಷಿಸುವವರುಕೂಡ ಸದಾಕಾಲದಲ್ಲಿಯೂ ದ್ವೇಷಬುದ್ಧಿಯಿಂದಲೇ ನಿನ್ನನ್ನು ಸ್ಮರಿಸುತ್ತಿರುವುದರಿಂದ ನಿನ್ನನ್ನೇ ಸೇರಿಬಿಡುತ್ತಾರೆ. ಅದೇ ರೀತಿಯಲ್ಲಿ ಭಕ್ತರೂ ನಿನ್ನನ್ನೇ ಸೇರುತ್ತಾರೆ. ಗೋಪಿಯರಂತೆ ನಿನ್ನನ್ನು ಸದಾಕಾಲದಲ್ಲಿಯೂ ಕಾಮಿಸುವವರುಕೂಡ ನಿನ್ನ ಪಾದಾರವಿಂದಗಳಲ್ಲಿ ಸೇರಿಹೋಗುತ್ತಾರೆ. ಸತ್ತ್ವಪ್ರಧಾನರಾಗಿ ಸರ್ವದಾ ನಿನ್ನ ಸಮೀಪದಲ್ಲಿಯೇ ಇರುವ ದೇವತೆಗಳಿಗೆ ಅಂತಹ ಅದೃಷ್ಟವಿಲ್ಲ. ದ್ವೇಷೀಭಕ್ತರಂತೆ, ಭಾಗವತ ಭಕ್ತರಂತೆ, ಪ್ರೇಮೀಭಕ್ತರಂತೆ-ದೇವತೆಗಳು ನಿನ್ನ ಪಾದಾರವಿಂದಗಳನ್ನು ಹೊಂದಲಾರರು.

**ಇದಮಿತ್ಥಮಿತಿ ಪ್ರಾಯಸ್ತವ ಯೋಗೇಶ್ವರೇಶ್ವರ ।**
**ನ ವಿದನ್ತ್ಯಪಿ ಯೋಗೇಶಾ ಯೋಗಮಾಯಾಂ ಕುತೋ ವಯಮ್ ॥**

ಯೋಗೇಶ್ವರೇಶ್ವರನೇ! ನಿನ್ನ ಯೋಗಮಾಯೆಯ ಸ್ವರೂಪವು ಇಂತಹುದೇ ಎಂಬುದನ್ನು ಮಹಾ-ಮಹಾಯೋಗಿಗಳು ಕೂಡ ತಿಳಿದವರಾಗಿಲ್ಲ. ಹೀಗಿರುವಾಗ ರಜಸ್ತಮಗಳನ್ನು ತುಂಬಿಕೊಂಡಿರುವ ನಾವು ಹೇಗೆತಾನೇ ತಿಳಿದೇವು?

**ತನ್ನಃ ಪ್ರಸೀದ ನಿರಪೇಕ್ಷವಿಮೃಗ್ಯಯುಷ್ಮತ್-**
**ಪಾದಾರವಿನ್ದಧಿಷಣಾನ್ಯಗೃಹಾನ್ಧಕೂಪಾತ್ ।**
**ನಿಷ ಮ್ಯ ವಿಶ್ವಶರಣಾಂಘ್ರ್ಯುಪಲಬ್ಧವೃತ್ತಿಃ**
**ಶಾನ್ತೋ ಯಥೈಕ ಉತ ಸರ್ವಸಖೈಶ್ಚರಾಮಿ ॥೪೫॥**

ಆದುದರಿಂದ, ಸ್ವಾಮಿಯೇ! ನಿಷ್ಕಾಮರಾದ ಯೋಗೇಶ್ವರರು ಮತ್ತು ಪರಮಹಂಸರು ಸದಾಕಾಲದಲ್ಲಿಯೂ ಅರಸುತ್ತಿರುವ ನಿನ್ನ ಚರಣಕಮಲಗಳಲ್ಲಿಯೇ ಸದಾಕಾಲದಲ್ಲಿಯೂ ನನ್ನ ಚಿತ್ತವೃತ್ತಿಯಿರುವಂತೆ ಅನುಗ್ರಹಿಸು. ಅಂಧಕಾರಮಯವಾದ ಕೂಪದಂತಿರುವ ಈ ಮನೆ-ಮಠಗಳನ್ನು ತೊರೆದು ನಿನ್ನ ಪಾದಾರವಿಂದಗಳೆಂಬ ದಿವ್ಯಗೃಹವನ್ನಾಶ್ರಯಿಸಿಕೊಂಡು ಇದ್ದುಬಿಡುತ್ತೇನೆ. ಶಾಂತನಾಗಿ ಏಕಾಕಿಯಾಗಿ ನಿನ್ನ ಕಥಾಮೃತವನ್ನು ಹಾಡುತ್ತಾ ಪ್ರಪಂಚದಲ್ಲಿ ಸಂಚರಿಸುತ್ತಿರುತ್ತೇನೆ. ಯಾವಾಗಲಾದರೂ ಯಾರದ್ದಾದರೂ ಸಂಗವನ್ನು ಸೇರಲೇಬೇಕಾಗಿ ಬಂದರೆ ಸಮಸ್ತರಿಗೂ ಪರಮಹಿತೈಷಿಗಳಾದ ಸತ್ಪುರುಷರೊಡನೆ ಸೇರಿ ಸಂಚರಿಸುತ್ತೇನೆ.

**ಶಾಧ್ಯಸ್ಮಾನೀಶಿತವ್ಯೇಶ ನಿಷ್ಪಾಪಾನ್ಕುರು ನಃ ಪ್ರಭೋ ।**
**ಪುಮಾನ್ಯಚ್ಛ್ರದ್ಧಯಾऽತಿಷ್ಠಂಶ್ಚೋದನಾಯಾ ವಿಮುಚ್ಯತೇ ॥೪೬॥**

ಪ್ರಭುವೇ! ನೀನು ಸಮಸ್ತಜಗತ್ತಿನ ನಿಯಾಮಕನೂ ಮತ್ತು ಸ್ವಾಮಿಯೂ ಆಗಿರುವೆ. ನೀನು ನಮಗೆ ಆಜ್ಞೆಯನ್ನು ನೀಡಿ ನಮ್ಮನ್ನು ಪಾಪರಹಿತರನ್ನಾಗಿ ಮಾಡು. ಯಾವ ಪುರುಷನು ಶ್ರದ್ಧೆಯಿಂದ ನಿನ್ನ ಆಜ್ಞೆಯನ್ನು ನಿರ್ವಹಿಸುವನೋ ಅವನು ವಿಧಿ-ನಿಷೇಧಗಳೆಂಬ ಬಂಧನ ದಿಂದ ಮುಕ್ತನಾಗಿ ಬಿಡುತ್ತಾನೆ.”

ಭಗವಂತನು ಹೇಳುತ್ತಾನೆ :

“ದೈತ್ಯರಾಜ! ಸ್ವಾಯಂಭುವಮನ್ವಂತರದಲ್ಲಿ ಮರೀಚಿಪ್ರಜಾಪತಿಯ ಪತ್ನಿಯಾದ ಊರ್ಣಾ ಎಂಬುವಳ ಗರ್ಭದಲ್ಲಿ ಆರು ಮಕ್ಕಳು ಜನ್ಮತಾಳಿದರು. ಅವರೆಲ್ಲರೂ ದೇವತೆಗಳೇ ಆಗಿದ್ದರು. ಆ ಸಮಯದಲ್ಲಿ ಬ್ರಹ್ಮನು ತನ್ನ ಮಗಳೊಡನೆ ಸಮಾಗಮಮಾಡಲಿದ್ದುದನ್ನು ಕಂಡು ಊರ್ಣೆಯ ಮಕ್ಕಳು ನಗತೊಡಗಿದರು. ಮಕ್ಕಳ ಪರಿಹಾಸರೂಪವಾದ ಅಪರಾಧದಿಂದ ಕುಪಿತನಾದ ಬ್ರಹ್ಮನು ಆ ಮಕ್ಕಳಿಗೆ ರಾಕ್ಷಸಯೋನಿಯಲ್ಲಿ ಹುಟ್ಟುವಂತೆ ಶಾಪವನ್ನಿತ್ತನು. ಶಾಪದ ಫಲವಾಗಿ ಆ ಆರು ಬಾಲಕರೂ ಹಿರಣ್ಯಕಶಿಪುವಿನ ಮಕ್ಕಳಾಗಿ ಹುಟ್ಟಿದರು. ಹಾಗೆ ರಾಕ್ಷಸಯೋನಿಯಲ್ಲಿ ಹುಟ್ಟಿದ ಆರು ಮಕ್ಕಳನ್ನೂ ಯೋಗಮಾಯೆಯ ನೆರವಿನಿಂದ ದೇವಕಿಯ ಗರ್ಭದಲ್ಲಿ ಇರಿಸಲಾಯಿತು. ದೇವಕಿಯ ಗರ್ಭದಿಂದ ಹುಟ್ಟುತ್ತಿದ್ದಂತೆಯೇ ಆ ಆರು ಮಕ್ಕಳನ್ನೂ ಅನುಕ್ರಮವಾಗಿ ಕಂಸನು ಸಂಹರಿಸಿದನು. ಹಾಗೆ ಕಳೆದುಕೊಂಡ ಮಕ್ಕಳ ವಿಷಯವಾಗಿ ನಮ್ಮ ತಾಯಿಯಾದ ದೇವಕಿಯು ಅತ್ಯಂತ ಶೋಕಾತುರಳಾಗಿದ್ದಾಳೆ. ಆ ಆರು ಮಕ್ಕಳೂ ಈಗ ನಿನ್ನ ಬಳಿ ಇದ್ದಾರೆ. ನಾವು ನಮ್ಮ ತಾಯಿಯ ದುಃಖವನ್ನು ತೊಲಗಿಸಲು ಈ ಬಾಲಕರನ್ನು ಕರೆದುಕೊಂಡುಹೋಗುತ್ತೇವೆ. ನಮ್ಮ ತಾಯಿಯ ಪುತ್ರಶೋಕವು ದೂರವಾದನಂತರ ಇವರೆಲ್ಲರೂ ಶಾಪದಿಂದ ಮುಕ್ತರಾಗಿ ಆನಂದ ಪೂರ್ವಕವಾಗಿ ತಮ್ಮ-ತಮ್ಮಲೋಕಗಳಿಗೆ ಹೊರಟುಹೋಗುತ್ತಾರೆ. ಈಗ ನಿನ್ನ ಬಳಿಯಲ್ಲಿರುವ ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್ ಮತ್ತು ಘೃಣೀ–ಎಂಬುವರೇ ಆ ಆರು ಮಕ್ಕಳು. ನನ್ನ ಕೃಪೆಯಿಂದಾಗಿ ಪುನಃ ಅವರಿಗೆ ಸದ್ಗತಿಯು ದೊರಕುತ್ತದೆ.”

ಪರೀಕ್ಷಿತಮಹಾರಾಜ! ಶ್ರೀಕೃಷ್ಣನು ಇಷ್ಟು ಸಮಾಚಾರಗಳನ್ನು ಹೇಳಿ ಸುಮ್ಮನಾದನು. ಇಂದ್ರಸೇನನು ಪುನಃ ಶ್ರೀಕೃಷ್ಣ-ಬಲರಾಮರನ್ನು ಯಥಾವಿಧಿಯಾಗಿ ಸತ್ಕರಿಸಿ ಆ ಆರು ಮಕ್ಕಳನ್ನೂ ಅವರಿಗೆ ಒಪ್ಪಿಸಿ ಕೊಟ್ಟನು. ಶ್ರೀಕೃಷ್ಣ-ಬಲರಾಮರು ಬಾಲಕರೊಡನೆ ದ್ವಾರಕೆಗೆ ಹಿಂದಿರುಗಿ ಬಂದು ತಾಯಿಯಾದ ದೇವಕಿಗೆ ಆ ಮಕ್ಕಳನ್ನು ಒಪ್ಪಿಸಿದರು. ಬಾಲಕರನ್ನು

ನೋಡಿದೊಡನೆಯೇ ದೇವಕಿಯ ಹೃದಯದಲ್ಲಿ ಪುತ್ರ ಸ್ನೇಹವು ತುಂಬಿ ಕೊಂಡು ಆಕೆಯ ಸ್ತನಗಳಲ್ಲಿ ಹಾಲು ಒಸರತೊಡಗಿತು. ಆರು ಮಕ್ಕಳನ್ನೂ




ಒಬ್ಬೊಬ್ಬರನ್ನಾಗಿ ಆಲಿಂಗಿಸಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವರ ನೆತ್ತಿಯನ್ನು ಬಾರಿ-ಬಾರಿಗೂ ಆಘ್ರಾಣಿಸಿದಳು. ಮಕ್ಕಳ ಸ್ಪರ್ಶದಿಂದ ಆನಂದಸಾಗರದಲ್ಲಿ ಮುಳುಗಿಹೋಗಿದ್ದ ದೇವಕಿಯು ಎಲ್ಲ ಮಕ್ಕಳಿಗೂ ಅಮೃತಮಯವಾದ ಹಾಲನ್ನುಣಿಸಿದಳು. ನಿಶ್ಚಯವಾಗಿಯೂ ಆ ಸಮಯ ದಲ್ಲಿ ದೇವಕೀದೇವಿಯು ಸೃಷ್ಟಿಗೆ ಮೂಲಕಾರಣನಾದ ವಿಷ್ಣುವಿನ ಯೋಗ ಮಾಯೆಯಿಂದ ವಿಮೋಹಿತಳಾಗಿಬಿಟ್ಟಿದ್ದಳು. ದೇವಕೀದೇವಿಯ ಎದೆ ಹಾಲು ಶ್ರೀಕೃಷ್ಣನು ಕುಡಿದು ಮಿಕ್ಕ ಹಾಲಾಗಿದ್ದುದರಿಂದ ಅಮೃತಮಯವೇ ಆಗಿ ಬಿಟ್ಟಿದ್ದಿತು. ಆ ಬಾಲಕರು ಅಮೃತಮಯವಾದ ಆ ಎದೆ ಹಾಲನ್ನು ಕುಡಿದುದರಿಂದಲೂ ಶ್ರೀಕೃಷ್ಣನ ಅಂಗಸ್ಪರ್ಶದಿಂದಲೂ ಯೋಗಿಗಳಿಗೂ ದುರ್ಲಭವೆನಿಸಿದ ಆತ್ಮಸಾಕ್ಷಾತ್ಕಾರವನ್ನೇ ಪಡೆದುಕೊಂಡುಬಿಟ್ಟರು.

**ನಾರಾಯಣಾಙ್ಗ ಸಂಸ್ಪರ್ಶಪ್ರತಿಲಬ್ಧಾತ್ಮ ದರ್ಶನಾಃ ॥೫೫॥**

ಆತ್ಮಸಾಕ್ಷಾತ್ಕಾರವಾಗುತ್ತಲೇ ಆ ಆರುಮಂದಿ ಬಾಲಕರೂ ಶ್ರೀಕೃಷ್ಣನಿಗೂ, ದೇವಕೀಮಾತೆಗೂ, ತಂದೆಯಾದ ವಸುದೇವನಿಗೂ, ಅಣ್ಣ ನಾದ ಬಲರಾಮನಿಗೂ ಸಾಷ್ಟಾಂಗಪ್ರಣಾಮಮಾಡಿದರು. ಬಳಿಕ ಎಲ್ಲ ಪ್ರಾಣಿಗಳೂ ನೋಡುತ್ತಿದ್ದಂತೆಯೇ ದಿವ್ಯರಥಗಳಲ್ಲಿ ಕುಳಿತು ದೇವಲೋಕಕ್ಕೆ

ಪ್ರಯಾಣಮಾಡಿದರು. ಸತ್ತುಹೋಗಿದ್ದ ತನ್ನ ಮಕ್ಕಳು ಜೀವಂತರಾಗಿ ಆಗಮಿಸಿದುದನ್ನೂ ಪುನಃ ಲೋಕಾಂತರಕ್ಕೆ ಹೊರಟುಹೋದುದನ್ನೂ ಕಂಡು ದೇವಕೀದೇವಿಯು ಅಚ್ಚರಿಗೊಂಡಳು. ಇವೆಲ್ಲವೂ ಶ್ರೀಕೃಷ್ಣನೇ ರಚಿಸಿದ ಮಾಯಾವಿಲಾಸವೆಂದು ಭಾವಿಸಿಕೊಂಡಳು.

**ಏವಂವಿಧಾನ್ಯದ್ಭುತಾನಿ ಕೃಷ್ಣಸ್ಯ ಪರಮಾತ್ಮನಃ ।**
**ವೀರ್ಯಾಣ್ಯನನ್ತವೀರ್ಯಸ್ಯ ಸನ್ತ್ಯನನ್ತಾನಿ ಭಾರತ ॥೫೮॥**

ಪರೀಕ್ಷಿತಮಹಾರಾಜ! ಭಾರತನೇ! ಅನಂತವೀರ್ಯನಾದ, ಅದ್ಭುತವೀರ್ಯನಾದ, ಪರಮಾತ್ಮನಾದ ಶ್ರೀಕೃಷ್ಣನ ಇಂತಹುದೇ ಅದ್ಭುತ ಪರಾಕ್ರಮದ ವೀರಗಾಥೆಗಳು ಅನೇಕವಾಗಿವೆ. ಸಾವಿರವರ್ಷಗಳವರೆಗೆ ಹೇಳುತ್ತಿದ್ದರೂ ಮುಗಿಯದೇ ಇರುವಂತಷ್ಟು ಅವನ ಲೀಲಾಪ್ರಸಂಗಗಳಿವೆ."

ಸೂತರು ಶೌನಕಾದಿ ಮಹರ್ಷಿಗಳಿಗೆ ಹೇಳುತ್ತಾರೆ :

**ಯ ಇದಮನುಶೃಣೋತಿ ಶ್ರಾವಯೇದ್ವಾ ಮುರಾರೇ-**
**ಶ್ಚರಿತಮಮೃತಕೀರ್ತೇರ್ವರ್ಣಿತಂ ವ್ಯಾಸಪುತ್ರೈಃ ।**
**ಜಗದಘಭಿದಲಂ ತದ್ಭಕ್ತಸತ್ಕರ್ಣಪೂರಂ**
**ಭಗವತಿ ಕೃತಚಿತ್ತೋ ಯಾತಿ ತತ್ಕ್ಷೇಮಧಾಮ ॥೫೯॥**

"ಶೌನಕಾದಿಮಹರ್ಷಿಗಳೇ! ಶ್ರೀಕೃಷ್ಣನ ಕೀರ್ತಿಯು ಅಮರವೂ ಅಮೃತವೂ ಆಗಿದೆ. ವ್ಯಾಸರ ಮಕ್ಕಳಾದ ಶ್ರೀಶುಕಮುನಿಗಳಿಂದ ಹೇಳಲ್ಪಟ್ಟಿರುವ ಈ ಶ್ರೀಕೃಷ್ಣನ ಚರಿತಾಮೃತವು ಭಕ್ತಜನರ ಪಾಪನಿವಾರಕವೂ, ಶ್ರೋತ್ರಾನಂದದಾಯಕವೂ ಆಗಿದೆ. ಈ ಶ್ರೀಕೃಷ್ಣಚರಿತಾಮೃತವನ್ನು ಯಾವನು ಕೇಳುತ್ತಾನೆಯೋ ಮತ್ತು ಯಾವನು ಇತರರಿಗೆ ಹೇಳುತ್ತಾನೆಯೋ ಅಂತಹವನು ಭಗವಂತನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಪರಮ ಕಲ್ಯಾಣರೂಪವಾದ ಪರಮಪದವನ್ನು ಹೊಂದುತ್ತಾನೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೫ನೆಯ ಅಧ್ಯಾಯವು ಮುಗಿಯಿತು.

---

## ಸುಭದ್ರಾಹರಣ : ಭಗವಾನ್ ಶ್ರೀಕೃಷ್ಣನು ಮಿಥಿಲಾಪಟ್ಟಣದ ರಾಜನಾದ ಜನಕನ ಅರಮನೆಗೂ ಶ್ರುತದೇವ ಬ್ರಾಹ್ಮಣನ ಮನೆಗೂ ಏಕಕಾಲದಲ್ಲಿ ಪ್ರವೇಶಿಸಿದುದು

ಪರೀಕ್ಷಿದ್ರಾಜನು ಹೇಳುತ್ತಾನೆ :

**ಬ್ರಹ್ಮನ್ ವೇದಿತುಮಿಚ್ಛಾಮಃ ಸ್ವಸಾರಂ ರಾಮಕೃಷ್ಣಯೋಃ ।**
**ಯಥೋಪಯೇಮೇ ವಿಜಯೋ ಯಾ ಮಮಾಸೀತ್ ಪಿತಾಮಹೀ ॥**

"ಪೂಜ್ಯರೇ! ನನ್ನ ತಾತನಾದ ಅರ್ಜುನನು ಶ್ರೀಕೃಷ್ಣ-ಬಲರಾಮರ ತಂಗಿಯಾದ ಮತ್ತು ನನ್ನ ಅಜ್ಜಿಯಾದ ಸುಭದ್ರೆಯನ್ನು ಹೇಗೆ ಮದುವೆ ಯಾದನು? ಇದನ್ನು ತಮ್ಮಿಂದ ಕೇಳಿ ತಿಳಿಯಲು ನಾನು ಅತ್ಯಂತ ಉತ್ಸುಕನಾಗಿದ್ದೇನೆ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಒಮ್ಮೆ ಪ್ರಭಾವಶಾಲಿಯಾದ ಅರ್ಜುನನು ತೀರ್ಥಯಾತ್ರೆಯನ್ನು ಮಾಡಿಕೊಂಡು ಭೂಮಂಡಲದಲ್ಲಿ ಸಂಚರಿಸುತ್ತಿ




ದ್ದಾಗ ಪ್ರಭಾಸ ಕ್ಷೇತ್ರಕ್ಕೂ ಆಗಮಿಸಿದನು. ಅಲ್ಲವನು ತಮ್ಮ ಸೋದರ ಮಾವನ ಮಗಳಾದ ಸುಭದ್ರೆಯನ್ನು ಬಲರಾಮನು ದುರ್ಯೋಧನನಿಗೆ

ಕೊಟ್ಟು ಮದುವೆಮಾಡಲು ನಿಶ್ಚಯಿಸಿದ್ದಾನೆಂಬ ಮತ್ತು ಇದಕ್ಕೆ ವಸುದೇವನ ಮತ್ತು ಶ್ರೀಕೃಷ್ಣನ ಸಹಮತವಿಲ್ಲವೆಂಬ ವಾರ್ತೆಯನ್ನೂ ಕೇಳಿದನು. ಆ ಸಮಯದಲ್ಲಿ ಅರ್ಜುನನಿಗೆ ಸುಭದ್ರೆಯನ್ನು ತಾನೇ ಮದುವೆಯಾಗಬೇಕೆಂಬ ಆಶೆಯು ಅಂಕುರಿಸಿತು. ಈ ಕಾರ್ಯವನ್ನು ಸಾಧಿಸುವ ಸಲುವಾಗಿ ಅರ್ಜುನನು ತ್ರಿದಂಡೀಸಂನ್ಯಾಸಿಯ ವೇಷವನ್ನು ಧರಿಸಿ ದ್ವಾರಕೆಗೆ ಹೋದನು. ಅಲ್ಲಿ ಪುರಜನರಿಂದಲೂ, ಕಪಟಸಂನ್ಯಾಸಿಯೆಂಬುದನ್ನರಿಯದ ಬಲರಾಮನಿಂದಲೂ ಸತ್ಕೃತನಾದ ಅರ್ಜುನನು ಮಳೆಗಾಲದ ನಾಲ್ಕು ತಿಂಗಳು ಅಲ್ಲಿಯೇ ಇದ್ದುಬಿಟ್ಟನು. ಹೀಗೆಯೇ ಇರುತ್ತಿರಲಾಗಿ ಒಮ್ಮೆ ಬಲರಾಮನು ಅತ್ಯಂತಭಕ್ತಿಭಾವದಿಂದ ತ್ರಿದಂಡೀಸಂನ್ಯಾಸಿಯನ್ನು ಭಿಕ್ಷೆಗಾಗಿ ಮನೆಗೆ ಕರೆತಂದು ಶ್ರದ್ಧಾಭಕ್ತಿಗಳಿಂದ ಅವನಿಗೆ ಮೃಷ್ಟಾನ್ನವನ್ನು ಭೋಜನಮಾಡಿಸಿದನು. ಅರ್ಜುನನು ಭೋಜನಮಾಡುತ್ತಿದ್ದಾಗ ವಿವಾಹಯೋಗ್ಯಳಾಗಿದ್ದ ಮತ್ತು ಪರಮಸುಂದರಿಯಾದ ಸುಭದ್ರೆಯನ್ನು ವೀಕ್ಷಿಸಿದನು. ಅವಳ ಸೌಂದರ್ಯವು ಮಹಾಮಹಾವೀರರ ಮನಸ್ಸುಗಳನ್ನೂ ಅಪಹರಿಸುವುದಾಗಿದ್ದಿತು. ಸುಭದ್ರೆಯನ್ನು ನೋಡುತ್ತಿದ್ದಂತೆ ಅರ್ಜುನನ ಕಣ್ಣುಗಳು ಮತ್ತಷ್ಟು ವಿಕಸಿತವಾದುವು. ಮನಸ್ಸು ಕ್ಷೋಭೆಗೊಂಡಿತು. ತ್ರಿಲೋಕಸುಂದರಿಯಾಗಿದ್ದ ಸುಭದ್ರೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳ ಬೇಕೆಂದು ಅರ್ಜುನನು ಮನಸ್ಸಿನಲ್ಲಿ ದೃಢವಾಗಿ ನಿಶ್ಚಯಿಸಿಬಿಟ್ಟನು. ಆತನು ಅರಳಿದ ಕಣ್ಣುಗಳಿಂದ ಸುಭದ್ರೆಯನ್ನು ವೀಕ್ಷಿಸಿದಂತೆ ಸುಭದ್ರೆಯೂ ಅರ್ಜುನನನ್ನು ಕಣ್ತುಂಬಾ ನೋಡಿದಳು. ಇಬ್ಬರ ದೃಷ್ಟಿಗಳೂ ಮನಸ್ಸಿನೊಡನೆ ಒಂದಾದುವು.

ಪರೀಕ್ಷಿತ! ನಿನ್ನ ಅಜ್ಜಿ ಸುಭದ್ರೆಯಂತೆ ನಿನ್ನ ತಾತನಾದ ಅರ್ಜುನನೂ ತ್ರಿಲೋಕಸುಂದರನೆಂದು ಪ್ರಸಿದ್ಧನಾಗಿದ್ದನು. ಅವನ ಸೌಂದರ್ಯಕ್ಕೆ ಆಕರ್ಷಿತರಾಗದ ಸ್ತ್ರೀಯರೇ ಇರಲಿಲ್ಲ. ಅಂತಹ ಸುಂದರಪುರುಷನನ್ನು ನೋಡಿದ ಸುಭದ್ರೆಯು ಕೂಡ ಅವನನ್ನೇ ಪತಿಯನ್ನಾಗಿ ವರಿಸಲು ನಿಶ್ಚಯಿ ಸಿದಳು. ಆಕೆಯು ಕಿರುನಗೆಯನ್ನು ಬೀರುತ್ತಾ ಲಜ್ಜೆಗೊಂಡ ಕಡೆಗಣ್ಣಿನಿಂದ ನೋಡತೊಡಗಿದಳು. ಸುಭದ್ರೆಯ ಕಣ್ಣುಗಳು ಮತ್ತು ಮನಸ್ಸು ಅರ್ಜುನ ನಲ್ಲಿಯೇ ಸೇರಿ ಹೋದುವು. ಅರ್ಜುನನಿಗಂತೂ ಸದಾಕಾಲದಲ್ಲಿಯೂ

ಅವಳದೇ ಚಿಂತೆಯಾಗಿಬಿಟ್ಟಿತು. 'ಯಾವಾಗ? ಮತ್ತು ಹೇಗೆ ಅವಳನ್ನು ಅಪಹರಿಸಿಕೊಂಡು ಹೋಗಿ ಮದುವೆಯಾದೇನು?'–ಎಂಬುದನ್ನೇ ಸದಾ ಕಾಲದಲ್ಲಿಯೂ ಚಿಂತಿಸುತ್ತಿದ್ದನು. ತ್ರಿಲೋಕಸುಂದರಿಯಾದ ಸುಭದ್ರೆಯನ್ನು ಸಾಧ್ಯವಾದಷ್ಟು ಬೇಗ ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂಬ ಅತಿಬಲಿಷ್ಠವಾದ ಕಾಮನೆಯಿಂದಾಗಿ ಅವನ ಮನಸ್ಸು ಭ್ರಮಿಸಿತು. ಅವನ ಮನಸ್ಸಿಗೆ ಶಾಂತಿಯೆಂಬುದೇ ಇರಲಿಲ್ಲ.

ಹೀಗಿರಲೊಮ್ಮೆ ಸುಭದ್ರಾದೇವಿಯು ದೊಡ್ಡದಾದೊಂದು ದೇವರ ಉತ್ಸವವನ್ನು ನೋಡುವ ಸಲುವಾಗಿ ರಥದಲ್ಲಿ ಕುಳಿತು ದ್ವಾರಕಾದುರ್ಗ ದಿಂದ ಹೊರಕ್ಕೆ ಹೋಗುತ್ತಿದ್ದಾಗ ಅರ್ಜುನನು, ದೇವಕಿ-ವಸುದೇವರ ಮತ್ತು ಶ್ರೀಕೃಷ್ಣನ ಅನುಮತಿಯನ್ನು ಪಡೆದು ಸುಭದ್ರೆಯನ್ನು ಅಪಹರಿಸಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು. ರಥದಲ್ಲಿ ಕುಳಿತಿದ್ದ ಅರ್ಜುನನು, ಧನುಸ್ಸನ್ನು ಹಿಡಿದು ತನ್ನ ರಥವನ್ನು ತಡೆಯಲು ಬಂದ ಶೂರರಾದ ಭಟರನ್ನು ತೀಕ್ಷ್ಣವಾದ ಬಾಣಗಳ ಪ್ರಹಾರದಿಂದ ಓಡಿಹೋಗುವಂತೆ ಮಾಡಿ ಸುಭದ್ರೆಗಾಗಿ ಕೂಗಿ ಕೊಳ್ಳುತ್ತಿದ್ದ ಅವಳ ಸಖಿಯರ ಮತ್ತು ದಾಸಿಯರ ಮಧ್ಯದಿಂದ–ಸಿಂಹವು ತನಗೆ ಸೇರಬೇಕಾದ ಭಾಗವನ್ನು ನಿರ್ಭಯವಾಗಿ ಎತ್ತಿಕೊಂಡು ಹೋಗು ವಂತೆ–ಸುಭದ್ರೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋದನು.

ಅರ್ಜುನನು ಸುಭದ್ರೆಯನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆಯನ್ನು ಕೇಳುತ್ತಲೇ ಹುಣ್ಣಿಮೆಯ ದಿನ ಸಮುದ್ರವು ಉಕ್ಕೇರಿ ಬರುವಂತೆ ಬಲರಾಮನ ಕೋಪವು ಉಕ್ಕೇರಿ ಬಂದಿತು. ಒಡನೆಯೇ ಶ್ರೀಕೃಷ್ಣನು ಅಣ್ಣನ ಕಾಲುಗಳನ್ನು ಹಿಡಿದುಕೊಂಡು ಕೋಪಗೊಳ್ಳದಂತೆ ಆತನನ್ನು ಸಮಾಧಾನಗೊಳಿಸಿದನು. ಅಂತೆಯೇ ಸುಹೃದರ ಮತ್ತು ಬಂಧುಗಳ ನಾನಾಪ್ರಕಾರವಾದ ಸಾಂತ್ವನದ ಮಾತುಗಳಿಂದ ಹಲಾಯುಧನು ಶಾಂತ ನಾದನು. ಹೀಗೆ ಪ್ರಸನ್ನಚಿತ್ತನಾದ ಬಲರಾಮನು ವಧೂ-ವರರಿಗೆ ಅಪಾರ ವಾದ ಧನವನ್ನೂ ಸಾಮಗ್ರಿಗಳನ್ನೂ ಆನೆ-ಕುದುರೆ-ರಥಗಳನ್ನೂ ದಾಸ-ದಾಸಿ ಯರನ್ನೂ ಉಡುಗೊರೆಯಾಗಿ ಕಳುಹಿಸಿಕೊಟ್ಟನು.

ಅನಂತರ ಹಸ್ತಿನಾಪುರದಲ್ಲಿ ಅರ್ಜುನ-ಸುಭದ್ರೆಯರ ವಿವಾಹ ಮಹೋತ್ಸವವು ವಿಜೃಂಭಣೆಯಿಂದ ನೆರವೇರಿತು.

ಪರೀಕ್ಷಿತಮಹಾರಾಜ! ನಿನ್ನ ಪ್ರಶ್ನೆಗೆ ಉತ್ತರವಾಗಿ ನಿನ್ನ ತಾತನಾದ ಅರ್ಜುನನು ನಿನ್ನ ಪಿತಾಮಹಿಯಾದ ಸುಭದ್ರೆಯನ್ನು ಹೇಗೆ ಮದುವೆ ಯಾದನೆಂಬುದನ್ನು ಹೇಳಿರುತ್ತೇನೆ. ಮುಂದೆ ನಾನು ಶ್ರೀಕೃಷ್ಣನ ಪರಮಾ ದ್ಭುತವಾದ ಮತ್ತೊಂದು ಲೀಲಾಪ್ರಸಂಗವನ್ನು ಹೇಳುತ್ತೇನೆ. ಏಕಾಗ್ರಚಿತ್ತ ನಾಗಿ ಕೇಳು :

ಪರೀಕ್ಷಿತಮಹಾರಾಜ! ವಿದೇಹರಾಜ್ಯದ ರಾಜಧಾನಿಯಾದ ಮಿಥಿಲಾ ಪಟ್ಟಣದಲ್ಲಿ ಒಬ್ಬ ಗೃಹಸ್ಥಬ್ರಾಹ್ಮಣನಿದ್ದನು. ಅವನ ಶುಭನಾಮವು ಶ್ರುತದೇವ–ಎಂದು. ಅವನು ಭಗವಾನ್ ಶ್ರೀಕೃಷ್ಣನ ಪರಮಭಕ್ತನಾಗಿದ್ದನು. ಭಗವಂತನಲ್ಲಿ ಅವನಿಗಿದ್ದ ಅನನ್ಯಭಕ್ತಿಯ ಪ್ರಭಾವದಿಂದಲೇ ಶ್ರುತದೇವನು ಪೂರ್ಣಮನೋರಥನೂ, ಪರಮಶಾಂತನೂ, ಜ್ಞಾನಿಯೂ ಮತ್ತು ವಿರಕ್ತನೂ ಆಗಿದ್ದನು. ಗೃಹಸ್ಥಾಶ್ರಮಿಯಾಗಿದ್ದರೂ ಜೀವಿಕೆಗಾಗಿ ಯಾವ ಉದ್ಯೋಗವನ್ನೂ ಮಾಡುತ್ತಿರಲಿಲ್ಲ. ಭಗವಂತನ ದಯೆಯಿಂದ ಯಾವ ವೇಳೆಗೆ ಯಾವುದು ಸಿಕ್ಕುತ್ತಿದ್ದಿತೋ ಆದರಿಂದಲೇ ಜೀವನವನ್ನು ನಿರ್ವಹಿಸುತ್ತಿದ್ದನು. ಅದೃಷ್ಟದ ಕಾರಣದಿಂದ ಅನುದಿನವೂ ಅವನ ಜೀವನನಿರ್ವಹಣಕ್ಕೆ ಎಷ್ಟು ಸಾಮಗ್ರಿಗಳು ಬೇಕಾಗುತ್ತಿದ್ದುವೋ ಅಷ್ಟು ಮಾತ್ರ ಜೀವನಸಾಮಗ್ರಿಗಳು ಲಭಿಸುತ್ತಿದ್ದುವು. ಅಧಿಕವಾಗಿ ಒಂದು ದಿನಕ್ಕಾದರೂ ಕೂಡಿಡುವಷ್ಟು ಸಿಕ್ಕುತ್ತಿರಲಿಲ್ಲ. ಶ್ರುತದೇವನು ಅದರಿಂದಲೇ ತೃಪ್ತನಾಗಿ ತನ್ನ ವರ್ಣಾಶ್ರಮಕ್ಕೆ ಅನುಸಾರವಾದ ಧರ್ಮದ ಪಾಲನೆಯಲ್ಲಿ ತತ್ಪರನಾಗಿರುತ್ತಿದ್ದನು.

ಪರೀಕ್ಷಿತ! ಆ ದೇಶದ ರಾಜನುಕೂಡ ಈ ಬ್ರಾಹ್ಮಣನಂತೆಯೇ ಶ್ರೀಕೃಷ್ಣನಿಗೆ ಪರಮಭಕ್ತನಾಗಿದ್ದನು. ಮಿಥಿಲಾಪಟ್ಟಣದ ಆ ಪ್ರತಿಷ್ಠಿತ ನರಪತಿಯ ಹೆಸರು ಬಹುಲಾಶ್ವ. ಅವನಲ್ಲಿ ಅಹಂಕಾರವು ಲೇಶಮಾತ್ರವೂ ಇರಲಿಲ್ಲ. ಹಿಂದೆ ಹೇಳಿದಂತೆ ಬ್ರಾಹ್ಮಣನಾದ ಶ್ರುತದೇವ ಮತ್ತು ರಾಜ ನಾದ ಬಹುಲಾಶ್ವ–ಈ ಇಬ್ಬರೂ ಶ್ರೀಕೃಷ್ಣನಿಗೆ ಪರಮಭಕ್ತರಾಗಿದ್ದರು.

ಒಮ್ಮೆ ಶ್ರೀಕೃಷ್ಣನು ಆ ಇಬ್ಬರು ಭಕ್ತರ ವಿಷಯದಲ್ಲಿಯೂ ಪ್ರಸನ್ನನಾಗಿ ಅವರಿಬ್ಬರನ್ನೂ ಅನುಗ್ರಹಿಸುವ ಆಶಯದಿಂದ ದಾರುಕನು ಸಿದ್ಧಗೊಳಿಸಿದ್ದ ರಥದಲ್ಲಿ ಕುಳಿತು ಮಿಥಿಲಾಪಟ್ಟಣಕ್ಕೆ ಪ್ರಯಾಣಮಾಡಿದನು. ಅವನೊಡನೆ ನಾರದ, ವಾಮದೇವ, ಅತ್ರಿ, ವೇದವ್ಯಾಸ, ಪರಶುರಾಮ, ಅಸಿತ, ಆರುಣಿ, ಬೃಹಸ್ಪತಿ, ಕಣ್ವ, ಮೈತ್ರೇಯ, ಚ್ಯವನ–ಇವರೇ ಮೊದಲಾದ ಋಷಿ-ಮುನಿಗಳೂ ಮಿಥಿಲಾಪಟ್ಟಣಕ್ಕೆ ಹೊರಟರು. ಅವರಲ್ಲಿ ನಾನೂ ಸೇರಿದ್ದೆನು. ಶ್ರೀಕೃಷ್ಣನು ರಥದಲ್ಲಿ ಕುಳಿತು ಯಾವ-ಯಾವ ಗ್ರಾಮಗಳ–ಹಳ್ಳಿಗಳ–ಊರುಗಳ–ಪಟ್ಟಣಗಳ ಮೂಲಕವಾಗಿ ಪ್ರಯಾಣಮಾಡುತ್ತಿದ್ದನೋ ಅಲ್ಲಲ್ಲಿಯ ನಿವಾಸಿಗಳು ಭಗವಂತನು ಬರುತ್ತಿರುವ ವಾರ್ತೆಯನ್ನು ಕೇಳಿದೊಡನೆಯೇ ಗ್ರಹಗಳ ಸಮೇತನಾಗಿ ಸೂರ್ಯನಾರಾಯಣನೇ ಉದಯಿಸಿ ಬರುತ್ತಿದ್ದಾನೆಂದು ಭಾವಿಸಿ ಪೂಜಾಸತ್ಕಾರಕ್ಕಾಗಿ ಅರ್ಘ್ಯ-ಪಾದ್ಯಾದಿಗಳನ್ನು ತಂದು ಭಕ್ತಿಭಾವದಿಂದ ಆ ಭಗವಂತನನ್ನು ಪೂಜಿಸಿ ಕೃತಾರ್ಥರಾಗುತ್ತಿದ್ದರು. ಆನರ್ತ, ಧನ್ವ, ಕುರು-ಜಾಂಗಲ, ಕಂಕ, ಮತ್ಸ್ಯ, ಪಾಂಚಾಲ, ಕುಂತಿ, ಮಧು, ಕೇಕಯ, ಕೋಸಲ, ಅರ್ಣ–ಇವೇ ಮುಂತಾದ ದೇಶಗಳ ಮೂಲಕವಾಗಿ, ಶ್ರೀಕೃಷ್ಣನು ಮಿಥಿಲಾಪಟ್ಟಣಕ್ಕೆ ಪ್ರಯಾಣಮಾಡಿದನು. ಈ ದೇಶಗಳ ಅಧಿಪತಿಗಳಾಗಿದ್ದ ರಾಜರೂ ಮತ್ತು ಅವರ ಪರಿವಾರದವರೂ–ಆಯಾ ದೇಶಗಳ ನರ-ನಾರಿಯರೂ ತಮ್ಮ ಕಣ್ಣುಗಳೆಂಬ ದುಂಬಿಗಳ ಮೂಲಕವಾಗಿ ಉದಾರವಾದ ಮಂದಹಾಸದಿಂದಲೂ ಪ್ರೇಮಮಯವಾದ ಕಡೆಗಣ್ಣಿನ ನೋಟದಿಂದಲೂ ಕೂಡಿದ್ದ ಶ್ರೀಕೃಷ್ಣನ ಮುಖಕಮಲದ ಮಧುವನ್ನು ನಿರಂತರವಾಗಿ ಪಾನಮಾಡುತ್ತಿದ್ದರು. ಆತನನ್ನು ಎಷ್ಟು ನೋಡಿದರೂ ಅವರಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ಮೂರುಲೋಕಗಳಿಗೂ ಗುರುವಾದ ಭಗವಾನ್ ಶ್ರೀಕೃಷ್ಣನ ದರ್ಶನದಿಂದಾಗಿ ಅವರಲ್ಲಿದ್ದ ಅಜ್ಞಾನದೃಷ್ಟಿಯು ನಷ್ಟವಾಗಿಹೋಯಿತು. ಮಾರ್ಗದ ಇಕ್ಕಡೆಗಳಲ್ಲಿಯೂ ನಿಂತು ಪ್ರಭುವನ್ನು ಎವೆಯಿಕ್ಕದ ಕಣ್ಣುಗಳಿಂದ ನೋಡುತ್ತಿದ್ದ ಹಲವಾರು ದೇಶಗಳ ನರ-ನಾರಿಯರಿಗೆ ಕೃಪಾಳುವಾದ ಶ್ರೀಕೃಷ್ಣನು ಕೃಪಾದೃಷ್ಟಿಯನ್ನು ಬೀರುತ್ತಾ ಅವರಿಗೆ ಕಲ್ಯಾಣವನ್ನುಂಟುಮಾಡುತ್ತಿದ್ದನು ಮತ್ತು ವೀಕ್ಷಣಮಾತ್ರದಿಂದಲೇ ಅವರಿಗೆ ತತ್ತ್ವೋಪದೇಶವನ್ನೂ ಮಾಡುತ್ತಿದ್ದನು. ಆ ಸಮಯದಲ್ಲಿ

ದೇವತೆಗಳು ಮತ್ತು ಮಾನವರು ಇಕ್ಕಡೆಗಳಲ್ಲಿಯೂ ನಿಂತು ಭಗವಂತನ ದಿಗಂತಗಳವರೆಗೂ ಹರಡಿರುವ ಮತ್ತು ಸಮಸ್ತ ಅಶುಭವನ್ನೂ ಹೋಗಲಾಡಿಸುವ ಧವಳಕೀರ್ತಿಯನ್ನು ಕರ್ಣಾನಂದಕರವಾಗಿ ಗಾನಮಾಡುತ್ತಿದ್ದರು. ಅಂತಹ ಸ್ತೋತ್ರಗಳನ್ನು ಆಲಿಸುತ್ತಾ ಶ್ರೀಕೃಷ್ಣನು ಋಷಿ-ಮುನಿಗಳೊಡನೆ ಮಿಥಿಲಾಪಟ್ಟಣವನ್ನು ಸೇರಿದನು.

ಮಹಾರಾಜ! ಶ್ರೀಕೃಷ್ಣನ ಶುಭಾಗಮನದ ಸಮಾಚಾರವನ್ನು ಕೇಳಿದ ಮಿಥಿಲಾಪುರವಾಸಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ಅವರು ಕೈಗಳಲ್ಲಿ ವಿಧ-ವಿಧವಾದ ಪೂಜಾಸಾಮಗ್ರಿಗಳನ್ನು ಹಿಡಿದು ಶ್ರೀಕೃಷ್ಣನನ್ನು ಸ್ವಾಗತಿಸುವ ಸಲುವಾಗಿ ಧಾವಿಸಿ ಬಂದರು. ಜಗದಾನಂದಕಂದನಾದ ಶ್ರೀಕೃಷ್ಣನನ್ನು ಸಂದರ್ಶಿಸುತ್ತಲೇ ಮಿಥಿಲಾಪಟ್ಟಣದ ನರ-ನಾರಿಯರ ಮುಖಕಮಲಗಳು ಮತ್ತು ಹೃತ್ಕಮಲಗಳು ಆನಂದದಿಂದ ವಿಕಸಿತವಾದುವು. ಅವರೆಲ್ಲರೂ ಅದುವರೆಗೆ ಭಗವಂತನ ಲೀಲಾಪ್ರಸಂಗಗಳನ್ನು ಕೇಳಿದ್ದರೇ ಹೊರತು ಸಾಕ್ಷಾತ್ತಾಗಿ ಅವನನ್ನು ನೋಡಿರಲಿಲ್ಲ. ಅಂತೆಯೇ ಋಷಿ-ಮುನಿಗಳನ್ನೂ ಕಂಡಿರಲಿಲ್ಲ. ಆ ಸಮಯದಲ್ಲಿ ಪಟ್ಟಣಿಗರೆಲ್ಲರೂ ಭಗವಂತನಾದ ಶ್ರೀಕೃಷ್ಣನಿಗೂ ಮತ್ತು ಋಷಿ-ಮುನಿಗಳಿಗೂ ಬದ್ಧಾಂಜಲಿಗಳಾಗಿ ನಮಸ್ಕರಿಸಿದರು.

ತಮ್ಮನ್ನು ಅನುಗ್ರಹಿಸಲೆಂದೇ ಭಗವಂತನು ಆಗಮಿಸಿರುವನೆಂದು ಭಾವಿಸಿದ ಬಹುಲಾಶ್ವ–ಶ್ರುತದೇವರು ಪ್ರಭುವಾದ ಶ್ರೀಕೃಷ್ಣನ ಕಾಲುಗಳಲ್ಲಿ ಬಿದ್ದರು. ಮೈಥಿಲ-ಶ್ರುತದೇವರಿಬ್ಬರೂ ಕೈಗಳನ್ನು ಜೋಡಿಸಿಕೊಂಡು ನಮಸ್ಕರಿಸುತ್ತಾ ಏಕಕಾಲದಲ್ಲಿ, ಋಷಿ-ಮುನಿಗಳೊಡನೆ ತಮ್ಮ ಮನೆಗೆ ಬಂದು ಆತಿಥ್ಯವನ್ನು ಸ್ವೀಕರಿಸಬೇಕೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿಕೊಂಡರು. ಈ ಭಕ್ತಪರಾಧೀನನಾದ ಶ್ರೀಕೃಷ್ಣನು ಭಕ್ತೋತ್ತಮರಿಬ್ಬರ ಪ್ರಾರ್ಥನೆಯನ್ನೂ ಅಂಗೀಕರಿಸಿದನು. ಇಬ್ಬರನ್ನೂ ಪ್ರಸನ್ನಗೊಳಿಸುವ ಸಲುವಾಗಿ ಆತನು ಒಂದೇ ಸಮಯದಲ್ಲಿ ಇಬ್ಬರಮನೆಗಳಿಗೂ ಪ್ರವೇಶಿಸಿದನು. ಆದರೆ ಇಬ್ಬರು ಭಕ್ತರೂ ಮೊದಲು ತಮ್ಮ ಮನೆಗೇ ಶ್ರೀಕೃಷ್ಣನು ಆಗಮಿಸಿದನೆಂದು ಹಿರಿಹಿಗ್ಗಿದರೇ ಹೊರತೂ ಎರಡು ರೂಪಗಳನ್ನು ಧರಿಸಿ ಏಕಕಾಲದಲ್ಲಿ ಇಬ್ಬರ ಮನೆಗಳಿಗೂ ಯೋಗೇಶನಾದ ಪರಮಾತ್ಮನು ಬಂದಿರುವನೆಂಬ

ವಿಷಯವು ಇಬ್ಬರಲ್ಲಿ ಯಾರೊಬ್ಬರಿಗೂ ತಿಳಿಯಲಿಲ್ಲ. ಭಗವಂತನ ಯೋಗ ಮಾಯೆಗೆ ಅನುಸಾರವಾಗಿ ಋಷಿ-ಮುನಿಗಳೂ ದ್ವಿರೂಪಧಾರಿಗಳೇ ಆಗಿದ್ದರು. ಏಕಕಾಲದಲ್ಲಿ ಶ್ರೀಕೃಷ್ಣನೊಡನೆ ಋಷಿ-ಮುನಿಗಳು ಕೂಡ ಇಬ್ಬರ ಮನೆಯಲ್ಲೂ ಆತಿಥ್ಯವನ್ನು ಸ್ವೀಕರಿಸಿದರು.

ಅಸತ್ಪುರುಷರಿಗೆ ಕೇಳಲು ಕೂಡ ದೂರಸ್ಥರಾಗಿದ್ದ ಆ ಮಹಾತ್ಮರು ತನ್ನ ಅರಮನೆಗೆ ಬರಲಾಗಿ–ಜನಕವಂಶೀಯನೂ, ಉದಾರಹೃದಯನೂ ಆದ ಬಹುಲಾಶ್ವರಾಜನು ಶ್ರೇಷ್ಠವಾದ ಸುಖಾಸನಗಳನ್ನು ತರಿಸಿ ಶ್ರೀಕೃಷ್ಣನನ್ನೂ ಋಷಿ-ಮುನಿಗಳನ್ನೂ ಆ ದಿವ್ಯವಾದ ಆಸನಗಳಲ್ಲಿ ಕುಳ್ಳಿರಿಸಿದನು.*

ಶ್ರೀಕೃಷ್ಣನನ್ನೂ ಮತ್ತು ಋಷಿ-ಮುನಿಗಳನ್ನೂ ನೋಡುತ್ತಿದ್ದಂತೆಯೇ ಜನಕನ ಪ್ರೇಮಭಕ್ತಿಯು ಉಕ್ಕಿ ಹೃದಯವು ಆನಂದದಿಂದ ತುಂಬಿ ಹೋಯಿತು. ಕಣ್ಣುಗಳಿಂದ ಆನಂದಬಿಂದುಗಳು ಮುತ್ತಿನಂತೆ ಉದುರ ತೊಡಗಿದುವು. ಬಹುಲಾಶ್ವನು ತನ್ನ ಪೂಜ್ಯತಮರಾದ ಅತಿಥಿಗಳ ಪಾದ ಗಳಿಗೆ ನಮಸ್ಕರಿಸಿ ಅನಂತರ ಅವರ ಪವಿತ್ರಚರಣಗಳನ್ನು ತೊಳೆದು ಲೋಕಪಾವನವಾದ ಚರಣತೀರ್ಥವನ್ನು ತನ್ನ ಕುಟುಂಬದೊಡನೆ ತಲೆ ಯಲ್ಲಿ ಧರಿಸಿದನು. ಅನಂತರ ಭಗವಂತನನ್ನೂ ಭಗವತ್ಸ್ವರೂಪರಾದ ಋಷಿ- ಮುನಿಗಳನ್ನೂ ಗಂಧ, ಪುಷ್ಪಮಾಲಿಕೆ, ವಸ್ತ್ರ, ಅಲಂಕಾರ, ಧೂಪ, ದೀಪ, ಅರ್ಘ್ಯ, ಹಸು, ಎತ್ತು–ಇವುಗಳ ಮೂಲಕವಾಗಿ ಸಂಪೂಜಿಸಿದನು.

---

* ಶ್ಲೋಕದಲ್ಲಿ ಶ್ರೋತುಮಪ್ಯಸತಾನ್ ದೂರಾನ್–ಎಂದು ಪಾಠವಿದೆ. ಅಸತ್ಪುರುಷರಿಗೆ (ಮನುಷ್ಯರಿಗೆ) ಕೇಳಲು ಕೂಡ ದೂರಸ್ಥರಾದ (ಮುನಿಗಳು) ಎಂದು ಅರ್ಥಮಾಡಲಾಗಿದೆ. 'ದುರ್ಜನರಿಗೆ ಕೇಳುವುದಕ್ಕೂ ದುರ್ಲಭವಾದ'– ಎಂದು ಒಬ್ಬ ವಿದ್ವಾಂಸರೂ, 'ದುಷ್ಟರು ಕೇಳುವುದಕ್ಕೂ ಅಸಾಧ್ಯರೆನಿಸಿರುವ'– ಎಂದು ಮತ್ತೊಬ್ಬ ವಿದ್ವಾಂಸರೂ ಅರ್ಥಮಾಡಿರುತ್ತಾರೆ. ಇದರಲ್ಲಿ ಪಾಠಭೇದವೂ ಇದೆ. ಶ್ರಾನ್ತಾನಪ್ಯಥ ತಾನ್ ದೂರಾತ್ = ದೂರದಿಂದ ಆಗಮಿಸಿ ಬಳಲಿರುವ–ಈ ಪಾಠಾಂತರವು ಸಮಯೋಚಿತವಾಗಿ ಹೊಂದಿಕೊಳ್ಳುವುದೆಂದು ನಮ್ಮ ಅಭಿಪ್ರಾಯ ವಾಗಿದೆ. ಆದರೆ ಬಹುಪಾಠಗಳಲ್ಲಿ ಶ್ರೋತುಮಪ್ಯಸತಾನ್ ದೂರಾನ್–ಎಂಬುದಾಗಿಯೇ ಇದೆ.

ಪೂಜ್ಯತಮರಾದ ಅತಿಥಿಗಳೆಲ್ಲರಿಗೂ ಮೃಷ್ಟಾನ್ನಭೋಜನವಾದನಂತರ ಬಹುಲಾಶ್ವನು ಶ್ರೀಕೃಷ್ಣನ ದಿವ್ಯವಾದ ಚರಣಕಮಲಗಳನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಮೆಲ್ಲನೆ ಅಮುಕುತ್ತಾ ಸಂತೋಷಭರಿತನಾಗಿ ಮಧು-ಮಧುರವಾದ ಈ ಮಾತುಗಳನ್ನು ಹೇಳಿದನು :

**ಭವಾನ್ ಹಿ ಸರ್ವಭೂತಾನಾಮಾತ್ಮಾ ಸಾಕ್ಷೀ ಸ್ವದೃಗ್ವಿಭೋ ।**
**ಅಥ ನಸ್ತ್ವತ್ಪದಾಮ್ಭೋಜಂ ಸ್ಮರತಾಂ ದರ್ಶನಂ ಗತಃ ॥೩೧॥**

"ಪ್ರಭುವೇ! ನೀನು ಸಮಸ್ತಪ್ರಾಣಿಗಳಿಗೂ ಆತ್ಮಸ್ವರೂಪನಾಗಿರುವೆ ; ಸಾಕ್ಷೀಭೂತನಾಗಿರುವೆ. ಸ್ವಯಂಪ್ರಕಾಶನೂ ಆಗಿರುವೆ. ನಾವು ಯಾವಾಗಲೂ ನಿನ್ನ ಚರಣಕಮಲಗಳ ಸ್ಮರಣೆಯನ್ನು ಮಾಡುತ್ತಲೇ ಇದ್ದೇವೆ. ಇದರ ಫಲವಾಗಿ ನೀನು ನಮಗೆ ದಿವ್ಯದರ್ಶನವನ್ನಿತ್ತು ನಮ್ಮನ್ನು ಕೃತಾರ್ಥರನ್ನಾಗಿ ಮಾಡಿರುವೆ.

**ಸ್ವವಚಸ್ತದೃತಂ ಕರ್ತುಮಸ್ಮದ್ದೃಗ್ಗೋಚರೋ ಭವಾನ್ ।**
**ಯದಾತ್ಥೈಕಾನ್ತಭಕ್ತಾನ್ಮೇ ನಾನನ್ತಃ ಶ್ರೀರಜಃ ಪ್ರಿಯಃ ॥೩೨॥**

'ನನ್ನಲ್ಲಿಯೇ ಅನನ್ಯವಾದ ಭಕ್ತಿಯಿರುವ ನನ್ನ ಏಕಾಂತಭಕ್ತರು ನನ್ನ ಸ್ವರೂಪವೇ ಆದ ಅನಂತನಿಗಿಂತಲೂ, ನನ್ನ ಪ್ರಾಣವಲ್ಲಭೆಯೇ ಆಗಿರುವ ಲಕ್ಷ್ಮೀದೇವಿಗಿಂತಲೂ, ನನ್ನ ನಾಭಿಕಮಲದಿಂದಲೇ ಜನ್ಮತಾಳಿರುವ ಬ್ರಹ್ಮನಿಗಿಂತಲೂ, ಅತ್ಯಂತ ಪ್ರಿಯರಾದವರು'–ಎಂದು ಹೇಳಿರುವ ನಿನ್ನ ಮಾತನ್ನು ಸತ್ಯಗೊಳಿಸುವ ಸಲುವಾಗಿ ನೀನು ನಮಗೆ ದರ್ಶನವನ್ನಿತ್ತಿರುವೆ. 'ಅನಂತನಾಗಲೀ, ಶ್ರೀಯಾಗಲೀ, ಬ್ರಹ್ಮನಾಗಲೀ ನನಗೆ ಪ್ರಿಯರಲ್ಲ. ನನಗೆ ಪ್ರಿಯರಾದವರೆಂದರೆ ಏಕಾಂತಭಕ್ತರು. ನನ್ನಲ್ಲಿಯೇ ಅನನ್ಯವಾದ ಭಕ್ತಿಯುಳ್ಳವರು'–ಎಂದು ಹಲವಾರು ಬಾರಿ ಹೇಳಿರುವೆ. ನಿನ್ನ ಮಾತಿಗೆ ಅನುಸಾರವಾಗಿಯೇ ನಾವಿಂದು ನಿನ್ನ ದಿವ್ಯವಿಗ್ರಹದ ದರ್ಶನವನ್ನು ಮಾಡುತ್ತಿದ್ದೇವೆ.

**ಕೋ ನು ತ್ವಚ್ಚರಣಾಮ್ಭೋಜಮೇವಂವಿದ್ವಿಸೃಜೇತ್ಪುಮಾನ್ ।**
**ನಿಷ್ಕಿಞ್ಚನಾನಾಂ ಶಾನ್ತಾನಾಂ ಮುನೀನಾಂ ಯಸ್ತ್ವಮಾತ್ಮದಃ ॥೩೩॥**

ಇಂತಹ ನಿನ್ನ ಭಕ್ತರ ಮೇಲಿರುವ ವಾತ್ಸಲ್ಯವನ್ನು ತಿಳಿದಿರುವ

ಯಾವನು ತಾನೇ ನಿನ್ನ ದಿವ್ಯವಾದ ಚರಣಕಮಲಗಳನ್ನು ಪರಿತ್ಯಜಿಸಿ ಯಾನು? ನಿನ್ನನ್ನು ಬಿಟ್ಟು ಬೇರೆ ತಮ್ಮದೆಂಬ ಯಾವ ವಸ್ತುವೂ ಇಲ್ಲದಿರುವ ಶಾಂತಾತ್ಮರಾದ ಮುನಿಗಳಿಗೆ ನೀನು ನಿನ್ನನ್ನೇ ಕೊಟ್ಟುಕೊಳ್ಳುವೆ.

**ಯೋऽವತೀರ್ಯ ಯದೋರ್ವಂಶೇ ನೃಣಾಂ ಸಂಸರತಾಮಿಹ ।**
**ಯಶೋ ವಿತೇನೇ ತಚ್ಛಾನ್ತ್ಯೈ ತ್ರೈಲೋಕ್ಯವೃಜಿನಾಪಹಮ್ ॥೩೪॥**

ನೀನು ಯದುವಂಶದಲ್ಲಿ ಅವತರಿಸಿ ಹುಟ್ಟು-ಸಾವುಗಳೆಂಬ ಚಕ್ರದಲ್ಲಿ ಸಿಕ್ಕಿ ನರಳುತ್ತಿರುವ ಮನುಷ್ಯರನ್ನು ಉದ್ಧರಿಸುವಸಲುವಾಗಿ, ಮೂರು ಲೋಕಗಳ ಪಾಪಗಳನ್ನೂ ತೊಡೆದು ಹಾಕುವಷ್ಟು ಸಾಮರ್ಥ್ಯವಿರುವ ನಿನ್ನ ಧವಳಕೀರ್ತಿಯನ್ನು ದಿಗಂತಗಳವರೆಗೂ ಹರಡಿರುವೆ.

**ನಮಸ್ತುಭ್ಯಂ ಭಗವತೇ ಕೃಷ್ಣಾಯಾಕುಣ್ಠಮೇಧಸೇ ।**
**ನಾರಾಯಣಾಯ ಋಷಯೇ ಸುಶಾನ್ತಂ ತಪ ಈಯುಷೇ ॥೩೫॥**

ಅಚಿಂತ್ಯಮಹಿಮನಾದ, ಪಾಪಹರನಾದ, ತಡೆಯಿಲ್ಲದ ಮೇಧಾಶಕ್ತಿ ಯುಳ್ಳ ನಾರಾಯಣ ಋಷಿಸ್ವರೂಪನೂ ಶಾಂತತಪಸ್ಕನೂ ಆದ ನಿನಗೆ ನಮಸ್ಕರಿಸುತ್ತೇನೆ.

**ದಿನಾನಿ ಕತಿಚಿದ್ಭೂಮನ್ ಗೃಹಾನ್ ನೋ ನಿವಸ ದ್ವಿಜೈಃ ।**
**ಸಮೇತಃ ಪಾದರಜಸಾ ಪುನೀಹೀದಂ ನಿಮೇಃ ಕುಲಮ್ ॥೩೬॥**

ಪರಬ್ರಹ್ಮಸ್ವರೂಪನೇ! ನೀನು ಕೆಲವು ದಿವಸಗಳಾದರೂ ಋಷಿ-ಮುನಿಗಳೊಡನೆ ನಮ್ಮ ಆತಿಥ್ಯವನ್ನು ಸ್ವೀಕರಿಸುತ್ತಾ ನಮ್ಮ ಅರಮನೆಯಲ್ಲಿಯೇ ಇದ್ದು ನಿನ್ನ ಚರಣಕಮಲಗಳ ಧೂಳಿಯಿಂದ ನಿಮಿವಂಶವನ್ನು ಪವಿತ್ರಗೊಳಿಸು."

ಪರೀಕ್ಷಿತಮಹಾರಾಜ! ನಿಮಿವಂಶೀಯನಾದ ಬಹುಲಾಶ್ವನು ಹೀಗೆ ಪ್ರಾರ್ಥಿಸಲಾಗಿ ಲೋಕಾನಂದಕರನಾದ ಶ್ರೀಕೃಷ್ಣನು ಜನಕನ ಪ್ರಾರ್ಥನೆಯಂತೆ ಮಿಥಿಲಾಪಟ್ಟಣದ ನರ-ನಾರಿಯರಿಗೆ ಕಲ್ಯಾಣವನ್ನುಂಟು ಮಾಡುತ್ತಾ ಕೆಲವು ದಿವಸಗಳವರೆಗೆ ಅಲ್ಲಿಯೇ ಇದ್ದುಬಿಟ್ಟನು.

ಇತ್ತಲಾಗಿ ಬಹುಲಾಶ್ವನಂತೆಯೇ ಶ್ರುತದೇವನೂ ಭಗವಾನ್

ಶ್ರೀಕೃಷ್ಣನನ್ನೂ ಮತ್ತು ಋಷಿ-ಮುನಿಗಳನ್ನೂ ತನ್ನ ಮನೆಗೆ ಕರೆದು ಕೊಂಡುಹೋಗಿ ಶ್ರೀಕೃಷ್ಣನಿಗೂ ಋಷಿ-ಮುನಿಗಳಿಗೂ ನಮಸ್ಕರಿಸಿ ಆನಂದ ತುಂದಿಲನಾಗಿ ವಸ್ತ್ರವನ್ನು ಮೇಲಕ್ಕೆ ಹಾರಿಸಿಕೊಂಡು ಕುಣಿದಾಡಿಬಿಟ್ಟನು. ಬಳಿಕ ಶ್ರುತದೇವನು ಶ್ರೀಕೃಷ್ಣನನ್ನೂ ಋಷಿ-ಮುನಿಗಳನ್ನೂ ಸ್ವಾಗತದ ಮೂಲಕವಾಗಿ ಅಭಿವಂದಿಸಿ ಮಣೆಗಳ ಮೇಲೂ, ದರ್ಭಾಸನಗಳ ಮೇಲೂ, ಕೃಷ್ಣಾಜಿನಗಳ ಮೇಲೂ ಕುಳ್ಳಿರಿಸಿ, ಪತ್ನಿಯರೊಡನೆ ಆಗಮಿಸಿದ್ದ ಅತಿಥಿಗಳ ಪಾದಾರವಿಂದಗಳನ್ನು ಪರಮಭಕ್ತಿಭಾವದಿಂದಲೂ, ಮಹಾನಂದದಿಂದಲೂ ತೊಳೆದನು. ಬಳಿಕ ಮಹಾಸೌಭಾಗ್ಯಶಾಲಿಯಾದ ಆ ಶ್ರುತದೇವನು ಶ್ರೀಕೃಷ್ಣನ ಮತ್ತು ಋಷಿ-ಮುನಿಗಳ ಪರಮಪಾವನವಾದ ಚರಣತೀರ್ಥವನ್ನು ಮನೆಗೆಲ್ಲಾ ಪ್ರೋಕ್ಷಿಸಿ ತನ್ನ ಕುಟುಂಬದವರೊಡಗೂಡಿ ತಾನೂ ಪ್ರೋಕ್ಷಿಸಿಕೊಂಡು ಬಹಳ ದಿವಸಗಳಿಂದಿದ್ದ ತನ್ನ ಮನೋರಥವನ್ನು ಪೂರ್ಣಗೊಳಿಸಿಕೊಂಡು ಅಧಿಕವಾಗಿ ಸಂತೋಷಿಸಿದನು. ಬಳಿಕ ಶ್ರುತ ದೇವನು ಫಲ, ಗಂಧ, ಲಾಮಂಚಗಳಿಂದ ಸುಗಂಧಿತವಾದ ನಿರ್ಮಲವಾದ ಮತ್ತು ಸುಮಧುರವಾದ ಶುದ್ಧೋದಕ, ಸುವಾಸನೆಯ ಮೃತ್ತಿಕೆ, ತುಳಸಿ, ದರ್ಭೆ ಕಮಲ–ಇವೇ ಮೊದಲಾದ ಬಹಳ ಸುಲಭವಾಗಿ ಸಿಕ್ಕುವ ಪೂಜಾ ಸಾಮಗ್ರಿಗಳಿಂದಲೂ ಸತ್ತ್ವಗುಣವನ್ನು ಹೆಚ್ಚಿಸುವ ಮೃಷ್ಟಾನ್ನದಿಂದಲೂ ಶ್ರೀಕೃಷ್ಣನೇ ಮೊದಲಾದ ಸಮಸ್ತಋಷಿ-ಮುನಿಗಳನ್ನೂ ಸತ್ಕರಿಸಿದನು. ಆ ಸಮಯದಲ್ಲಿ ಶ್ರುತದೇವನು ತನ್ನಲ್ಲಿಯೇ ತಾನು ಹೀಗೆ ಯೋಚಿಸಿದನು. "ಗೃಹಸ್ಥಾಶ್ರಮವೆಂಬ ಕಗ್ಗತ್ತಲೆಯು ಕವಿದಿರುವ ಬಾವಿಯಲ್ಲಿ ಬಿದ್ದು ತೊಳಲಾಡುತ್ತಿರುವ ನನಗೆ ಸಮಸ್ತತೀರ್ಥಗಳನ್ನೂ ತೀರ್ಥೀಕರಿಸಲು ಸಮರ್ಥವಾದ, ಪರಮಪವಿತ್ರವಾದ ಪಾದಧೂಳಿಗಳನ್ನು ಹೊಂದಿರುವ ಭಗವಂತನ ಮತ್ತು ಭಾಗವತೋತ್ತಮರ ಪವಿತ್ರಸಂಗವು ದೊರೆಯಲು ಹೇಗೆ ತಾನೇ ಸಾಧ್ಯವಾಯಿತು? ಪರಮದಯಾಳುವಾದ ಭಗವಾನ್ ಶ್ರೀಕೃಷ್ಣನ ಕೃಪಾವಿಶೇಷದಿಂದಲೇ ನನಗೆ ಇದು ಲಭ್ಯವಾಗಿದೆ."

ಅತಿಥಿಗಳೆಲ್ಲರೂ ಆದರದ ಆತಿಥ್ಯವನ್ನು ಸ್ವೀಕರಿಸಿ ಸುಖಾಸನಗಳಲ್ಲಿ ಕುಳಿತನಂತರ ಶ್ರುತದೇವನು ತನ್ನ ಪತ್ನೀ-ಪುತ್ರರೊಡನೆಯೂ, ಬಂಧು ಗಳೊಡನೆಯೂ ಅವರ ಸೇವೆಮಾಡಲು ತೊಡಗಿದನು. ಭಗವಂತನ ಚರಣ

ಕಮಲಗಳನ್ನು ಹಿಡಿದುಕೊಂಡು ಶ್ರುತದೇವನು ಶ್ರೀಕೃಷ್ಣನನ್ನು ಪರಿಪರಿಯಾಗಿ ಸ್ತುತಿಸಿದನು.

**ನಾದ್ಯ ನೋ ದರ್ಶನಂ ಪ್ರಾಪ್ತಃ ಪರಂ ಪರಮಪೂರುಷಃ ।**
**ಯರ್ಹೀದಂ ಶಕ್ತಿಭಿಃ ಸೃಷ್ಟ್ವಾ ಪ್ರವಿಷ್ಟೋ ಹ್ಯಾತ್ಮಸತ್ತಯಾ ॥೪೪॥**

“ಪ್ರಭುವೇ! ಇದೇ ಮೊದಲನೆಯದಾಗಿ ನಾವು ನಿನ್ನ ದರ್ಶನ ಮಾಡಿದೆವು–ಎಂಬುದೇನಿಲ್ಲ. ಅನಾದಿಕಾಲದಿಂದಲೂ ನಾವು ನಿನ್ನನ್ನು ಸಂದರ್ಶಿಸುತ್ತಲೇ ಇದ್ದೇವೆ. ನೀನು ಯಾವಾಗ ಸ್ವಶಕ್ತಿಯಿಂದಲೇ ಈ ಜಗತ್ತನ್ನು ನಿರ್ಮಿಸಿ **ತತ್ಸೃಷ್ಟ್ವಾ ತದೇವಾನು ಪ್ರವಿಶತಿ**–ಎಂಬ ಶ್ರುತಿಯ ವಾಕ್ಯಕ್ಕೆ ಅನುಸಾರವಾಗಿ ಜೀವರೂಪದಿಂದ ಅದರಲ್ಲಿ ಅನುಪ್ರವೇಶಮಾಡಿ ದೆಯೋ ಅಂದಿನಿಂದಲೂ ನಾವು ನಿನ್ನನ್ನೂ ನಿನ್ನ ಪ್ರಭಾವವನ್ನೂ ಕಾಣುತ್ತಲೇ ಇದ್ದೇವೆ.

**ಯಥಾ ಶಯಾನಃ ಪುರುಷೋ ಮನಸೈವಾತ್ಮಮಾಯಯಾ ।**
**ಸೃಷ್ಟ್ವಾ ಲೋಕಂ ಪರಂ ಸ್ವಾಪ್ನಮನುವಿಶ್ಯಾವಭಾಸತೇ ॥೪೫॥**

ಯಾವ ರೀತಿಯಲ್ಲಿ ಮಲಗಿರುವ ಮನುಷ್ಯನೊಬ್ಬನು ಅವಿದ್ಯೆಗೆ ವಶನಾಗಿ ಮನಸ್ಸಿನಲ್ಲಿಯೇ ಸ್ವಪ್ನವೆಂಬ ಜಗತ್ತನ್ನು ಸೃಷ್ಟಿಸಿ ಆ ಜಗತ್ತಿನಲ್ಲಿಯೇ ತಾನೂ ಒಬ್ಬ ಪಾತ್ರಧಾರಿಯಾಗಿದ್ದು ಹಲವಾರು ರೂಪಗಳಲ್ಲಿರುತ್ತಾ ಹಲವಾರು ಕಾರ್ಯಗಳನ್ನು ಮಾಡುತ್ತಾ ಸುಖ-ದುಃಖಗಳನ್ನೂ ಅನುಭವಿಸುತ್ತಿರುವಂತೆ ಭಾವಿಸಿಕೊಳ್ಳುವನೋ, ಅದೇ ರೀತಿಯಲ್ಲಿ ನಿನ್ನ ಮಾಯೆಯಿಂದಲೇ ನೀನು ಈ ಜಗತ್ತನ್ನು ಸೃಷ್ಟಿಸಿ ಅದರಲ್ಲಿಯೇ ಅನುಪ್ರವೇಶಮಾಡಿ ನಾನಾರೂಪಗಳಲ್ಲಿ ಪ್ರಕಾಶಿಸುತ್ತಿರುವೆ.

**ಶೃಣ್ವತಾಂ ಗದತಾಂ ಶಶ್ವದರ್ಚತಾಂ ತ್ವಾಭಿವನ್ದತಾಮ್ ।**
**ನೃಣಾಂ ಸಂವದತಾಮನ್ತರ್ಹೃದಿ ಭಾಸ್ಯಮಲಾತ್ಮನಾಮ್ ॥೪೬॥**

ಯಾವ ಜನರು ಎಲ್ಲ ಕಾಲಗಳಲ್ಲಿಯೂ ಲೀಲಾಮಾನುಷವಿಗ್ರಹನಾದ ನಿನ್ನ ಅದ್ಭುತವಾದ ಲೀಲಾಪ್ರಸಂಗಗಳನ್ನು ಕೇಳುವರೋ, ಕೀರ್ತಿಸುವರೋ, ನಿನ್ನ ದಿವ್ಯಮಂಗಳಶ್ರೀವಿಗ್ರಹಗಳನ್ನು ಅರ್ಚಿಸುವರೋ, ನಿನ್ನ ಲೀಲಾಪ್ರಸಂಗಗಳನ್ನು ಪರಸ್ಪರವಾಗಿ ಕಲೆತು ಮಾತನಾಡುವರೋ, ಅಂತಹ

ವರ ಹೃದಯವು (ಮನಸ್ಸು) ಸ್ಫಟಿಕದಂತೆ ಶುದ್ಧವಾಗುತ್ತದೆ ಮತ್ತು ಅಂತಹ ಶುದ್ಧಾಂತರಂಗರಾದವರ ಹೃದಯಗಳಲ್ಲಿ ನೀನು ಪ್ರಕಾಶಿಸುವೆ.

**ಹೃದಿಸ್ಥೋಽಪ್ಯತಿದೂರಸ್ಥಃ ಕರ್ಮವಿಕ್ಷಿಪ್ತಚೇತಸಾಮ್ ।**
**ಆತ್ಮಶಕ್ತಿಭಿರಗ್ರಾಹ್ಯೋಽಪ್ಯನ್ತ್ಯುಪೇತಗುಣಾತ್ಮನಾಮ್ ॥೪೭॥**




ನೀನು ಸಮಸ್ತರ ಹೃದಯಗಳಲ್ಲಿಯೂ ಯಾವ ವಿಧವಾದ ಪಕ್ಷಪಾತವೂ ಇಲ್ಲದೇ ನೆಲೆಸಿದ್ದರೂ ಕಾಮ್ಯಕರ್ಮಗಳಲ್ಲಿ ತೊಡಗಿ ಚಂಚಲಚಿತ್ತರಾದವರಿಂದ ನೀನು ಬಹಳ ದೂರಸ್ಥನಾಗುವೆ. ಅಂತಹವರು ಒಮ್ಮೆಯಾದರೂ ತಮ್ಮ ಹೃದಯದಲ್ಲಿಯೇ ಪರಮಾತ್ಮನಿರುವನೆಂಬುದನ್ನು ಭಾವಿಸಿಕೊಳ್ಳುವುದಿಲ್ಲ. ಪ್ರಾಣ, ಇಂದ್ರಿಯ ಮುಂತಾದ ಆತ್ಮಶಕ್ತಿಗಳಿಂದ ನಿನ್ನನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಆದರೂ ಗುಣಾತ್ಮರಿಗೆ, ಭಕ್ತಿ-ಶ್ರದ್ಧೆಯೇ ಮೊದಲಾದ ಸದ್ಗುಣಗಳಿಂದ ಸಂಪನ್ನರಾದವರಿಗೆ ನೀನು ಅತ್ಯಂತ ಸಮೀಪದವನಾಗುವೆ.*

---

* ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಇದನ್ನೇ ಪರ್ಯಾಯಾಂತರವೆಂದು ಹೇಳುತ್ತಾನೆ.

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥**

[7-25]

ನಾನು ಎಲ್ಲರಿಗೂ ಕಾಣಿಸುವುದಿಲ್ಲ. ಏಕೆಂದರೆ : ಯೋಗಮಾಯೆಯಿಂದ ನಾನು ಆವೃತನಾಗಿದ್ದೇನೆ. ಈ ಮೂಢ ಜನರು ನನ್ನ ಅವ್ಯಯಸ್ವರೂಪವನ್ನು ತಿಳಿಯರು.

**ನಮೋಽಸ್ತು ತೇಽಧ್ಯಾತ್ಮವಿದಾಂ ಪರಾತ್ಮನೇ**
**ಅನಾತ್ಮನೇ ಸ್ವಾತ್ಮವಿಭಕ್ತಮೃತ್ಯವೇ ।**
**ಸಕಾರಣಾಕಾರಣಲಿಙ್ಗಮೀಯುಷೇ**
**ಸ್ವಮಾಯಯಾ ಸಂವೃತರುದ್ಧದೃಷ್ಟಯೇ ॥೪೮॥**

ಪ್ರಭುವೇ! ಅಧ್ಯಾತ್ಮವನ್ನು ತಿಳಿದ ಜ್ಞಾನಿಗಳಿಗೆ ನೀನು ಆತ್ಮರೂಪನಾಗಿ ಅವರ ಹೃದಯಕಮಲಗಳಲ್ಲಿ ಬೆಳಗುವೆ. ದೇಹಾತ್ಮಬುದ್ಧಿಯುಳ್ಳವರಿಗೆ ನೀನು ಅವರಿಗೆ ಪ್ರಾಪ್ತವಾಗುವ ಮೃತ್ಯುವಿನ ಸ್ವರೂಪನಾಗಿರುವೆ. ಮಹತ್ತತ್ತ್ವವೇ ಮೊದಲಾದ ಕಾರ್ಯದ್ರವ್ಯಗಳಿಗೂ ಪ್ರಕೃತಿ ರೂಪವಾದ ಕಾರಣದ್ರವ್ಯಕ್ಕೂ ನೀನು ನಿಯಾಮಕನೂ, ಶಾಸಕನೂ ಆಗಿರುವೆ. ನಿನ್ನಿಂದಲೇ ಸೃಷ್ಟಿಸಲ್ಪಟ್ಟ ಮಾಯೆಯು ನಿನ್ನನ್ನು ಮುಚ್ಚಲಾರದು. ನೀನು ಮಾಯೆಗೆ ಅತೀತನಾದವನು. ಆದರೆ ಆ ಮಾಯೆಯು ಇತರರ ದೃಷ್ಟಿಗಳನ್ನು ಮುಚ್ಚಿಬಿಡುತ್ತದೆ. ನಿನ್ನ ಹೊರತಾಗಿ ಉಳಿದವರೆಲ್ಲರೂ ಮಾಯೆಯಿಂದ ಮುಚ್ಚಿಹೋಗಿದ್ದಾರೆ. ಅಂತಹ ಮಾಯಾಮಯನಾದ ನಿನಗೆ ನಮಸ್ಕರಿಸುತ್ತೇನೆ.

**ಸ ತ್ವಂ ಶಾಧಿ ಸ್ವಭೃತ್ಯಾನ್ ನಃ ಕಿಂ ದೇವ ಕರವಾಮಹೇ ।**
**ಏತದನ್ತೋ ನೃಣಾಂ ಕ್ಲೇಶೋ ಯದ್ಭವಾನಕ್ಷಿಗೋಚರಃ ॥೪೯॥**

ದೇವದೇವನೇ! ನಿನ್ನ ಸೇವಕರಾಗಿರುವ ನಮಗೆ ಆಜ್ಞಾಪಿಸು. ನಾವು ನಿನಗಾಗಿ ಯಾವ ಸೇವೆಯನ್ನು ಮಾಡೋಣ? ಕಣ್ಣುಗಳ ಮೂಲಕವಾಗಿ ನಿನ್ನ ದಿವ್ಯದರ್ಶನವಾದೊಡನೆಯೇ ಸಮಸ್ತಕ್ಲೇಶಗಳೂ ದೂರವಾಗಿಬಿಡುತ್ತವೆ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಶರಣಾಗತರ ಪೀಡಾಪರಿಹಾರಕನಾದ ಭಗವಾನ್ ಶ್ರೀಕೃಷ್ಣನು ಶ್ರುತದೇವನ ಪ್ರಾರ್ಥನೆಯನ್ನು ಆಲಿಸಿ ತನ್ನ ಕೈಯಿಂದ ಬ್ರಾಹ್ಮಣನ ಕೈಯನ್ನು ಹಿಡಿದುಕೊಂಡು ನಸುನಗುತ್ತಾ ಈ ಮಾತುಗಳನ್ನು ಹೇಳಿದನು :

**ಬ್ರಹ್ಮಂಸ್ತೇಽನುಗ್ರಹಾರ್ಥಾಯ ಸಮ್ಪ್ರಾಪ್ತಾನ್ ವಿದ್ಧ್ಯಮೂನ್ ಮುನೀನ್।**
**ಸಞ್ಚರನ್ತಿ ಮಯಾ ಲೋಕಾನ್ ಪುನನ್ತಃ ಪಾದರೇಣುಭಿಃ ॥೫೧॥**

"ಪ್ರಿಯ ಶ್ರುತದೇವ! ಈ ಮಹಾಮಹಾ ಋಷಿ-ಮುನಿಗಳು ನಿನ್ನನ್ನು ಅನುಗ್ರಹಿಸುವ ಸಲುವಾಗಿಯೇ ಇಲ್ಲಿಗೆ ಆಗಮಿಸಿದ್ದಾರೆ. ಇವರು ತಮ್ಮ ಚರಣಕಮಲಗಳ ಧೂಳಿಯಿಂದ ಲೋಕಗಳನ್ನೂ ಲೋಕಗಳಲ್ಲಿರುವ ಜನರನ್ನೂ ಪವಿತ್ರಗೊಳಿಸುತ್ತಾ ನನ್ನೊಡನೆ ಸಂಚರಿಸುತ್ತಿರುತ್ತಾರೆ.

**ದೇವಾಃ ಕ್ಷೇತ್ರಾಣಿ ತೀರ್ಥಾನಿ ದರ್ಶನಸ್ಪರ್ಶನಾರ್ಚನೈಃ ।**
**ಶನೈಃ ಪುನನ್ತಿ ಕಾಲೇನ ತದಪ್ಯರ್ಹತ್ತಮೇಕ್ಷಯಾ ॥೫೨॥**

ದೇವತೆಗಳು, ಪುಣ್ಯಕ್ಷೇತ್ರಗಳು ಮತ್ತು ತೀರ್ಥಗಳ ದರ್ಶನ, ಸ್ಪರ್ಶ, ಅರ್ಚನೆ–ಇವೇ ಮುಂತಾದುವು ಪೂಜೆಗಳಿಂದಲೂ ಉಪವಾಸಾದಿ ವ್ರತಗಳಿಂದಲೂ ಹಲವಾರು ದಿವಸಗಳಲ್ಲಿ ಮೆಲ್ಲ-ಮೆಲ್ಲನೆ ಮಾನವನನ್ನು ಪವಿತ್ರಗೊಳಿಸುತ್ತವೆ. ಆದರೆ ಸತ್ಪುರುಷರಾದವರು ಕೇವಲ ತಮ್ಮ ದೃಷ್ಟಿಪಾತದಿಂದಲೇ ಸಮಸ್ತರನ್ನೂ ಪವಿತ್ರಗೊಳಿಸುತ್ತಾರೆ. ಇಷ್ಟು ಮಾತ್ರವಲ್ಲ; ದೇವತೆಗಳಿಗೂ, ಪುಣ್ಯಕ್ಷೇತ್ರಗಳಿಗೂ ಮತ್ತು ಪುಣ್ಯತೀರ್ಥಗಳಿಗೂ ತಮ್ಮನ್ನು ಉಪಾಸಿಸುವವರನ್ನು ಪವಿತ್ರಗೊಳಿಸುವ ಯಾವ ಶಕ್ತಿಯಿರುವುದೋ ಆ ಶಕ್ತಿಯು ಈ ಋಷಿ-ಮುನಿಗಳ ಕೇವಲ ದೃಷ್ಟಿಯಲ್ಲಿಯೇ ಅಡಗಿದೆ. ಒಮ್ಮೆ ಅಂತಹ ಮಹಾನುಭಾವರ ದೃಷ್ಟಿಪಥಕ್ಕೆ ಬಿದ್ದರೆ ಸಾಕು. ಕಡುಪಾಪಿಯೂ ಪರಮಪವಿತ್ರನಾಗಿಬಿಡುತ್ತಾನೆ.

**ಬ್ರಾಹ್ಮಣೋ ಜನ್ಮನಾ ಶ್ರೇಯಾನ್ಸರ್ವೇಷಾಂ ಪ್ರಾಣಿನಾಮಿಹ ।**
**ತಪಸಾ ವಿದ್ಯಯಾ ತುಷ್ಟ್ಯಾ ಕಿಮು ಮತ್ಕಲಯಾ ಯುತಃ ॥೫೩॥**

ಶ್ರುತದೇವ! ಹುಟ್ಟಿನಿಂದಲೇ ಬ್ರಾಹ್ಮಣನು ಸಕಲ ಪ್ರಾಣಿಗಳಿಗೂ ಶ್ರೇಷ್ಠನೆನಿಸುತ್ತಾನೆ. ಹೀಗಿರುವಾಗ ಅಂತಹ ಬ್ರಾಹ್ಮಣನು ತಪಸ್ಸಿನಿಂದಲೂ, ವಿದ್ಯೆಯಿಂದಲೂ ಕೂಡಿ, ಯದೃಚ್ಛಾಲಾಭಸಂತುಷ್ಟನೂ ನನ್ನ ಪರಮಭಕ್ತನೂ ಆಗಿದ್ದು, ನನ್ನ ಕಲೆಯನ್ನು (ದಿವ್ಯಸುಂದರ ಶ್ರೀವಿಗ್ರಹವನ್ನು) ಹೃತ್ಕಮಲದಲ್ಲಿ ಧರಿಸಿದ್ದರೆ ಅಂತಹ ಬ್ರಾಹ್ಮಣನ ವಿಷಯವಾಗಿ ಹೇಳುವುದೇನಿದೆ?

**ನ ಬ್ರಾಹ್ಮಣಾನ್ಮೇ ದಯಿತಂ ರೂಪಮೇತಚ್ಚತುರ್ಭುಜನಮ್ ।**
**ಸರ್ವವೇದಮಯೋ ವಿಪ್ರಃ ಸರ್ವದೇವಮಯೋ ಹ್ಯಹಮ್ ॥೫೪॥**

ನನಗೆ ಬ್ರಾಹ್ಮಣರು ಅತ್ಯಂತಪ್ರಿಯರು. ಈ ನನ್ನ ಚತುರ್ಭುಜಗಳಿಂದ ಕೂಡಿರುವ ಶರೀರವು ಕೂಡ ನನಗೆ ಬ್ರಾಹ್ಮಣರಷ್ಟು ಪ್ರಿಯವಲ್ಲ. ಇದಕ್ಕೆ ಕಾರಣವಿಲ್ಲದಿಲ್ಲ. ಬ್ರಾಹ್ಮಣನು ಸರ್ವವೇದಮಯನು. ನಾನಾದರೋ ಸರ್ವದೇವಮಯನು. ಎಲ್ಲ ದೇವತೆಗಳನ್ನೂ ನನ್ನಲ್ಲಿಯೇ ಅಡಗಿಸಿಕೊಂಡಿದ್ದೇನೆ. ಆದರೆ ನನ್ನನ್ನೂ ದೇವತೆಗಳನ್ನೂ ಪ್ರಕಾಶಗೊಳಿಸತಕ್ಕುವುಗಳು ವೇದಗಳು. ಅಂತಹ ವೇದಗಳ ಮೂರ್ತಸ್ವರೂಪನು ಬ್ರಾಹ್ಮಣನೇ ಆದುದರಿಂದ ಅವನು ನನಗೆ ಅತಿಪ್ರಿಯನು.

**ದುಷ್ಪ್ರಜ್ಞಾ ಅವಿದಿತ್ವೈವಮವಜಾನನ್ತ್ಯ ಸೂಯವಃ ।**
**ಗುರುಂ ಮಾಂ ವಿಪ್ರಮಾತ್ಮಾನಮರ್ಚಾದಾವಿಜ್ಯದೃಷ್ಟಯಃ ॥೫೫॥**

ದುರ್ಬುದ್ಧಿಯ ಮನುಷ್ಯರು ಈ ವಿಷಯವನ್ನು ತಿಳಿಯದೆ, ಕೇವಲ ಶಿಲಾ-ಲೋಹವಿಗ್ರಹಗಳಲ್ಲಿಯೇ ಪೂಜ್ಯಬುದ್ಧಿಯನ್ನಿಟ್ಟು, ಗುಣಗಳಲ್ಲಿ ದೋಷಗಳನ್ನೇ ಹುಡುಕುತ್ತಾ, ಸರ್ವರಿಗೂ ಗುರುವಾಗಿ ಬ್ರಾಹ್ಮಣರೂಪನಾಗಿರುವ ನನ್ನನ್ನು ತಿರಸ್ಕಾರದೃಷ್ಟಿಯಿಂದ ನೋಡುತ್ತಾರೆ.

**ಚರಾಚರಮಿದಂ ವಿಶ್ವಂ ಭಾವಾ ಯೇ ಚಾಸ್ಯ ಹೇತವಃ ।**
**ಮದ್ರೂಪಾಣೀತಿ ಚೇತಸ್ಯಾಧತ್ತೇ ವಿಪ್ರೋ ಮದೀಕ್ಷಯಾ ॥೫೬॥**

ಬ್ರಾಹ್ಮಣನಾದವನು ಜ್ಞಾನಯೋಗ-ಭಕ್ತಿಯೋಗ-ಕರ್ಮಯೋಗಗಳ ಮೂಲಕವಾಗಿ ನನ್ನನ್ನು ಸಾಕ್ಷಾತ್ಕರಿಸಿಕೊಂಡು—ಈ ಚರಾಚರಜಗತ್ತು ಇದಕ್ಕೆ ಸಂಬಂಧಿಸಿದಂತೆ ಸಮಸ್ತಭಾವನೆಗಳು, ಇವುಗಳಿಗೆ ಕಾರಣಗಳಾದ ಪ್ರಕೃತಿ-ಮಹತ್ತಾದಿಗಳು—ಸಮಸ್ತವೂ ಆತ್ಮಸ್ವರೂಪನಾದ ಭಗವಂತನ ರೂಪಗಳೆಂದೇ ನಿಶ್ಚಯರೂಪದಿಂದ ತಿಳಿಯುತ್ತಾನೆ.

**ತಸ್ಮಾದ್ಬ್ರಹ್ಮಋಷೀನೇತಾನ್ಬ್ರಹ್ಮನ್ ಮಚ್ಛ್ರದ್ಧಯಾರ್ಚಯ ।**
**ಏವಂ ಚೇದರ್ಚಿತೋಽಸ್ಮ್ಯದ್ಧಾ ನಾನ್ಯಥಾ ಭೂರಿಭೂತಿಭಿಃ ॥೫೭॥**

ಆದುದರಿಂದ, ಶ್ರುತದೇವ! ಈ ಬ್ರಾಹ್ಮಣರು ನನ್ನ ಸ್ವರೂಪರೆಂದೇ ತಿಳಿದು ಪರಮಪೂಜ್ಯರಾದ ಇವರನ್ನು ಅತ್ಯಂತ ಶ್ರದ್ಧೆಯಿಂದ ಪೂಜಿಸಿ

ಸತ್ಕರಿಸು. ನೀನು ಹೀಗೆ ಮಾಡಿದರೆ ನಿರಾಯಾಸವಾಗಿ ನನ್ನ ಪೂಜೆಯನ್ನೇ ಮಾಡಿದಂತಾಗುತ್ತದೆ. ಹಾಗಿಲ್ಲದೆ ನನ್ನನ್ನಾಗಲೀ ನನ್ನ ಶ್ರೀವಿಗ್ರಹಗಳನ್ನಾಗಲೀ ಬಹುಮೂಲ್ಯವಾದ ಪೂಜಾಸಾಮಗ್ರಿಗಳಿಂದ ಅರ್ಚಿಸಿ ವೈಭವಿಸಿದರೂ ಅದು ನನ್ನನ್ನು ತೃಪ್ತಿಗೊಳಿಸುವ ಪೂಜೆಯಾಗುವುದಿಲ್ಲ. ಅಂತಹ ಪೂಜೆಗಳಿಂದ ನನಗೆ ತೃಪ್ತಿಯಾಗುವುದಿಲ್ಲ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಶ್ರುತದೇವನು ಭಗವಾನ್ ಶ್ರೀಕೃಷ್ಣನ ಈ ಆದೇಶವನ್ನು ಕೇಳಿ ಶ್ರೀಕೃಷ್ಣನನ್ನೂ ದ್ವಿಜಶ್ರೇಷ್ಠರನ್ನೂ ಏಕಾತ್ಮಭಾವದಿಂದ ಆರಾಧಿಸಿ ಅವರ ಕೃಪೆಯಿಂದ ಭಗವತ್ಸ್ವರೂಪವನ್ನೇ ಪಡೆದುಕೊಂಡನು. ಅಂತೆಯೇ ಬಹುಲಾಶ್ವನಿಗೂ ಶ್ರೀಕೃಷ್ಣನ ಮತ್ತು ಋಷಿ-ಮುನಿಗಳ ಕೃಪೆಯಿಂದ ಸದ್ಗತಿಯುಂಟಾಯಿತು.

**ಏವಂ ಸ್ವಭಕ್ತಯೋ ರಾಜನ್ ಭಗವಾನ್ ಭಕ್ತಭಕ್ತಿಮಾನ್ ।**
**ಉಷಿತ್ವಾಽದಿಶ್ಯ ಸನ್ಮಾರ್ಗಂ ಪುನರ್ದ್ವಾರವತೀಮಗಾತ್ ॥೫೯॥**

ಪ್ರಿಯಪರೀಕ್ಷಿತನೇ! ಹೀಗೆ ಭಕ್ತನು ಭಗವಂತನಲ್ಲಿ ಎಂತಹ ಭಕ್ತಿಯನ್ನು ತೋರಿಸುವನೋ ಅಂತಹ ಪ್ರೇಮಭಕ್ತಿಯನ್ನೇ ಭಗವಂತನು ಭಕ್ತರ ವಿಷಯದಲ್ಲೂ ತೋರುತ್ತಾನೆ. ಕರುಣಾಮಯನಾದ ಸ್ವಾಮಿಯು ಭಕ್ತರಿಗೂ ಭಕ್ತನಾಗಿರುತ್ತಾನೆ. ಹೀಗೆ ಅವನು ತನ್ನ ಇಬ್ಬರು ಭಕ್ತರನ್ನೂ ಉದ್ಧರಿಸುವ ಸಲುವಾಗಿ ಮಿಥಿಲೆಗೆ ಬಂದು ಹಲವಾರು ದಿವಸಗಳವರೆಗೆ ಅಲ್ಲಿಯೇ ಇದ್ದು, ಆ ತನ್ನ ಇಬ್ಬರು ಭಕ್ತರಿಗೂ ಸನ್ಮಾರ್ಗವನ್ನು ಉಪದೇಶಿಸಿ, ಅವರಿಗೆ ಸದ್ಗತಿಯನ್ನು ಅನುಗ್ರಹಿಸಿ ದ್ವಾರಕಾಪಟ್ಟಣಕ್ಕೆ ಪ್ರಯಾಣ ಬೆಳೆಸಿದನು."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೬ನೆಯ ಅಧ್ಯಾಯವು ಮುಗಿಯಿತು.

---

## ವೇದ ಸ್ತುತಿ

ಪರೀಕ್ಷಿತನು ಹೇಳುತ್ತಾನೆ :

**ಬ್ರಹ್ಮನ್ಬ್ರಹ್ಮಣ್ಯನಿರ್ದೇಶ್ಯೇ ನಿರ್ಗುಣೇ ಗುಣವೃತ್ತಯಃ ।**
**ಕಥಂ ಚರನ್ತಿ ಶ್ರುತಯಃ ಸಾಕ್ಷಾತ್ ಸದಸತಃ ಪರೇ ॥೧॥**

"ಪೂಜ್ಯರೇ! ಪರಬ್ರಹ್ಮತತ್ತ್ವವು ಕಾರ್ಯ-ಕಾರಣಗಳಿಂದ ಅತೀತವಾದದ್ದಾಗಿದೆ. ಗುಣಾತೀತವಾಗಿದೆ. ಸತ್ತ್ವ-ರಜಸ್ತಮೋಗುಣಗಳು ಆ ಬ್ರಹ್ಮವಸ್ತುವಿನಲ್ಲಿ ಇಲ್ಲ. ಮನಸ್ಸಿನಿಂದಾಗಲೀ ಮಾತಿನ ಸಂಕೇತರೂಪದಿಂದಾಗಲೀ ಬ್ರಹ್ಮವಸ್ತುವನ್ನು ನಿರ್ದೇಶಿಸಿ ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಸಮಸ್ತಶ್ರುತಿಗಳ ವಿಷಯವೂ ಗುಣವೇ ಆಗಿದೆ. ಶ್ರುತಿಯು ಯಾವ ವಿಷಯವನ್ನು ವರ್ಣಿಸಿ ಹೇಳುತ್ತದೆಯೋ ಆ ವಿಷಯದ ಗುಣ-ಜಾತಿ-ಕ್ರಿಯೆಗಳನ್ನು ನಿರ್ದೇಶಿಸಿ ಹೇಳುತ್ತದೆ. ಹೀಗಿರುವಾಗ ಶ್ರುತಿಗಳು ನಿರ್ಗುಣಬ್ರಹ್ಮನನ್ನೂ ಹೇಗೆ ಪ್ರತಿಪಾದಿಸುತ್ತವೆ?"*

ಶ್ರೀಶುಕಮುನಿಗಳು ಹೇಳುತ್ತಾರೆ :

**ಬುದ್ಧೀನ್ದ್ರಿಯಮನಃಪ್ರಾಣಾಞ್ಜನಾನಾಮಸೃಜತ್ಪ್ರಭುಃ।**
**ಮಾತ್ರಾರ್ಥಂ ಚ ಭವಾರ್ಥಂ ಚ ಆತ್ಮನೇಽಕಲ್ಪನಾಯ ಚ ॥೨॥**

"ಸರ್ವತಂತ್ರಸ್ವತಂತ್ರನಾದ ಪರಮೇಶ್ವರನು ಜೀವಿಗಳ ವಿಷಯಾನುಭವಕ್ಕಾಗಿಯೂ, ಸೃಷ್ಟಿಕಾರ್ಯಗಳಿಗಾಗಿಯೂ, ಲೋಕಾಂತರಗಾಮಿಯಾಗುವ ಜೀವಾತ್ಮನಿಗೆ ಭೋಗಕ್ಕಾಗಿಯೂ ಮೋಕ್ಷಸಾಧನೆಗಾಗಿಯೂ ಬುದ್ಧಿ, ಇಂದ್ರಿಯಗಳು, ಮನಸ್ಸು, ಪ್ರಾಣ–ಇವುಗಳನ್ನು ಸೃಷ್ಟಿಸಿದ್ದಾನೆ.

ಪೂರ್ವದಲ್ಲಿ ಭಗವಂತನು ತನ್ನಲ್ಲಿರುವ ಜೀವರುಗಳು ಶಬ್ದಾದಿ

---

* ತ್ರೈಗುಣ್ಯವಿಷಯಾ ವೇದಾಃ : ವೇದಗಳು ಸತ್ತ್ವರಜಸ್ತಮೋಗುಣಗಳನ್ನೇ ವಿಷಯಗಳನ್ನಾಗಿ ಹೊಂದಿವೆ–ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಸತ್ತ್ವರಜಸ್ತಮೋಗುಣಗಳ ಪ್ರತಿಪಾದಕಗಳಾದ ವೇದಗಳಿಗೆ ಗುಣಾತೀತತೆಯನ್ನು ಪ್ರತಿ ಪಾದಿಸಲು ಹೇಗೆ ತಾನೇ ಸಾಧ್ಯ? ಪರಬ್ರಹ್ಮತತ್ತ್ವವು ಗುಣಾತೀತವಾದುದು. ಅಂತಹ ನಿರ್ಗುಣ-ಪರಬ್ರಹ್ಮತತ್ತ್ವವನ್ನು ತ್ರೈಗುಣ್ಯವಿಷಯಗಳಾದ ವೇದಗಳಿಗೆ ಪ್ರತಿಪಾದಿಸಲು ಸಾಧ್ಯವೇ?–ಎಂಬುದು ಪರೀಕ್ಷಿತನ ಪ್ರಶ್ನೆಯಾಗಿದೆ.

ವಿಷಯ ಸುಖಗಳನ್ನು ಅನುಭವಿಸಲು ಹುಟ್ಟಿದಾರಭ್ಯ ಕರ್ಮಗಳನ್ನು ಮಾಡಲು, ಕರ್ಮಫಲಾನುಸಾರವಾಗಿ ಲೋಕಾಂತರದಲ್ಲಿ ಫಲಗಳನ್ನು ಅನುಭವಿಸಲು, ಕಡೆಯದಾಗಿ ಮುಕ್ತಿಯನ್ನು ಪಡೆಯಲು, ಬುದ್ಧಿ-ಇಂದ್ರಿಯ-ಮನಸ್ಸು ಮತ್ತು ಪ್ರಾಣಗಳೆಂಬ ಉಪಾಧಿಗಳನ್ನು ಸೃಷ್ಟಿಸಿದನು.

**ಸೈಷಾ ಹ್ಯುಪನಿಷದ್ಬ್ರಾಹ್ಮೀ ಪೂರ್ವೇಷಾಂ ಪೂರ್ವಜೈರ್ಧೃತಾ ।**
**ಶ್ರದ್ಧಯಾ ಧಾರಯೇದ್ಯಸ್ತಾಂ ಕ್ಷೇಮಂ ಗಚ್ಛೇದಕಿಞ್ಚನಃ ॥೩॥**

ಬ್ರಹ್ಮನನ್ನು ಪ್ರತಿಪಾದಿಸುವ ಈ ಉಪನಿಷದ್ವಾಕ್ಯವು* ಪೂರ್ವಜರಿಗೂ ಪೂರ್ವಜರಾದ, ಸನಕಾದಿಗಳಿಗೂ ಹಿಂದಿನವರಾದ ಬ್ರಹ್ಮಾದಿಗಳಿಂದ ಧರಿಸಿಲ್ಪಟ್ಟಿದೆ. ಅದನ್ನೇ ಯಾವನು ಶ್ರದ್ಧೆಯಿಂದ ಧರಿಸುವನೋ ಅಂತಹವನು ದೇಹವೇ ಮೊದಲಾದ ಉಪಾಧಿಗಳಿಂದ ರಹಿತವಾಗಿ ಕ್ಷೇಮವನ್ನು ಹೊಂದುತ್ತಾನೆ.

ಪರೀಕ್ಷಿತ! ಈ ವಿಷಯದಲ್ಲಿ ನಾನು ನಿನಗೊಂದು ಕಥೆಯನ್ನು ಹೇಳುತ್ತೇನೆ. ಈ ಕಥೆಯು ಭಗವಾನ್ ನಾರಾಯಣನಿಗೆ ಸಂಬಂಧಿಸಿದ್ದಾಗಿದೆ. ಈ ಕಥೆಯು ದೇವರ್ಷಿಗಳಾದ ನಾರದರ ಮತ್ತು ಋಷಿಶ್ರೇಷ್ಠನಾದ ನಾರಾಯಣನ ಸಂವಾದರೂಪವಾಗಿದೆ.

---

* ಉಪನಿಷತ್–ಅವಿದ್ಯಾನಿವೃತ್ತಿಪೂರ್ವಕ, ಅನಾದಿಕಾಲದ ಕರ್ಮಪರಂಪರೆಯಿಂದ ಪ್ರಾಪ್ತವಾದ ಜನ್ಮ-ಜರಾ-ಮರಣರೂಪವಾದ ಸಂಸಾರವನ್ನು ನಾಶಗೊಳಿಸುವುದರಿಂದಲೂ, ಪರಬ್ರಹ್ಮವನ್ನು ದೊರಕಿಸಿಕೊಡುವುದರಿಂದಲೂ, ಬ್ರಹ್ಮವೆಂಬ ಪರಮಶ್ರೇಯಸ್ಸು ಇದರಲ್ಲಿರುವುದರಿಂದಲೂ ಇದಕ್ಕೆ ಉಪನಿಷತ್–ಎಂದು ಹೆಸರು. ಉಪನಿಷತ್ = ನಾಶಯತಿ, ಗರ್ಭ-ಜನ್ಮ-ಜರಾತ್ಮಕಂ ಸಂಸಾರಮ್ ಉಪಗಮಯತಿ–ಪ್ರಾಪಯತಿ ಬ್ರಹ್ಮ, ಉಪವಿಷಣ್ಣಂ ವಾಪರಂ ಶ್ರೇಯೋಽಸ್ಯಾಮ್ ಉಪವಿಷತ್.

ಉಪನಿಷತ್–ರಹಸ್ಯೋಪದೇಶಃ ಗುರುವಿನ ಸಮೀಪದಲ್ಲಿ ಕುಳಿತು ತಿಳಿಯಬೇಕಾದ ರಹಸ್ಯವಿದ್ಯೆಯೇ ಉಪನಿಷತ್. ಮಾನವನು ಅನಾದಿಯಾದ ಕರ್ಮಪರಂಪರೆಯಿಂದ ಜನ್ಮ-ಜರಾ-ಮರಣಗಳಿಗೆ ತುತ್ತಾಗಿ ಈ ಜಗತ್ತಿನ ಬಾಳಿನಿಂದ ಜುಗುಪ್ಸೆಹೊಂದಿ ಇದರಿಂದ ಪಾರಾಗಲು ಉಪಾಯವನ್ನರಿಯದೆ ಬ್ರಹ್ಮಜ್ಞಾನ ಸಂಪನ್ನನಾದ ಗುರುವನ್ನು ಆಶ್ರಯಿಸಿ ರಹಸ್ಯೋಪದೇಶದಿಂದ ಅಜ್ಞಾನವನ್ನು ಕಳೆದುಕೊಂಡು ಬ್ರಹ್ಮಜ್ಞಾನವನ್ನು ಪಡೆದು ಸಂಸಾರದಿಂದ ಮುಕ್ತನಾಗುವುದರಿಂದ ಇದಕ್ಕೆ ಉಪವಿಷತ್ತೆಂದು ಹೆಸರು.

ಪರೀಕ್ಷಿತ! ಒಮ್ಮೆ ಭಗವಂತನಿಗೆ ಅತ್ಯಂತಪ್ರಿಯಭಕ್ತರಾದ ನಾರದ ಮಹರ್ಷಿಗಳು ಹಲವಾರು ಲೋಕಗಳಲ್ಲಿ ಸಂಚರಿಸುತ್ತಾ ಸನಾತನಋಷಿಯಾದ ಶ್ರೀಮನ್ನಾರಾಯಣನನ್ನು ಸಂದರ್ಶಿಸುವ ಸಲುವಾಗಿ ಬದರಿಕಾಶ್ರಮದಲ್ಲಿದ್ದ ನಾರಾಯಣಾಶ್ರಮಕ್ಕೆ ತೆರಳಿದರು.

ಭಗವಾನ್ ನಾರಾಯಣನು ಮನುಷ್ಯರ ಅಭ್ಯುದಯಕ್ಕಾಗಿ (ಲೌಕಿಕ ಕಲ್ಯಾಣಕ್ಕಾಗಿ) ಮತ್ತು ಪರಮನಿಃಶ್ರೇಯಸ್ಸಿಗಾಗಿ (ಮೋಕ್ಷದ ಪ್ರಾಪ್ತಿಗಾಗಿ) ಈ ಭಾರತವರ್ಷದಲ್ಲಿ ಕಲ್ಪದ ಪ್ರಾರಂಭದಿಂದಲೂ ಧರ್ಮಿಷ್ಠನಾಗಿ, ಜ್ಞಾನಿಯಾಗಿ, ಸಂಯಮದಿಂದ ಯುಕ್ತನಾಗಿ ಮಹಾತಪಸ್ಸನ್ನು ಮಾಡುತ್ತಲೇ ಇದ್ದಾನೆ.

ಒಂದಾನೊಂದು ದಿನ ನಾರಾಯಣಋಷಿಯು ಕಲಾಪಗ್ರಾಮವಾಸಿಗಳಾದ ಸಿದ್ಧಪುರುಷನಾದ ಋಷಿಗಳ ಮಧ್ಯದಲ್ಲಿ ಕುಳಿತಿದ್ದನು. ಆ ಸಮಯದಲ್ಲಿ ನಾರದಮಹರ್ಷಿಗಳು ನಾರಾಯಣಋಷಿಗೆ ಸಾಷ್ಟಾಂಗ ಪ್ರಣಾಮಮಾಡಿ ಅತ್ಯಂತ ವಿನಯದಿಂದ ನೀನು ನನ್ನನ್ನು ಕೇಳಿದ ಪ್ರಶ್ನೆಯನ್ನೇ ಆತನನ್ನು ಕೇಳಿದರು.

ಅಲ್ಲಿ ನೆರೆದಿದ್ದ ಋಷಿಗಳೆಲ್ಲರೂ ಕೇಳುತ್ತಿದ್ದಂತೆ ಶ್ರೀನಾರಾಯಣ ಋಷಿಯು ನಾರದರಿಗೆ ಪೂರ್ವಕಾಲೀನರಾದ ಜನೋಲೋಕನಿವಾಸಿಗಳ ನಡುವೆ ಪರಸ್ಪರವಾಗಿ ವೇದಗಳ ತಾತ್ಪರ್ಯ ಮತ್ತು ಪರಬ್ರಹ್ಮವಸ್ತುವಿನ ಸ್ವರೂಪ ಇವುಗಳ ಬಗೆಗೆ ನಡೆದ ಸಂಭಾಷಣೆಯನ್ನು ವಿವರಿಸಿ ಹೇಳಿದನು :

ನಾರದಮಹರ್ಷಿಯೇ! ಬಹಳ ಹಿಂದಿನ ಕಾಲದಲ್ಲಿ ಜನೋಲೋಕದಲ್ಲಿ ನಡೆದ ಪ್ರಸಂಗವಿದು. ಒಮ್ಮೆ ಜನೋಲೋಕದಲ್ಲಿ ವಾಸಮಾಡುತ್ತಿದ್ದ ಬ್ರಹ್ಮಮಾನಸಪುತ್ರರಾದ, ನೈಷ್ಠಿಕಬ್ರಹ್ಮಚಾರಿಗಳಾದ ಸನಕ, ಸನಂದನ, ಸನಾತನ–ಇವರೇ ಮೊದಲಾದ ಮಹರ್ಷಿಗಳು ಬ್ರಹ್ಮಸತ್ರದಲ್ಲಿ ಬ್ರಹ್ಮವಿಷಯಕವಾದ ಚರ್ಚೆಗಳಲ್ಲಿ ಪಾಲ್ಗೊಂಡು ಮಾತನಾಡುತ್ತಿದ್ದರು.

ನಾರದ! ನೀನು ಆ ಸಮಯದಲ್ಲಿ ಶ್ವೇತದ್ವೀಪವನ್ನು ಕುರಿತು ಆ ದ್ವೀಪಕ್ಕೆ ಒಡೆಯನಾದ ಅನಿರುದ್ಧನೆಂಬ ಶ್ರೀನಾರಾಯಣಮೂರ್ತಿಯ ಸಂದರ್ಶನಕ್ಕಾಗಿ ಹೋಗಿದ್ದೆ. ಆ ಸಮಯದಲ್ಲಿ ಜನೋಲೋಕದಲ್ಲಿ

ಸಗುಣ-ನಿರ್ಗುಣಗಳೆಂಬ ಎರಡು ಬಗೆಯ ಶ್ರುತಿವಾಕ್ಯಗಳಿಗೂ ವಿಶ್ರಾಂತಿಯನ್ನುಂಟುಮಾಡುವ ಬ್ರಹ್ಮವಾದವು ನಡೆಯಿತು. ಆಗ ಆ ಋಷಿಗಳ ಮಹಾಸಭೆಯಲ್ಲಿ ಈಗ ನೀನು ನನ್ನನ್ನು ಕುರಿತು ಯಾವ ಪ್ರಶ್ನೆಯನ್ನು ಕೇಳಿದೆಯೋ ಅದೇ ಪ್ರಶ್ನೆಯೇ ಪ್ರಸ್ತುತವಾಯಿತು. ಅವುಗಳಿಗೆ ಸಮಾಧಾನಕರವಾಗಿ ಬ್ರಹ್ಮಚಾರಿಗಳಿಂದ ಹೇಳಲ್ಪಟ್ಟ ಉತ್ತರಗಳೆಲ್ಲವನ್ನೂ ನಾನು ನಿನಗೆ ವಿವರಿಸಿ ಹೇಳುತ್ತೇನೆ : ಏಕಾಗ್ರಚಿತ್ತನಾಗಿ ಕೇಳು.

ಸನಕ, ಸನಂದನ, ಸನಾತನ, ಸನತ್ಕುಮಾರರೆಂಬ ನಾಲ್ವರು ಬ್ರಹ್ಮ ಮಾನಸಪುತ್ರರಲ್ಲಿ ಎಲ್ಲರೂ ಸಮಾನವಾದ ಜ್ಞಾನವುಳ್ಳವರಾಗಿದ್ದರು. ತಪಸ್ಸು-ಶೀಲ-ಸ್ವಭಾವಗಳಲ್ಲಿಯೂ ಒಬ್ಬರಿಗೆ ಮತ್ತೊಬ್ಬರು ಸಮಾನರಾಗಿಯೇ ಇದ್ದರು. ಒಂದರಲ್ಲಿ ಒಬ್ಬರು ಹೆಚ್ಚು ಮತ್ತೊಬ್ಬರು ಕಡಿಮೆ–ಎಂದು ಹೇಳುವಂತೆಯೇ ಇರಲಿಲ್ಲ. ಲೋಕದೃಷ್ಟಿಯಿಂದಲೂ ಶತ್ರು-ಮಿತ್ರ ಮತ್ತು ಉದಾಸೀನರನ್ನು ಅವರು ಒಂದೇ ಸಮನಾಗಿ ಕಾಣುತ್ತಿದ್ದರು. ಮಿತ್ರರನ್ನು ಪ್ರೀತಿಸುತ್ತಿರಲಿಲ್ಲ ; ಶತ್ರುಗಳನ್ನು ದ್ವೇಷಿಸುತ್ತಲೂ ಇರಲಿಲ್ಲ. ಸರ್ವರನ್ನೂ ಸಮಾನವಾಗಿ ಕಾಣುತ್ತಿದ್ದ ಅವರಲ್ಲಿ ಇವರು ಶತ್ರುಗಳು ಇವರು ಮಿತ್ರರೆಂಬ ಭೇದಭಾವವೇ ಇರಲಿಲ್ಲ. ನಾಲ್ವರಲ್ಲಿ ಪ್ರತಿಯೊಬ್ಬರೂ ಬ್ರಹ್ಮಸ್ವರೂಪವನ್ನು ಉಪದೇಶಮಾಡುವುದಕ್ಕೆ ಸಮರ್ಥರಾಗಿದ್ದರೂ ತಮ್ಮಲ್ಲಿಯೇ ಒಬ್ಬರಾದ ಸನಂದನರನ್ನು ಪ್ರವಚನಕಾರರನ್ನಾಗಿ ಮಾಡಿಕೊಂಡು ಉಳಿದವರು ಶ್ರೋತೃಗಳಾದರು.

ಸನಂದನರು ಹೇಳುತ್ತಾರೆ :

**ಸ್ವಸೃಷ್ಟಮಿದಮಾಪೀಯ ಶಯಾನಂ ಸಹ ಶಕ್ತಿಭಿಃ ।**
**ತದನ್ತೇ ಬೋಧಯಾಞ್ಚಕ್ರುಸ್ತಲ್ಲಿಙ್ಗೈಃ ಶ್ರುತಯಃ ಪರಮ್ ॥೧೨॥**

**ಯಥಾ ಶಯಾನಂ ಸಮ್ರಾಜಂ ವನ್ದಿನಸ್ತತ್ಪರಾಕ್ರಮೈಃ ।**
**ಪ್ರತ್ಯೂಷೇಽಭ್ಯೇತ್ಯ ಸುಶ್ಲೋಕೈರ್ಬೋಧಯನ್ತ್ಯನುಜೀವಿನಃ ॥೧೩॥**

"ಮಲಗಿರುವ ಸಮ್ರಾಟನನ್ನು ಪ್ರಾತಃಕಾಲವಾಗುತ್ತಲೇ ಎಚ್ಚರಗೊಳಿಸುವ ಸಲುವಾಗಿ ರಾಜೋಪಜೀವಿಗಳಾದ ಸ್ತುತಿಪಾಠಕರು ಆತನ ಬಳಿಗೆ ಬಂದು ಆತನ ಪರಾಕ್ರಮವನ್ನೂ ಯಶಸ್ಸನ್ನೂ ಕರ್ಣಾನಂದಕರ

ವಾದ ಕೀರ್ತನೆಗಳ ಮೂಲಕವಾಗಿ ಹಾಡಿ ಎಚ್ಚರಗೊಳಿಸತ್ತಾರಲ್ಲವೇ? ಹಾಗೆಯೇ ತಾನೇ ಸೃಷ್ಟಿಸಿದ್ದ ಜಗತ್ತನ್ನು ಪ್ರಳಯಕಾಲದಲ್ಲಿ ತನ್ನಲ್ಲಿಯೇ ಲೀನಗೊಳಿಸಿಕೊಂಡು, ತನ್ನ ಸಮಸ್ತಶಕ್ತಿಗಳೊಡಗೂಡಿ ಯೋಗನಿದ್ರಾ ರೂಢನಾಗಿ ಮಲಗಿದ್ದ ಪರಮಾತ್ಮನನ್ನು ಪ್ರಳಯಾನಂತರದ ಪುನಃ ಸೃಷ್ಟಿ ಸಮಯದಲ್ಲಿ ಆತನ ನಿಃಶ್ವಾಸರೂಪವಾದ ಶ್ರುತಿಗಳು ಬ್ರಹ್ಮಪ್ರತಿಪಾದಕಗಳಾದ ಸೂಕ್ತಗಳಿಂದ ಎಚ್ಚರಗೊಳಿಸಿದುವು.

**ಜಯ ಜಯ ಜಹ್ಯ ಜಾಮಜಿತ ದೋಷಗೃಭೀತಗುಣಾಂ**
**ತ್ವಮಸಿ ಯದಾತ್ಮನಾ ಸಮವರುದ್ಧಸಮಸ್ತಭಗಃ ।**
**ಅಗಜಗದೋಕಸಾಮಖಿಲಶಕ್ತ್ಯವಬೋಧಕ ತೇ**
**ಕ್ವಚಿದಜಯಾಽತ್ಮನಾ ಚ ಚರತೋಽನುಚರೇನ್ನಿಗಮಃ ॥೧೪॥**

ಅಜಿತನೇ! ನೀನು ಸರ್ವಶ್ರೇಷ್ಠನಾಗಿರುವೆ. ನೀನು ಯಾರಿಂದಲೂ ಜಯಿಸಲ್ಪಡತಕ್ಕವನಲ್ಲ. ನಿನಗೆ ಜಯವಾಗಲಿ ; ಜಯವಾಗಲಿ. ಪ್ರಭುವೇ! ನೀನು ಸ್ವಭಾವದಿಂದಲೇ ಸಮಸ್ತ ಐಶ್ವರ್ಯಗಳಿಂದಲೂ ಪೂರ್ಣನಾಗಿರುವೆ. ಆದುದರಿಂದ ಚರಾಚರಪ್ರಾಣಿಗಳೆಲ್ಲವನ್ನೂ ತನ್ನ ಉಡಿಯಲ್ಲಿ ಸಿಕ್ಕಿಸಿಕೊಳ್ಳುವ ಮಾಯೆಯನ್ನು ನಾಶಗೊಳಿಸು. ಆ ಮಾಯೆಯು ಜೀವರುಗಳ ಬ್ರಹ್ಮಾನಂದವನ್ನು ಮರೆಮಾಡುವುದಕ್ಕಾಗಿ ಸತ್ತ್ವಾದಿಗುಣಗಳನ್ನು ಪಡೆದು ಕೊಂಡಿದೆ.

ಆದುದರಿಂದ ಈ ಮಾಯೆಯನ್ನು ವಿನಾಶಗೊಳಿಸಬೇಕು. ಜಗತ್ತಿನಲ್ಲಿ ಎಷ್ಟು ವಿಧವಾದ ಸಾಧನೆಗಳಿವೆಯೋ, ಜ್ಞಾನಶಕ್ತಿ-ಕ್ರಿಯಾಶಕ್ತಿ ಇವೇ ಮೊದಲಾದ ಶಕ್ತಿಗಳಿವೆಯೋ ಅವೆಲ್ಲವನ್ನೂ ಸಮಗ್ರವಾಗಿ ತಿಳಿದವನು ನೀನೇ ಆಗಿರುವೆ. ಆದುದರಿಂದ ಅಂತಹ ಮಾಯೆಯನ್ನು ನೀನು ವಿನಾಶಗೊಳಿಸ ದಿದ್ದರೆ ಅದು ವಿನಾಶಹೊಂದುವುದಿಲ್ಲ. ಇದಕ್ಕೆ ಪ್ರಮಾಣವೇನೆಂದು ನೀನು ಪ್ರಶ್ನಿಸುವುದಾದರೆ ನಿನ್ನ ಶ್ವಾಸಭೂತರಾದ ಶ್ರುತಿಗಳೇ (ನಾವೇ) ಪ್ರಮಾಣಭೂತರಾಗಿದ್ದೇವೆ.*

---

* ಬ್ರಹ್ಮವಸ್ತುವನ್ನು ಪ್ರತಿಪಾದಿಸುವ ಶ್ರುತಿವಾಕ್ಯಗಳು :

**ಯತೋ ವಾ ಇಮಾನಿ ಭೂತಾನಿಜಾಯನ್ತೇ । ಯೋ ಬ್ರಹ್ಮಾಣಂ ವಿದಧಾತಿ**

ದೇವೇಶನೇ! ನಾವು ನಿನ್ನನ್ನು ಸ್ವರೂಪತಃ ವರ್ಣನೆಮಾಡಲು ನಿಶ್ಚಯವಾಗಿಯೂ ಅಸಮರ್ಥರಾಗಿದ್ದೇವೆ. ಆದರೆ ಯಾವಾಗ ನೀನು ಮಾಯೆಯ ಮೂಲಕವಾಗಿ ಜಗತ್ತನ್ನು ಸೃಷ್ಟಿಸಲು ಸಗುಣರೂಪವನ್ನು ಹೊಂದುವೆಯೋ, ನಿನ್ನ ಸಚ್ಚಿದಾನಂದಸ್ವರೂಪ ಶ್ರೀವಿಗ್ರಹವನ್ನು ಪ್ರಕಟಗೊಳಿಸಿ ಅವತಾರಲೀಲೆಗಳನ್ನಾಡುವೆಯೋ ಆ ಸಮಯಗಳಲ್ಲಿ ನಿನ್ನ ವರ್ಣನೆಯನ್ನು ಯತ್ಕಿಂಚಿತ್ ಮಾಡಲು ನಾವು ಸಮರ್ಥರಾಗುತ್ತೇವೆ.*

**(ಜಯ ಜಯಾಜಿತ ಜಹ್ಯಗಜಙ್ಗಮಾ**
**ವೃತಿಮಜಾಮುಪನೀತ ಮೃಷಾ ಗುಣಾಮ್ ।**
**ನ ಹಿ ಭವನ್ತಮೃತೇ ಪ್ರಭವನ್ತ್ಯಮೀ**
**ನಿಗಮಗೀತಗುಣಾರ್ಣವತಾ ತವ ಶ್ರೀ ॥೧॥**

ಅಜಿತನೇ! ನಿನಗೆ ಜಯವಾಗಲಿ ; ಜಯವಾಗಲಿ. ಅಪ್ರಾಮಾಣಿಕವಾಗಿರುವ ಸತ್ತ್ವಾದಿಗುಣಗಳನ್ನು ಧರಿಸಿ ಜೀವನವನ್ನು ಮುಚ್ಚಿಬಿಡುವ ಈ ಮಾಯೆಯನ್ನು ನಷ್ಟಗೊಳಿಸು. ನಿನ್ನ ಕೃಪೆಯಿಲ್ಲದೆ ಬಡಪಾಯಿಯಾದ ಜೀವನು ಮಾಯೆಯನ್ನು ನಷ್ಟಗೊಳಿಸಲು ಸಮರ್ಥನಲ್ಲ. ನೀನು ಸಕಲ ಸದ್ಗುಣಗಳ ಸಾಗರನೆಂದು ವೇದಗಳು ಯಾವಾಗಲೂ ನಿನ್ನನ್ನು ಕೀರ್ತಿಸುತ್ತಿರುತ್ತವೆ.)

**ಬೃಹದುಪಲಬ್ಧಮೇತದವಯನ್ತ್ಯವಶೇಷತಯಾ**
**ಯತ ಉದಯಾಸ್ತಮಯೌ ವಿಕೃತೇರ್ಮೃದಿ ವಾವಿಕೃತಾತ್ ।**
**ಅತ ಋಷಯೋ ದಧುಸ್ತ್ವಯಿ ಮನೋವಚನಾಚರಿತಂ**
**ಕಥಮಯಥಾ ಭವನ್ತಿ ಭುವಿ ದತ್ತಪದಾನಿ ನೃಣಾಮ್ ॥೧೫॥**

ಪ್ರಭುವೇ! ನಾವು ಇಂದ್ರ-ವರುಣರೇ ಮೊದಲಾದ ದೇವತೆಗಳನ್ನು ವರ್ಣಿಸುತ್ತೇವೆಂಬುದರಲ್ಲಿ ಸಂಶಯವಿಲ್ಲ. ಆದರೆ ನಮ್ಮ ಎಲ್ಲ ಮಂತ್ರಗಳೂ ಅಥವಾ ಮಂತ್ರದ್ರಷ್ಟಾರರಾದ ಋಷಿಗಳೂ, ಕಣ್ಣಿಗೆ ಕಾಣಿಸುತ್ತಿರುವ ಈ

---

ಪೂರ್ವಂ । ಯ ಆತ್ಮನಿ ತಿಷ್ಠನ್ । ಸತ್ಯಂ ಜ್ಞಾನಮನನ್ತಂ ಬ್ರಹ್ಮ । ಯಸ್ಸರ್ವಜ್ಞಃ ಸ ಸರ್ವವಿತ್ । ಇತ್ಯಾದಿಗಳು.

* ಶ್ರೀಧರಸ್ವಾಮಿಗಳು ಈ ವೇದಸ್ತುತಿಗಳಿಗೆ ವ್ಯಾಖ್ಯಾನ ರೂಪವಾಗಿ ಸುಲಭ ಶೈಲಿಯ ಶ್ಲೋಕಗಳನ್ನೇ ರಚಿಸಿರುತ್ತಾರೆ. ಆ ಶ್ಲೋಕಗಳನ್ನೂ ಕೊಟ್ಟು ಅನುವಾದಿಸಲಾಗಿದೆ.

ಜಗತ್ತು ಕೂಡ ಬ್ರಹ್ಮಸ್ವರೂಪವೆಂದೇ ಹೇಳುತ್ತಾರೆ. ಏಕೆಂದರೆ ಈ ಜಗತ್ತು ಇಲ್ಲದಾಗಲೂ ನೀನಿರುವೆ. ಮಣ್ಣಿನಿಂದಲೇ ತಯಾರಾದ ಮಡಕೆ ಮುಂತಾದುವು ನಾಶವಾದರೂ ಪುನಃ ಮೂಲಭೂತವಾದ ಮಣ್ಣಾಗಿಯೇ ಉಳಿದಿರುವಂತೆ ಮಣ್ಣಿನಲ್ಲೇ ಲೀನವಾಗಿಬಿಡುವಂತೆ ಸಂಪೂರ್ಣ ಜಗತ್ತಿನ ಉತ್ಪತ್ತಿ-ಲಯಗಳು ನಿನ್ನಲ್ಲಿಯೇ ಆಗುತ್ತವೆ. ಪೃಥ್ವಿಯಂತೆಯೇ ನೀನೂ ವಿಕಾರವುಳ್ಳವನೇ?–ಎಂದರೆ–ಅಲ್ಲ. ನೀನು ನಿರ್ವಿಕಾರನು. ಈ ವಿಕಾರಗಳೆಲ್ಲವೂ ವಿಕಾರರಹಿತನಾದ ಪರಬ್ರಹ್ಮಸ್ವರೂಪನಾದ ನಿನ್ನಿಂದ ಹುಟ್ಟಿವೆ. ಮಣ್ಣಿನಿಂದಾದ ಘಟಾದಿಗಳು ವಿನಾಶವಾದನಂತರ ಪುನಃ ಮಣ್ಣಿನ ರೂಪವನ್ನೇ ಹೊಂದುವಂತೆ ನಿನ್ನಿಂದ ಸೃಷ್ಟವಾದ ಪೃಥ್ವಿಯೇ ಮೊದಲಾದ ವಿಕಾರಗಳೆಲ್ಲವೂ ನಾಶವಾದನಂತರ ನೀನೊಬ್ಬನೇ ಉಳಿದುಕೊಳ್ಳುವೆ. ಘಟಾದಿಗಳ ವರ್ಣನೆಯು ಮಣ್ಣಿನ ವರ್ಣನೆಯೇ ಆಗುವಂತೆ ಇಂದ್ರಾವರುಣರೇ ಮುಂತಾದ ದೇವತೆಗಳ ವರ್ಣನೆಯೂ ನಿನ್ನ ವರ್ಣನೆಯೇ ಆಗುತ್ತದೆ. ಈ ಕಾರಣದಿಂದಲೇ ವಿಚಾರಶೀಲರಾದ ಋಷಿಗಳು ಮನಸ್ಸಿನಲ್ಲಿ ಯಾವುದನ್ನು ಧ್ಯಾನಿಸುತ್ತಾರೆಯೋ, ಮಾತಿನಲ್ಲಿ ಯಾವುದನ್ನು ಹೇಳುತ್ತಾರೆಯೋ ಅವೆಲ್ಲವೂ ನಿನ್ನನ್ನು ಕುರಿತದ್ದೇ ಆಗಿದೆ. ನಿನ್ನ ಸ್ವರೂಪವನ್ನೇ ಅವರು ನೋಡುತ್ತಾರೆ. ಮನುಷ್ಯನು ಕಲ್ಲಿನ ಮೇಲೆಯೇ ಕಾಲಿಡಲಿ ; ಕಟ್ಟಿಗೆಯ ಮೇಲೆಯೇ ಕಾಲಿಡಲಿ; ಇಟ್ಟಿಗೆಯ ಮೇಲೆಯೇ ಕಾಲಿಡಲಿ–ಭೂಮಿಯ ಮೇಲೆಯೇ ಕಾಲಿಟ್ಟಂತಾಗುವಂತೆ, ನಾವು (ವೇದಗಳು) ಯಾವುದೇ ಹೆಸರಿನಿಂದ ಕರೆದರೂ ಯಾವುದೇ ಹೆಸರಿನಿಂದ ವರ್ಣಿಸಿದರೂ ಅವೆಲ್ಲವೂ ನಿನ್ನ ನಾಮ-ರೂಪಗಳೇ ಆಗಿವೆ. ಇಂದ್ರಾದಿರೂಪವಾದ ಯಾವುದೇ ವಿಕಾರಗಳನ್ನು ಬಣ್ಣಿಸಿದರೂ ಸರ್ವಕಾರಣನಾದ ನಿನ್ನನ್ನೇ ಹೊಗಳಿದಂತಾಗುತ್ತದೆ.

(ದ್ರುಹಿಣವಹ್ನಿರವೀನ್ದ್ರಮುಖಾಮರಾ
ಜಗದಿದಂ ನ ಭವೇತ್ಪೃಥಗುತ್ಥಿತಮ್ ।
ಬಹುಮುಖೈರಪಿ ಮನ್ತ್ರಗಣೈರಜ-
ಸ್ತ್ವಮುರು ಮೂರ್ತಿರತೋ ವಿನಿಗದ್ಯಸೇ ಶ್ರೀ॥೨॥

ಬ್ರಹ್ಮ, ಅಗ್ನಿ, ಸೂರ್ಯ, ಇಂದ್ರ–ಇವರೇ ಮೊದಲಾದ ದೇವತೆ

ಗಳೂ ಮತ್ತು ಸಮಸ್ತವಾದ ಜಗತ್ತೂ ಆವಿರ್ಭವಿಸಿದರೂ ನಿನ್ನಿಂದ ಪ್ರತ್ಯೇಕವಾಗಿ ಅವರಿಗೆ ಅಸ್ತಿತ್ವವಿಲ್ಲ. ನಿನ್ನಿಂದಲೇ ಹುಟ್ಟಿ ಅವರು ನಿನ್ನಲ್ಲಿಯೇ ಲೀನವಾಗುತ್ತಾರೆ. ಆದುದರಿಂದ ಹಲವಾರು ದೇವತೆಗಳನ್ನು ಪ್ರತಿಪಾದಿಸುವ ವೇದಮಂತ್ರಗಳು ದೇವತೆಗಳ ಹೆಸರಿನಲ್ಲಿ ಪ್ರತ್ಯೇಕ-ಪ್ರತ್ಯೇಕವಾದ ನಿನ್ನದೇ ಆದ ವಿಭಿನ್ನಮೂರ್ತಿಗಳನ್ನೇ ವರ್ಣಿಸುತ್ತವೆ. ವಸ್ತುತಃ ನೀನು ಜನ್ಮರಹಿತನಾದವನು. ಆ ಮೂರ್ತಿಗಳ ರೂಪದಲ್ಲಿಯೂ ನಿನಗೆ ಜನ್ಮವೆಂಬುದಿಲ್ಲ.)

**ಇತಿ ತವ ಸೂರಯಸ್ತ್ರ್ಯಧಿಪತೇಽಖಿಲಲೋಕಮಲ-**
**ಕ್ಷಪಣಕಥಾಮೃತಾಬ್ಧಿಮವಗಾಹ್ಯ ತಪಾಂಸಿ ಜಹುಃ ।**
**ಕಿಮುತ ಪುನಃ ಸ್ವಧಾಮವಿಧುತಾಶಯಕಾಲಗುಣಾಃ**
**ಪರಮ ಭಜನ್ತಿ ಯೇ ಪದಮಜಸ್ರಸುಖಾನುಭವಮ್ ॥೧೬॥**

ತ್ರಿಗುಣಾತ್ಮಕವಾದ ಮಾಯೆಗೆ ಒಡೆಯನೇ! ಪರಮೇಶ್ವರನೇ! ವಿಚಾರಶೀಲರಾದ ಪುರುಷರು ವೇದಗಳಲ್ಲಿ ಹೇಳುವಂತೆ ಸರ್ವಕಾರಣನಾದ ನೀನೇ ಪರಮಾರ್ಥವೆಂದು ತಿಳಿದು ನಿನ್ನ ಲೀಲಾಪ್ರಸಂಗಗಳೆಂಬ ಅಮೃತಮಯವಾದ ಸಮುದ್ರದಲ್ಲಿ ಮುಳುಗಿ ತಮ್ಮ ಸಮಸ್ತವಾದ ಪಾಪಗಳನ್ನೂ ತೊಳೆದುಕೊಳ್ಳುತ್ತಾರೆ. ಪುಣ್ಯಕರವಾದ ಲೀಲಾಪ್ರಸಂಗಗಳ ಶ್ರವಣಮಾತ್ರದಿಂದಲೇ ಅವರ ಕಷ್ಟ-ನಷ್ಟ-ಪಾಪಗಳು ಪರಿಹಾರವಾಗುತ್ತವೆ. ಹೀಗಿರುವಾಗ ಯಾವ ಮಹಾಪುರುಷರು ಆತ್ಮಜ್ಞಾನದ ಮೂಲಕವಾಗಿ ಅಂತಃಕರಣಧರ್ಮಗಳಾದ ರಾಗ-ದ್ವೇಷಾದಿಗಳನ್ನೂ ಕಾಲಧರ್ಮಗಳಾದ ಜರಾ-ಮರಣವೇ ಮುಂತಾದ ದೋಷಗಳನ್ನೂ ಕಳೆದುಕೊಂಡು ನಿರಂತರವಾದ ಆನಂದಾನುಭವವುಳ್ಳ ನಿನ್ನ ಚಿನ್ಮಯಸ್ವರೂಪವನ್ನು ಧ್ಯಾನಿಸುವರೋ ಅಂತಹ ಮಹಾತ್ಮರು ದುಃಖವನ್ನೂ ಪಾಪಗಳನ್ನೂ ಕಳೆದುಕೊಳ್ಳುತ್ತಾರೆಂಬುದನ್ನು ಹೇಳುವ ಅಗತ್ಯವಿದೆಯೇ?

**(ಸಕಲ ವೇದಗಣೇರಿತಸದ್ಗುಣ**
**ಸ್ತ್ವಮಿತಿ ಸರ್ವಮನೀಷಿಜನಾ ರತಾಃ ।**
**ತ್ವಯಿ ಸುಭದ್ರ ಗುಣಶ್ರವಣಾದಿಭಿಃ**
**ತವ ಪದಸ್ಮರಣೇನ ಗತಕ್ಲಮಾಃ ಶ್ರೀ ॥೩॥**

ಪರಮೇಶ್ವರನೇ! ಸಮಸ್ತ ವೇದಗಳೂ ನಿನ್ನ ಸದ್ಗುಣಗಳನ್ನು ಅಪಾರವಾಗಿ ವರ್ಣಿಸುತ್ತವೆ. ಇದರಿಂದ ಪ್ರಪಂಚದಲ್ಲಿರುವ ಸಮಸ್ತ ವಿದ್ವಾಂಸರೂ ನಿನ್ನ ಮಂಗಳಮಯವಾದ ಮತ್ತು ಕಲ್ಯಾಣಕಾರಿಯಾದ ಗುಣಗಳನ್ನು ಕೇಳುವ ಮೂಲಕ ನಿನ್ನ ಸ್ವರೂಪವನ್ನು ಸ್ಮರಿಸುವ ಮೂಲಕ ನಿನ್ನನ್ನೇ ಯಾವಾಗಲೂ ಪ್ರೀತಿಸುತ್ತಿರುತ್ತಾರೆ. ನಿನ್ನ ದಿವ್ಯವಾದ ಪರಮ ಪವಿತ್ರವಾದ ಚರಣಾರವಿಂದಗಳನ್ನು ಸ್ಮರಿಸುತ್ತಾ ಸಮಸ್ತವಾದ ಕ್ಲೇಶಗಳಿಂದಲೂ ಮುಕ್ತರಾಗಿಬಿಡುತ್ತಾರೆ.)

**ದೃತಯ ಇವ ಶ್ವಸನ್ತ್ಯಸುಭೃತೋ ಯದಿ ತೇಽನುವಿಧಾ**
**ಮಹದಹಮಾದಯೋಽಣ್ಡಮಸೃಜನ್ ಯದನುಗ್ರಹತಃ ।**
**ಪುರುಷವಿಧೋಽನ್ವಯೋಽತ್ರ ಚರಮೋಽನ್ನಮಯಾದಿಷು ಯಃ**
**ಸದಸತಃ ಪರಂ ತ್ವಮಥ ಯದೇಷ್ವವಶೇಷಮೃತಮ್ ॥೧೭॥**

ಭಗವಂತನೇ! ನಿನ್ನನ್ನು ಭಜಿಸುವುದರಿಂದಲೂ, ಸೇವಿಸುವುದ ರಿಂದಲೂ, ನಿನ್ನ ಆಜ್ಞೆಯಂತೆ ನಡೆದುಕೊಳ್ಳುವುದರಿಂದಲೂ ಮನುಷ್ಯ ಜನ್ಮವು ಸಾರ್ಥಕ್ಯವನ್ನು ಹೊಂದುತ್ತದೆ. ಹಾಗೆ ಮಾಡದಿದ್ದರೆ ಅವರು ಜೀವಿಸಿರುವುದೇ ವ್ಯರ್ಥವಾಗುತ್ತದೆ. ಅವರ ಉಸಿರಾಟವು ಕೇವಲ ತಿದಿಗೆ ಸಮಾನವಾಗಿದ್ದು ಅಂತಹವರ ಜನ್ಮವು ನಿರರ್ಥಕವಾಗುತ್ತದೆ.

ನಿನ್ನ ಅನುಪ್ರವೇಶದಿಂದ ಪ್ರಾಣಿಗಳು ಉಸಿರಾಡುವಂತೆ ಮಹತ್ತತ್ತ್ವ ಅಹಂಕಾರಾದಿಗಳು ಕೂಡ ನಿನ್ನ ಅನುಪ್ರವೇಶದಿಂದಲೇ ಬ್ರಹ್ಮಾಂಡವನ್ನು ಸೃಷ್ಟಿಸುತ್ತವೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯಕೋಶಗಳಲ್ಲಿ ಈ ಪುರುಷರೂಪದಲ್ಲಿರತಕ್ಕವನೂ, ಅನ್ನಮಯಾದಿಕೋಶಗಳಲ್ಲಿ ಕಡೆಯದಾದ ಆನಂದಮಯಕೋಶನೂ ನೀನೇ ಆಗಿರುವೆ. ಯಾವ ನೀನು ಸ್ಥೂಲ-ಸೂಕ್ಷ್ಮಗಳಾದ ಅನ್ನಮಯಾದಿ ಕೋಶಗಳಿಗಿಂತಲೂ ಅತೀತನಾಗಿರುವುದರಿಂದ ಅವುಗಳಿಗೆ ಸಾಕ್ಷೀರೂಪನಾ ಗಿಯೂ ಅಬಾಧ್ಯನಾಗಿಯೂ ಸತ್ಯಸ್ವರೂಪನಾಗಿಯೂ ಉಳಿಯುವೆಯೋ ಆ ಬ್ರಹ್ಮವೇ ನೀನಾಗಿರುವೆ. ಆದುದರಿಂದ ಸಕಲಪ್ರಾಣಿಗಳ ಜೀವನಕ್ಕೂ ಕಾರಣನಾದ ನಿನ್ನನ್ನು ಭಜಿಸದಿರುವ ಮನುಷ್ಯರ ಜೀವನವು ವ್ಯರ್ಥವೇ ಸರಿ.

(ನರವಪುಃ ಪ್ರಪದ್ಯ ಯದಿ ತ್ವಯಿ
ಶ್ರವಣವರ್ಣನ ಸಂಸ್ಮರಣಾದಿಭಿಃ ।
ನರಹರೇ ನ ಭಜನ್ತಿ ನೃಣಾಮಿದಂ
ದೃತಿವದುಚ್ಛ್ವಸಿತಂ ವಿಫಲಂ ತತಃ ಶ್ರೀ ॥೪॥

ನರಹರಿಯೇ! ಮನುಷ್ಯಶರೀರವನ್ನೂ ಹೊಂದಿ ಯಾವ ಜೀವನು ನಿನ್ನ ಕೀರ್ತನ-ಶ್ರವಣ-ವರ್ಣನ ಮತ್ತು ಸಂಸ್ಮರಣಗಳ ಮೂಲಕವಾಗಿ ನಿನ್ನನ್ನು ಭಜಿಸುವುದಿಲ್ಲವೋ ಅಂತಹವನ ಉಸಿರಾಟವು ತಿದಿಗೆ ಸಮಾನ. ಅವನು ಜೀವಚ್ಛವವಿದ್ದಂತೆ.)

ಉದರಮುಪಾಸತೇ ಯ ಋಷಿವರ್ತ್ಮಸು ಕೂರ್ಪದೃಶಃ
ಪರಿಸರಪದ್ಧತಿಂ ಹೃದಯಮಾರುಣಯೋ ದಹರಮ್ ।
ತತ ಉದಗಾದನನ್ತ ತವ ಧಾಮ ಶಿರಃ ಪರಮಂ
ಪುನರಿಹ ಯತ್ಸಮೇತ್ಯ ನ ಪತನ್ತಿ ಕೃತಾನ್ತಮುಖೇ ॥೧೮॥

ಪ್ರಭುವೇ! ಋಷಿಗಳು ನಿನ್ನ ಪ್ರಾಪ್ತಿಗಾಗಿ ಹಲವಾರು ಮಾರ್ಗ ಗಳನ್ನು ಕಂಡುಕೊಂಡಿರುತ್ತಾರೆ. ಅವರಲ್ಲಿ ಸ್ಥೂಲದೃಷ್ಟಿಯ ಮುನಿಗಳು ನಿನ್ನನ್ನು ಉದರಸ್ಥಾನದಲ್ಲಿರುವ ಮಣಿಪೂರಕಚಕ್ರದಲ್ಲಿ ಅಗ್ನಿರೂಪದಲ್ಲಿ ಉಪಾಸಿಸುತ್ತಾರೆ. ಸೂಕ್ಷ್ಮದೃಷ್ಟಿಯುಳ್ಳ ಆರುಣಿಗಳೆಂಬ ಋಷಿಗಳು ಸಮಸ್ತನಾಡಿಗಳಿಗೂ ಪ್ರಸರಣಸ್ಥಾನವೆನಿಸಿದ ಅನಾಹತಚಕ್ರದಲ್ಲಿ ದಹರಾಕಾಶರೂಪವಾದ ಬ್ರಹ್ಮವಸ್ತುವನ್ನು ಉಪಾಸನೆಮಾಡುತ್ತಾರೆ. ಹೃದಯ ಕುಹರಕ್ಕಿಂತಲೂ ನಿನ್ನನ್ನೂ ಪಡೆಯುವ ಶ್ರೇಷ್ಠವಾದ ಮಾರ್ಗವು ಸುಷುಮ್ನಾನಾಡಿಯ ಮೂಲಕವಾಗಿ ಬ್ರಹ್ಮರಂಧ್ರಕ್ಕೆ ಹೋಗುವುದೇ ಆಗಿದೆ. ಯಾವ ಪುರುಷನು ನಿರಂತರವಾದ ಸಾಧನೆಯಿಂದ ಜ್ಯೋತಿರ್ಮಯವಾದ ಈ ಮಾರ್ಗವನ್ನು ಹೊಂದುವನೋ ಮತ್ತು ಅಲ್ಲಿಂದ ಮುಂದೆ ಸಹಸ್ರಾರ ಚಕ್ರದಲ್ಲಿ ಮನಸ್ಸನ್ನೂ ನೆಲೆಗೊಳಿಸುವನೋ ಅಂತಹವನು ಪುನಃ ಹುಟ್ಟು-ಸಾವುಗಳ ಚಕ್ರಕ್ಕೆ ಸಿಕ್ಕಿಹಾಕಿಕೊಳ್ಳಬೇಕಾಗುವುದಿಲ್ಲ.

(ಉದರಾದಿಷು ಯಃ ಪುಂಸಾಂ ಚಿನ್ತಿತೋ ಮುನಿವರ್ತ್ಮಭಿಃ ।
ಹನ್ತಿ ಮೃತ್ಯುಭಯಂ ದೇವೋ ಹೃದ್ಗತಂ ತಮುಪಾಸ್ಮಹೇ ಶ್ರೀ ॥೫॥

ಸಾಧಕನು ಋಷಿ-ಮುನಿಗಳಿಂದ ಹೇಳಲ್ಪಟ್ಟಿರುವ ಪದ್ಧತಿಗೆ ಅನು

ಸಾರವಾಗಿ ಉದರವೇ ಮೊದಲಾದ ಸ್ಥಾನಗಳಲ್ಲಿ ಯಾವನನ್ನು ಚಿಂತಿಸುವನೋ ಮತ್ತು ಈ ಚಿಂತನೆಯಿಂದ ಪ್ರಸನ್ನನಾದ ಯಾವ ಪ್ರಭುವು ಸಾಧಕನನ್ನು ಮೃತ್ಯುಭಯದಿಂದ ಮುಕ್ತಿಗೊಳಿಸುವನೋ ಹೃದಯದೇಶದಲ್ಲಿ ವಿರಾಜಿಸುವ ಅಂತಹ ಕರುಣಾಮಯನಾದ ಪ್ರಭುವನ್ನು ಉಪಾಸನೆ ಮಾಡೋಣ.)

**ಸ್ವಕೃತವಿಚಿತ್ರಯೋನಿಷು ವಿಶನ್ನಿವ ಹೇತುತಯಾ**
**ತರತಮತಶ್ಚಕಾಸ್ಸ್ಯನಲವತ್ಸ್ವಕೃತಾನುಕೃತಿಃ ।**
**ಅಥ ವಿತಥಾಸ್ವಮೂಷ್ವವಿತಥಂ ತವ ಧಾಮ ಸಮಂ**
**ವಿರಜಧಿಯೋಽನ್ವಯನ್ತ್ಯಭಿವಿಪಣ್ಯವ ಏಕರಸಮ್ ॥೧೯॥**

ದೇವೇಶನೇ! ದೇವತೆಗಳು, ಮನುಷ್ಯರು, ಪಶು-ಪಕ್ಷಿಗಳು–ಇವೇ ಮುಂತಾದ ಯೋನಿಗಳನ್ನು ನೀನೇ ಕಲ್ಪಿಸಿರುವೆ. ಸದಾ-ಸರ್ವತ್ರ-ಸಮಸ್ತ ರೂಪಗಳಲ್ಲಿಯೂ ನೀನೇ ಇರುವೆ. ಕಾರಣರೂಪದಿಂದ ನೀನು ಅವುಗಳಲ್ಲಿ ಪ್ರವೇಶಿಸದಿದ್ದರೂ ಅವುಗಳಲ್ಲಿ ಪ್ರವೇಶಿಸಿರುವಂತೆಯೇ ಕಾಣುವೆ. ವಿಭಿನ್ನವಾದ ಆಕೃತಿಗಳನ್ನು ಅನುಕರಣೆಮಾಡುತ್ತಾ ಬೆಂಕಿಯು ದೀಪದಲ್ಲಿ ಚಿಕ್ಕದಾಗಿಯೂ ಕಾಡುಗಿಚ್ಚಿನಲ್ಲಿ ದೊಡ್ಡದಾಗಿಯೂ ಕಾಣಿಸಿಕೊಳ್ಳುವಂತೆ ಕೆಲವು ಕಡೆ ಉತ್ತಮರೂಪದಲ್ಲಿಯೂ ಕೆಲವೆಡೆಗಳಲ್ಲಿ ಕನಿಷ್ಠರೂಪದಲ್ಲಿಯೂ ಕಾಣಿಸಿಕೊಳ್ಳುವೆ. ಚಿಕ್ಕದಾಗಲಿ ; ದೊಡ್ಡದಾಗಲೀ ನಿನಗೆ ಯಾವ ತಾರತಮ್ಯವೂ ಇಲ್ಲ. ಆದುದರಿಂದಲೇ ನಿರ್ಮಲಾಂತಃಕರಣರಾದ ಮಹಾತ್ಮರು ತಮ್ಮ ನಿರ್ಮಲವಾದ ಬುದ್ಧಿಯಿಂದ ಸತ್ಯ-ಅಸತ್ಯ, ಆತ್ಮ-ಅನಾತ್ಮಗಳನ್ನು ಕಂಡುಕೊಂಡು ಇಹ-ಪರಗಳಲ್ಲಿ ಪಡೆಯಬಹುದಾದ ಸಕಲಕರ್ಮಫಲಗಳನ್ನೂ ನಿರಾಕರಿಸಿ ಅನಿತ್ಯಗಳಾದ ದೇಹಾದಿಗಳಲ್ಲಿ ನಿರ್ವಿಶೇಷವೂ ಸತ್ಯಸ್ವರೂಪವೂ ಆನಂದೈಕರಸವೂ ಆದ ನಿನ್ನ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

**(ಸ್ವನಿರ್ಮಿತೇಷು ಕಾರ್ಯೇಷು ತಾರತಮ್ಯವಿವರ್ಜಿತಮ್ ।**
**ಸರ್ವಾನುಸ್ಯೂತತನ್ಮಾತ್ರಂ ಭಗವನ್ತಂ ಭಜಾಮಹೇ ಶ್ರೀ ॥೬॥**

ತನ್ನಿಂದಲೇ ನಿರ್ಮಿಸಲ್ಪಟ್ಟ ಸಮಸ್ತಕಾರ್ಯಗಳಲ್ಲಿಯೂ ನ್ಯೂನಾಧಿಕ-ಶ್ರೇಷ್ಠ-ಕನಿಷ್ಠಗಳೆಂಬ ಭಾವನೆಗಳಿಲ್ಲದೆ ಎಲ್ಲದರಲ್ಲಿಯೂ ಪೂರ್ಣ

ನಾಗಿಯೇ ಇರುವನೋ, ಆ ರೂಪದಲ್ಲಿಯೇ ಅನುಭವಕ್ಕೂ ತೋರುವನೋ, ಅಂತಹ ನಿರ್ವಿಶೇಷನೂ ಸತ್ತಾಮಾತ್ರನೂ ಆದ ಭಗವಂತನನ್ನು ಭಜಿಸೋಣ.)

**ಸ್ವಕೃತಪುರೇಷ್ವಮೀಷ್ವಬಹಿರನ್ತರಸಂವರಣಂ**
**ತವ ಪುರುಷಂ ವದನ್ತ್ಯಖಿಲಶಕ್ತಿಧೃತೋಽಂಶಕೃತಮ್ ।**
**ಇತಿ ನೃಗತಿಂ ವಿವಿಚ್ಯ ಕವಯೋ ನಿಗಮಾವಪನಂ**
**ಭವತ ಉಪಾಸತೇಽಘ್ರಿಮಭವಂ ಭುವಿ ವಿಶ್ವಸಿತಾಃ ॥೨೦॥**

ಜೀವವು ಯಾವ ಶರೀರದಲ್ಲಿರುವುದೋ ಆ ಶರೀರವು ಆ ಜೀವದ ತನ್ನದೇ ಆದ ಕರ್ಮಫಲದಿಂದ ನಿರ್ಮಿಸಿಕೊಂಡದ್ದು. ಕರ್ಮಫಲವಾಗಿ ಶರೀರವಿರುವುದೇ ಹೊರತು ಆ ಶರೀರಕ್ಕೆ ಬೇರೆ ಯಾವ ಸತ್ತೆಯೂ ಇಲ್ಲ. ಅಂತಹ ಆವರಣಗಳು ಜೀವನಿಗೆ ಪುನರಾವರ್ತಿತವಾಗುತ್ತಲೇ ಇರುತ್ತವೆ. ವ್ಯತ್ಯಾಸವಾಗುತ್ತಲೂ ಇರುತ್ತವೆ. ಇಂದು ಮನುಷ್ಯಶರೀರದ ಆವರಣವಿದ್ದರೆ ಮತ್ತೊಂದು ಜನ್ಮದಲ್ಲಿ ಹುಲಿಯ ಶರೀರದ ಆವರಣವಿರಬಹುದು. ಆದುದ ರಿಂದ ಆವರಣವೆಂಬುದು ಕರ್ಮಫಲ. ಶಾಶ್ವತವಾಗಿ ಉಳಿಯತಕ್ಕುದಲ್ಲ. ಆದುದರಿಂದ ತತ್ತ್ವಜ್ಞಾನಿಗಳಾದ ಪುರುಷರು–ಪ್ರತಿಯೊಂದು ಆವರಣದಲ್ಲಿ ರುವ ಜೀವವೂ ಸಮಸ್ತಶಕ್ತಿಗಳನ್ನೂ ಧರಿಸಿರುವ ನಿನ್ನವೇ ಅಂಶಗಳೆಂದು ಹೇಳುತ್ತಾರೆ. ಹೀಗೆ ಪಂಡಿತರು ಜೀವದ ವಾಸ್ತವಿಕ ಸ್ವರೂಪವನ್ನು ಶಾಸ್ತ್ರ ದೃಷ್ಟಿಯಿಂದ ವಿಚಾರಮಾಡಿ ಪರಮವಿಶ್ವಾಸದಿಂದ ನಿನ್ನ ಚರಣಕಮಲಗಳ ಉಪಾಸನೆ ಮಾಡುತ್ತಾರೆ. ಏಕೆಂದರೆ : ನಿನ್ನ ಚರಣಕಮಲಗಳೇ ಸಮಸ್ತ ವೈದಿಕಕರ್ಮಗಳಿಗೂ ಸಮರ್ಪಣಸ್ಥಾನವಾಗಿದೆ ಮತ್ತು ಮೋಕ್ಷಸ್ವರೂಪವೂ ಆಗಿವೆ.

**(ತ್ವದಂಶಸ್ಯ ಮಹೇಶಾನ ತ್ವನ್ಮಾಯಾ ಕೃತಬನ್ಧನಮ್ ।**
**ತ್ವದಂಘ್ರಿಸೇವಾ ಮಾದಿಶ್ಯ ಪರಾನನ್ದ ನಿವರ್ತಯ ಶ್ರೀ ॥೭॥**

ಪರಮಾನಂದಸ್ವರೂಪನಾದಸ್ವಾಮಿಯೇ! ನಾನು ನಿನ್ನ ಅಂಶವೇ ಆಗಿದ್ದೇನೆ. ನಿನ್ನ ಚರಣಕಮಲಗಳ ಸೇವೆಗೆ ಆದೇಶವನ್ನು ನೀಡಿ ನಿನ್ನ ಮಾಯೆಯ ಮೂಲಕವಾಗಿ ನಿರ್ಮಿತವಾಗಿರುವ ಬಂಧನದಿಂದ ನನ್ನನ್ನು ಮುಕ್ತಿಗೊಳಿಸು.)

**ದುರವಗಮಾತ್ಮತತ್ತ್ವನಿಗಮಾಯ ತವಾತ್ತತನೋ-**
**ಶ್ಚರಿತಮಹಾಮೃತಾಬ್ಧಿಪರಿವರ್ತಪರಿಶ್ರಮಣಾಃ ।**
**ನ ಪರಿಲಷನ್ತಿ ಕೇಚಿದಪವರ್ಗಮಪೀಶ್ವರ ತೇ**
**ಚರಣಸರೋಜಹಂಸಕುಲಸಙ್ಗವಿಸೃಷ್ಟಗೃಹಾಃ ॥೨೧॥**

ಈಶ್ವರನೇ! ಪ್ರಭುವೇ! ಪ್ರಯಾಸದಿಂದಲೂ ತಿಳಿಯಲು ಅಶಕ್ಯವಾದ ಆತ್ಮಸ್ವರೂಪದ ಯಾಥಾರ್ಥ್ಯವನ್ನು ಬೋಧಿಸುವುದಕ್ಕಾಗಿ ಆಗಿಂದಾಗ್ಗೆ ಲೀಲಾಮಾನುಷವಿಗ್ರಹವನ್ನು ಧರಿಸುವ ನಿನ್ನ ಚರಿತ್ರೆಯೆಂಬ ಅಮೃತ ಸಾಗರದಲ್ಲಿ ಮುಳುಗಿ ಮುಳುಗಿ ಆಯಾಸವನ್ನು ಪರಿಹರಿಸಿಕೊಂಡಿರುವ ನಿನ್ನ ಪ್ರೇಮೀ ಭಕ್ತರು, ನಿನ್ನ ಪಾದಕಮಲಗಳಲ್ಲಿ ಹಂಸಗಳಂತೆ ನಲಿದಾಡುವ ಭಕ್ತರೊಡನೆ ಸೇರಿಕೊಂಡು ನಿನ್ನ ಕಥಾಮೃತಪಾನವನ್ನು ಸತತವಾಗಿ ಮಾಡುತ್ತಾ, ಮನೆ-ಮಠಗಳನ್ನೂ ಪತ್ನೀ-ಪುತ್ರರನ್ನೂ ತ್ಯಜಿಸಿಬಿಡುತ್ತಾರೆ. ಅವರಿಗೆ ನಿನ್ನನ್ನು ಕೀರ್ತಿಸುವುದರ ಹೊರತಾಗಿ ಬೇರೆ ಯಾವುದಕ್ಕೂ ವ್ಯವಧಾನವೇ ಇರುವುದಿಲ್ಲ. ನಿನ್ನ ಚರಿತಾಮೃತವನ್ನು ಪಾನಮಾಡಿ–ಮಾಡಿ ಮತ್ತರಾದ ಅವರಿಗೆ ಮೋಕ್ಷವು ಕೂಡ ತೃಣಕ್ಕೆ ಸಮಾನವಾಗುತ್ತದೆ. ಅವರು ಅದನ್ನು ಕೂಡ ಅಪೇಕ್ಷಿಸುವುದಿಲ್ಲ.

**(ತ್ವತ್ಕಥಾಮೃತಪಾಥೋಧೌ ವಿಹರನ್ತೋ ಮಹಾಮುಪಃ ।**
**ಕುರ್ವನ್ತಿ ಕೃತಿನಃ ಕೇಚಿಚ್ಚತುರ್ವರ್ಗಂ ತೃಣೋಪಮಮ್ ಶ್ರೀ ॥೮॥**

ಕೆಲವರು ಶುದ್ಧಾಂತಃಕರಣರಾದ ಮಹಾಪುರುಷರು ನಿನ್ನ ಅಮೃತ ಮಯವಾದ ಕಥಾಸಮುದ್ರದಲ್ಲಿ ವಿಹರಿಸುತ್ತಾ ಪರಮಾನಂದದಲ್ಲಿ ಮಗ್ನರಾಗಿ ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ತೃಣಕ್ಕೆ ಸಮಾನವಾಗಿ ಕಾಣುತ್ತಾರೆ.)

**ತ್ವದನುಪಥಂ ಕುಲಾಯಮಿದಮಾತ್ಮಸುಹೃತ್ಪ್ರಿಯವ-**
**ಚ್ಚರತಿ ತಥೋನ್ಮುಖೇ ತ್ವಯಿ ಹಿತೇ ಪ್ರಿಯ ಆತ್ಮನಿ ಚ ।**
**ನ ಬತ ರಮನ್ತ್ಯಹೋ ಅಸದುಪಾಸನಯಾಽತ್ಮಹನೋ**
**ಯದನುಶಯಾ ಭ್ರಮನ್ತ್ಯುರುಭಯೇ ಕುಶರೀರಭೃತಃ ॥೨೨॥**

ಪ್ರಭುವೇ! ಈ ಶರೀರವು ಯಾವಾಗ ನಿನ್ನ ಸೇವೆಗೆ ಸಾಧಕವಾಗಿ

ನಿನ್ನನ್ನು ಪಡೆಯುವ ಮಾರ್ಗವನ್ನೇ ಅನುಸರಿಸಿ ಹೋಗುತ್ತದೆಯೋ ಆಗ ಈ ಶರೀರವು ಆತ್ಮನಂತೆ, ಹಿತೈಷಿಯಂತೆ, ಸುಹೃದನಂತೆ, ಪ್ರಿಯವ್ಯಕ್ತಿಯಂತೆ ನಿನ್ನ ಪೂಜಾ-ಪುರಸ್ಕಾರಗಳೆಲ್ಲಕ್ಕೂ ಅನುಗುಣವಾಗಿ ವ್ಯವಹರಿಸುತ್ತದೆ. ನೀನೂ ಕೂಡ ಜೀವನಿಗೆ ಒಳ್ಳೆಯ ಹಿತೈಷಿಯೂ, ಪ್ರಿಯತಮನೂ, ಆತ್ಮ ಸ್ವರೂಪನೂ ಆಗಿದ್ದು ಅಂತಹ ಸಾತ್ತ್ವಿಕ ಜೀವಿಯನ್ನು ನಿನ್ನವನನ್ನಾಗಿ ಮಾಡಿಕೊಳ್ಳಬೇಕೆಂದು ತವಕಿಸುವೆ. ನೀನೇ ಅನುಗ್ರಹಿಸಿದ ಶರೀರದಿಂದ ನಿನ್ನನ್ನು ಪಡೆದುಕೊಳ್ಳಲು ಸಕಲವಿಧವಾದ ಸಾಧನ-ಸಂಪತ್ತಿಗಳನ್ನೂ ನೀನು ಮಾಡಿಕೊಟ್ಟಿರುವೆ. ನಿನ್ನನ್ನು ಪಡೆಯಲು ಇಷ್ಟೊಂದು ಆನುಕೂಲ್ಯಗಳಿದ್ದರೂ ಶರೀರವನ್ನು ಪಡೆದನಂತರ ಜೀವನು, ತಾನು ಮನುಷ್ಯಶರೀರವನ್ನು ಪಡೆದುದರ ಮುಖ್ಯಕಾರಣವನ್ನೇ ಮರೆತುಬಿಡುತ್ತಾನೆ. ನಿನ್ನನ್ನು ಉಪಾಸಿಸಲು ಪ್ರಯತ್ನಿಸುವುದೇ ಇಲ್ಲ. ಇಂದ್ರಿಯಗಳಿಗೆ ಪರವಶನಾಗಿ ನಿನ್ನ ಸೇವೆಗೆ ಮುಡುಪಾಗಿಡಬೇಕಾದ ಶರೀರವನ್ನೇ ಪಾಲಿಸಲು-ಪೋಷಿಸಲು-ಅಲಂಕರಿಸಲು ಪ್ರಾರಂಭಿಸುತ್ತಾನೆ. ನಿನ್ನನ್ನು ಉಪಾಸಿಸುವುದಕ್ಕೆ ಬದಲಾಗಿ ನಶ್ವರವಾದ ಶರೀರವನ್ನೇ ಉಪಾಸಿಸಲು ತೊಡಗಿ ಆತ್ಮಘಾತವನ್ನು ಮಾಡಿಕೊಳ್ಳುತ್ತಾನೆ. ಅಂತಹವನ ಕಾರ್ಯಗಳೆಲ್ಲವೂ ಶರೀರಸೌಖ್ಯಕ್ಕಾಗಿಯೇ ಮಾಡಲ್ಪಡುತ್ತವೆ. ಶರೀರವು ನಾಶವಾಗುವುದೆಂದು ಅವನು ಒಮ್ಮೆಯಾದರೂ ಚಿಂತಿಸುವುದಿಲ್ಲ. ನೀನು ದಯಪಾಲಿಸಿದ ಶರೀರವನ್ನು ನಿನ್ನ ಸೇವೆಗೆ ಉಪಯೋಗಿಸದೆ ಮಾಡಿಕೊಳ್ಳುವ ಇಂತಹ ಆತ್ಮಘಾತದಿಂದಾಗಿ ಅವರು ಪಶು-ಪಕ್ಷಿಗಳೇ ಮೊದಲಾದ ನೀಚ ಯೋನಿಗಳಲ್ಲಿ ಜನ್ಮವನ್ನು ಪಡೆದು ಹುಟ್ಟು-ಸಾವುಗಳೆಂಬ ಸಂಸಾರದಲ್ಲಿ ಸಿಕ್ಕಿ ಸುತ್ತುತ್ತಿರುತ್ತಾರೆ. (ಮನುಷ್ಯನಾಗಿ ಹುಟ್ಟುವುದು ಮೂಲಸ್ಥಾನವನ್ನು ಕಂಡುಕೊಳ್ಳುವ ಸಲುವಾಗಿ ಅಥವಾ ಮನುಷ್ಯಶರೀರವನ್ನು ದಯಪಾಲಿಸಿದ ಪರಮಾತ್ಮನನ್ನು ಕಂಡುಕೊಳ್ಳುವ ಸಲುವಾಗಿ ಬೇರೆ ಯಾವ ಪ್ರಯೋಜನಕ್ಕಾಗಿಯೂ ಅಲ್ಲ. ಜೀವನು ಮೂಲಸ್ವರೂಪನಾದ ತನ್ನನ್ನು ಸೇರಬೇಕೆಂಬ ಆಶಯದಿಂದ ದಯಾಮಯನಾದ ಪರಮಾತ್ಮನು ಕಣ್ಣುಗಳು, ಕೈಕಾಲುಗಳು, ಕಿವಿಗಳು ಎಲ್ಲವನ್ನೂ ದಯಾಪಾಲಿಸಿದ್ದಾನೆ. ಅದರಿಂದ ಅವನ ಸೇವೆಯನ್ನು ಮಾಡಬೇಕು. ಆದರೆ ಮಾನವನು ಪರಮಾತ್ಮನು ಕೊಟ್ಟಿರುವ ಉಪಕರಣಗಳನ್ನು ದುರುಪಯೋಗಪಡಿಸಿಕೊಳ್ಳು

ತ್ತಿದ್ದಾನೆ. ನಶ್ವರವಾದ ದೇಹವೇ ಆತ್ಮನೆಂದು ಭಾವಿಸಿ ಅದನ್ನು ವೈಭವೀ ಕರಿಸುತ್ತಿದ್ದಾನೆ. ಇದರ ಫಲ : ಅಧಃಪತನ. ಅದೃಷ್ಟಪತನ. ಅದೃಷ್ಟವಶದಿಂದ ಮಾನವನಾಗಿ ಹುಟ್ಟಿದ್ದವನು ಪುನಃ ನೀಚಯೋನಿಗಳಲ್ಲಿ ಜನ್ಮತಾಳಬೇಕಾಗು ತ್ತದೆ. ಆದುದರಿಂದ ಮನುಷ್ಯನು, ಪರಮಾತ್ಮನು ದಯಪಾಲಿಸಿರುವ ಇಂದ್ರಿಯಗಳನ್ನು ಅವನ ಸೇವೆಗಾಗಿಯೇ ಮುಡುಪಾಗಿಡಬೇಕು. ಆತ್ಮ ದ್ರೋಹವನ್ನು ಮಾಡಿಕೊಳ್ಳಬಾರದು.)

**(ತ್ವಯ್ಯಾತ್ಮನಿ ಜಗನ್ನಾಥೇ ಮನ್ಮನೋ ರಮತಾಮಿತಿ ।**
**ಕದಾ ಮಮೇದೃಶಂ ಜನ್ಮ ಮಾನುಷಂ ಸಮ್ಭವಿಷ್ಯತಿ ಶ್ರೀ ॥೯॥**

ದೇವದೇವನೇ! ಜಗತ್ತಿಗೇ ನಾಥನಾಗಿರುವ ಮತ್ತು ನನ್ನ ಆತ್ಮ ಸ್ವರೂಪನಾಗಿರುವ ನಿನ್ನಲ್ಲಿಯೇ ನನ್ನ ಮನಸ್ಸು ರಮಿಸಲಿ. ಈ ಜನ್ಮದಲ್ಲಿಯೇ ನನ್ನ ಮನಸ್ಸು ನಿನ್ನಲ್ಲಿ ಲೀನವಾಗದೇ ಹೋಗಿಬಿಟ್ಟರೆ ಮುಂದೆ ಯಾವಾಗ ತಾನೇ ನನಗೆ ಇಂತಹ ಮನುಷ್ಯಜನ್ಮವು ಲಭಿಸೀತು?)

**ನಿಭೃತಮರುನ್ಮನೋಽಕ್ಷದೃಢಯೋಗಯುಜೋ ಹೃದಿ ಯ-**
**ನ್ಮುನಯ ಉಪಾಸತೇ ತದರಯೋಽಪಿ ಯಯುಃ ಸ್ಮರಣಾತ್ ।**
**ಸ್ತ್ರಿಯ ಉರಗೇನ್ದ್ರಭೋಗಭುಜದಣ್ಡವಿಷಕ್ತಧಿಯೋ**
**ವಯಮಪಿ ತೇ ಸಮಾಃ ಸಮದೃಶೋಽಙ್ಘ್ರಿಸರೋಜಸುಧಾಃ ॥**

ಪ್ರಭುವೇ! ದೊಡ್ಡ-ದೊಡ್ಡ ವಿಚಾರಶೀಲರಾದ ಯೋಗಿಗಳು-ಯತಿ ಗಳು ತಮ್ಮ ಪ್ರಾಣ-ಮನಸ್ಸು ಮತ್ತು ಇಂದ್ರಿಯಗಳನ್ನು ವಶಪಡಿಸಿಕೊಂಡು ಯೋಗಾಭ್ಯಾಸದ ಮೂಲಕವಾಗಿ ತಮ್ಮ ಹೃನ್ಮಂದಿರಗಳಲ್ಲಿ ಏನನ್ನು ಕಂಡುಕೊಂಡರೋ ಅಂತಹ ಸಚ್ಚಿದಾನಂದಸ್ವರೂಪನಾದ ನಿನ್ನನ್ನು ನಿನ್ನ ವೈರಿಗಳು ಕೂಡ ನಿರಂತರವಾದ ಸ್ಮರಣೆಯಿಂದಲೇ ಕಂಡುಕೊಂಡರು. ನಿನ್ನ ಪಾದಾರವಿಂದವನ್ನು ಸೇರಿ ಉದ್ಧಾರವಾಗಿಬಿಟ್ಟರು. ಸರ್ಪರಾಜನಂತೆ ನೀಳವಾಗಿಯೂ ದಪ್ಪವಾಗಿಯೂ ದುಂಡು-ದುಂಡಾಗಿಯೂ ಇರುವ ನಿನ್ನ ತೋಳುಗಳ ತೆಕ್ಕೆಯಲ್ಲಿರಲು ಇಚ್ಛಿಸಿದ ಕಾಮುಕಿಯರಾದ ಸ್ತ್ರೀಯರು ಕೂಡ ನಿನ್ನನ್ನು ಪಡೆದುಕೊಂಡು ಬಿಟ್ಟರು. ಸಮದೃಷ್ಟಿಯಿಂದ ನಿನ್ನ ಸ್ವರೂಪವನ್ನು ಭಾವಿಸುತ್ತಿರುವ ವೇದದ ಅಧಿದೇವತೆಗಳಾದ ನಾವೂ

ಜ್ಞಾನದ ಮೂಲಕವಾಗಿ ನಿನ್ನ ದಿವ್ಯಸ್ವರೂಪವನ್ನು ಕಂಡುಕೊಂಡೆವು. ಯಾವ ಮೂಲಕವೇ ಆದರೂ ನಿನ್ನ ಪಾದಕಮಲದ ಅಮೃತವನ್ನು ಪಾನ ಮಾಡುವವರೆಲ್ಲರೂ ನಿನಗೆ ಸಮಾನರು. ಅವರಲ್ಲಿ ನಿನಗೆ ಯಾವ ತಾರ ತಮ್ಯವೂ ಇಲ್ಲ.

**(ಚರಣಸ್ಮರಣಂ ಪ್ರೇಮ್ಣಾ ತವ ದೇವ ಸುದುರ್ಲಭಮ್ ।**
**ಯಥಾಕಥಞ್ಚಿನ್ನೃಹರೇ ಮಮ ಭೂಯಾದಹರ್ನಿಶಮ್ ಶ್ರೀ ॥೧೦॥**

ನೃಸಿಂಹನೇ! ಪ್ರೇಮಪೂರ್ವಕವಾಗಿ ಭಕ್ತಿಭಾವದಿಂದ ನಿನ್ನನ್ನು ಸ್ಮರಿಸುವುದೆಂದರೆ ದುರ್ಲಭವೇ ಸರಿ. ಈ ಸಂಸಾರಮುಜುಗರದಲ್ಲಿ ಅಂತಹ ಸಮಯವೆಂದಿಗೂ ಸಿಕ್ಕದು. ಆದುದರಿಂದ ಯಾವುದಾದರೂ ಕಾರಣದಿಂದ ಭಕ್ತಿಯಿದ್ದೋ-ಭಕ್ತಿಯಿಲ್ಲದೆಯೋ ಹಗಲು-ರಾತ್ರಿಗಳಲ್ಲಿ ಸದಾ ನಿನ್ನ ಸ್ಮರಣೆ ಯಾಗುತ್ತಿರುವಂತೆ ಅನುಗ್ರಹಿಸು.)

**ಕ ಇಹ ನು ವೇದ ಬತಾವರಜನ್ಮಲಯೋಽಗ್ರಸರಂ**
**ಯತ ಉದಗಾದೃಷಿರ್ಯಮನು ದೇವಗಣಾ ಉಭಯೇ ।**
**ತರ್ಹಿ ನ ಸನ್ನ ಚಾಸದುಭಯಂ ನ ಚ ಕಾಲಜವಃ**
**ಕಿಮಪಿ ನ ತತ್ರ ಶಾಸ್ತ್ರ ಮವಕೃಷ್ಯ ಶಯೀತ ಯದಾ ॥೨೪॥**

ಭಗವಂತ! ನೀನು ಅನಾದಿಯೂ, ಅನಂತನೂ ಆಗಿರುವೆ. ಯಾರ ಹುಟ್ಟು-ಸಾವುಗಳು ಕಾಲಕ್ಕೆ ಸೀಮಿತಗಳಾಗಿವೆಯೋ ಅಂತಹವರು ಕಾಲಾ ತೀತನಾದ ನಿನ್ನನ್ನು ಹೇಗೆ ತಾನೇ ತಿಳಿದಾರು? ಬ್ರಹ್ಮನೂ ನಿನ್ನಿಂದಲೇ ಹುಟ್ಟಿದವನು. ಬ್ರಹ್ಮಮಾನಸಪುತ್ರರಾದ, ನಿವೃತ್ತಿಮಾರ್ಗಪರಾಯಣರಾದ ಸನಕಾದಿಗಳಾಗಲೀ ಪ್ರವೃತ್ತಿಮಾರ್ಗಪರಾಯಣರಾದ ಮರೀಚಿಗಳಾಗಲೀ ನಿನ್ನಿಂದ ಇತ್ತೀಚಿನವರು. ಯಾವಾಗ ನೀನು ಸಮಸ್ತಜಗತ್ತನ್ನೂ ಚರಾ-ಚರಪ್ರಾಣಿಗಳನ್ನೂ ನಿನ್ನಲ್ಲಿಯೇ ಅಡಗಿಸಿಕೊಂಡು ಮಲಗಿದ್ದೆಯೋ ಆ ಸಮಯದಲ್ಲಿ ನಿನ್ನ ಹೊಟ್ಟೆಯಲ್ಲಿ ಅಡಗಿದ್ದ ಜೀವರಿಗೆ ನಿನ್ನನ್ನು ತಿಳಿಯುವ ಸಾಧನಗಳಾವುವೂ ಇರಲಿಲ್ಲ. ಸಮಸ್ತವೇದಗಳೂ ಸಮಸ್ತಶಾಸ್ತ್ರಗಳೂ ನಿನ್ನಲ್ಲಿಯೇ ಸೇರಿಹೋಗಿದ್ದುವು. ಆ ಸಮಯದಲ್ಲಿ ಆಕಾಶವೇ ಮೊದಲಾದ ಸ್ಥೂಲ ಜಗತ್ತೂ ಇರಲಿಲ್ಲ. ಮಹತ್ತತ್ತ್ವವೇ ಮೊದಲಾದ ಸೂಕ್ಷ್ಮ

ಜಗತ್ತೂ ಇರಲಿಲ್ಲ. ಈ ಎರಡೂ ಸೇರಿ ರಚಿಸಲ್ಪಡುವ ಶರೀರವಾಗಲೀ ಇದಕ್ಕೆ ನಿಮಿತ್ತವಾದ ಕ್ಷಣ-ಮುಹೂರ್ತಾದಿ ಕಾಲಗಳಾಗಲೀ ಇರಲಿಲ್ಲ. ಅಂತಹ ಸಮಯದಲ್ಲಿ ನಿನ್ನನ್ನು ಭಜಿಸುವುದೊಂದನ್ನು ಬಿಟ್ಟು ನಿನ್ನನ್ನು ಸೇರಲು ಅನ್ಯಮಾರ್ಗವೇ ಇರಲಿಲ್ಲ.

**(ಕ್ವಾಹಂ ಬುದ್ಧ್ಯಾದಿ ಸಂರುದ್ಧಃ ಕ್ವಚ ಭೂಮನ್ಮಹಸ್ತವ ।**
**ದೀನಬನ್ಧೋ ದಯಾಸಿನ್ಧೋ ಭಕ್ತಿಂ ಮೇ ನೃಹರೇ ದಿಶ ಶ್ರೀ ॥೧೧॥**

ಅನಂತಮಹಿಮಾಶಾಲಿಯೇ! ನೃಸಿಂಹನೇ! ಬುದ್ಧಿಯೇ ಮೊದಲಾದುವುಗಳಿಂದ ತಡೆಯಲ್ಪಟ್ಟ ಆತ್ಮಜ್ಞಾನವುಳ್ಳ ನಾನೆಲ್ಲಿ? ಮನಸ್ಸು-ಮಾತು–ಮುಂತಾದುವುಗಳಿಗೆ ಅಗೋಚರವಾದ ನಿನ್ನ ದಿವ್ಯಸ್ವರೂಪವೆಲ್ಲಿ? ನಿಶ್ಚಯವಾಗಿಯೂ ನಿನ್ನನ್ನು ತಿಳಿಯುವುದು ಅತ್ಯಂತ ಕಷ್ಟಕರವಾದದ್ದು. ಆದುದ ರಿಂದ ದೀನಬಂಧುವೇ! ದಯಾಸಿಂಧುವೇ! ನರಹರಿಯೇ! ನಿನ್ನಲ್ಲಿ ನನಗೆ ಅನನ್ಯವಾದ ಭಕ್ತಿಭಾವವುಂಟಾಗುವಂತೆ ಅನುಗ್ರಹಿಸಪ್ಪಾ.)

**ಜನಿಮಸತಃ ಸತೋ ಮೃತಿಮುತಾತ್ಮನಿ ಯೇ ಚ ಭಿದಾ**
**ವಿಪಣಮೃತಂ ಸ್ಮರನ್ತ್ಯುಪದಿಶನ್ತಿ ತ ಆರುಪಿತೈಃ ।**
**ತ್ರಿಗುಣಮಯಃ ಪುಮಾನಿತಿ ಭಿದಾ ಯದಬೋಧಕೃತಾ**
**ತ್ವಯಿ ನ ತತಃ ಪರತ್ರ ಸ ಭವೇದವಬೋಧರಸೇ ॥೨೫॥**

ಇಲ್ಲದಿದ್ದ ಜಗತ್ತು ಮತ್ತು ಬ್ರಹ್ಮವಸ್ತುವು ಹೊಸದಾಗಿ ಹುಟ್ಟುವು ದೆಂದು ಕೆಲವರು ಹೇಳುತ್ತಾರೆ. ಸದ್ರೂಪವಾದ ಇಪ್ಪತ್ತೊಂದು ದುಃಖಗಳ ನಿವಾರಣೆಯಾದನಂತರ ಮುಕ್ತಿಯಾಗುವುದೆಂದೂ ಕೆಲವರು ಹೇಳುತ್ತಾರೆ. ಹಲವಾರು ಆತ್ಮಗಳಿರುವುವೆಂದೂ ಒಬ್ಬೊಬ್ಬರಲ್ಲಿಯೂ ಪ್ರತ್ಯೇಕ-ಪ್ರತ್ಯೇಕವಾದ ವಿಷಮವಾದ ಆತ್ಮಗಳಿವೆಯೆಂದೂ ಕೆಲವರು ಹೇಳುತ್ತಾರೆ. ಇಂತಹ ಅಭಿಪ್ರಾಯಗಳೆಲ್ಲವೂ ಕೇವಲ ಭ್ರಮೆಯಿಂದುಂಟಾಗಿರುವುದೆಂಬುದರಲ್ಲಿ ಸಂದೇಹವೇ ಇಲ್ಲ. 'ಪುರುಷನು ತ್ರಿಗುಣಮಯನು'–ಈ ಪ್ರಕಾರವಾದ ಭೇದಭಾವಗಳೆಲ್ಲವೂ ಕೇವಲ ಅಜ್ಞಾನದಿಂದಲೇ ಪ್ರಾಪ್ತವಾದುವು. ನೀನು ಅಜ್ಞಾನದಿಂದ ಸರ್ವಥಾ ಮುಕ್ತನಾಗಿರುವೆ. ಆದುದ

ರಿಂದ ಜ್ಞಾನಸ್ವರೂಪನಾದ ನಿನ್ನಲ್ಲಿ ಯಾವುದೇ ಪ್ರಕಾರವಾದ ಭೇದಭಾವವೂ ಇರುವುದಿಲ್ಲ.*

**(ಮಿಥ್ಯಾತರ್ಕ ಸುಕರ್ತಶೇರಿತ ಮಹಾ ವಾದಾನ್ಧಕಾರಾನ್ತರ-**
**ಭ್ರಾಮ್ಯನ್ಮನ್ದಮತೇರಮನ್ದಮಹಿಮಂ ಸ್ತ್ವಜ್ಞಾನ ವರ್ತ್ಮಾಸ್ಫುಟಮ್ ।**
**ಶ್ರೀಮನ್ಮಾಧವ ವಾಮನ ತ್ರಿನಯನ ಶ್ರೀಶಙ್ಕರ ಶ್ರೀಪತೇ**
**ಗೋವಿನ್ದೇತಿ ಮುದಾವದನ್ಮಧುಪತೇ ಮುಕ್ತಃ ಕದಾ ಸ್ಯಾಮಹಮ್**
**ಶ್ರೀ ॥೧೨॥**

ಅನಂತಮಹಿಮಾಶಾಲಿಯಾದ ಪ್ರಭುವೇ! ಯಾವ ಮೂಢನು ಮಿಥ್ಯಾ ತರ್ಕವನ್ನಾಶ್ರಯಿಸಿ ಕರ್ಕಶವಾಗಿ ಧ್ವನಿಮಾಡುತ್ತಾ ವಾದ-ವಿವಾದ ವೆಂಬ ಅಂಧಕಾರದಲ್ಲಿ ಬಿದ್ದು ತಾನೇ ಗೆದ್ದುಬಿಡುವೆನೆಂದು ಭ್ರಮಿಸುವನೋ ಅಂತಹವನಿಗೆ ನಿನ್ನನ್ನು ಅರಿಯುವ ಮಾರ್ಗವು ತಿಳಿಯುವ ಸಂಭವವೇ

---

* ನೈಯಾಯಿಕರು ಹೇಳುವ ೨೧ ದುಃಖಗಳು : ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮರಣ–ಎಂಬ ಆರು ಊರ್ಮಿಗಳು. ಐದು ಜ್ಞಾನೇಂದ್ರಿಯಗಳೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ವಿಷಯಗಳು. ಮನಸ್ಸು, ಸಂಕಲ್ಪ, ಸುಖ, ದುಃಖ, ಶರೀರ ಎಂಬುವು ಐದು. ಒಟ್ಟು ೨೧ ದುಃಖಗಳು. ಸುಖವೆಂದರೆ ವಿಷಯಸಂಬಂಧವಾದ ಸುಖ. ಅದು ದುಃಖನಿಯತವಾದುದರಿಂದ ಇಪ್ಪತ್ತೊಂದು ದುಃಖಗಳಲ್ಲಿ ಈ ಸುಖವನ್ನೂ ದುಃಖವೆಂದು ಪರಿಗಣಿಸಲಾಗಿದೆ.

1) ವೈಶೇಷಿಕರೆಂಬ ಕಣಾದಮುನಿಯ ಮತದವರು–ಸೃಷ್ಟಿಗಿಂತ ಮೊದಲು ಜಗತ್ತಿರಲಿಲ್ಲವೆಂದೂ ಹೊಸತಾಗಿ ಹುಟ್ಟಿತೆಂದೂ ಹೇಳುವರು. ಆದರೆ ಶ್ರುತಿಯು '**ಸ ದೇವ ಸೌಮ್ಯೇದಮಗ್ರ ಆಸೀತ್ ।**–ನಾಮರೂಪಗಳಿಂದ ವಿಕೃತವಾದ ಈ ಜಗತ್ತು ಸೃಷ್ಟಿಗಿಂತ ಮೊದಲು ಸದಾತ್ಮಕವಾಗಿಯೇ ಇದ್ದಿತು'–ಎಂದು ಹೇಳುತ್ತದೆ.

2) ಯೋಗ ಮತಾವಲಂಬಿಗಳಾದ ಪಾತಂಜಲರು ಜೀವರು ಮೊದಲು ಬ್ರಹ್ಮ ವಾಗಿರಲಿಲ್ಲವೆಂದೂ ಯೋಗಾಭ್ಯಾಸದಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವ ರೆಂದೂ ಹೇಳುತ್ತಾರೆ. ಆದರೆ ಶ್ರುತಿಯು ಬ್ರಹ್ಮೈವಾಸನ್ ಬ್ರಹ್ಮಾಪ್ಯೈತಿ–ಅಜ್ಞಾನ ವೆಂಬುದು ಬ್ರಹ್ಮಸ್ವರೂಪಕ್ಕೆ ಆವರಣ ಮಾತ್ರವಾದುದರಿಂದ ಜ್ಞಾನದಿಂದ ಅಜ್ಞಾನಾವರಣವನ್ನು ತೊಲಗಿಸಿದಲ್ಲಿ ಜೀವನು ಸ್ವಸ್ವರೂಪವಾದ ಬ್ರಹ್ಮನೇ ಆಗು ವನು–ಎಂದು ಹೇಳಿ ಆ ಯೋಗಮತವು ತನಗೆ ಸಮ್ಮತವಲ್ಲವೆಂದು ತಿಳಿಸುತ್ತದೆ.

ಇಲ್ಲ. ಅಂತಹ ಮಾರ್ಗವು ನಮಗೆ ಖಂಡಿತವಾಗಿಯೂ ಬೇಡ. ಭಕ್ತಿ ಭಾವದಿಂದ ಅನನ್ಯಶರಣನಾಗಿ ಮಾಧವಾ! ವಾಮನ! ತ್ರಿಲೋಚನ! ಶ್ರೀಶಂಕರ! ಶ್ರೀಪತಿಯೇ! ಗೋವಿಂದ! ಮಧುಪತಿಯೇ!–ಎಂದು ಕೂಗಿ ಕೊಳ್ಳುತ್ತಲೇ ನಾನು ಎಂದು ಮುಕ್ತಿಯನ್ನು ಪಡೆದೇನು?)

**ಸದಿವ ಮನಸ್ತ್ರಿವೃತ್ತ್ವಯಿ ವಿಭಾತ್ಯಸದಾಮನುಜಾತ್**
**ಸದಭಿಮೃಶನ್ತ್ಯಶೇಷಮಿದಮಾತ್ಮತಯಾಽತ್ಮವಿದಃ ।**
**ನಹಿ ವಿಕೃತಿಂ ತ್ಯಜನ್ತಿ ಕನಕಸ್ಯ ತದಾತ್ಮತಯಾ**
**ಸ್ವಕೃತಮನುಪ್ರವಿಷ್ಟಮಿದಮಾತ್ಮತಯಾವಸಿತಮ್ ॥೨೬॥**

ದೇವದೇವನೇ! ತ್ರಿಗುಣಾತ್ಮಿಕವಾದ ಈ ಜಗತ್ತು ಮನೋಮಾತ್ರ ದಿಂದ ನಿನ್ನಲ್ಲಿ ಕಲ್ಪಿತವಾದುದೇ ಹೊರತು ಬೇರೆಯಲ್ಲ. ಆದುದರಿಂದಲೇ ಆತ್ಮಜ್ಞಾನಿಗಳಾದವರು ಮನುಷ್ಯನು ಮೊದಲ್ಗೊಂಡು ಜಗತ್ತೆಲ್ಲವೂ ಅಸತ್ಯವಾದರೂ ಅವು ನಿನ್ನಲ್ಲಿ ಅಧಿಷ್ಠಾನ ಹೊಂದಿರುವುದರಿಂದ ಸತ್ಯವೆಂದೇ ಭಾವಿಸುತ್ತಾರೆ. ಸಮಸ್ತವೂ ಬ್ರಹ್ಮಮಯವೆಂದು ತಿಳಿಯುತ್ತಾರೆ. ಚಿನ್ನದ ವಿಕಾರಗಳಾದ ಒಡವೆಗಳನ್ನು ನೋಡಿದಾಗ ಅವು ಚಿನ್ನದ್ದೆಂಬ ಬುದ್ಧಿಯನ್ನು ಯಾರೂ ತ್ಯಜಿಸುವುದಿಲ್ಲ. ಮೂಲವಸ್ತುವು ಚಿನ್ನವೇ ಆಗಿರುವುದರಿಂದ

---

3) ನೈಯಾಯಿಕರೆಂಬ ತಾರ್ಕಿಕರು ಇಪ್ಪತ್ತೊಂದು ಬಗೆಯ ದುಃಖಗಳು ಸತ್ಯವೆಂದೂ ಅವುಗಳ ಧ್ವಂಸವೇ ಮೋಕ್ಷವೆಂದೂ ನಿರೂಪಿಸುವರು. ಆದರೆ ಶ್ರುತಿಯು **ಅನೀಶಯಾಶೋಚತಿ ಮುಹ್ಯಮಾನಃ** = ಜೀವನು ಅಜ್ಞಾನದಿಂದ ಮರುಳಾಗಿ ದುಃಖಿಸು ವನು. ಆ ದುಃಖವು ಅಜ್ಞಾನ ಕಲ್ಪಿತವು ಮತ್ತು ಅಸತ್ಯವು. ಅದು ಒಂದೇ ಹೊರತು ಅನೇಕವಲ್ಲ–ಎಂದು ಹೇಳುತ್ತದೆ.

4) ನಿರೀಶ್ವರ ವಾದಿಗಳಾದ ಸಾಂಖ್ಯರು : ಪ್ರತಿಶರೀರದಲ್ಲಿಯೂ ಇರುವ ಆತ್ಮನು ಬೇರೆ. ಪ್ರತ್ಯೇಕ-ಪ್ರತ್ಯೇಕವಾದ ಆತ್ಮಗಳೇ ಇವೆ. ಎಂದು ಹೇಳುತ್ತಾರೆ. ಇದಕ್ಕೆ ಶ್ರುತಿಯು **ಏಕಮೇವಾದ್ವಿತೀಯಂ ಬ್ರಹ್ಮ । ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ। ಏಕಧಾ ಬಹುಧಾ ಚೈವ ದೃಶ್ಯತೇ ಜಲಚನ್ದ್ರವತ್ ॥** ನೀರಿನ ಅಲೆಗಳಲ್ಲಿ ಕಾಣುವ ಚಂದ್ರನಂತೆ ಚಂದ್ರನು ಒಬ್ಬನೇ ಇದ್ದರೂ ಹಲವಾರು ಚಂದ್ರರು ಇರುವಂತೆ ಪರಮೇಶ್ವರನೊಬ್ಬನೇ ಸಕಲಪ್ರಾಣಿಗಳಲ್ಲಿಯೂ ಇರುವನು. ಉಪಾಧಿ ಬಾಹುಳ್ಯದಿಂದ ನಾನಾಪ್ರಕಾರವಾಗಿ ಇರುವಂತೆ ತೋರುವನು–ಎಂದು ಹೇಳುತ್ತದೆ.

5) ಕರ್ಮವಾದಿಗಳಾದ ಮೀಮಾಂಸಕರು ಕರ್ಮಫಲಗಳನ್ನೇ ಸತ್ಯವೆನ್ನುವರು.

ವಿಕೃತವಾದ ಸ್ವರೂಪಗಳನ್ನೂ ಚಿನ್ನವೆಂದೇ ಭಾವಿಸುತ್ತಾರೆ. ಅದರಂತೆಯೇ ತ್ರಿಗುಣಾತ್ಮಕವಾಗಿ ವಿಕಾರಹೊಂದಿದ ಜಗತ್ತನ್ನೂ ಜಗತ್ತಿನ ವಸ್ತುಗಳನ್ನೂ ಜ್ಞಾನಿಗಳಾದವರು ಆತ್ಮಸ್ವರೂಪವೆಂದೇ ಭಾವಿಸುತ್ತಾರೆ. ಆದುದರಿಂದ ಪರಮಾತ್ಮನ ಸಂಕಲ್ಪದಿಂದ ಹುಟ್ಟಿರುವ ಜಗತ್ತು ಪರಮಾತ್ಮನ ಅನು ಪ್ರವೇಶದಿಂದ ಹುಟ್ಟಿರುವ ಜೀವ-ದೇಹ–ಎಲ್ಲವೂ ಪರಮಾತ್ಮನೇ ಪರ ಬ್ರಹ್ಮವಸ್ತುವೇ–ಆಗಿವೆ.

**(ಯತ್ಸತ್ತ್ವತಃ ಸದಾ ಭಾತಿ ಜಗದೇತದಸತ್ಸ್ವತಃ ।**
**ಸದಾಭಾಸವಸತ್ಯಸ್ಮಿನ್ ಭಗವನ್ತಂ ಭಜಾಮ ತಮ್ ಶ್ರೀ ॥೧೬॥**

ಈ ಜಗತ್ತು ತನ್ನ ಸ್ವರೂಪ, ನಾಮ ಮತ್ತು ಆಕೃತಿಯರೂಪದಲ್ಲಿ ಅಸತ್ತೇ ಆಗಿದೆ. ಆದರೂ ಸತ್ಯನಾದ ಪರಮಾತ್ಮನಲ್ಲಿ ಇದರ ಅಧಿಷ್ಠಾನವಿರುವುದರಿಂದ ಇದೂ ಸತ್ಯವಾಗಿ ಕಾಣುತ್ತದೆ. ಈ ಅಸತ್ಯಪ್ರಪಂಚದಲ್ಲಿ ಸತ್ಯಸ್ವರೂಪನಾಗಿ ಸದಾ ಬೆಳಗುತ್ತಿರುವ ಭಗವಂತನನ್ನು ಭಜಿಸೋಣ.)

**ತವ ಪರಿ ಯೇ ಚರನ್ತ್ಯಖಿಲಸತ್ತ್ವನಿಕೇತತಯಾ**
**ತ ಉತ ಪದಾಽಕ್ರಮನ್ತ್ಯವಿಗಣಯ್ಯ ಶಿರೋ ನಿರ್ಋತೇಃ ।**
**ಪರಿವಯಸೇ ಪಶೂನಿವ ಗಿರಾ ವಿಬುಧಾನಪಿ ತಾಂ-**
**ಸ್ತ್ವಯಿ ಕೃತಸೌಹೃದಾಃ ಖಲು ಪುನನ್ತಿ ನ ಯೇ ವಿಮುಖಾಃ ॥**

ಭಗವನ್! ಯಾವ ನಿನ್ನನ್ನು ಸಮಸ್ತಪ್ರಾಣಿಗಳಿಗೂ ಪದಾರ್ಥಗಳಿಗೂ ಅಧಿಷ್ಠಾನನಾಗಿರುವೆಯೆಂಬುದು ತಿಳಿದಿರುತ್ತಾರೆಯೋ, ಸಮಸ್ತರಿಗೂ

---

ಭಗವಂತನ ಹಂಗೇ ಬೇಡವೆನ್ನುವರು. ಇದಕ್ಕೆ ಉತ್ತರವಾಗಿ ಶ್ರುತಿಯು ಹೇಳು ತ್ತದೆ.
ಅವಿದ್ಯಾಯಾಮನ್ತರೇ ವರ್ತಮಾನಾಃ ಸ್ವಯಂ ಧೀರಾಃ ಪಣ್ಡಿತಂ ಮನ್ಯಮಾನಾಃ ।
ಜಙ್ಘನ್ಯಮಾನಾಃ ಪರಿಯನ್ತಿ ಮೂಢಾ ಅನ್ಧೇನೈವ ನೀಯಮಾನಾ ಯಥಾನ್ಧಾಃ ॥

ನಶ್ವರವಾದ ಕರ್ಮಫಲಗಳನ್ನೇ ಸತ್ಯವೆಂದೂ ಶಾಶ್ವತವೆಂದೂ ಹೇಳುವವರು ಅವಿವೇಕಿಗಳು. ಅಜ್ಞಾನದಲ್ಲಿ ಮುಳುಗಿ ತಾವೇ ಬುದ್ಧಿವಂತರು, ಪಂಡಿತರು ಎಂದು ಭಾವಿಸಿಕೊಂಡು ಮುಪ್ಪು-ಸಾವು-ರೋಗ-ರುಜಿನ–ಇವೇ ಮುಂತಾದ ಅನರ್ಥಗಳಿಗೆ ಗುರಿಯಾಗಿ ತಾವು ಸಂಸಾರಸಮುದ್ರದಲ್ಲಿ ಮುಳುಗುವುದಲ್ಲದೆ ಇತರರನ್ನೂ ಮುಳುಗಿಸುವರು.

ಆಧಾರಭೂತನಾಗಿರುವೆಯೆಂದು ತಿಳಿದಿರುತ್ತಾರೆಯೋ, ಸರ್ವಾತ್ಮಭಾವದಿಂದ ನಿನ್ನನ್ನು ಭಜಿಸುವರೋ ; ಸೇವಿಸುವರೋ–ಅಂತಹವರು ಮೃತ್ಯುವನ್ನೂ ತುಚ್ಛವನ್ನಾಗಿ ಭಾವಿಸಿ ಅದರ ತಲೆಯನ್ನೂ ಕಾಲಿನಿಂದ ಮೆಟ್ಟಿ ಅದರ ಮೇಲೂ ವಿಜಯವನ್ನು ಸಾಧಿಸುತ್ತಾರೆ. ಯಾರು ನಿನ್ನಿಂದ ವಿಮುಖರಾಗಿ ಕರ್ಮಫಲಗಳಲ್ಲಿಯೇ ಆಸಕ್ತರಾಗಿರುವರೋ ಅಂತಹವರು ವಿದ್ವಾಂಸರೇ ಆಗಿದ್ದರೂ ಅವರನ್ನು ನೀನು ಕರ್ಮಫಲಗಳನ್ನು ಪ್ರತಿಪಾದಿಸುವ ಶ್ರುತಿಗಳ ಮೂಲಕವಾಗಿಯೇ ಪಶುಗಳನ್ನು ಬಂಧಿಸುವಂತೆ ಬಂಧಿಸಿ ಅವರು ಹುಟ್ಟು-ಸಾವುಗಳ ಚಕ್ರದಲ್ಲಿ ಸದಾ ಸುತ್ತುತ್ತಿರುವಂತೆ ಮಾಡುವೆ. ಇದಕ್ಕೆ ಪ್ರತಿಯಾಗಿ ಯಾರು ನಿನ್ನನ್ನು ಬಹಳವಾಗಿ ಪ್ರೀತಿಸುವರೋ ಯಾರು ನಿನ್ನ ಅನನ್ಯಭಕ್ತರಾಗಿರುವರೋ ಅಂತಹವರು ತಾವೂ ಪವಿತ್ರವಾಗುವುದಲ್ಲದೇ ಇತರರನ್ನೂ ಪವಿತ್ರಗೊಳಿಸುತ್ತಾರೆ.

**(ತಪನ್ತು ತಾಪೈಃ ಪ್ರಪತನ್ತು ಪರ್ವತಾತ್**
**ಅಟನ್ತು ತೀರ್ಥಾನಿ ಪಠನ್ತು ಚಾಗಮಾನ್ ।**
**ಯಜನ್ತು ಯಾಗೈರ್ವಿವದನ್ತು ವಾದೈಃ**
**ಹರಿಂ ವಿನಾ ನೈವ ಮೃತಿಂ ತರನ್ತಿ ಶ್ರೀ ॥೧೪॥**

ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ತಪಸ್ಸುಮಾಡಲಿ ; ಪರ್ವತದ ಮೇಲಿಂದಲೇ ಕೆಳಕ್ಕೆ ಬೀಳಲಿ ; ಹಲವಾರು ತೀರ್ಥಯಾತ್ರೆಗಳನ್ನಾದರೂ ಮಾಡಲಿ ; ವೇದಗಳೆಲ್ಲವನ್ನೂ ಅಧ್ಯಯನಮಾಡಲಿ ; ವಿದ್ವಾಂಸರೊಡನೆ ವಾದ-ವಿವಾದಗಳನ್ನಾದರೂ ಮಾಡಲಿ–ಹರಿಯೊಬ್ಬನನ್ನು ಬಿಟ್ಟು ಅವನ ಭಜನೆ-ಸೇವೆಗಳನ್ನು ಬಿಟ್ಟು ಇಂತಹುದೇ ಆದ ಯಾವುದೇ ಮಾರ್ಗಗಳಿಂದಲೂ ಮೃತ್ಯುವನ್ನುದಾಟುವ ಸಾಧ್ಯತೆಯಿಲ್ಲ. ಹರಿಯ ಕರುಣೆಯಿಂದ ಮಾತ್ರವೇ ಮೃತ್ಯುವನ್ನು ಮೆಟ್ಟಿ ನಿಲ್ಲಬಹುದು.)

**ತ್ವಮಕರಣಃ ಸ್ವರಾಡಖಿಲಕಾರಕಶಕ್ತಿಧರ–**
**ಸ್ತವ ಬಲಿಮುದ್ವಹನ್ತಿ ಶಮದನ್ತ್ಯಜಯಾನಿಮಿಷಾಃ ।**
**ವರ್ಷಭುಜೋಽಖಿಲಕ್ಷಿತಿಪತೇರಿವ ವಿಶ್ವಸೃಜೋ**
**ವಿದಧತಿ ಯತ್ರ ಯೇ ತ್ವಧಿಕೃತಾ ಭವತಶ್ಚಕಿತಾಃ ॥೨೮॥**

ನೀನು ಇಂದ್ರಿಯಗಳಿಂದ ರಹಿತನು. ಮನಸ್ಸು, ಬುದ್ಧಿ, ಇಂದ್ರಿಯ–ಇವೇ ಮುಂತಾದ ಯಾವ ಕರಣಗಳೂ ಇಲ್ಲದವನು. ಆದರೂ ಕರಣಗಳನ್ನು ಪ್ರಾಣಿಗಳಿಗಿತ್ತು ಇಂದ್ರಿಯಗಳ ಮೂಲಕ ಕೆಲಸವನ್ನು ಮಾಡಿಸುವಸಾಮರ್ಥ್ಯವನ್ನು ನೀನು ಹೊಂದಿರುವೆ. ಸ್ವಯಂಜ್ಯೋತಿಸ್ವರೂಪನು ನೀನು. ಆದುದರಿಂದ ಕಾರ್ಯಮಾಡಲು ನಿನಗೆ ಇಂದ್ರಿಯಗಳ ಅವಶ್ಯಕತೆಯಿಲ್ಲ. ಚಿಕ್ಕ-ಚಿಕ್ಕ ಸಾಮಂತರಾಜರು ತಮ್ಮ ಪ್ರಜೆಗಳಿಂದ ಕಪ್ಪ-ಕಾಣಿಕೆಗಳನ್ನು ಪಡೆದು ಅದನ್ನೆಲ್ಲಾ ಸೇರಿಸಿ ಚಕ್ರವರ್ತಿಗೆ ಒಪ್ಪಿಸುವಂತೆ–ಮನುಷ್ಯರಿಗೆ ಪೂಜ್ಯರಾದ ದೇವತೆಗಳೂ ಮತ್ತು ದೇವತೆಗಳಿಗೆ ಪೂಜ್ಯರಾದ ಬ್ರಹ್ಮನೇ ಮೊದಲಾದವರೂ ತಮ್ಮ ಭಕ್ತರಿಂದ ಹವ್ಯ-ಕವ್ಯಾದಿಗಳನ್ನು ಸ್ವೀಕರಿಸಿ ಅದನ್ನು ನಿನಗೆ ಅರ್ಪಿಸುತ್ತಾರೆ. ನೀನು ಆ ದೇವತೆಗಳನ್ನು ಯಾವ ಯಾವ ಕರ್ಮಗಳಲ್ಲಿ ನಿಯಮಿಸಿರುವೆಯೋ ಆ ಕರ್ಮಗಳನ್ನು ಭಯ-ಭಕ್ತಿಗಳಿಂದ ನಿರ್ವಹಿಸುವುದರ ಮೂಲಕವಾಗಿಯೂ ಅವರು ನಿನಗೆ ಪೂಜೆಯನ್ನು ಅರ್ಪಿಸುತ್ತಾರೆ.

**(ಅನಿನ್ದ್ರಿಯೋಽಪಿ ಯೋ ದೇವಃ ಸರ್ವಕಾರಕಶಕ್ತಿಧೃತ್ ।**
**ಸರ್ವಜ್ಞಃ ಸರ್ವಕರ್ತಾ ಚ ಸರ್ವಸೇವ್ಯಂ ನಮಾಮಿ ತಮ್ ಶ್ರೀ ॥೧೫॥**

ಇಂದ್ರಿಯಗಳಿಂದ ರಹಿತನಾಗಿದ್ದರೂ ಎಲ್ಲವನ್ನೂ ಮಾಡುವ ಶಕ್ತಿಯುಳ್ಳವನೂ ಸರ್ವಜ್ಞನೂ ಸರ್ವಕರ್ತೃವೂ ಆದ ಸಮಸ್ತರಿಂದಲೂ ಸೇವಿಸಲ್ಪಡುವವನೂ ಆಗಿರುವ ಸ್ವಾಮಿಗೆ ನಮಸ್ಕರಿಸುತ್ತೇನೆ.)

**ಸ್ಥಿರಚರಜಾತಯಃ ಸ್ಯುರಜಯೋತ್ಥನಿಮಿತ್ತಯುಜೋ**
**ವಿಹರ ಉದೀಕ್ಷಯಾ ಯದಿ ಪರಸ್ಯ ವಿಮುಕ್ತ ತತಃ ।**
**ನ ಹಿ ಪರಮಸ್ಯ ಕಶ್ಚಿದಪರೋ ನ ಪರಶ್ಚ ಭವೇ-**
**ದ್ವಿಯತ ಇವಾಪದಸ್ಯ ತವ ಶೂನ್ಯತುಲಾಂ ದಧತಃ ॥೨೯॥**

ನಿತ್ಯಮುಕ್ತನೇ! ನೀನು ಮಾಯಾತೀತನು. ಮಾಯೆಗೆ ದೂರದಲ್ಲಿದ್ದು ವೀಕ್ಷಣಮಾತ್ರದಿಂದಲೇ, ಸಂಕಲ್ಪಮಾತ್ರದಿಂದಲೇ, ನೀನು ಮಾಯೆಯೊಡನೆ ಕ್ರೀಡೆಯಾಡಿದೆಯಾದರೆ ನಿನ್ನ ಅಂತಹ ಸಂಕೇತದಿಂದಲೇ ಜೀವಗಳ ಸೂಕ್ಷ್ಮ ಶರೀರವೂ ಮತ್ತು ಅವುಗಳ ಸುಪ್ತವಾಗಿರುವ ಕರ್ಮಸಂಸ್ಕಾರಗಳೂ ಜಾಗ್ರತ

ವಾಗಿ ಚರಾಚರಪ್ರಾಣಿಗಳ ಉತ್ಪತ್ತಿಯಾಗುತ್ತದೆ. ನೀನು ಪರಮದಯಾಳುವು. ಆಕಾಶದಂತೆ ಸಮಸ್ತಪ್ರಾಣಿಗಳ ವಿಷಯದಲ್ಲಿಯೂ ಸಮದೃಷ್ಟಿಯಿರುವ ನಿನಗೆ ಬೇಕಾದವರಾಗಲೀ ಬೇಡದವರಾಗಲೀ ಯಾರೂ ಇರುವುದಿಲ್ಲ. ವಾಕ್ಕು ಮತ್ತು ಮನಸ್ಸುಗಳಿಗೆ ನೀನು ಅಗೋಚರನಾಗಿರುವೆ. ಶೂನ್ಯದಂತೆ ನೀನು ಎಲ್ಲದರಿಂದಲೂ ನಿರ್ಲಿಪ್ತನೂ ಆಗಿರುವೆ.

**(ತ್ವದೀಕ್ಷಣವಶಕ್ಷೋಭಮಾಯಾಬೋಧಿತಕರ್ಮಭಿಃ ।**
**ಜಾತಾನ್ ಸಂಸರತಃ ಖಿನ್ನಾನ್ ನೃಹರೇ ಪಾಹಿ ನಃ ಪಿತಃ ಶ್ರೀ ॥೧೬॥**

ನೃಸಿಂಹನೇ! ತಂದೆಯೇ! ನಿನ್ನ ಸೃಷ್ಟಿಸಂಕಲ್ಪಗಳಿಂದಲೇ ಕ್ಷೋಭೆಗೊಳ್ಳುವ ಮಾಯೆಯು ಕರ್ಮಗಳನ್ನು ಜಾಗ್ರತಗೊಳಿಸುತ್ತದೆ. ಈ ಕಾರಣದಿಂದಲೇ ಈ ಪ್ರಪಂಚದಲ್ಲಿ ಹುಟ್ಟಿ ಜನನ-ಮರಣಗಳೆಂಬ ಚಕ್ರದಲ್ಲಿ ಸಿಕ್ಕಿಹಾಕಿಕೊಂಡು ದುಃಖಿಸುತ್ತಿರುವ ನಮ್ಮನ್ನು ಸಂರಕ್ಷಿಸು.)

**ಅಪರಿಮಿತಾ ಧ್ರುವಾಸ್ತನುಭೃತೋ ಯದಿ ಸರ್ವಗತಾ-**
**ಸ್ತರ್ಹಿ ನ ಶಾಸ್ಯತೇತಿ ನಿಯಮೋ ಧ್ರುವ ನೇತರಥಾ ।**
**ಅಜನಿ ಚ ಯನ್ಮಯಂ ತದವಿಮುಚ್ಯ ನಿಯನ್ತೃ ಭವೇತ್**
**ಸಮಮನುಜಾನತಾಂ ಯದಮತಂ ಮತದುಷ್ಟತಯಾ ॥೩೦॥**

ಭಗವಂತ! ನಿತ್ಯಾನಂದಸ್ವರೂಪನೇ! ಒಂದು ವೇಳೆ ಜೀವರು ಅಸಂಖ್ಯಾತರಾಗಿದ್ದು ನಿತ್ಯರೂ ಸರ್ವವ್ಯಾಪಕರೂ ಆಗಿದ್ದರೆ ಅವರು ನಿನಗೆ ಸಮಾನರೆನಿಸಿಕೊಳ್ಳುತ್ತಾರೆ. ಅಂತಹ ಸಂದರ್ಭದಲ್ಲಿ ಶಾಸಿತ-ಶಾಸಕ–ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅವರು ಭೃತ್ಯರೂ ಆಗುವುದಿಲ್ಲ ; ನೀನು ಶಾಸಕನೂ ಆಗುವುದಿಲ್ಲ. ಆಗ ಅವರನ್ನು ನಿಯಮನಗೊಳಿಸುವುದಾದರೂ ಹೇಗೆ ಸಾಧ್ಯ? ಇದೆಂದಿಗೂ ಘಟಿಸಲಾರದು. ಬೇರೆಯ ವಿಧದಿಂದಾದರೆ ಜೀವರ ನಿಯಮನವು ಸಾಧ್ಯವಾದೀತು. ನಿನ್ನಿಂದಲೇ ಹುಟ್ಟುವ ಜೀವಗಳು ನಿನಗೆ ಸಮಾನವಾಗಿರದಿದ್ದರೆ ನೀನು ಅವುಗಳ ನಿಯಾಮಕನಾಗಬಹುದು. ಪ್ರಾಣಿಸಮೂಹವು ಉಪಾಧಿಯಿಂದ ಜೀವಸಮೂಹವೆನಿಸಿಕೊಂಡು ಹುಟ್ಟಿದ್ದೇ ಆದರೆ ಆಗ ಈಶ್ವರನು ತನ್ನ ವಿಕಾರಗಳಾದ ಜೀವರಿಗೆ ನಿಯಾಮಕನಾಗಬಹುದು. ಚಿನ್ನದ ಒಡವೆಗಳಿಗೆ ಚಿನ್ನವು ನಿಯಾಮಕವಾಗುವಂತೆ–ಮಣ್ಣಿನ

ಪಾತ್ರೆಗಳಿಗೆ ಮಣ್ಣು ನಿಯಾಮಕವಾಗುವಂತೆ ನೂಲಿನ ಬಟ್ಟೆಗಳಿಗೆ ನೂಲು ನಿಯಾಮಕವಾಗುವಂತೆ, ಸ್ವಾಮಿಯೇ! ನೀನು ಚರಾಚರವಸ್ತುಗಳಿಗೆ ನಿಯಾಮಕನಾಗಿರುವೆ. ವಾಸ್ತವವಾಗಿ ನೀನು ಅವುಗಳಲ್ಲಿ ಸಮಾನರೂಪ ದಿಂದಲೇ ಇರುವೆ. ಆದರೆ ಪ್ರಾಣಿಗಳಲ್ಲಿರುವ ನಿನ್ನ ಸ್ವರೂಪವು ಎಂತಹು ದೆಂಬುದು ಯಾರಿಗೂ ತಿಳಿಯದು. ಯಾವ ನಿನ್ನ ಸ್ವರೂಪವು ಮೂಲ ಕಾರಣವಾದುದರಿಂದ ಕಾರ್ಯಸಮೂಹವನ್ನು ಬಿಡದೆ ಅನುಸ್ಯೂತವಾಗಿ ವ್ಯಾಪಿಸಿರುವುದೋ ಅಂತಹ ನಿನ್ನ ಸ್ವರೂಪವನ್ನು ಬಲ್ಲೆವೆಂದು ಹೇಳುವವರು ಬ್ರಹ್ಮಸ್ವರೂಪವನ್ನು ಅರಿತವರಲ್ಲ. ಅದು ಜ್ಞಾನಕ್ಕೆ ಅಥವಾ ಬುದ್ಧಿಗೆ ವಿಷಯವಾಗಿ ತಿಳಿಯಲ್ಪಡುತ್ತದೆ–ಎಂಬುದು ಸರಿಯಲ್ಲ. ಅವರು ತಿಳಿದಿರುವ ಅರ್ಥವು ದೋಷಯುಕ್ತವಾದುದರಿಂದ ಅವರು ಅಜ್ಞರೇ ಸರಿ.*

**(ಅನ್ತರ್ಯಾಮ್ಯಾ ಸರ್ವಲೋಕಸ್ಯಗೀತಃ**
**ಶ್ರುತ್ಯಾ ಯುಕ್ತ್ಯಾ ಚೈವ ಮೇ ವಾತಸೇಯಃ ।**
**ಯಃ ಸರ್ವಜ್ಞಃ ಸರ್ವಶಕ್ತಿರ್ನೃಸಿಂಹಃ**
**ಶ್ರೀಮನ್ತಂ ತಂ ಚೇತಸೈರ್ವಾವಲಮ್ಬೇ ಶ್ರೀ ॥೧೭॥**

ವೇದಗಳು ಸಮಸ್ತದೃಶ್ಯಪ್ರಪಂಚಕ್ಕೂ ಅಂತರ್ಯಾಮಿಯ ರೂಪದಲ್ಲಿ ಯಾರನ್ನು ಕೀರ್ತಿಸುತ್ತವೆಯೋ, ಯುಕ್ತಿಯ ಮೂಲಕವೂ ಅವನೇ ಅಂತರ್ಯಾಮಿಯೆಂಬುದು ನಿಶ್ಚಿತವಾಗಿರುವುದೋ, ಯಾವನು ಸರ್ವಜ್ಞನೂ, ಸರ್ವಶಕ್ತನೂ, ಶ್ರೀಮಂತನೂ ಆಗಿರುವನೋ–ಅಂತಹ ಶ್ರೀನೃಸಿಂಹಸ್ವಾಮಿಯನ್ನು ಮನಸ್ಸಿನ ಮೂಲಕವಾಗಿಯೇ ಆಶ್ರಯಿಸುತ್ತೇನೆ.)

---

* ಯಸ್ಯಾಮತಂ ತಸ್ಯಮತಂ ಮತಂ ಯಸ್ಯ ನ ವೇದ ಸಃ ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ॥

ಪರಬ್ರಹ್ಮವಸ್ತುವಿನ ವಿಷಯದಲ್ಲಿ ತನ್ನ ಅಭಿಪ್ರಾಯವು ಯಾವುದೂ ಇಲ್ಲವೆಂದು ಯಾವನು ಹೇಳುವನೋ ಅಂತಹವನ ಅಭಿಪ್ರಾಯವು ಸಾಧುವಾದದ್ದು. ಬ್ರಹ್ಮವಸ್ತುವಿನ ವಿಷಯದಲ್ಲಿ ತನ್ನದೇ ಅಭಿಪ್ರಾಯವಿರುವುದೆಂದು ಯಾವನು ಹೇಳುವನೋ ಅಂತಹವನು ಖಂಡಿತವಾಗಿಯೂ ಬ್ರಹ್ಮವಸ್ತುವನ್ನು ತಿಳಿದವನಲ್ಲ. ಯಾರು ಅವನನ್ನು ತಿಳಿದಿದ್ದೇನೆಂದು ಹೇಳುವರೋ ಅಂತಹವರಿಗೆ ಅವನು ಖಂಡಿತವಾಗಿಯೂ ತಿಳಿದಿಲ್ಲ. ಪರಬ್ರಹ್ಮವಸ್ತುವನ್ನು ತಿಳಿದಿಲ್ಲವೆಂದು ಯಾವನು ಹೇಳುವನೋ ಅಂತಹವನೇ ಬ್ರಹ್ಮವಸ್ತುವನ್ನು ತಿಳಿದವನಾಗಿರುತ್ತಾನೆ. (ಕೇನೋಪನಿಷತ್ತು)

**ನ ಘಟತ ಉದ್ಭವಃ ಪ್ರಕೃತಿಪೂರುಷಯೋರಜಯೋ-**
**ರುಭಯಯುಜಾ ಭವನ್ತ್ಯಸುಭೃತೋ ಜಲಬುದ್ಬುದವತ್ ।**
**ತ್ವಯಿ ತ ಇಮೇ ತತೋ ವಿವಿಧನಾಮಗುಣೈಃ ಪರಮೇ**
**ಸರಿತ ಇವಾರ್ಣವೇ ಮಧುನಿ ಲಿಲ್ಯುರಶೇಷರಸಾಃ ॥೩೧॥**

ಉತ್ಪತ್ತಿಯಿಲ್ಲದ ಪ್ರಕೃತಿ-ಪುರುಷನಿಗೆ ಜೀವರೂಪದಿಂದ ಉತ್ಪತ್ತಿಯೆಂಬುದು ಸಂಘಟಿಸುವುದಿಲ್ಲ. ಆದರೆ ಪ್ರಕೃತಿ-ಪುರುಷರ ಸಂಬಂಧದಿಂದ–ನೀರು-ಗಾಳಿಗಳ ಸಂಬಂಧದಿಂದ ಹುಟ್ಟುವ ನೀರಿನ ಗುಳ್ಳೆಯಂತೆ ನಿನ್ನಲ್ಲಿ ಪ್ರಾಣಿಗಳು ಹುಟ್ಟುವುವು. ಆದುದರಿಂದ ಆ ಜೀವರು ವಿಧ-ವಿಧವಾದ ರೂಪ-ನಾಮ-ಗುಣಗಳೊಡನೆ ಜೇನುತುಪ್ಪದಲ್ಲಿ ಪುಷ್ಪರಸಗಳು ಬೆರೆತುಕೊಳ್ಳುವಂತೆಯೂ ಸಮುದ್ರದಲ್ಲಿ ನದಿಗಳು ಸೇರಿಹೋಗುವಂತೆಯೂ ಪರಮಾತ್ಮನಾದ ನಿನ್ನಲ್ಲಿ ಲೀನರಾಗಿ ಹೋಗುವರು.

**(ಯಸ್ಮಿನ್ನುದ್ಯದ್ವಿಲಯಮಪಿಯದ್ಭಾತಿ ವಿಶ್ವಂ ಲಯಾದೌ**
**ಜೀವೋಪೇತಂ ಗುರುಕರುಣಯಾ ಕೇವಲಾತ್ಮಾವಬೋಧೇ ।**
**ಅತ್ಯನ್ತಾನ್ತಂ ವ್ರಜತಿ ಸಹಸಾ ಸಿನ್ಧುವತ್ಸಿನ್ಧುಮಧ್ಯೇ**
**ಮಧ್ಯೇ ಚಿತ್ತಂ ತ್ರಿಭುವನಗುರುಂ ಭಾವಯೇ ತನ್ನೃಸಿಂಹಮ್**
**ಶ್ರೀ ॥೧೮॥**

ಪ್ರಾಣಿಗಳಿಂದಕೂಡಿದ ಸಮಗ್ರವಿಶ್ವವೂ ಪರಮಕಾರುಣಿಕನಾದ ಪರಮಾತ್ಮನಲ್ಲಿ ಉದಯಹೊಂದುವುದು. ಸುಷುಪ್ತಿಯೇ ಮೊದಲಾದ ಅವಸ್ಥೆಗಳಲ್ಲಿ ಅವನಲ್ಲಿಯೇ ಲಯವಾದಂತೆ ಭಾಸವಾಗುವುದು. ಗುರುದೇವನ ಅನುಗ್ರಹವು ಪ್ರಾಪ್ತವಾದೊಡನೆಯೇ ಶುದ್ಧಾತ್ಮನಾದ ಜೀವನು ಆತ್ಮಜ್ಞಾನವನ್ನು ಪಡೆದು ಕಟ್ಟಕಡೆಗೆ ನದಿಗಳು ಸಮುದ್ರದಲ್ಲಿ ಸೇರಿಹೋಗುವಂತೆ ಯಾವನಲ್ಲಿ ಸೇರಿ ಹೋಗುವನೋ ಅಂತಹ ಮೂರು ಲೋಕಗಳಿಗೂ ಗುರುವಾದ ನೃಸಿಂಹಸ್ವಾಮಿಯನ್ನು ಹೃದಯಕಮಲದ ಮಧ್ಯದಲ್ಲಿ ಭಾವಿಸಿಕೊಳ್ಳುತ್ತೇವೆ.)

**ನೃಷು ತವ ಮಾಯಯಾ ಭ್ರಮಮಮೀಷ್ವವಗತ್ಯ ಭೃಶಂ**
**ತ್ವಯಿ ಸುಧಿಯೋಽಭವೇ ದಧತಿ ಭಾವಮನುಪ್ರಭವಮ್ ।**

**ಕಥಮನುವರ್ತತಾಂ ಬವಭಯಂ ತವ ಯದ್ಭ್ರುಕುಟಿಃ**
**ಸೃಜತಿ ಮುಹುಸ್ತ್ರಿಣೇಮಿರಭವಚ್ಛರಣೇಷು ಭಯಮ್ ॥೩೨॥**

ಸ್ವಾಮಿಯೇ! ಎಲ್ಲ ಜೀವರೂ ನಿನ್ನ ಮಾಯೆಯಿಂದ ಆಚ್ಛಾದಿತರಾಗಿ ಹುಟ್ಟು-ಸಾವುಗಳೆಂಬ ಸಂಸಾರಚಕ್ರಕ್ಕೆ ಸಿಕ್ಕಿ ಸುತ್ತುತ್ತಿರುತ್ತಾರೆ. ಬುದ್ಧಿವಂತರಾದವರು ನಿನ್ನ ಮಾಯೆಯಿಂದ ಭ್ರಮಿಸದೆ ಮಾಯಾತೀತನಾದ ಮತ್ತು ಹುಟ್ಟುಸಾವುಗಳೆಂಬ ಚಕ್ರದಿಂದ ಮುಕ್ತಗೊಳಿಸಲು ಸಮರ್ಥನಾದ ನಿನ್ನನ್ನು ಅನನ್ಯಭಕ್ತಿಭಾವದಿಂದ ಶರಣುಹೋಗುತ್ತಾರೆ. ನಿನ್ನನ್ನು ಅನುಸರಿಸಿ ಬರುವ ಭಕ್ತರಿಗೆ ಸಂಸಾರಭಯವು ಹೇಗೆತಾನೇ ಸಂಭವಿಸುತ್ತದೆ? ನಿನ್ನ ಭಕ್ತರಲ್ಲದವರಿಗೆ ಮೂರು ಅರೆಕಾಲುಗಳಿಂದ ಕೂಡಿರುವ ಕಾಲಚಕ್ರ ರೂಪವಾದ ಗಂಟಿಕ್ಕಿದ ನಿನ್ನ ಹುಬ್ಬುಗಳು ಸಂಸಾರದ ಭಯವನ್ನುಂಟು ಮಾಡುತ್ತವೆ.

**(ಸಂಸಾರಚಕ್ರಕ್ರಕಚೈರ್ವಿದೀರ್ಣಂ**
**ಉದೀರ್ಣನಾನಾವಿಧತಾಪತಪ್ತಮ್ ।**
**ಕಥಂಚಿದಾಪನ್ನಮಿಹ ಪ್ರಪನ್ನಂ**
**ತ್ವಮುದ್ಧರ ಶ್ರೀನೃಹರೇ ನೃಲೋಕಮ್ ಶ್ರೀ ॥೧೯॥**

ನೃಸಿಂಹನೇ! ಈ ಜೀವನವು ಸಂಸಾರಚಕ್ರದ ಗರಗಸದಂತಿರುವ ಅಂಚಿನಿಂದ ಛಿನ್ನ-ಭಿನ್ನವಾಗಿ ಕತ್ತರಿಸಲ್ಪಡುತ್ತಿದೆ. ನಾನಾಪ್ರಕಾರವಾದ ಸಾಂಸಾರಿಕತಾಪಗಳಿಂದ ಬೆಂದು ಹೋಗುತ್ತಿದೆ. ಅಂತಹ ಆಪತ್ತಿಗೊಳಗಾಗಿರುವ ಜೀವವು ಯಾವುದೋ ರೀತಿಯಲ್ಲಿ ನಿನ್ನ ಕೃಪಾವಿಶೇಷದಿಂದಲೇ ನಿನಗೆ ಶರಣಾಗುತ್ತಿದೆ. ಹಾಗೆ ಶರಣಾಗಿ ಬಂದಿರುವ ಜನವನ್ನು ನೀನು ಉದ್ಧರಿಸು.)

**ವಿಜಿತಹೃಷೀಕವಾಯುಭಿರದಾನ್ತಮೂಸ್ತುರಗಂ**
**ಯ ಇಹ ಯತನ್ತಿ ಯನ್ತುಮತಿಲೋಲಮುಪಾಯಖಿದಃ ।**
**ವ್ಯಸನಶತಾನ್ವಿತಾಃ ಸಮವಹಾಯ ಗುರೋಶ್ಚರಣಂ**
**ವಣಿಜ ಇವಾಜ ಸನ್ತ್ಯಕೃತಕರ್ಣಧರಾ ಜಲಧೌ ॥೩೩॥**

ಜನ್ಮರಹಿತನಾದ ಪ್ರಭುವೇ! ಇಂದ್ರಿಯಗಳನ್ನೂ ಪ್ರಾಣಗಳನ್ನೂ

ವಶಪಡಿಸಿಕೊಂಡಿರುವ ಯೋಗಿಗಳು ಕೂಡ ಸದ್ಗುರುವಿಗೆ ಶರಣಾಗತರಾಗ ದಿದ್ದರೆ ಅವರಿಗೆ ಸ್ವೇಚ್ಛೆಯಿಂದ ವರ್ತಿಸುವ ಅತ್ಯಂತ ಚಂಚಲಸ್ವಭಾವವುಳ್ಳ ಕುದುರೆಯಂತಿರುವ ಮನಸ್ಸನ್ನು ವಶಪಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಗುರುವನ್ನು ಆಶ್ರಯಿಸದೇ ಇರುವವರು ಖೇದಪಡಬೇಕಾಗುತ್ತದೆ ಮತ್ತು ನಾನಾವಿಧವಾದ ವಿಪತ್ತುಗಳಿಗೆ ಈಡಾಗುತ್ತಾರೆ. ಅವರ ಪ್ರಯತ್ನಗಳೆಲ್ಲವೂ ದುಃಖದಲ್ಲಿಯೂ, ಶ್ರಮದಲ್ಲಿಯೂ ಪರ್ಯವಸಾನಹೊಂದುತ್ತವೆ. ಅಂಬಿಗ ನಿಲ್ಲದೆ ಹಡಗಿನ ಮೂಲಕವಾಗಿ ಸಮುದ್ರವನ್ನು ದಾಟಲು ಇಚ್ಛಿಸಿರುವ ವ್ಯಾಪಾರಿಯಂತೆ ಗುರುವಿನ ಆಶ್ರಯವಿಲ್ಲದೆ ಪರಮಾರ್ಥವನ್ನು ಸಾಧಿಸಲು ಹೊರಟಿರುವ ಸಾಧಕನ ಪಾಡಾಗುತ್ತದೆ. ಮನಸ್ಸನ್ನು ವಶಪಡಿಸಿಕೊಳ್ಳ ಬೇಕಾದರೆ ಅಂಬಿಗನಂತಿರುವ ಶ್ರೀಗುರುವಿನ ಅನುಗ್ರಹವು ಅಗತ್ಯವಾಗಿಬೇಕು.

(ಯದಾ ಪರಮಾನನ್ದ ಗುರೋ ಭವತ್ಪದೇ
ಪರಂ ಮನೋ ಮೇ ಪದಂ ಲಭೇತ ।
ತದಾ ನಿರಸ್ತಾಖಿಲಸಾಧನಶ್ರಮಃ
ಶ್ರಯೇಯ ಸೌಖ್ಯಂ ಭವತಃ ಕೃಪಾತಃ ಶ್ರೀ ॥೨೦॥

ಪರಮಾನಂದಮಯನಾದ ಗುರುದೇವನೇ! ಯಾವಾಗ ನನ್ನ ಮನಸ್ಸು ನಿನ್ನ ದಿವ್ಯಚರಣಾರವಿಂದಗಳಲ್ಲಿ ಸ್ಥಾನವನ್ನು ಪಡೆದುಕೊಳ್ಳುತ್ತದೆಯೋ ಆಗ ನಿನ್ನ ಕೃಪಾವಿಶೇಷದಿಂದ ನನ್ನ ಸಾಧನಪರಿಶ್ರಮಗಳೆಲ್ಲವೂ ದೂರವಾಗಿ ಪರಮಾನಂದರೂಪವಾದ ಸೌಖ್ಯವನ್ನು ಪಡೆಯುತ್ತೇನೆ.)

ಸ್ವಜನಸುತಾತ್ಮದಾರಧನಧಾಮರಾಸುರಥೈ-
ಸ್ತ್ವಯಿ ಸತಿ ಕಿಂ ನೃಣಾಂ ಶ್ರಯತ ಆತ್ಮನಿ ಸರ್ವರಸೇ ।
ಇತಿ ಸದಜಾನತಾಂ ಮಿಥುನತೋ ರತಯೇ ಚರತಾಂ
ಸುಖಯತಿ ಕೋ ನ್ವಿಹ ಸ್ವವಿಹತೇ ಸ್ವನಿರಸ್ತಭಗೇ ॥೩೪॥

ಆನಂದಸ್ವರೂಪನಾದ ನೀನು ಸಕಲರಲ್ಲಿಯೂ ಆತ್ಮಸ್ವರೂಪನಾಗಿ ರುವಾಗ ನಿನ್ನನ್ನೇ ಆಶ್ರಯಿಸಿರುವ ಪುರುಷನಿಗೆ ನೆಂಟರು, ಮಕ್ಕಳು, ಶರೀರ, ಹೆಂಡತಿ, ಐಶ್ವರ್ಯ, ಮನೆ-ಮಠ, ಭೂಮಿ, ರಥ ಇವುಗಳಿಂದ ಪ್ರಯೋಜನ

ವೇನಿದೆ? ಯಾವ ಮನುಷ್ಯರು ಈ ಸತ್ಯಸಿದ್ಧಾಂತವನ್ನು ತಿಳಿಯದೆ ಸ್ತ್ರೀ-ಪುರುಷರ ಸಂಬಂಧದಿಂದ ಉಂಟಾಗುವ ನಶ್ವರವಾದ ಮತ್ತು ಕ್ಷಣಿಕವಾದ ಸುಖದಲ್ಲಿಯೇ ಆಸಕ್ತರಾಗಿರುವರೋ ಅಂತಹವರಿಗೆ ತಾನಾಗಿಯೇ ನಷ್ಟವಾಗಿ ಹೋಗುವ ನಿಸ್ಸಾರವಾಗುವ ಈ ಸಂಸಾರದಲ್ಲಿ ಯಾವ ವಸ್ತುವು ತಾನೇ ಆನಂದವನ್ನು ಉಂಟುಮಾಡೀತು?

**(ಭಜತೋ ಹಿ ಭವಾನ್ ಸಾಕ್ಷಾತ್ಪರಮಾನನ್ದಚಿದ್ಘನಃ ।**
**ಆತ್ಮೈವ ಕಿಮತಃ ಕೃತ್ಯಂ ತುಚ್ಛದಾರಾಸುತಾದಿಭಿಃ ಶ್ರೀ ॥೨೧॥**

ನೃಸಿಂಹನೇ! ಯಾರು ನಿನ್ನನ್ನು ಭಜಿಸುವರೋ ಅಂತಹವರಿಗೆ ನೀನು ಸಾಕ್ಷಾತ್ ಪರಮಾನಂದಚಿದ್ಘನಸ್ವರೂಪವಾದ ಆತ್ಮವೇ ಆಗಿರುವೆ. ಅಂತಹ ನಿನ್ನ ಭಕ್ತರಿಗೆ ಸ್ತ್ರೀ-ಪುತ್ರ-ಧನ–ಇವೇ ಮುಂತಾದ ತುಚ್ಛವಸ್ತುಗಳಿಂದ ಆಗಬೇಕಾಗಿದ್ದೇನಿದೆ?)

**ಭುವಿ ಪುರುಪುಣ್ಯತೀರ್ಥಸದನಾನ್ಯೃಷಯೋ ವಿಮದಾ**
**ಸ್ತ ಉತ ಭವತ್ಪದಾಮ್ಬುಜಹೃದೋಽಘಭಿದಂಘ್ರಿಜಲಾಃ ।**
**ದಧತಿ ಸಕೃನ್ಮನಸ್ತ್ವಯಿ ಯ ಆತ್ಮನಿ ನಿತ್ಯ ಸುಖೇ**
**ನ ಪುನರುಪಾಸತೇ ಪುರುಷಸಾರಹರಾವಸಥಾನ್ ॥೩೫॥**

ದೇವದೇವನೇ! ಯಾರು ಐಶ್ವರ್ಯಮದ, ವಿದ್ಯಾಮದ, ಯೌವನ ಮದ, ತಪಸ್ಸಿನ ಮದ–ಇವೇ ಮುಂತಾದ ಮದಗಳಿಂದ ರಹಿತರಾಗಿರುವರೋ ಅಂತಹ ಸತ್ಪುರುಷರು ಈ ಭೂಮಂಡಲದಲ್ಲಿ ಪರಮಪವಿತ್ರವಾದ, ಸಮಸ್ತರನ್ನೂ ಪವಿತ್ರಗೊಳಿಸುವ, ನಿನ್ನ ಸಾನ್ನಿಧ್ಯವಿರುವ ತೀರ್ಥಕ್ಷೇತ್ರಗಳಲ್ಲಿ ಸುತ್ತುತ್ತಿರುತ್ತಾರೆ. ಅಂತಹ ಸತ್ಪುರುಷರ ಹೃತ್ಕಮಲಗಳಲ್ಲಿ ನಿನ್ನ ಚರಣಾರವಿಂದಗಳು ಸದಾ ವಿರಾಜಮಾನವಾಗಿರುತ್ತವೆ. ಈ ಕಾರಣದಿಂದಲೇ ಅಂತಹ ಸತ್ಪುರುಷರ ಚರಣಾಮೃತವು ಸಮಸ್ತಪಾಪಪರಿಹಾರಕವೂ ಆಗಿದೆ. ಭಗವಂತನೇ! ನೀನು ನಿತ್ಯಾನಂದಸ್ವರೂಪನಾದ ಆತ್ಮವೇ ಆಗಿರುವೆ. ಯಾರು ಒಮ್ಮೆಯಾದರೂ ತಮ್ಮ ಮನಸ್ಸನ್ನು ನಿನಗೆ ಅರ್ಪಿಸಿಬಿಡುವರೋ ಅಂತಹವರು–ಜನರ ವಿವೇಕ, ಧೈರ್ಯ, ಸ್ಥೈರ್ಯ, ಜ್ಞಾನ, ಕ್ಷಮೆ

ಮುಂತಾದ ಗುಣಗಳನ್ನು ನಾಶಗೊಳಿಸುವ ಮನೆಯನ್ನು ಪುನಃ ಸೇರುವುದಿಲ್ಲ. ನಿನ್ನ ಗುಣಗಾನಗಳಲ್ಲಿಯೇ ಆನಂದತುಂದಿಲರಾಗಿರುತ್ತಾರೆ.

**(ಮುಞ್ಚನ್ನಙ್ಗತದಙ್ಗಸಙ್ಗಮನಿಶಂ ತ್ವಾಮೇವ ಸಞ್ಚಿನ್ತಯನ್**
**ಸನ್ತಃ ಸನ್ತಿ ಯತೋ ಯತೋ ಗತಮದಾಸ್ತಾನಾಶ್ರಮಾ ನಾವಸನ್ ।**
**ನಿತ್ಯಂ ತನ್ಮುಖಪಙ್ಕಜಾದ್ವಿಗಲಿತತ್ವತ್ಪುಣ್ಯಗಾಥಾಮೃತ-**
**ಸ್ರೋತಃ ಸಂಪ್ಲವಸಂಪ್ಲುತೋ ನರಹರೇ ನ ಸ್ಯಾಮಹಂ ದೇಹಭೃತ್**
**ಶ್ರೀ ॥೨೨॥**

ನರಹರಿಯೇ! ನಾನು ನನ್ನ ಶರೀರದ ಮತ್ತು ಅದಕ್ಕೆ ಸಂಬಂಧಿಸಿದವರ ಮೇಲಿನ ಆಸಕ್ತಿಯನ್ನು ಸಂಪೂರ್ಣವಾಗಿ ತೊರೆದು ಸರ್ವದಾ ನಿನ್ನನ್ನೇ ಧ್ಯಾನಿಸುತ್ತಿರುತ್ತೇನೆ. ಎಲ್ಲೆಲ್ಲಿ ನಿರಭಿಮಾನಿಗಳಾದ ಸಂತರು ವಾಸಿಸುತ್ತಿರುವರೋ ಅಲ್ಲಿಗೆಲ್ಲಾ ನಾನು ಹೋಗುತ್ತಲೇ ಇರುತ್ತೇನೆ. ಅಂತಹ ಸತ್ಪುರುಷರ ಮುಖಕಮಲಗಳಿಂದ ಪ್ರವಹಿಸಿ ಹೊರಬರುವ ನಿನ್ನ ಕಥಾಮೃತವೆಂಬ ಪುಣ್ಯನದಿಗಳಲ್ಲಿ ಪ್ರತಿನಿತ್ಯವೂ ಸ್ನಾನಮಾಡುತ್ತೇನೆ. ದಯಾಮಯನಾದ ನೃಸಿಂಹನೇ! ನಿನ್ನ ಕೃಪೆಯಿಂದಾಗಿ ನಾನು ಪುನಃ ಯಾವಾಗಲೂ ದೇಹಿಯಾಗುವುದು ಬೇಡ. ನಿನ್ನಲ್ಲಿಯೇ ನನ್ನನ್ನು ಸೇರಿಸಿ ಕೊಂಡುಬಿಡು.)

**ಸತ ಇದಮುತ್ಥಿತಂ ಸದಿತಿ ಚೇನ್ನನು ತರ್ಕಹತಂ**
**ವ್ಯಭಿಚರತಿ ಕ್ವ ಚ ಕ್ವ ಚ ಮೃಷಾ ನ ತಥೋಭಯಯುಕ್ ।**
**ವ್ಯವಹೃತಯೇ ವಿಕಲ್ಪ ಇಷಿತೋಽನ್ಧಪರಮ್ಪರಯಾ**
**ಭ್ರಮಯತಿ ಭಾರತೀ ತ ಉರುವೃತ್ತಿಭಿರುಕ್ಥಜಡಾನ್ ॥೩೬॥**

ಚಿನ್ನದಿಂದ ತಯಾರಾದ ಕುಂಡಲ-ಉಂಗುರ ಮುಂತಾದುವು ಚಿನ್ನವೇ ಆಗಿರುವಂತೆ ಸತ್ಯವಾದ ಬ್ರಹ್ಮವಸ್ತುವಿನಿಂದ ಹುಟ್ಟಿರುವ ಜಗತ್ತು ಸತ್ಯವೇ ಆಗಿರಬೇಕು-ಎಂಬ ವಾದವು ಸರಿಯಲ್ಲ. ತಂದೆಯಿಂದ ಹುಟ್ಟಿದ ಮಗನು ತಂದೆ–ಎನ್ನಿಸಿಕೊಳ್ಳದಂತೆ ಸತ್ಯದಿಂದ ಹುಟ್ಟಿದ್ದು ಸತ್ಯವೇ ಆಗಿರಬೇಕೆಂಬ ನಿಯಮವು ಕೆಲವು ಕಡೆ ಕಾರ್ಯ-ಕಾರಣಭಾವವಿಲ್ಲದೆ ವ್ಯಭಿ

ಚರಿತವಾಗಿದೆ. ಚಿನ್ನದಿಂದ ಹುಟ್ಟಿದ ಕುಂಡಲದಂತೆ ಉಪಾದಾನಕಾರಣದಿಂದ ಹುಟ್ಟಿದ್ದು ಕಾರಣಸ್ವರೂಪವೇ ಎಂದರೆ ; ಅದೂ ಸರಿಯಲ್ಲ.*

ಈ ನಿರ್ಣಯದಂತೆ ಜಗತ್ತು ಮಿಥ್ಯೆಯೇ ಆದರೂ ಅವಿದ್ಯೆಯ ಪರಿಣಾಮವಾಗಿ ಸತ್ಯವೆಂಬ ಭ್ರಮೆಯಿಂದ ವ್ಯವಹಾರವು ಸಾಗುತ್ತಿದೆ. ಇದು ವ್ಯಾವಹಾರಿಕಸತ್ಯ. ಅಂಧಪರಂಪರಾನ್ಯಾಯದಂತೆ ಈ ವ್ಯವಹಾರವು ಅನಾದಿಕಾಲದಿಂದಲೂ ನಡೆದುಕೊಂಡೇ ಬಂದಿದೆ. ಇಂತಹ ಸ್ಥಿತಿಯಲ್ಲಿ ನಿನ್ನ ಮಾತಿನ ರೂಪದಲ್ಲಿರುವ ನಮ್ಮ ಕರ್ಮಪ್ರಶಂಸೆಯ ಕೆಲವು ವಾಕ್ಯಗಳು ಕರ್ಮಶ್ರದ್ಧೆಯಿಂದ ಜಡಮತಿಗಳಾದವರನ್ನು ಮರುಳುಗೊಳಿಸುತ್ತವೆ.

**(ಉದ್ಭೂತಂ ಭವತಃ ಸತೋಽಪಿ ಭುವನಂ ಸನ್ನೈವ ಸರ್ಪಃಸ್ರಜಃ**
**ಕುರ್ವನ್ಕಾರ್ಯಮಪೀಹ ಕೂಟಕನಕಂ ವೇದೋಽಪಿ ನೈವಂ ಪರಃ ।**
**ಅದ್ವೈತಂ ತವ ಸತ್ಪರಂ ತು ಪರಮಾನನ್ದಂ ಪದಂ ತನ್ಮುದಾ**
**ವನ್ದೇ ಸುನ್ದರಮಿನ್ದಿರಾನುತ ಹರೇ ಮಾ ಮುಞ್ಚ ಮಾಮಾನತಮ್**
**ಶ್ರೀ ॥೨೬॥**

ಮಾಲೆಯಲ್ಲಿ ಭ್ರಮವಶದಿಂದ ಕಾಣಬರುವ ಸರ್ಪದಂತೆ ಸತ್ಯಸ್ವರೂಪನಾದ ನಿನ್ನಲ್ಲಿಯೇ ಉದಯವಾಗಿದ್ದರೂ ಈ ಮೂರು ಲೋಕಗಳೂ ಸತ್ಯವಲ್ಲ. ಹಿತ್ತಾಳೆಚಿನ್ನವು ಪೇಟೆಯಲ್ಲಿ ಸ್ವಲ್ಪಕಾಲದವರೆಗೆ ವ್ಯವಹಾರಕ್ಕೆ ಯೋಗ್ಯವಾಗಿದ್ದರೂ ಅದು ನಿಜವಾದ ಚಿನ್ನವಾಗಿಬಿಡುವುದಿಲ್ಲ. ವ್ಯಾವಹಾರಿಕವಾದ ಸತ್ಯವಾಗಿರುತ್ತದೆ. ವೇದಗಳ ತಾತ್ಪರ್ಯವೂ ಜಗತ್ತಿನ ಸತ್ತೆಯನ್ನು ಪ್ರತಿಪಾದಿಸುವುದಾಗಿಲ್ಲ. ಆದುದರಿಂದ ನಿನ್ನ ಯಾವ ಪರಮಸತ್ಯವಾದ ಪರಮಾನಂದಸ್ವರೂಪಾದ್ವೈತಸುಂದರಸ್ಥಾನವಿರುವುದೋ, ಹೇ! ಇಂದಿರಾವಂದಿತಪಾದಾರವಿಂದವುಳ್ಳ ನರಹರಿಯೇ!

---

* ಕೆಲವು ಕೆಡ ಉಪಾದಾನಕಾರಣದಿಂದ ಹುಟ್ಟಿದ ವಸ್ತುವೇ ಸುಳ್ಳಾಗಿದೆ. ರಜ್ಜು-ಸರ್ಪನ್ಯಾಯದಲ್ಲಿ ರಜ್ಜು ಎಂಬ ಉಪಾದಾನಕಾರಣದಿಂದ ಹುಟ್ಟಿದ್ದು ಸರ್ಪ. ಹಗ್ಗ+ ಭ್ರಮೆ ಎರಡೂ ಸೇರಿ ಸರ್ಪ ಹುಟ್ಟಿದೆ. ಅದರಂತೆ ಬ್ರಹ್ಮ+ ಅವಿದ್ಯೆ ಸೇರಿ ಜಗತ್ತು ಹುಟ್ಟಿದೆ. ಭ್ರಮೆಯು ನಿರಸನವಾದನಂತರ ಹಾವು ಹೋಗಿ ಹಗ್ಗವು ಮಾತ್ರವೇ ಉಳಿದುಕೊಳ್ಳುವಂತೆ ಅವಿದ್ಯೆಯು ನಿರಸನವಾದನಂತರ ಜಗತ್ತು ಹೋಗಿ ಬ್ರಹ್ಮವೊಂದೇ ಉಳಿದುಕೊಳ್ಳುತ್ತದೆ.

ಅಂತಹ ನಿನ್ನ ಸುಂದರ ಪರಮಪದಕ್ಕೆ ನಾನು ನಮಸ್ಕರಿಸುತ್ತೇನೆ. ಶರಣಾಗತನಾದ ನನ್ನ ಕೈಗಳನ್ನು ಬಿಟ್ಟುಬಿಡಬೇಡ.)

**ನ ಯದಿದಮಗ್ರ ಆಸ ನ ಭವಿಷ್ಯದತೋ ನಿಧನಾ-**
**ದನು ಮಿತಮನ್ತರಾ ತ್ವಯಿ ವಿಭಾತಿ ಮೃಷೈಕರಸೇ ।**
**ಅತ ಉಪಮೀಯತೇ ದ್ರವಿಣಜಾತಿವಿಕಲ್ಪಪಥೈ-**
**ರ್ವಿತಥಮನೋವಿಲಾಸಮೃತಮಿತ್ಯಮನ್ತ್ಯಬುಧಾಃ ॥೩೭॥**

ದೇವನೇ! ವಾಸ್ತವನಾಗಿ ಈ ಜಗತ್ತು ಉತ್ಪತ್ತಿಗೆ ಮೊದಲಿರಲಿಲ್ಲ. ಪ್ರಳಯದ ಅನಂತರವೂ ಇರುವುದಿಲ್ಲ. ಈ ಮಧ್ಯದಲ್ಲಿ ಕೂಡ ಆನಂದಮಯನಾದ ನಿನ್ನಲ್ಲಿ ಮಿಥ್ಯಾರೂಪದಲ್ಲಿ ಪ್ರತೀತವಾಗಿದೆ. ಮಣ್ಣಿನ, ಲೋಹದ ಮತ್ತು ಚಿನ್ನದ ಉಪಮಾನಗಳನ್ನು ಕೊಟ್ಟು ಶ್ರುತಿಗಳಾದ ನಾವು ಹೀಗೆ ಹೇಳುತ್ತೇವೆ. ಮಣ್ಣಿನಲ್ಲಿ ಮಡಕೆಯಂತೆಯೂ ಲೋಹದಲ್ಲಿ ಶಸ್ತ್ರದಂತೆಯೂ ಚಿನ್ನದಲ್ಲಿ ಕುಂಡಲದಂತೆಯೂ ನಿನ್ನಲ್ಲಿ ಈ ಜಗತ್ತೆಂಬುದು ನಾಮಮಾತ್ರವಾಗಿದೆ. ಸರ್ವಥಾ ಮಿಥ್ಯೆಯೂ ಮನಃಕಲ್ಪಿತವೂ ಆಗಿದೆ. ಅಜ್ಞಾನಿಗಳಾದ ಮೂರ್ಖರು ಇದನ್ನು ಸತ್ಯವೆಂದು ಭಾವಿಸಿದ್ದಾರೆ.

**(ಮುಕುಟ ಕುಣ್ಡಲ ಕಙ್ಕಣ ಕಿಙ್ಕಿಣೀ-**
**ಪರಿಣತಂ ಕನಕಂ ಪರಮಾರ್ಥತಃ ।**
**ಮಹದಹಙ್ಕೃತಿ ಖಪ್ರಮುಖಂ ತಥಾ**
**ನರಹರೇ ನ ಪರಂ ಪರಮಾರ್ಥತಃ ಶ್ರೀ ॥೨೪॥**

ನರಹರಿಯೇ! ಕಿರೀಟ, ಕಂಕಣ, ಕಿಂಕಿಣಿ ಇತ್ಯಾದಿಗಳ ರೂಪದಲ್ಲಿ ಪರಿಣಾಮವನ್ನು ಹೊಂದಿದ್ದರೂ ವಸ್ತುತಃ ಅವೆಲ್ಲವೂ ಚಿನ್ನವೇ ಆಗಿದೆ. ಅಂತೆಯೇ ಮಹತ್ತತ್ತ್ವ, ಅಹಂಕಾರ, ಆಕಾಶ, ವಾಯು ಇತ್ಯಾದಿಗಳ ರೂಪದಲ್ಲಿ ಉಪಲಬ್ಧವಾಗುವ ಈ ಸಮಗ್ರವಾದ ಜಗತ್ತು ವಸ್ತುತಃ ನಿನ್ನಿಂದ ಭಿನ್ನವಾದುದಾಗಿಲ್ಲ. ನಿನ್ನ ಸ್ವರೂಪವೇ ಆಗಿದೆ.)

**ಸ ಯದಜಯಾ ತ್ವಜಾಮನುಶಯೀತ ಗುಣಾಂಶ್ಚ ಜುಷನ್**
**ಭಜತಿ ಸರೂಪತಾಂ ತದನು ಮೃತ್ಯುಮಪೇತಭಗಃ ।**
**ತ್ವಮುತ ಜಹಾಸಿ ತಾಮಹಿರಿವ ತ್ವಚಮಾತ್ತಭಗೋ**
**ಮಹಸಿ ಮಹೀಯಸೇಽಷ್ಟಗುಣಿತೇಽಪರಿಮೇಯಭಗಃ ॥೩೮॥**

ದೇವದೇವನೇ! ಜೀವನು ಮಾಯೆಯಿಂದ ವಿಮೋಹಿತನಾಗಿ ಅವಿದ್ಯೆಯನ್ನು ಆಶ್ರಯಿಸಿ ದೇಹೇಂದ್ರಿಯಾದಿಗಳನ್ನು ತನ್ನದೆಂದು ಭ್ರಮಿಸುತ್ತಾ ಅವುಗಳಲ್ಲಿ ಮಮತ್ವಬುದ್ಧಿಯನ್ನು ಹೊಂದಿ ಸ್ವಸ್ವರೂಪದಲ್ಲಿ ಪ್ರಾಪ್ತವಾಗುವ ಆನಂದಾದಿ ಗುಣಗಳನ್ನು ಕಳೆದುಕೊಂಡು ಸಂಸಾರಚಕ್ರದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ. ನೀನಾದರೋ ಹಾವು ಪೊರೆಯನ್ನು ಕಳಚಿಹಾಕುವಂತೆ ಮಾಯೆಯ ಮತ್ತು ಅವಿದ್ಯೆಯ ಸಂಬಂಧವನ್ನೇ ಸಂಪೂರ್ಣವಾಗಿ ತೊರೆದು ಮಹೈಶ್ವರ್ಯವನ್ನು ಪಡೆದು ಅಪರಿಮಿತಮಹಿಮನಾಗಿ ಅಣಿ ಮಾಡಿ ಅಷ್ಟಸಿದ್ಧಿರೂಪವಾದ ಐಶ್ವರ್ಯದಿಂದ ಕೂಡಿ ವಿಜೃಂಭಿಸುವೆ.

**(ನೃತ್ಯನ್ತೀ ತವ ವೀಕ್ಷಣಾಙ್ಗಣಗತಾ ಕಾಲಸ್ವಭಾವಾದಿಭಿಃ**
**ಭಾವಾತ್ಸತ್ತ್ವರಜಸ್ತಮೋಗುಣ ಮಯಾನುನ್ಮೀಲಯನ್ತೀ ಬಹೂನ್ ।**
**ಮಾಮಕ್ರಮ್ಯ ಪದಾಶಿರಸ್ಯತಿಭರಂ ಸಂಮರ್ದಯತ್ಯಾತುರಂ**
**ಮಾಯಾ ತೇ ಶರಣಂ ಗತೋಽಸ್ಮಿ ನೃಹರೇ ತ್ವಮೇವ**
**ತಾಂ ವಾರಯ ಶ್ರೀ ॥೨೫॥**

ಪ್ರಭುವೇ! ನೃಸಿಂಹನೇ! ಈ ಮಾಯೆಯು ನಿನ್ನ ಕಣ್ಣೆದುರಿನಲ್ಲಿ ನಿಂತು ನಾಟ್ಯವಾಡುತ್ತಾ ಕಾಲ, ಸ್ವಭಾವ ಇತ್ಯಾದಿಗಳ ಮೂಲಕವಾಗಿ ಸತ್ತ್ವಗುಣ-ರಜೋಗುಣ ಮತ್ತು ತಮೋಗುಣಗಳ ಹಲವಾರು ಭಾವಗಳನ್ನು ಪ್ರದರ್ಶಿಸುತ್ತಿದೆ. ಇದಕ್ಕೆ ಬದಲಾಗಿ ಅದೇ ಮಾಯೆಯು ನನ್ನ ತಲೆಯ ಮೇಲೆ ಹತ್ತಿನಿಂತು ಭವರೋಗಪೀಡಿತನಾದ ನನ್ನನ್ನು ಮರ್ದನಮಾಡುತ್ತಿದೆ. ನರಹರಿಯೇ! ನಾನು ನಿನಗೆ ಶರಣಾಗತನಾಗಿದ್ದೇನೆ. ಈ ಮಾಯೆಯ ಉಪಟಳವನ್ನು ನಿವಾರಿಸಿ ನನ್ನನ್ನು ಉದ್ಧರಿಸು.)

**ಯದಿ ನ ಸಮುದ್ಧರನ್ತಿ ಯತಯೋ ಹೃದಿ ಕಾಮಜಟಾ**
**ದುರಧಿಗಮೋಽಸತಾಂ ಹೃದಿ ಗತೋಽಸ್ಮೃತಕಣ್ಠಮಣಿಃ ।**
**ಅಸುತೃಪಯೋಗಿನಾಮುಭಯತೋಽಪ್ಯಸುಖಂ ಭಗವ-**
**ನ್ನ ನಪಗತಾನ್ತಕಾದನಧಿರೂಢಪದಾದ್ಭವತಃ ॥೩೯॥**

ದೇವದೇವನೇ! ಮನುಷ್ಯನು ಯೋಗಿಯಾಗಿದ್ದರೂ, ಹೊರ ಪ್ರಪಂಚಕ್ಕೆ ಯೋಗಿಯಂತೆ ಕಾಣಿಸಿಕೊಳ್ಳುತ್ತಿದ್ದರೂ, ಅವನೊಬ್ಬ ಮಹಾ

ಯೋಗಿಯೆಂದು ಸಾಮಾನ್ಯಮನುಷ್ಯರ ಪ್ರಶಂಸೆಗೆ ಪಾತ್ರನಾಗಿದ್ದರೂ, ಹೃದಯದಲ್ಲಡಗಿರುವ ವಿಷಯವಾಸನೆಗಳನ್ನು ತೊರೆಯದಿದ್ದರೆ ಅಂತಹವರು ನಿನ್ನನ್ನು ಕಾಣಲಾರರು. ಕುತ್ತಿಗೆಗೆ ಮಣಿಗಳ ಸರವನ್ನು ಹಾಕಿಕೊಂಡಿರುವವನು ಅದನ್ನು ಮರೆತು ಮಣಿಯಸರಕ್ಕಾಗಿ ಮನೆಯಲ್ಲೆಲ್ಲಾ ಹುಡುಕಾಡುವಂತೆ ಕಪಟಯೋಗಿಯ ಹೃದಯದಲ್ಲೂ ನೀನೇ ಸಾಕ್ಷಾತ್ತಾಗಿ ಇದ್ದರೂ ಅವನ ಹೃದಯದಲ್ಲಡಗಿರುವ ವಿಷಯವಾಸನೆಗಳ ಪರಿಣಾಮ ವಾಗಿ ಅವನು ನಿನ್ನನ್ನು ಕಾಣುವುದಿಲ್ಲ. ನೀನು ಅಂತಹವನಿಂದ ಬಹಳ ದೂರವೇ ಉಳಿಯುವೆ. ಯಾವ ಸಾಧಕನು ತನ್ನ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿಯೇ ಆಸಕ್ತನಾಗಿರುವನೋ, ವಿಷಯಸುಖಗಳಿಂದ ವಿರಕ್ತನಾಗಿರುವುದಿಲ್ಲವೋ ಅಂತಹವನು ಈ ಜನ್ಮದಲ್ಲಿಯೂ ಜನ್ಮಾಂತರಗಳಲ್ಲಿಯೂ ದುಃಖವನ್ನೇ ಅನುಭವಿಸುತ್ತಾನೆ. ಯೋಗಿಯ ವೇಷದಲ್ಲಿರುವ ವಿಷಯಲಂಪಟನಾದ ಅವನೊಬ್ಬ ದಾಂಭಿಕನೇ ಸರಿ. ಅಂತಹವನು ಸಂಸಾರವೆಂಬ ಮೃತ್ಯುವಿನಿಂದ ಬಿಡುಗಡೆಯನ್ನು ಹೊಂದದೆ ನಿನ್ನ ಸ್ವರೂಪವನ್ನು ತಿಳಿಯದೆ ಉಭಯಭ್ರಷ್ಟನಾಗಿ ಇಹ-ಪರಗಳೆರಡರಲ್ಲಿಯೂ ದುಃಖವನ್ನೇ ಅನುಭವಿಸುತ್ತಾನೆ.

**(ದಮ್ಭನ್ಯಾಸಮಿಷೇಣ ವಞ್ಚಿತಜನಂ ಭೋಗೈಕಚಿನ್ತಾತುರಂ**
**ಸಂಮುಹ್ಯನ್ತಮಹರ್ನಿಶಂ ವಿರಚಿತೋದ್ಯೋಗಕ್ಲಮೈರಾಕುಲಮ್ ।**
**ಆಜ್ಞಾಲಂಘನಮಜ್ಞಮಜ್ಞಜನತಾಸಂಮಾನನಾ ಸಂಮುದಂ**
**ದೀನಾನಾಥ ದಯಾನಿಧಾನ ಪರಮಾನನ್ದಪ್ರಭೋ ಪಾಹಿ ಮಾಮ್**
**ಶ್ರೀ ॥೨೬॥**

ಪ್ರಭುವೇ! ದಾಂಭಿಕವಾದ ಸಂನ್ಯಾಸದ ವ್ಯಾಜದಿಂದ ಜನರನ್ನೂ ವಂಚಿಸುತ್ತಿದ್ದೇನೆ. ಸದಾ ಕಾಲದಲ್ಲಿಯೂ ನಾನು ಕೇವಲ ಭೋಗವಸ್ತುಗಳ ವಿಷಯವಾಗಿಯೇ ಚಿಂತಿಸುತ್ತಾ ಭೋಗವಸ್ತುಗಳನ್ನು ಪಡೆಯುವ ಆತುರದಿಂದಿದ್ದೇನೆ. ಹಗಲು-ರಾತ್ರಿಗಳೆನ್ನದೆ ಭೋಗಸಾಧಕಗಳಾದ ನಾನಾ ಪ್ರಕಾರವಾದ ಉದ್ಯೋಗಗಳಲ್ಲಿ ತೊಡಗಿ ವ್ಯಾಕುಲನಾಗಿ ಆಯಾಸಗೊಂಡಿದ್ದೇನೆ. ನಾನು ನಿನ್ನ ಮತ್ತು ನಿನ್ನಿಂದ ಪ್ರಣೀತವಾದ ಶಾಸ್ತ್ರಗಳ ಆಜ್ಞೆಯನ್ನು ಉಲ್ಲಂಘಿಸುತ್ತಿದ್ದೇನೆ. ನಿಶ್ಚಯವಾಗಿಯೂ ನಾನು ಮಹಾ ಅಜ್ಞಾನಿ

ಯಾಗಿದ್ದೇನೆ. ನನ್ನ ಡಾಂಬಿಕ ವೇಷ-ಭೂಷಣಗಳನ್ನು ನೋಡಿ ಅಜ್ಞಾನಿಗಳು ಮಾಡುವ ಸಮ್ಮಾನದಿಂದ ಪ್ರಭಾವಿತನಾಗಿ 'ನಾನೊಬ್ಬ ದೊಡ್ಡ ಸಂತ'– ಎಂಬ ದುರಭಿಮಾನವನ್ನು ಬೆಳೆಸಿಕೊಂಡಿದ್ದೇನೆ. ದೀನನಾಥನೇ! ದಯಾನಿಧಾನನೇ! ಪರಮಾನಂದಸ್ವರೂಪನೇ! ಹೀಗೆ ಹಾದಿಯನ್ನು ಬಿಟ್ಟು ನಿನ್ನಿಂದ ಬಹಳ ದೂರಕ್ಕೆ ಸಾಗಿಹೋಗುತ್ತಿರುವ ನನ್ನನ್ನು ರಕ್ಷಿಸು.)

**ತ್ವದವಗಮೀ ನ ವೇತ್ತಿ ಭವದುತ್ಥಶುಭಾಶುಭಯೋ-**
**ರ್ಗುಣವಿಗುಣಾನ್ವಯಾಂಸ್ತರ್ಹಿ ದೇಹಭೃತಾಂ ಚ ಗಿರಃ ।**
**ಅನುಯುಗಮನ್ವಹಂ ಸಗುಣ ಗೀತಪರಮ್ಪರಯಾ**
**ಶ್ರವಣಭೃತೋ ಯತಸ್ತ್ವಮಪವರ್ಗಗತಿರ್ಮನುಜೈಃ ॥೪೦॥**

ದೇವದೇವನೇ! ಷಡ್ಗುಣೈಶ್ವರ್ಯಸಂಪನ್ನನೇ! ಭಗವಂತ! ನಿನ್ನ ವಾಸ್ತವವಾದ ಸ್ವರೂಪವನ್ನು ತಿಳಿದಿರುವ ಯೋಗಿಯು ಪುಣ್ಯ-ಪಾಪಕರ್ಮ ಫಲರೂಪವಾಗಿ ನಿನ್ನಿಂದಲೇ ಕೊಡಲ್ಪಡುವ ಸುಖ-ದುಃಖಗಳ ಬಗೆಗೆ ಚಿಂತಿಸುವುದಿಲ್ಲ. ಜನರಾಡಿಕೊಳ್ಳುವ ವಿಧಿ-ನಿಷೇಧಗಳ ಬಗ್ಗೆಯೂ ಅವನು ತಲೆ ಕೆಡಿಸಿಕೊಳ್ಳುವುದಿಲ್ಲ. ಅಂತಹ ಜ್ಞಾನಿಗಳಿಗೆ ದೇಹಾಭಿಮಾನವೇ ಇಲ್ಲದ ಕಾರಣ ವಿಧಿ-ನಿಷೇಧದ ಶಂಕೆಯೇ ಇರುವುದಿಲ್ಲ. ಇದು ಜ್ಞಾನಿಗಳ ವಿಷಯವಾಯಿತು. ಯಾರಿಗೆ ನಿನ್ನ ಸ್ವರೂಪಜ್ಞಾನವಿರುವುದಿಲ್ಲವೋ ಅಂತಹವರು ಕೂಡ ಪ್ರತ್ಯೇಕ-ಪ್ರತ್ಯೇಕಯುಗಗಳಲ್ಲಿ ನಡೆದ ನಿನ್ನ ಲೀಲಾಚರಿತಾಮೃತವನ್ನು ನಿರಂತರವಾಗಿ ಪಾನಮಾಡುತ್ತಾ, ನಿನ್ನ ಶ್ರೀ ವಿಗ್ರಹವನ್ನು ಹೃತ್ಕಮಲದಲ್ಲಿರಿಸಿಕೊಂಡು ಧ್ಯಾನಮಾಡುತ್ತಾ, ಭಜಿಸುತ್ತಾ , ಪ್ರೇಮೀಭಕ್ತರಾಗಿ ಪಾಪ-ಪುಣ್ಯಗಳಿಂದಲೂ, ಸುಖ-ದುಃಖಗಳಿಂದಲೂ ವಿಧಿ-ನಿಷೇಧಗಳಿಂದಲೂ ಅತೀತರಾಗಿರುತ್ತಾರೆ. ಏಕೆಂದರೆ : ನೀನೇ ಅವರಿಗೆ ಮೋಕ್ಷಸ್ವರೂಪನಾಗಿರುವೆ.*

---

* ಜ್ಞಾನಿಗಳನ್ನೂ ಪ್ರೇಮೀಭಕ್ತರನ್ನೂ ಬಿಟ್ಟು ಉಳಿದವರೆಲ್ಲರೂ ಭಗವಂತನಿಂದಲೇ ಪ್ರಣೀತವಾದ ಶಾಸ್ತ್ರದ ಕಟ್ಟು-ಪಾಡುಗಳಿಗೆ ಬದ್ಧರಾಗಿರಲೇಬೇಕು. ಅದನ್ನು ಉಲ್ಲಂಘಿಸಿದರೆ ದುರ್ಗತಿಯುಂಟಾಗುತ್ತದೆ.

ಶ್ರುತಿಸ್ಮೃತೀ ಮಮೈವಾಜ್ಞಾ ಯಸ್ತಾವುಲ್ಲಂಘ್ಯ ವರ್ತತೇ ।
ಆಜ್ಞಾಚ್ಛೇದೀ ಮಮದ್ವೇಷೀ ವೈಷ್ಣವೋಽಪಿ ನ ಮೇ ಪ್ರಿಯಃ ॥

(ಅವಗಮಂ ತವ ಮೇ ದಿಶ ಮಾಧವ
ಸ್ಫುರತಿ ಯನ್ನ ಸುಖಾಸುಖಸಙ್ಗಮಃ ।
ಶ್ರವಣವರ್ಣನಭಾವಮಥಾಪಿತಾ
ನ ಭವಾಮಿ ಯಥಾ ವಿಧಿಕಿಙ್ಕರಃ ಶ್ರೀ ॥೨೭॥

ಮಾಧವನೇ! ನೀನು ನನಗೆ ನಿನ್ನ ನಿಜಸ್ವರೂಪದ ದರ್ಶನವನ್ನು ತೋರಿಸು. ಇದರಿಂದಾಗಿ ಸುಖ-ದುಃಖಗಳ ಸ್ಫುರಣೆಯು ನನಗುಂಟಾಗುವುದಿಲ್ಲ. ಅಥವಾ ನನ್ನನ್ನು ನಿನ್ನ ಗುಣಗಳ ಕೀರ್ತನದಲ್ಲಿ ಮತ್ತು ಲೀಲಾ ಕಥಾಶ್ರವಣದಲ್ಲಿ ಆಸಕ್ತನಾಗುವಂತೆ ಮಾಡು. ಇದರಿಂದ ನಾನು ನಿನ್ನ ಪ್ರೇಮೀಭಕ್ತನಾಗುವುದರಿಂದ ವಿಧಿ-ನಿಷೇಧಗಳಿಗೆ ಕಿಂಕರನಾಗಲಾರೆನು.)

ದ್ಯುಪತಯ ಏವ ತೇ ನ ಯಯುರನ್ತಮನನ್ತತಯಾ
ತ್ವಮಪಿ ಯದನ್ತರಾಣ್ಡನಿಚಯಾ ನನು ಸಾವರಣಾಃ ।
ಖ ಇವ ರಜಾಂಸಿ ವಾನ್ತಿ ವಯಸಾ ಸಹ ಯಚ್ಛ್ರುತಯ-
ಸ್ತ್ವಯಿ ಹಿ ಫಲನ್ತ್ಯತನ್ನಿರಸನೇನ ಭವನ್ನಿಧನಾಃ ॥೪೧॥

ದೇವದೇವನೇ! ಸ್ವರ್ಗವೇ ಮೊದಲಾದ ಲೋಕಗಳಿಗೆ ಅಧಿಪತಿಗಳಾದ ಇಂದ್ರ-ಬ್ರಹ್ಮಾದಿ ದೇವತೆಗಳೂ ಅನಂತನಾದ ನಿನ್ನ ಅಂತವನ್ನು ಕಾಣಲಾರರು. ಅಚ್ಚರಿಯ ವಿಷಯವೆಂದರೆ ನಿನ್ನ ಅಂತವನ್ನು ನೀನೇ ತಿಳಿದವನಾಗಿಲ್ಲ. ಹೀಗಿರುವಾಗ ನಿನ್ನ ಅಂತವನ್ನು ಬೇರೆಯವರು ತಿಳಿಯಲು ಹೇಗೆತಾನೇ ಸಾಧ್ಯವಾದೀತು? ನಿನ್ನೊಳಗೆ ಉತ್ತರೋತ್ತರ ದಶಗುಣಪ್ರಮಾಣವುಳ್ಳ ಸಪ್ತಾವರಣಗಳಿಂದ ಕೂಡಿದ ಅನೇಕ ಬ್ರಹ್ಮಾಂಡಗಳು ಕಾಲಚಕ್ರಸಹಿತವಾಗಿ ಆಕಾಶದಲ್ಲಿ ಸುತ್ತಾಡುವ ಧೂಳಿನ ಕಣಗಳಂತೆ ಏಕಕಾಲದಲ್ಲಿ ಸುತ್ತುತ್ತಿರುತ್ತವೆ. ಅಂತಹ ನಿನ್ನ ಮಹಿಮೆಗೆ ಪಾರವೆಂಬುದುಂಟೇ? ಆದುದರಿಂದಲೇ ವೇದಗಳು ದೃಶ್ಯಗಳಾದ ಸಕಲವಸ್ತುಗಳನ್ನೂ 'ನೇತಿ' 'ನೇತಿ'–ಎಂದು ನಿಷೇಧಿಸುತ್ತಾ ಕಡೆಗೆ ತಮ್ಮನ್ನೂ ನಿಷೇಧಿಸಿಕೊಂಡು ಅಬಾಧಿತವಾದ ಅವಧಿ ರೂಪದಿಂದುಳಿಯುವ ನಿನ್ನಲ್ಲಿಯೇ ಆಶ್ರಯವನ್ನೂ ಪಡೆದು ಸಾಫಲ್ಯವನ್ನು ಹೊಂದುತ್ತವೆ.*

---

* ವಿಷ್ಣುಪುರಾಣದಲ್ಲಿ ಬ್ರಹ್ಮಾಂಡದ ಬಗೆಗೆ ವಿವರಣೆಯು ಹೀಗಿದೆ :
ಏತೇ ಸಪ್ತ ಮಯಾ ಲೋಕಾ ಮೈತ್ರೇಯ ಕಥಿತಾಸ್ತವ । ಪಾತಾಲಾನಿ ಚ ಸಪ್ತೈವ

(ದ್ಯುಪತಯೋ ವಿದುರನ್ತ ಮನನ್ತ ತೇ
ನ ಚ ಭಯಾನ್ನಗಿರಃ ಶ್ರುತಿಮೌಲಯಃ ।
ತ್ವಯಿ ಫಲನ್ತಿ ಯತೋ ನಮ ಇತ್ಯತೋ
ಜಯ ಜಯೇತಿ ಭಜೇ ತವ ತತ್ಪರಮ್ ॥೨೮॥

ಅನಂತನೇ! ಬ್ರಹ್ಮನೇ ಮೊದಲಾದ ದೇವತೆಗಳೂ ನಿನ್ನ ಅಂತವನ್ನು ತಿಳಿದವರಾಗಿಲ್ಲ. ನಿನ್ನ ಅಂತವು ಯಾವುದೆಂಬುದು ನಿನಗೂ ತಿಳಿಯದು. ವೇದಗಳಿಗೆ ಕಿರೀಟಪ್ರಾಯವಾಗಿರುವ ಉಪನಿಷತ್ತುಗಳಿಗೂ ನಿನ್ನ ಅಂತವು ತಿಳಿಯದು. ನೀನು ಅನಂತನಾಗಿರುವುದೇ ಇದಕ್ಕೆ ಕಾರಣವಾಗಿದೆ. ಉಪ ನಿಷತ್ತುಗಳು 'ನಮೋ ನಮಃ! ಭಗವಂತನಿಗೆ ಜಯವಾಗಲೀ! ಜಯವಾ ಗಲಿ!–ಎಂದು ಹೇಳುತ್ತಾ ಚರಿತಾರ್ಥವನ್ನು ಹೊಂದುತ್ತವೆ. ಆದುದರಿಂದ ನಾನೂ ಕೂಡ 'ನಮೋ ನಮಃ! ಜಯ! ಜಯ!'–ಎಂದು ಹೇಳುತ್ತಾ ನಿನ್ನ ಚರಣಕಮಲಗಳ ಉಪಾಸನೆಯನ್ನು ಮಾಡುತ್ತೇನೆ.)

ಭಗವಂತನು ಹೇಳುತ್ತಾನೆ :

"ದೇವರ್ಷಿಯೇ! ಸನಕ-ಸನಂದಾದಿ ಮಹರ್ಷಿಗಳು ಈ ಉಪದೇಶ ವನ್ನು ಕೇಳಿ ಆತ್ಮಸ್ವರೂಪವನ್ನು ತಿಳಿದುಕೊಂಡರು. ಅವರು ನಿತ್ಯಸಿದ್ಧ

---

ಬ್ರಹ್ಮಾಣ್ಡನ್ಯೈಷ ವಿಸ್ತರಃ ॥ ಏತದಣ್ಡಕಟಾಹೇನ ತಿರ್ಯಗೂರ್ಧ್ವಮಧಸ್ತಥಾ । ಕಪಿತ್ಥಸ್ಯ ಯತಾ ಬೀಜಂ ಸರ್ವತೋ ವೈ ಸಮಾವೃತಮ್ ॥ ದಶೋತ್ತರೇಣ ಪಯಸಾ ಮೈತ್ರೇಯಾಣ್ಡಂ ಚ ತದ್ಧೃತಮ್ । ಸ ಚಾಮ್ಬು ಪರಿಧಾನೋಽಸೌ ವಹ್ನಿನಾ ವೇಷ್ಟಿತೋ ಬಹಿಃ ॥೩॥ ವಹ್ನಿಶ್ಚ ವಾಯುನಾ ವಾಯುರ್ಮೈತ್ರೇಯ ನಭ ಸಾವೃತಃ । ಭೂತಾದಿನಾ ನಭಃಸೋಽಪಿ ಮಹತಾ ಪರಿವೇಷ್ಟಿತಃ ॥೪॥ ದಶೋತ್ತ ರಾಣ್ಯಶೇಷಾಣಿ ಮೈತ್ರೇಯೈತಾನಿ ಸಪ್ತವೈ । ಮಹನ್ತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಮ್ ॥೫॥ ಅನನ್ತಸ್ಯ ಚ ತಸ್ಯಾನ್ತಂ ಸಂಸ್ಥಾನಂ ಚಾಪಿ ವಿದ್ಯತೇ । ತದನನ್ತಮಸಂಖ್ಯಾತಪ್ರಮಾಣಂ ಚಾಪಿ ವೈ ಯತಃ ॥೬॥ ಹೇತುಭೂತಮ ಶೇಷಸ್ಸ ಪ್ರಕೃತಿಃ ಸಾಪರಾ ಮುನೇ ॥

ಮೈತ್ರೇಯ! ಏಳು ಊರ್ಧ್ವಲೋಕಗಳೂ ಏಳು ಪಾತಾಳಲೋಕಗಳೂ ಸೇರಿ ಒಂದು ಬ್ರಹ್ಮಾಂಡವೆನಿಸುವುದು. ಬೇಲದ ಹಣ್ಣಿನಲ್ಲಿ ಬೀಜಗಳು ಅಡಗಿರುವಂತೆ ಹದಿನಾಲ್ಕು ಲೋಕಗಳೂ ಬ್ರಹ್ಮಾಂಡಕಟಾಹದಲ್ಲಿ ಎಲ್ಲ ಕಡೆಗಳಲ್ಲಿಯೂ ನೆಲೆಸಿರು ವುವು. ಪ್ರತಿಯೊಂದು ಬ್ರಹ್ಮಾಂಡವೂ ಭೂಮಿಯ ಹತ್ತರಷ್ಟು ವಿಸ್ತಾರವಾದ ನೀರಿ

ರಾಗಿದ್ದರೂ ಕೂಡ ಆ ಉಪದೇಶದಿಂದ ಕೃತ-ಕೃತ್ಯರಾದೆವೆಂದು ಭಾವಿಸಿ ಕೊಂಡು ಆಚಾರ್ಯಪದವಿಯಲ್ಲಿ ಕುಳಿತು ಉಪದೇಶಿಸಿದ ಸನಂದನನ್ನು ಪೂಜಿಸಿ ಸತ್ಕರಿಸಿದರು. ನಾರದ! ಸನಕ-ಸನಂದನಾದಿ ಮಹರ್ಷಿಗಳು ಸೃಷ್ಟಿಯ ಆರಂಭದಲ್ಲಿಯೇ ಹುಟ್ಟಿದವರು. ಆದುದರಿಂದಲೇ ಅವರು ಎಲ್ಲರಿಗೂ ಪೂರ್ವಜರು. ಆಕಾಶಗಾಮಿಗಳಾದ ಆ ಮಹಾತ್ಮರು ಈ ಪ್ರಕಾರವಾಗಿ ಸಮಸ್ತವಾದ ವೇದ-ಶಾಸ್ತ್ರ-ಪುರಾಣೇತಿಹಾಸಗಳ ಸಾರಸರ್ವಸ್ವವನ್ನೂ ಹಿಂಡಿತೆಗೆದರು.

ಮಹರ್ಷಿಯೇ! ನೀನೂ ಸನಕ-ಸನಂದನಾದಿಗಳಂತೆ ಬ್ರಹ್ಮಮಾನಸ ಪುತ್ರನೇ ಆಗಿರುವೆ. ಅವರ ಜ್ಞಾನಸಂಪತ್ತಿಗೆ ಉತ್ತರಾಧಿಕಾರಿಯಾಗಿರುವೆ. ನೀನೂ ಕೂಡ ಶ್ರದ್ಧಾಪೂರ್ವಕವಾಗಿ ಈ ಬ್ರಹ್ಮವಿದ್ಯೆಯನ್ನು ಧರಿಸಿ ಬ್ರಹ್ಮಸಾಕ್ಷಾತ್ಕಾರಮಾಡಿಕೊಂಡು ಸ್ವೇಚ್ಛೆಯಿಂದ ಭೂಮಂಡಲದಲ್ಲಿ ಸಂಚರಿಸುವವನಾಗು. ಈ ಬ್ರಹ್ಮವಿದ್ಯೆಯು ಮಾನವರ ಸಮಸ್ತವಾದ ವಾಸನೆಗಳನ್ನೂ ಭಸ್ಮಮಾಡಿಬಿಡುತ್ತವೆ.”

ಶ್ರೀಶುಕಮುನಿಗಳು ಹೇಳುತ್ತಾರೆ :

“ಪರೀಕ್ಷಿತಮಹಾರಾಜ! ದೇವರ್ಷಿಗಳಾದ ನಾರದರು ಸಂಯಮಿಗಳು ; ಜ್ಞಾನಿಗಳು ; ಪೂರ್ಣಕಾಮರು ಮತ್ತು ನೈಷ್ಠಿಕಬ್ರಹ್ಮಚಾರಿಗಳು. ಕೇಳಿದುದನ್ನು ಒಡನೆಯೇ ಧಾರಣಮಾಡುವ ಸಾಮರ್ಥ್ಯವುಳ್ಳವರು. ಭಗವಾನ್ ನಾರಾಯಣನು ನಾರದರಿಗೆ ಹೀಗೆ ಉಪದೇಶಿಸಿದೊಡನೆಯೇ ಅವರು ಅದನ್ನು ಅತ್ಯಂತಶ್ರದ್ಧೆಯಿಂದ ಗ್ರಹಮಾಡಿ ಭಗವಂತನಿಗೆ ಹೇಳಿದರು :

---

ನಿಂದಲೂ, ನೀರಿನ ಹತ್ತರಷ್ಟು ವಿಸ್ತಾರವಾದ ಅಗ್ನಿಯಿಂದಲೂ, ಅಗ್ನಿಯ ಹತ್ತರಷ್ಟು ವಿಸ್ತಾರವಾದ ವಾಯುವಿನಿಂದಲೂ, ವಾಯುವಿನ ಹತ್ತರಷ್ಟು ವಿಸ್ತಾರವಾದ ಆಕಾಶದಿಂದಲೂ, ಆಕಾಶದ ಹತ್ತರಷ್ಟು ವಿಸ್ತಾರವಾದ ಅಹಂಕಾರದಿಂದಲೂ, ಅಹಂಕಾರದ ಹತ್ತು ಪಟ್ಟು ಹೆಚ್ಚಾದ ಮಹತ್ತಿನಿಂದಲೂ ಪರಿವೃತರಾಗಿರುವುದು. ಇವೇ ಬ್ರಹ್ಮಾಂಡಗಳಿಗಿರುವ ಸಪ್ತಾವರಣಗಳು. ಈ ಮಹತ್ತು ಪ್ರಕೃತಿಯಲ್ಲಡ ಗಿರುವುದು. ಈ ಪ್ರಕೃತಿಯೂ ಸಹ ಬ್ರಹ್ಮವಸ್ತುವಿನ ಒಂದು ಮೂಲೆಯಲ್ಲಿ ಹುದುಗಿ ಕೊಂಡಿರುವುದರಿಂದ ಬ್ರಹ್ಮಸ್ವರೂಪಕ್ಕೆ ಅಂತವಿಲ್ಲವೆಂಬುದು ಸ್ಪಷ್ಟವಾಗಿದೆ.

**ನಮಸ್ತಸ್ಮೈ ಭಗವತೇ ಕೃಷ್ಣಾಯಾಮಲಕೀರ್ತಯೇ ।**
**ಯೋ ಧತ್ತೇ ಸರ್ವಭೂತಾನಾಮಭವಾಯೋಶತೀಃ ಕಲಾಃ ॥೪೬॥**

"ಭಗವಂತ! ನೀನು ಸಚ್ಚಿದಾನಂದಸ್ವರೂಪನಾದ ಶ್ರೀಕೃಷ್ಣನಾಗಿರುವೆ. ನಿನ್ನ ಕೀರ್ತಿಯು ಪರಿಶುದ್ಧವಾದದ್ದು ಮತ್ತು ಪರಮಪವಿತ್ರವಾದದ್ದು. ನೀನು ಸಮಸ್ತಪ್ರಾಣಿಗಳಿಗೂ ಪರಮಕಲ್ಯಾಣವೆನಿಸಿದ ಮೋಕ್ಷ ಮಾರ್ಗವನ್ನು ನಿರೂಪಿಸಲು ರಮಣೀಯವಾದ ಕಲಾವತಾರವನ್ನು ಧರಿಸುವೆ. ಅಂತಹ ದಯಾಸಮುದ್ರನಾದ ಶ್ರೀಕೃಷ್ಣಸ್ವಾಮಿಗೆ ನಮಸ್ಕಾರಮಾಡುತ್ತೇನೆ."

ಪರೀಕ್ಷಿತಮಹಾರಾಜ! ಹೀಗೆ ಮಹಾತ್ಮರಾದ ದೇವರ್ಷಿಗಳಾದ ನಾರದರು ಆದಿಋಷಿಯಾದ ಭಗವಾನ್ ನಾರಾಯಣನಿಗೂ ಅವನ ಶಿಷ್ಯರಿಗೂ ನಮಸ್ಕರಿಸಿ, ನನ್ನ ತಂದೆಯವರಾದ ಕೃಷ್ಣದ್ವೈಪಾಯನವ್ಯಾಸರ ಆಶ್ರಮಕ್ಕೆ ತೆರಳಿದರು. ಅನಿರೀಕ್ಷಿತವಾಗಿ ಆಗಮಿಸಿದ ದೇವರ್ಷಿ ನಾರದರನ್ನು ನನ್ನ ತಂದೆಯವರು ಯಥೋಚಿತವಾಗಿ ಸತ್ಕರಿಸಿದರು. ಸುಖಾಸನದಲ್ಲಿ ಕುಳಿತು ಕುಶಲಪ್ರಶ್ನೆಗಳಾದನಂತರ ದೇವರ್ಷಿಗಳು ಆದಿಗುರುವಾದ ನಾರಾಯಣನಿಂದ ಉಪದಿಷ್ಟವಾದ ಸಮಗ್ರಬ್ರಹ್ಮವಿದ್ಯೆಯನ್ನೂ ನನ್ನ ತಂದೆಯವರಿಗೆ ವಿವರಿಸಿ ಹೇಳಿದರು.

ಮಹಾರಾಜ! ಮನಸ್ಸಿಗೂ, ಮಾತಿಗೂ ಅಗೋಚರವಾದ, ಸಮಸ್ತ ಪ್ರಾಕೃತಗುಣಗಳಿಂದಲೂ ರಹಿತವಾದ ಪರಬ್ರಹ್ಮಪರಮಾತ್ಮನ ವರ್ಣನೆಯನ್ನು, ಸಗುಣೋಪಾಸನೆಯನ್ನೇ ವಿಶೇಷವಾಗಿ ಹೇಳುವ ಶ್ರುತಿಗಳು ಹೇಗೆ ವರ್ಣಿಸುತ್ತವೆ?–ಎಂಬುದು ನಿನ್ನ ಪ್ರಶ್ನೆಯಾಗಿತ್ತಲ್ಲವೇ? ಗುರುತಿಸಿ ತೋರಿಸುವುದಕ್ಕೆ ಅಸಾಧ್ಯವಾಗಿಯೂ ನಿರ್ವಿಶೇಷವಾಗಿಯೂ ಇರುವ ಪರಬ್ರಹ್ಮವಸ್ತುವಿನಲ್ಲಿ ಸಗುಣಗಳಾದ ಶ್ರುತಿಗಳಿಗೂ ಮನಸ್ಸಿಗೂ ಹೇಗೆ ಪ್ರವೇಶವುಂಟಾಗುವುದೆಂಬುದನ್ನು ನಿನಗೆ ವಿವರಿಸಿ ಹೇಳಿರುವೆನು.

**ಯೋಽಸ್ಯೋತ್ಪ್ರೇಕ್ಷಕ ಆದಿಮಧ್ಯನಿಧನೇ ಯೋಽವ್ಯಕ್ತಜೀವೇಶ್ವರೋ**
**ಯಃ ಸೃಷ್ಟ್ವೇದಮನುಪ್ರವಿಶ್ಯ ಋಷಿಣಾ ಚಕ್ರೇ ಪುರಃ ಶಾಸ್ತಿ ತಾಃ ।**

**ಯಂ ಸಂಪದ್ಯ ಜಹಾತ್ಯ ಜಾಮನುಶಯೀ ಸುಪ್ತಃ ಕುಲಾಯಂ ಯಥಾ ।**
**ತಂ ಕೈವಲ್ಯನಿರಸ್ತಯೋನಿಮಭಯಂ ಧ್ಯಾಯೇದಜಸ್ರಂ ಹರಿಮ್ ॥**

ಯಾವನು ಈ ದೃಶ್ಯಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಲ್ಲಿ ಸಾಕ್ಷಿಭೂತನಾಗಿರುವನೋ, ಪ್ರಕೃತಿ-ಪುರುಷರಿಬ್ಬರಿಗೂ ನಿಯಾಮಕನಾಗಿರುವನೋ, ಯಾವನು ಈ ಜಗತ್ತನ್ನು ಸೃಷ್ಟಿಸಿ ಜೀವರೂಪದಿಂದ ಒಳಹೊಕ್ಕು ಜೀವಗಳ ಉಪಭೋಗಕ್ಕಾಗಿ ಶರೀರಗಳನ್ನು ಸೃಷ್ಟಿಸಿ ನಿಯತಗೊಳಿಸುವನೋ, ನಿದ್ರಿಸುವವನು ದೇಹವನ್ನು ಮರೆತು ಅದರ ಅನುಸಂಧಾನವನ್ನು ತೊರೆಯುವಂತೆ ಯಾವನನ್ನು ಭಜಿಸುವವರು ಅವಿದ್ಯಾಬಂಧನವನ್ನು ದೂರೀಕರಿಸುವರೋ ಅಂತಹ ಸಂಸಾರಭಯನಾಶಕನಾದ ಶ್ರೀಹರಿಯನ್ನು ಸಮಸ್ತರೂ ನಿರಂತರವೂ ಧ್ಯಾನಿಸುತ್ತಿರಬೇಕು.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತದ
ದಶಮಸ್ಕಂಧದಲ್ಲಿ ೮೭ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೮೮ನೆಯ ಅಧ್ಯಾಯ

## ವೃಕಾಸುರನ ಕಥೆ

ರಾಜನು ಹೇಳುತ್ತಾನೆ :

**ದೇವಾಸುರಮನುಷ್ಯೇಷು ಯೇ ಭಜನ್ತ್ಯಶಿವಂ ಶಿವಮ್ ।**
**ಪ್ರಾಯಸ್ತೇ ಧನಿನೋ ಭೋಜಾ ನ ತು ಲಕ್ಷ್ಮ್ಯಾಃ ಪತಿಂ ಹರಿಮ್ ॥**

**ಏತದ್ವೇದಿತುಮಿಚ್ಛಾಮಃ ಸನ್ದೇಹೋಽತ್ರ ಮಹಾನ್ ಹಿ ನಃ ।**
**ವಿರುದ್ಧಶೀಲಯೋಃ ಪ್ರಭ್ವೋರ್ವಿರುದ್ಧಾ ಭಜತಾಂ ಗತಿಃ ॥೨॥**

"ಪೂಜ್ಯರೇ! ಭಗವಾನ್ ಶಂಕರನು ಸಕಲಭೋಗಪರಿತ್ಯಾಗಿಯು. ಆದರೆ, ಅವನನ್ನು ಉಪಾಸಿಸುವ ದೇವಾಸುರ-ಮನುಷ್ಯರು ಪ್ರಾಯಶಃ ಧನವಂತರೂ, ಭೋಗಸಂಪನ್ನರೂ ಆಗಿರುತ್ತಾರೆ. ಇದಕ್ಕೆ ಪ್ರತಿಯಾಗಿ ಭಗವಾನ್ ವಿಷ್ಣುವು ಲಕ್ಷ್ಮೀಪತಿಯು. ಭೋಗ-ವೈಭವಸಂಪನ್ನನು.

ದೇವಾಸುರ-ಮನುಷ್ಯರಲ್ಲಿ ವಿಷ್ಣುವನ್ನು ಉಪಾಸನೆಮಾಡುವವರು ಪ್ರಾಯಶಃ ಧನಹೀನರೂ, ವಿರಾಗಿಗಳೂ ಆಗುತ್ತಾರೆ. ಇಬ್ಬರು ಪ್ರಭುಗಳೂ ತ್ಯಾಗ ಮತ್ತು ಭೋಗದ ದೃಷ್ಟಿಯಿಂದ ವಿರುದ್ಧವಾದ ಸ್ವಭಾವದವರೇ ಆಗಿರುತ್ತಾರೆ. ಉಪಾಸಕರು ಕೂಡ ತಾವು ಉಪಾಸಿಸುವ ದೇವತೆಗಳ ಗುಣಸ್ವಭಾವಗಳಿಗೆ ವಿರುದ್ಧವಾದ ಗುಣಸ್ವಭಾವಗಳನ್ನು ಹೊಂದಿದವರಾಗಿರುತ್ತಾರೆ. ತ್ಯಾಗ ಮೂರ್ತಿಯಾದ ಈಶ್ವರನ ಉಪಾಸನೆಯಿಂದ ಭೋಗಿಗಳು ಹೇಗಾಗುತ್ತಾರೆ? ಭೋಗಮೂರ್ತಿಯಾದ ವಿಷ್ಣುವಿನ ಉಪಾಸನೆಯಿಂದ ಅವನ ಭಕ್ತರು ತ್ಯಾಗಿಗಳು ಹೇಗಾಗುತ್ತಾರೆ? ಈ ವಿಷಯದಲ್ಲಿ ನನಗೆ ಮಹತ್ತರವಾದ ಸಂದೇಹವುಂಟಾಗಿದೆ. ಪೂಜ್ಯರೇ! ಈ ನನ್ನ ಸಂಶಯವನ್ನು ನಿವಾರಿಸಿರಿ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಶಿವನು ಸದಾ ತನ್ನ ಶಕ್ತಿಯಿಂದ ಯುಕ್ತನಾಗಿರತಕ್ಕವನು. ಅವನು ಸತ್ತ್ವರಜಸ್ತಮೋಗುಣಗಳಿಂದ ಯುಕ್ತನಾಗಿದ್ದು ಅಹಂಕಾರಕ್ಕೆ ಆಶ್ರಯನೂ ಆಗಿದ್ದಾನೆ. ಅಹಂಕಾರದಲ್ಲಿ ವೈಕಾರಿಕ, ತೈಜಸ ಮತ್ತು ತಾಮಸಗಳೆಂಬ ಮೂರು ಭೇದಗಳಿದ್ದು ಈ ಕಾರಣದಿಂದಲೇ ಶಿವನು ತ್ರಿಲಿಂಗಿಯೆಂದೂ ಕರೆಯಲ್ಪಡುತ್ತಾನೆ. ಈ ಮೂರು ಪ್ರಕಾರವಾದ ಅಹಂಕಾರಗಳಿಂದ ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಐದು ಮಹಾಭೂತಗಳು ಮತ್ತು ಮನಸ್ಸು–ಎಂಬ ಹದಿನಾರು ಬಗೆಯ ವಿಕಾರಗಳುಂಟಾಗುತ್ತವೆ. ಈ ಹದಿನಾರು ವಿಕಾರಗಳಿಗೂ ಹದಿನಾರು ಅಧಿದೇವತೆಗಳಿರುತ್ತಾರೆ. ಇವರಲ್ಲಿ ಯಾವುದೇ ಒಂದು ಅಧಿದೇವತೆಯನ್ನು ಉಪಾಸಿಸಿದರೂ ಅದಕ್ಕೆ ತಕ್ಕುದಾದ ಐಶ್ವರ್ಯವನ್ನು ಉಪಾಸಕನಿಗೆ ದಯಪಾಲಿಸುತ್ತಾರೆ. ಆದುದರಿಂದ ಶಿವನ ಉಪಾಸಕರು ಐಶ್ವರ್ಯವಂತರೂ ಭೋಗಿಗಳೂ ಆಗುತ್ತಾರೆ. ಆದರೆ ಶ್ರೀಹರಿಯು ಪ್ರಕೃತಿಗಿಂತಲೂ ಆಚೆ ಇರುವ ಪುರುಷೋತ್ತಮನು. ಸಮಸ್ತವಾದ ಗುಣಗಳಿಂದಲೂ ರಹಿತನಾದವನು ; ಸರ್ವಜ್ಞನು. ಸಮಸ್ತರ ಅಂತಃಕರಣಗಳಲ್ಲಿಯೂ ಸಾಕ್ಷಿಯ ರೂಪ ದಲ್ಲಿರತಕ್ಕವನು. ಅಂತಹ ಶ್ರೀಹರಿಯನ್ನು ಉಪಾಸಿಸತಕ್ಕವನು ಗುಣಾ ತೀತನಾಗಿ ಪರಬ್ರಹ್ಮಭಾವವನ್ನೇ ಹೊಂದಿಬಿಡುತ್ತಾನೆ.

ಮಹಾರಾಜ! ಹಿಂದೆ ನಿನ್ನ ತಾತನಾದ ಯುಧಿಷ್ಠಿರನೊಮ್ಮೆ ಅಶ್ವಮೇಧಯಾಗವನ್ನು ಮುಗಿಸಿ ಭಗವಂತನಾದ ಶ್ರೀಕೃಷ್ಣನಿಂದ ಹಲವಾರು ಭಾಗವತಧರ್ಮಕ್ಕೆ ಸಂಬಂಧಿಸಿದ ಪ್ರಸಂಗಗಳನ್ನು ಕೇಳುತ್ತಿದ್ದಾಗ ಆತನು ಇದೇ ಪ್ರಶ್ನೆಯನ್ನೇ ಶ್ರೀಕೃಷ್ಣನ ಮುಂದಿಟ್ಟನು.

ಪರೀಕ್ಷಿತ! ಜನರಿಗೆ ಮೋಕ್ಷವನ್ನು ಅನುಗ್ರಹಿಸುವ ಸಲುವಾಗಿಯೇ ಯಾವನು ಯದುಕುಲದಲ್ಲಿ ಅವತರಿಸಿದನೋ ಅಂತಹ ಪ್ರಭುವಾದ ಭಗವಾನ್ ಶ್ರೀಕೃಷ್ಣನು ಯುಧಿಷ್ಠಿರನು ಕೇಳಿದ ಪ್ರಶ್ನೆಯಿಂದ ಪರಮಪ್ರೀತನಾಗಿ, ಉತ್ತರವನ್ನು ಕೇಳಬೇಕೆಂದು ತವಕಿಸುತ್ತಿದ್ದ ಧರ್ಮರಾಜನಿಗೆ ಹೇಳಿದನು :

**ಯಸ್ಯಾಹಮನುಗೃಹ್ಣಾಮಿ ಹರಿಷ್ಯೇ ತದ್ಧನಂ ಶನೈಃ ।**
**ತತೋಽಧನಂ ತ್ಯಜನ್ತ್ಯಸ್ಯ ಸ್ವಜನಾ ದುಃಖದುಃಖಿತಮ್ ॥೮॥**

“ಯುಧಿಷ್ಠಿರ! ನಾನು ಯಾವನಿಗೆ ಅನುಗ್ರಹಿಸಲು ಬಯಸುವೆನೋ ಅವನ ಐಶ್ವರ್ಯವೆಲ್ಲವನ್ನೂ ಮೆಲ್ಲ-ಮೆಲ್ಲನೆ ಅಪಹರಿಸುತ್ತೇನೆ. ದುಃಖದ ಮೇಲೆ ದುಃಖವನ್ನನುಭವಿಸುವ, ಧನಹೀನನಾದ ಆ ನನ್ನ ಮನುಷ್ಯನನ್ನು ಅವನ ಹೆಂಡತಿ-ಮಕ್ಕಳೂ, ನೆಂಟರಿಷ್ಟರೂ ಪರಿತ್ಯಜಿಸುತ್ತಾರೆ.

**ಸ ಯದಾ ವಿತಥೋದ್ಯೋಗೋ ನಿರ್ವಿಣ್ಣಃ ಸ್ಯಾದ್ಧನೇಹಯಾ ।**
**ಮತ್ಪರೈಃ ಕೃತಮೈತ್ರಸ್ಯ ಕರಿಷ್ಯೇ ಮದನುಗ್ರಹಮ್ ॥೯॥**

ಅವನು ಪುನಃ ಧನಸಂಪಾದನೆಗಾಗಿ ಹಲವಾರು ವಿಧಗಳಲ್ಲಿ ಪ್ರಯತ್ನಿಸಿದರೂ ಅವನ ಅಂತಹ ಪ್ರಯತ್ನಗಳೆಲ್ಲವನ್ನೂ ನಾನು ವಿಫಲಗೊಳಿಸುತ್ತೇನೆ. ಹಣಸಂಪಾದನೆಗಾಗಿ ಹಲವಾರು ಬಾರಿ ನಾನಾಪ್ರಕಾರವಾಗಿ ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾಗುವುದರಿಂದ ಅವನ ಮನಸ್ಸು ಧನದ ಕಾಮನೆಯಿಂದಲೇ ವಿರಕ್ತವಾಗಿಬಿಡುತ್ತದೆ. ಧನದ ಮೇಲಿನ ಆಸೆಯು ದುಃಖಕ್ಕೆ ಕಾರಣವಾಗುವುದೆಂದು ಅವನ ಮನಸ್ಸು ನಿಶ್ಚಯಿಸುತ್ತದೆ. ಅನಂತರ ಅವನು ನನ್ನ ಭಕ್ತರೊಡನೆ ಮೈತ್ರಿಯನ್ನು ಬೆಳೆಸುತ್ತಾನೆ. ನನ್ನ ಭಕ್ತರೊಡನೆ ಮೈತ್ರಿಯನ್ನು ಬೆಳೆಸಿ ಸಂಸ್ಕೃತನಾಗಿ ತನ್ನ ಮನಸ್ಸನ್ನು ಸಂಪೂರ್ಣವಾಗಿ ನನ್ನ ಕಡೆಗೆ ತಿರುಗಿಸಿದಾಗ ನಾನು ಅವನನ್ನು ಅನುಗ್ರಹಿಸುತ್ತೇನೆ.

**ತದ್ಬ್ರಹ್ಮ ಪರಮಂ ಸೂಕ್ಷ್ಮಂ ಚಿನ್ಮಾತ್ರಂ ಸದನನ್ತಕಮ್ ।**
**ಅತೋ ಮಾಂ ಸುದುರಾರಾಧ್ಯಂ ಹಿತ್ವಾನ್ಯಾನ್ ಭಜತೇ ಜನಃ ॥೧೦॥**

ನನ್ನ ಕೃಪೆಯಿಂದಾಗಿ ಆ ನನ್ನ ಭಕ್ತನು ದಿವ್ಯವಾದ ಪರಮಸೂಕ್ಷ್ಮವಾದ, ಅನಂತವಾದ, ಸಚ್ಚಿದಾನಂದಪರಬ್ರಹ್ಮಸ್ವರೂಪವನ್ನು ಕಂಡುಕೊಳ್ಳುತ್ತಾನೆ. ಹೀಗೆ ನನ್ನ ಅನುಗ್ರಹವೂ ಮತ್ತು ನನ್ನ ಆರಾಧನೆಯೂ ಸಾಮಾನ್ಯ ಮನುಷ್ಯರಿಗೆ ಅತ್ಯಂತಕಠಿಣವಾಗಿ ಕಾಣುತ್ತದೆ. ಆದುದರಿಂದಲೇ ಅಂತಹ ವರೆಲ್ಲರೂ ನನ್ನನ್ನು ಬಿಟ್ಟು ಅನ್ಯದೇವತೆಗಳನ್ನು ಆರಾಧಿಸುತ್ತಾರೆ.

**ತತಸ್ತ ಆಶುತೋಷೇಭ್ಯೋ ಲಬ್ಧರಾಜ್ಯಶ್ರಿಯೋದ್ಧತಾಃ ।**
**ಮತ್ತಾಃ ಪ್ರಮತ್ತಾ ವರದಾನ್ ವಿಸ್ಮರನ್ತ್ಯವಜಾನತೇ ॥೧೧॥**

ಇತರ ದೇವತೆಗಳು ತಮ್ಮ ಭಕ್ತರ ವಿಷಯದಲ್ಲಿ ಬಹಳ ಬೇಗ ಪ್ರಸನ್ನ ರಾಗಿಬಿಡುತ್ತಾರೆ. ಇಂತಹ ಅಶುತೋಷರಾದ ದೇವತೆಗಳಿಂದ ಸಾಮ್ರಾಜ್ಯ, ಐಶ್ವರ್ಯ, ವಸ್ತು-ವಾಹನಾದಿಗಳೆಲ್ಲವನ್ನೂ ಪಡೆದುಕೊಂಡು ಮನುಷ್ಯರು ಸ್ವೇಚಾಚ್ಛಾರಿಗಳೂ, ಉನ್ಮತ್ತರೂ, ಮದಾಂಧರೂ ಆಗಿಬಿಡುತ್ತಾರೆ. ಕೆಲವು ಸಂದರ್ಭಗಳಲ್ಲಿ ತಮಗೆ ವರವನ್ನು ದಯಪಾಲಿಸಿದ ದೇವತೆಗಳನ್ನೇ ಮರೆತುಬಿಡುತ್ತಾರೆ. ತಿರಸ್ಕರಿಸಲೂ ಹೇಸುವುದಿಲ್ಲ."

ಶ್ರೀಶುಕಮುನಿಗಳು ಹೇಳುತ್ತಾರೆ :

**ಶಾಪಪ್ರಸಾದಯೋರೀಶಾ ಬ್ರಹ್ಮವಿಷ್ಣುಶಿವಾದಯಃ ।**
**ಸದ್ಯಃ ಶಾಪಪ್ರಸಾದೋಽಙ್ಗ ಶಿವೋ ಬ್ರಹ್ಮಾ ನ ಚಾಚ್ಯುತಃ ॥೧೨॥**

"ಪರೀಕ್ಷಿತಮಹಾರಾಜ! ಬ್ರಹ್ಮ-ವಿಷ್ಣು-ಮಹೇಶ್ವರರು ಶಾಪಾನು ಗ್ರಹಗಳೆರಡರಲ್ಲೂ ಸಮರ್ಥರಾಗಿರುತ್ತಾರೆ. ಆದರೆ ಆ ಮೂವರಲ್ಲಿ ಬ್ರಹ್ಮ ಮತ್ತು ಶಿವರು ಆಶುತೋಷರು. ಬಹಳ ಬೇಗ ಪ್ರಸನ್ನರಾಗಿ ಬಿಡುತ್ತಾರೆ. ವರಗಳನ್ನು ಕೊಟ್ಟುಬಿಡುತ್ತಾರೆ. ಅಂತೆಯೇ ಶೀಘ್ರಕೋಪಿಗಳು. ಬಹಳ ಬೇಗ ಕೋಪಗೊಂಡು ಶಾಪವನ್ನೂ ಕೊಟ್ಟುಬಿಡುತ್ತಾರೆ. ಆದರೆ ವಿಷ್ಣುವು ಹಾಗಲ್ಲ. ಬೇಗ ಒಲಿಯುವುದೂ ಇಲ್ಲ ; ಬಹಳ ಬೇಗ ಮುನಿಯುವುದೂ ಇಲ್ಲ. ಈ ವಿಷಯದಲ್ಲಿ ಮಹಾತ್ಮರು ಪುರಾತನವಾದ ಇತಿಹಾಸವೊಂದನ್ನು ಉದಾಹರಿಸುತ್ತಾರೆ.

ಹಿಂದೊಮ್ಮೆ ಶಂಕರನು ವೃಕಾಸುರನೆಂಬ ದುಷ್ಟರಾಕ್ಷಸನಿಗೆ ಅವಸರದಿಂದ ವರವನ್ನು ಕೊಟ್ಟು ತಾನೇ ಕಷ್ಟದಲ್ಲಿ ಸಿಕ್ಕಿಹಾಕಿಕೊಂಡನು. ಈ ಕಥೆಯನ್ನೇ ವಿವರಿಸಿ ಹೇಳುವೆನು ; ಕೇಳು :

ದುಷ್ಟಬುದ್ಧಿಯವನಾದ ವೃಕಾಸುರನೆಂಬುವನು ಶಕುನಿಯ ಮಗನು. ಒಮ್ಮೆ ಅವನು ದೇಶಾಂತರಕ್ಕೆ ಪ್ರಯಾಣಮಾಡುತ್ತಿದ್ದಾಗ ಹಾದಿಯಲ್ಲಿ ಸಿಕ್ಕಿದ ದೇವರ್ಷಿಗಳಾದ ನಾರದರನ್ನು ಕಂಡು ಯಥೋಚಿತವಾಗಿ ಅವರನ್ನು ಸತ್ಕರಿಸಿ ಪ್ರಶ್ನಿಸಿದನು :

"ಮಹಾಮುನಿಗಳೇ! ಬ್ರಹ್ಮ-ವಿಷ್ಣು-ಮಹೇಶ್ವರರಲ್ಲಿ ಭಕ್ತರ ಪ್ರಾರ್ಥನೆಗೆ ಬಹಳ ಬೇಗ ಪ್ರಸನ್ನರಾಗಿ ವರವನ್ನು ಕೊಡುವವರು ಯಾರು? ಈ ರಹಸ್ಯವನ್ನು ನನಗೆ ದಯಮಾಡಿ ಹೇಳಿರಿ."

ಇದಕ್ಕೆ ಉತ್ತರವಾಗಿ ನಾರದರು ಹೇಳುತ್ತಾರೆ :

"ವೃಕಾಸುರ! ನಿನ್ನ ಇಷ್ಟಾರ್ಥವು ಒಡನೆಯೇ ಕೈಗೂಡಬೇಕಾದರೆ ನೀನು ಗಿರೀಶನಾದ ಶ್ರೀಶಂಕರನನ್ನು ಆರಾಧಿಸು. ಅವನು ಬಹಳ ಬೇಗ ಒಲಿಯುತ್ತಾನೆ ಮತ್ತು ನಿನ್ನ ಮನೋರಥವು ಬಹಳ ಬೇಗ ಕೈಗೂಡುತ್ತದೆ. ಕಾರುಣಿಕನಾದ ಶಿವನು ಅಲ್ಪವಾದ ಗುಣದಿಂದಲೇ (ಪ್ರಾರ್ಥನೆಯಿಂದಲೇ) ಶೀಘ್ರವಾಗಿ ಪ್ರಸನ್ನನಾಗುತ್ತಾನೆ. ಅಂತೆಯೇ ಅವನು ಅಲ್ಪವಾದ ಅಪರಾಧ ಮಾಡಿದರೂ ಕುಪಿತನಾಗಿ ಶಪಿಸಿಬಿಡುತ್ತಾನೆ.

**ದಶಾಸ್ಯಬಾಣಯೋಸ್ತುಷ್ಟಃ ಸ್ತುವತೋರ್ವನ್ದಿನೋರಿವ ।**
**ಐಶ್ವರ್ಯಮತುಲಂ ದತ್ತ್ವಾ ತತ ಆಪ ಸುಸಙ್ಕಟಮ್ ॥೧೬॥**

ವಂದಿ-ಮಾಗಧರು ರಾಜನನ್ನು ಸಾಂಪ್ರದಾಯಿಕವಾಗಿ ಸ್ತೋತ್ರ ಮಾಡುವಂತೆ ರಾವಣ-ಬಾಣರು ಶಿವನನ್ನು ಸ್ತೋತ್ರಮಾಡಿದರು. ಇಷ್ಟರಿಂದಲೇ ಶಿವನು ಸಂತುಷ್ಟನಾಗಿ ಅವರಿಗೆ ಅಪಾರವಾದ ಐಶ್ವರ್ಯವನ್ನು ಅನುಗ್ರಹಿಸಿಕೊಟ್ಟನು. ಇದರ ಪರಿಣಾಮವಾಗಿ ಶಿವನು ಕಷ್ಟದಲ್ಲಿ ಸಿಕ್ಕಿಕೊಳ್ಳಬೇಕಾಯಿತು. ದುಷ್ಟನಾದ ರಾವಣನು ಕೈಲಾಸವನ್ನೇ ಎತ್ತಲು ಹೋದನು. ಬಾಣಾಸುರನ ನಗರದ ರಕ್ಷಣೆಯ ಹೊಣೆಯನ್ನು ಶಿವನು ಹೊರಬೇಕಾಯಿತು."

ನಾರದಮಹರ್ಷಿಗಳ ಆದೇಶದಂತೆ ವೃಕಾಸುರನು ಶಿವನನ್ನು ಆರಾಧಿಸಲು ಕೇದಾರಕ್ಷೇತ್ರಕ್ಕೆ ಹೋದನು. ಅಲ್ಲವನು ಅಗ್ನಿಯನ್ನು ಪ್ರತಿಷ್ಠಾಪಿಸಿ, ಅಗ್ನಿಯನ್ನೇ ಭಗವಂತನಾದ ಶಂಕರನ ಮುಖವೆಂದು ಭಾವಿಸಿಕೊಂಡು, ತನ್ನ ಶರೀರದ ಮಾಂಸಖಂಡಗಳನ್ನು ಕತ್ತರಿಸಿ ಶಿವನ ಮುಖರೂಪವಾಗಿದ್ದ ಅಗ್ನಿಯಲ್ಲಿ ಹೋಮಮಾಡತೊಡಗಿದನು. ಹೀಗೆ ಆರು ದಿವಸಗಳು ಶಿವೋಪಾಸನೆಯನ್ನು ಮಾಡಿದರೂ ವೃಕಾಸುರನಿಗೆ ಶಿವನ ದರ್ಶನವಾಗಲಿಲ್ಲ. ಇದರಿಂದಾಗಿ ಮಹಾಸುರನು ಅತ್ಯಂತದುಃಖಿತನಾದನು. ಏಳನೆಯ ದಿವಸ ವೃಕಾಸುರನು ಕೇದಾರತೀರ್ಥದಲ್ಲಿ ಸ್ನಾನಮಾಡಿ ನೆನೆದುಹೋಗಿದ್ದ ತಲೆಗೂದಲುಗಳಿಂದ ಕೂಡಿದ್ದ ತಲೆಯನ್ನೇ ಕಡಿದು ಶಿವನ ಮುಖ ರೂಪವಾಗಿದ್ದ ಅಗ್ನಿಯಲ್ಲಿ ಹೋಮಮಾಡಲು ಉದ್ಯುಕ್ತನಾದನು. ದುಃಖಿತನಾಗಿ ಆತ್ಮಹತ್ಯೆಮಾಡಿಕೊಳ್ಳಲು ಹೊರಟಿರುವವನನ್ನು ದಯಾಳುಗಳಾದ ಜನರು ತಡೆ ಹಿಡಿಯುವಂತೆ, ಪರಮದಯಾಳುವಾದ ಶಂಕರನು ವೃಕಾಸುರನು ತನ್ನ ತಲೆಯನ್ನು ಕಡಿದು ಅಗ್ನಿಯಲ್ಲಿ ಹೋಮಮಾಡುವ ಮೊದಲೇ, ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸಿನೊಡನೆ ಅಗ್ನಿಕುಂಡದಿಂದ ಹೊರಬಂದು ತನ್ನೆರಡು ಕೈಗಳಿಂದಲೂ ವೃಕಾಸುರನ ಎರಡು ಕೈಗಳನ್ನೂ ಹಿಡಿದು ತಲೆಯನ್ನು ಕತ್ತರಿಸಿಕೊಳ್ಳಲಾಗದಂತೆ ಮಾಡಿದನು. ಶಿವನು ಸ್ಪರ್ಶಿಸುತ್ತಲೇ ಛಿದ್ರ-ವಿಚ್ಛಿದ್ರವಾಗಿದ್ದ ವೃಕಾಸುರನ ಶರೀರವು ಪುನಃ ಮೊದಲಿನಂತೆ ರಕ್ತ-ಮಾಂಸಗಳಿಂದ ತುಂಬಿಕೊಂಡಿತು. ವೃಕಾಸುರನು ಹೆಚ್ಚಿನ ತೇಜಸ್ಸಿನಿಂದ ಬೆಳಗಿದನು.

ಹೀಗೆ ಪ್ರಸನ್ನನಾದ ಶಿವನು ವೃಕಾಸುರನಿಗೆ ಹೇಳಿದನು :

"ಮಗು! ವೃಕಾಸುರ! ಸಾಕು ನಿಲ್ಲಿಸು ನಿನ್ನ ಈ ಕೃತ್ಯವನ್ನು. ವರವನ್ನು ಕೇಳು. ನಿನಗೆ ಬೇಕು ಬೇಕಾದ ವರಗಳನ್ನು ನಾನು ಕೊಡುತ್ತೇನೆ. ಶರಣಾಗತರಾದ ನನ್ನ ಭಕ್ತರ ವಿಷಯದಲ್ಲಿ ನಾನು ಕೇವಲ ಅವರು ಮಾಡುವ ಜಲಪ್ರದಾನದಿಂದಲೇ ಸಂತುಷ್ಟನಾಗುತ್ತೇನೆ. ಹೀಗಿರುವಾಗ ನೀನು ನಿನ್ನ ಶರೀರವನ್ನೇ ವಿನಾಶಗೊಳಿಸಲು ವ್ಯರ್ಥವಾಗಿ ಪ್ರಯತ್ನಿಸುತ್ತಿರುವೆಯೇಕೆ?"

ಪರೀಕ್ಷಿತ! ಪರಮದಯಾಳುವಾದ ಶಿವನು ಹೀಗೆ ಹೇಳಲು ಪರಮ ಪಾಪಿಷ್ಠನಾದ ವೃಕಾಸುರನು ಸಮಸ್ತಪ್ರಾಣಿಗಳಿಗೂ ಭಯವನ್ನುಂಟು ಮಾಡುವ ವರವನ್ನು ಕೇಳಿಕೊಂಡನು.

**ಯಸ್ಯ ಯಸ್ಯ ಕರಂ ಶೀರ್ಷ್ಣಿ ಧಾಸ್ಯೇ ಸ ಮ್ರಿಯತಾಮಿತಿ ॥೨೧॥**

"ಮಹಾದೇವನೇ! ನಾನು ಯಾವ-ಯಾವನ ತಲೆಯ ಮೇಲೆ ನನ್ನ ಕೈಯ್ಯನ್ನಿಡುವೆನೋ ಅವನು ಒಡನೆಯೇ ಮರಣಹೊಂದಬೇಕು."

ತನ್ನ ಭಕ್ತನು ಕೇಳಿದ ಅಂತಹ ಭಯಂಕರವಾದ ವರವನ್ನು ಕೇಳಿ ಶಿವನು ಮನಗುಂದಿದವನಂತಾದನು. ಕೊಡಲು ಮನಸ್ಸಿರಲಿಲ್ಲ. ಆದರೂ ಭಕ್ತನು ಬೇಡಿದ ವರವನ್ನು ಕೊಡಲೇಬೇಕಾಗಿದೆ. ಶಿವನು ನಸುನಗುತ್ತಾ ಸರ್ಪಕ್ಕೆ ಅಮೃತವನ್ನುಣ್ಣಿಸಿದಂತೆ ವೃಕಾಸುರನಿಗೆ ಅವನು ಬೇಡಿದ ವರವನ್ನು 'ಓಂ'–ಎಂಬ ಪ್ರಣವೋಚ್ಚಾರಣೆಯೊಡನೆ ಕೊಟ್ಟುಬಿಟ್ಟನು.

ಶ್ರೀಶಂಕರನಿಂದ ಅಂತಹ ಸರ್ವನಾಶಕವಾದ ವರವನ್ನು ಪಡೆದ ದುಷ್ಟವಾದ ವೃಕಾಸುರನಿಗೆ ಮೊದಲನೆಯದಾಗಿ ಶಂಕರನ ಪ್ರೇಯಸಿಯಾದ ಪಾರ್ವತಿಯನ್ನೇ ಅಪಹರಿಸಿಕೊಂಡು ಹೋಗಬೇಕೆನ್ನುವ ಮನಸ್ಸಾಯಿತು. 'ಶಿವನನ್ನು ವಿನಾಶಗೊಳಿಸಿಯೇ ಪಾರ್ವತಿಯನ್ನು ಅಪಹರಿಸಬೇಕು. ವರ ಪಡೆದಿರುವ ತನಗೆ ಶಿವನನ್ನು ವಿನಾಶಗೊಳಿಸುವುದು ಕಷ್ಟವಾದ ಕೆಲಸವೇನಲ್ಲ. ಅವನು ಕೊಟ್ಟ ವರದ ಸತ್ಯತೆಯನ್ನು ಪರೀಕ್ಷಿಸಿದಂತೆಯೂ ಆಗುತ್ತದೆ'–ಹೀಗೆಲ್ಲಾ ಯೋಚಿಸಿ ದುಷ್ಟನಾದ, ಕ್ರೂರಿಯಾದ ವೃಕಾಸುರನು ಶಿವನ ತಲೆಯ ಮೇಲೆಯೇ ಕೈಯಿಡಲು ಹೊರಟನು. ಶಂಕರನು ತಾನಿತ್ತ ವರದಿಂದಲೇ ಭಯಭೀತನಾದನು. ಅಸುರನು ತನ್ನ ಕೈಯನ್ನು ಪರೀಕ್ಷಾರ್ಥ ವಾಗಿ ಶಿವನ ತಲೆಯ ಮೇಲಿಡಲು ಮುಂದಾದನು. ಶಿವನು ಭಯದಿಂದ ನಡುಗುತ್ತಾ ಓಡಲಾರಂಭಿಸಿದನು. ವೃಕಾಸುರನೂ ಅವನನ್ನು ಹಿಂಬಾಲಿಸಿ ದನು. ಶಿವನು ಭೂಮಂಡಲದಲ್ಲೆಲ್ಲಾ ಓಡಾಡಿದನು. ಸ್ವರ್ಗಲೋಕದಲ್ಲೂ ಸುತ್ತಾಡಿದನು. ದಿಗಂತಗಳವರೆಗೂ ಧಾವಿಸಿದನು. ಶಿವನು ಎಲ್ಲಿಗೇ ಹೋದರೂ ಅಸುರನು ಅವನನ್ನು ಹಿಂಬಾಲಿಸಿಕೊಂಡೇ ಹೋಗುತ್ತಿದ್ದನು. ಅನಂತರ ಶಿವನು ಉತ್ತರದಿಕ್ಕಿನ ಕಡೆಗೆ ಓಡಲಾರಂಭಿಸಿದನು. ಶಿವನಿಗೆ

ಪ್ರಾಪ್ತವಾಗಿರುವ ಈ ಸಂಕಟಕ್ಕೆ ಪರಿಹಾರವೇನೆಂಬುದು ಯಾವ ದೇವತೆಗಳಿಗೂ ತಿಳಿಯಲಿಲ್ಲ. ಆದುದರಿಂದ ಶಿವನು ಭಯಗೊಂಡು ಓಡುತ್ತಿರುವುದನ್ನು ನೋಡಿದರೂ ದೇವತೆಗಳು ಅಸಹಾಯಕರಾಗಿ ಸುಮ್ಮನೆ ನಿಲ್ಲಬೇಕಾಯಿತು. ಶಿವನು ಓಡೋಡುತ್ತಾ ಇಂದ್ರಲೋಕ, ಬ್ರಹ್ಮಲೋಕಗಳೆಲ್ಲವನ್ನೂ ದಾಟಿ ಕಡೆಗೆ ಪ್ರಾಕೃತಿಕವಾದ ಅಂಧಕಾರದಿಂದ ಆಚೆಗೆ ಇರುವ ಅತ್ಯಂತ ಪ್ರಕಾಶಮಾನವಾದ ವೈಕುಂಠಲೋಕಕ್ಕೆ ಹೋದನು. ವೃಕಾಸುರನು ಅಲ್ಲಿಗೂ ಶಿವನನ್ನು ಹಿಂಬಾಲಿಸಿಯೇ ಹೋದನು.

**ಯತ್ರ ನಾರಾಯಣಃ ಸಾಕ್ಷಾನ್ನ್ಯಾಸಿನಾಂ ಪರಮಾ ಗತಿಃ ।**
**ಶಾನ್ತಾನಾಂ ನ್ಯಸ್ತದಣ್ಡಾನಾಂ ಯತೋ ನಾವರ್ತತೇ ಗತಃ ॥೨೬॥**

ಸಮಸ್ತಜಗತ್ತಿಗೂ ಅಭಯದಾನಮಾಡುತ್ತಾ, ಶಾಂತಮನಸ್ಕರಾಗಿರುವ ಸಂನ್ಯಾಸಿಗಳಿಗೆ ಪರಮಾಶ್ರಯನಾದ ಸಾಕ್ಷಾತ್ ಶ್ರೀಮನ್ನಾರಾಯಣನು ಎಲ್ಲಿ ವಾಸಮಾಡುವನೋ ಮತ್ತು ಎಲ್ಲಿಗೆ ಹೋದನಂತರ ಜೀವನು ಪುನಃ ಜೀವಲೋಕಕ್ಕೆ ಹಿಂದಿರುಗಿ ಬರುವುದಿಲ್ಲವೋ–ಅಂತಹ ಪರಮಪವಿತ್ರವಾದ ವೈಕುಂಠಧಾಮಕ್ಕೆ ಭಯಗ್ರಸ್ತನಾಗಿದ್ದ ಶಿವನು ಧಾವಿಸಿದನು. ತಾನೇ ಕೊಟ್ಟ ವರದ ಪರಿಣಾಮವಾಗಿ ಶಂಕರನು ಕಷ್ಟದಲ್ಲಿ ಸಿಕ್ಕಿಹಾಕಿಕೊಂಡಿರುವುದನ್ನು ವೈಕುಂಠವಾಸಿಯಾದ ಶ್ರೀನಾರಾಯಣನು ನೋಡಿದನು. ಮುಕ್ಕಣ್ಣನ ಕಷ್ಟವನ್ನು ಪರಿಹರಿಸಲು ನಿಶ್ಚಯಿಸಿ ಶ್ರೀಹರಿಯು ಒಡನೆಯೇ ಬಾಲಬ್ರಹ್ಮಚಾರಿಯ ವೇಷವನ್ನು ಧರಿಸಿದನು. ಶ್ರೀಹರಿಯು ಆ ಸಮಯದಲ್ಲಿ ಸೊಂಟಕ್ಕೆ ಮೌಂಜಿಯನ್ನು ಬಿಗಿದುಕೊಂಡಿದ್ದನು. ಕೃಷ್ಣಾಜಿನವನ್ನು ಹೊದೆದಿದ್ದನು. ದಂಡವನ್ನು ಹಿಡಿದಿದ್ದನು. ಜಪಮಾಲೆಯನ್ನು ಕೊರಳಲ್ಲಿ ಧರಿಸಿ ಅಗ್ನಿಯ ತೇಜಸ್ಸಿನಂತೆ ದಿವ್ಯವಾದ ಮತ್ತು ಅನುಪಮವಾದ ತೇಜಸ್ಸಿನಿಂದ ಬೆಳಗುತ್ತಿದ್ದನು. ಸಮಿತ್ಕುಶಪಾಣಿಯಾಗಿದ್ದ ಈ ಬ್ರಹ್ಮಚಾರಿಯು ವೃಕಾಸುರನನ್ನು ನೋಡಿ ಅತ್ಯಂತ ವಿನೀತನಾಗಿ ತಲೆಬಾಗಿ ನಮಸ್ಕರಿಸಿ ಆತನಿಗೆ ಹೇಳಿದನು :

"ಶಕುನಿಪುತ್ರನೇ! ವೃಕಾಸುರ! ನೀನು ಬಹಳವಾಗಿ ಬಳಲಿರುವವನಂತೆ ಕಾಣುತ್ತಿರುವೆ. ಬಹಳದೂರದಿಂದ ಓಡೋಡುತ್ತಾ ಇಲ್ಲಿಗೆ ಬಂದಿರುವೆಯೇನು? ಹಾಗೆಯೇ ಕಾಣುತ್ತಿರುವೆ. ಇಲ್ಲಿಯೇ ಸ್ವಲ್ಪ ವಿಶ್ರಾಂತಿಯನ್ನು

ತೆಗೆದುಕೊ. ಈ ದೇಹವೇ ಮನುಷ್ಯನಿಗೆ ಸಮಸ್ತವಾದ ಸುಖೋಪಭೋಗಗಳನ್ನೂ ಒದಗಿಸಿಕೊಡುತ್ತದೆ. ಆದುದರಿಂದ ಅದನ್ನು ಬಳಲಿಸಬಾರದು. ಪ್ರಭುವೇ! ಈ ಸಮಯದಲ್ಲಿ ನೀನು ಏನು ಮಾಡಲು ಇಚ್ಛಿಸಿರುವೆ? ನಾನು ನಿನ್ನ ಆಶಯವನ್ನು ಕೇಳಲು ಯೋಗ್ಯನೆನಿಸಿರುವುದಾದರೆ ಈಗ ನಿನ್ನ ಆಶಯವೇನೆಂಬುದನ್ನು ನನಗೆ ಹೇಳು. ಏಕೆಂದರೆ ಲೋಕದಲ್ಲಿ ಜನರು ಆಪ್ತಪುರುಷರ ಮೂಲಕವಾಗಿಯೇ ಹಲವಾರು ಕ್ಲಿಷ್ಟಕರವಾದ ಕಾರ್ಯಗಳನ್ನೂ ಸಾಧಿಸಿಕೊಂಡಿರುವುದು ಕಂಡುಬರುತ್ತದೆ.”

ಶ್ರೀಶುಕಮುನಿಗಳು ಹೇಳುತ್ತಾರೆ :

“ಪರೀಕ್ಷಿತಮಹಾರಾಜ! ಭಗವಂತನ ಮುಖಾರವಿಂದದಿಂದ ಒಂದೊಂದು ಶಬ್ದವು ಹೊರಹೊರಟಾಗಲೂ ಅಮೃತವೇ ಸುರಿಯುತ್ತಿದೆಯೋ ಎಂಬಂತೆ ಆಹ್ಲಾದಕರವಾಗಿದ್ದಿತು. ಭಗವಂತನ ಅಮೃತಧಾರೆಗೆ ಸಮಾನವಾದ ಮಾತುಗಳನ್ನು ಕೇಳುತ್ತಲೇ ವೃಕಾಸುರನ ಆಯಾಸವು ಪರಿಹಾರವಾಯಿತು. ಇದರಿಂದಾಗಿ ವೃಕಾಸುರನಿಗೆ ಭಗವಂತನ ವಿಷಯದಲ್ಲಿ ಹೆಚ್ಚಿನ ವಿಶ್ವಾಸವೂ ಮೂಡಿಬಂದಿತು. ಆಯಾಸವು ಪರಿಹಾರವಾದನಂತರ ವೃಕಾಸುರನು ಶ್ರೀಹರಿಗೆ–ತಾನು ತಪಸ್ಸು ಮಾಡಿದ್ದು ; ಶಿವನು ಪ್ರತ್ಯಕ್ಷನಾಗಿ ವರವನ್ನು ಕೊಟ್ಟುದು ; ವರದ ಸತ್ತ್ವವನ್ನು ಪರೀಕ್ಷಿಸಲೋಸುಗ ಶಂಕರನನ್ನು ಹಿಂಬಾಲಿಸಿ ಲೋಕ-ಲೋಕಾಂತರಗಳಲ್ಲಿಯೂ ಅಲೆದಲೆದು ಕಡೆಗೆ ವೈಕುಂಠಕ್ಕೆ ಬಂದುದು–ಈ ಎಲ್ಲ ಸಮಾಚಾರಗಳನ್ನೂ ಅನುಕ್ರಮವಾಗಿ ವೃಕಾಸುರನು ಶ್ರೀಹರಿಗೆ ಹೇಳಿದನು. ಸರ್ವಜ್ಞನಾದ ಶ್ರೀಹರಿಗೆ ಎಲ್ಲವೂ ತಿಳಿದಿದ್ದರೂ ತಿಳಿಯದವನಂತೆ ಎಲ್ಲವನ್ನೂ ವೃಕಾಸುರನಿಂದ ಕೇಳಿ ತಿಳಿದನಂತರ ಅಸುರನಿಗೆ ಹೇಳಿದನು :

“ಹೀಗೋ ವಿಷಯ! ನನಗಂತೂ ಶಿವನ ಮಾತಿನಲ್ಲಿ ಸ್ವಲ್ಪವೂ ವಿಶ್ವಾಸವಿಲ್ಲ. ದಕ್ಷಪ್ರಜಾಪತಿಯ ಶಾಪದಿಂದ ಪಿಶಾಚಭಾವವನ್ನು ಹೊಂದಿ ಇಂದು ಭೂತ-ಪ್ರೇತ-ಪಿಶಾಚಗಳಿಗೆ ಚಕ್ರವರ್ತಿಯಾಗಿರುವ ಶಿವನ ಮಾತಿನಲ್ಲಿ ವಿಶ್ವಾಸವಿಡಬಹುದೇ? ಈಗಲೂ ನೀನು ಪಿಶಾಚಗಳ ರಾಜನನ್ನು ಜಗದ್ಗುರುವೆಂದೇ ಭಾವಿಸಿ ಅವನ ಮಾತಿನಲ್ಲಿ ವಿಶ್ವಾಸವನ್ನಿಡುವು

ದಾದರೆ ನಿನ್ನ ಕೈಯನ್ನೇ ನಿನ್ನ ತಲೆಯ ಮೇಲಿಟ್ಟುಕೊಂಡು ಅವನು ಕೊಟ್ಟಿರುವ ವರದ ಪ್ರಭಾವವನ್ನು ಪರೀಕ್ಷಿಸಿಯೇ ಬಿಡು. ಅದಕ್ಕಾಗಿ ಇಷ್ಟು ದೂರ ಓಡಿಬರಬೇಕೆ? ದಾನವಶಿರೋಮಣಿಯೇ! ನಾನು ಭಾವಿಸಿರುವಂತೆ ಒಂದು ವೇಳೆ ಶಂಕರನ ಮಾತು ಸುಳ್ಳೇ ಆಗಿಬಿಟ್ಟರೆ ಅಸತ್ಯವಾದಿಯಾದ ಅವನನ್ನು ಒಡನೆಯೇ ಸಂಹರಿಸಿಯೇ ಬಿಡು. ಪುನಃ ಅವನು ಹೀಗೆ ಸುಳ್ಳುಹೇಳಿಕೊಂಡು ತಿರುಗದಂತಾಗಲಿ.''

ಪರೀಕ್ಷಿತ! ಭಗವಂತನ ಇಂತಹ ವಿಚಿತ್ರವಾದ ಮತ್ತು ರಮಣೀಯವಾದ ಮೋಡಿಯ ಮಾತುಗಳನ್ನು ಕೇಳಿ ಭ್ರಾಂತನಾದ, ದುರ್ಬುದ್ಧಿಯವನಾದ ಅಸುರನು ಅಚ್ಚರಿಗೊಂಡನು. ತನ್ನ ತಲೆಯ ಮೇಲೆಯೇ ಕೈಯಿಟ್ಟುಕೊಂಡರೇನಾಗುವುದೆಂಬುದನ್ನು ಕ್ಷಣಮಾತ್ರವೂ ಯೋಚಿಸದೆ, ಶ್ರೀಹರಿಯ ಮೋಡಿಯ ಮಾತುಗಳಿಗೆ ಮರುಳಾಗಿ, ಒಡನೆಯೇ ತನ್ನ ಕೈಯ್ಯನ್ನು ತನ್ನ ತಲೆಯಮೇಲೆ ಇಟ್ಟುಕೊಂಡುಬಿಟ್ಟನು. ಮರುಕ್ಷಣದಲ್ಲಿಯೇ ವೃಕಾಸುರನು ಸಿಡಿಲುಬಡಿದವನಂತೆ ತಲೆಯೊಡೆದು ಗತಪ್ರಾಣನಾಗಿ ನೆಲದಮೇಲೆ ಬಿದ್ದನು. ಆ ಸಮಯದಲ್ಲಿ ಆಕಾಶದಲ್ಲಿ ದೇವತೆಗಳು 'ಜಯ-ಜಯ ನಮೋ-ನಮಃ ಸಾಧು-ಸಾಧು'–ಇವೇ ಮುಂತಾದ ಹರ್ಷೋತ್ಸಾಹದ್ಯೋತಕವಾದ ಘೋಷಣೆಗಳನ್ನು ಮಾಡಿದರು. ಪಾಪಿಷ್ಠನಾದ ವೃಕಾಸುರನು ಹತನಾಗಲಾಗಿ ದೇವರ್ಷಿ-ಪಿತೃ-ಗಂಧರ್ವರು ಬಾಲ ಬ್ರಹ್ಮಚಾರಿಯ ಮೇಲೆ ಪುಷ್ಪಗಳ ಮಳೆಗರೆದರು. ಭಗವಾನ್ ಶಿವನು ಪ್ರಾಣ ಸಂಕಟದಿಂದ ಮುಕ್ತನಾದನು. ಬಳಿಕ ಭಗವಾನ್ ಪುರುಷೋತ್ತಮನು ಭಯದಿಂದ ಮುಕ್ತನಾದ ಶಂಕರನಿಗೆ ಹೇಳಿದನು :

**ಅಹೋ ದೇವ ಮಹಾದೇವ ಪಾಪೋಽಯಂ ಸ್ವೇನ ಪಾಪ್ಮನಾ ॥೩೮॥**

**ಹತಃ ಕೋ ನು ಮಹತ್ಸ್ವೀಶ ಜನ್ತುರ್ವೈ ಕೃತಕಿಲ್ಬಿಷಃ ।**
**ಕ್ಷೇಮೀ ಸ್ಯಾತ್ ಕಿಮು ವಿಶ್ವೇಶೇ ಕೃತಾಗಸ್ಕೋ ಜಗದ್ಗುರೌ ॥೩೯॥**

''ದೇವಾಧಿದೇವನೇ! ಮಹಾದೇವ! ಈ ಪಾಪಿಷ್ಠನು ತಾನು ಮಾಡಿದ ಪಾಪದಿಂದಲೇ ನಾಶವಾಗಿ ಹೋದದ್ದು ಸಂತೋಷದ ವಿಷಯವಾಗಿದೆ. ಪರಮೇಶ್ವರ! ಮಹಾಪುರುಷರ ವಿಷಯದಲ್ಲಿ ಅಪರಾಧವೆಸಗಿ ಕುಶಲಿ

ಯಾಗಿರತಕ್ಕವನು ಯಾವನಿದ್ದಾನೆ? ಅದರಲ್ಲಿಯೂ ಜಗದ್ಗುರುವಾದ ವಿಶ್ವೇಶನಾದ ನಿನ್ನ ವಿಷಯದಲ್ಲಿ ಅಪರಾಧವೆಸಗಿದವನು ಹೇಗೆ ತಾನೇ ಕ್ಷೇಮದಿಂದಿದ್ದಾನು? ಅಂತಹ ಕಡುಪಾಪಿಯು ಕ್ಷಿಪ್ರವಾಗಿ ವಿನಾಶಹೊಂದುವನೇ ಹೊರತು ಬಾಳಿ ಬದುಕಲಾರನು."

**ಯ ಏವಮವ್ಯಾಕೃತಶಕ್ತ್ಯುದನ್ವತಃ-**
**ಪರಸ್ಯ ಸಾಕ್ಷಾತ್ ಪರಮಾತ್ಮನೋ ಹರೇಃ ।**
**ಗಿರಿತ್ರಮೋಕ್ಷಂ ಕಥಯೇಚ್ಛೃಣೋತಿ ವಾ**
**ವಿಮುಚ್ಯತೇ ಸಂಸೃತಿಭಿಸ್ತಥಾರಿಭಿಃ ॥೪೦॥**

ಭಗವಂತನಾದ ಶ್ರೀಹರಿಯು ಅನಂತವಾದ ಶಕ್ತಿಗಳಿಗೂ ಸಮುದ್ರದಂತಿದ್ದಾನೆ. ಅವನ ಒಂದೊಂದು ಶಕ್ತಿಯೂ, ಮಾತು ಮತ್ತು ಮನಸ್ಸಿಗೆ ಅತೀತವಾಗಿದೆ. ಪ್ರಕೃತಿಯಿಂದಲೂ ಅತೀತನಾದ ಪರಮಾತ್ಮನೇ ಅವನಾಗಿದ್ದಾನೆ. ಅಂತಹ ಅಮೇಯಾತ್ಮನಾದ ಪರಮಾತ್ಮನು ಶಿವನನ್ನು ಕಷ್ಟದಿಂದ ಬಿಡಿಸಿದ ಈ ಕಥೆಯನ್ನು ಯಾರು ಹೇಳುತ್ತಾರೆಯೋ ಮತ್ತು ಯಾರು ಕೇಳುತ್ತಾರೆಯೋ ಅವರೆಲ್ಲರೂ ಶತ್ರುಗಳ ಭಯದಿಂದ ಮುಕ್ತರಾಗಿ ಸಂಸಾರ ಬಂಧನದಿಂದಲೂ ಬಿಡುಗಡೆಹೊಂದುತ್ತಾರೆ.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೮ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೮೯ನೆಯ ಅಧ್ಯಾಯ

## ಭೃಗುಮಹರ್ಷಿಯು ತ್ರಿಮೂರ್ತಿಗಳನ್ನೂ ಪರೀಕ್ಷಿಸಿದುದು : ಭಗವಂತನು ಸತ್ತುಹೋಗಿದ್ದ ಬ್ರಾಹ್ಮಣಬಾಲಕನನ್ನು ಕರೆತಂದುದು

**ಶ್ರೀಶುಕಮುನಿಗಳು ಹೇಳುತ್ತಾರೆ :**

**ಸರಸ್ವತ್ಯಾಸ್ತಟೇ ರಾಜನ್ನೃಷಯಃ ಸತ್ರಮಾಸತ ।**
**ವಿತರ್ಕಃ ಸಮಭೂತ್ತೇಷಾಂ ತ್ರಿಷ್ವಧೀಶೇಷು ಕೋ ಮಹಾನ್ ॥೧॥**

"ಪರೀಕ್ಷಿತಮಹಾರಾಜ! ಒಮ್ಮೆ ಪವಿತ್ರವಾದ ಸರಸ್ವತೀನದಿಯ

ತೀರದಲ್ಲಿ ಒಂದು ಮಹಾಯಜ್ಞವನ್ನು ಪ್ರಾರಂಭಿಸುವ ಸಲುವಾಗಿ ಮಹಾ-ಮಹಾ ಋಷಿ-ಮುನಿಗಳು ಸೇರಿದರು. ಅವರೆಲ್ಲರೂ ಸೇರಿ ಹಲವಾರು ಶಾಸ್ತ್ರ ನಿರ್ಣಯಗಳನ್ನು ಕುರಿತು ಚರ್ಚಿಸುತ್ತಿದ್ದಾಗ ಬ್ರಹ್ಮಾ-ವಿಷ್ಣು-ರುದ್ರರಲ್ಲಿ ಯಾರು ಶ್ರೇಷ್ಠರೆಂಬುದರ ವಿಷಯವಾಗಿಯೂ ಅವರಲ್ಲಿ ಪರಸ್ಪರ ವಿವಾದ ವುಂಟಾಯಿತು.

ಬ್ರಹ್ಮಾ-ವಿಷ್ಣು-ಶಿವರಲ್ಲಿ ಯಾರು ಶ್ರೇಷ್ಠರೆಂಬುದನ್ನು ತಿಳಿದುಬರುವ ಸಲುವಾಗಿ ಋಷಿ-ಮುನಿಗಳೆಲ್ಲರೂ ಸೇರಿ ಬ್ರಹ್ಮಮಾನಸಪುತ್ರನಾದ ಭೃಗು ಮಹರ್ಷಿಯನ್ನು ಕಳುಹಿಸಿಕೊಟ್ಟರು. ಭೃಗುಮಹರ್ಷಿಯು ಬ್ರಹ್ಮನನ್ನು ಪರೀಕ್ಷಿಸುವ ಸಲುವಾಗಿ ಮೊದಲು ಬ್ರಹ್ಮನ ಸಭೆಗೆ ಹೋದನು. ಬ್ರಹ್ಮನ ಸತ್ತ್ವವನ್ನು ಪರೀಕ್ಷಿಸುವ ಸಲುವಾಗಿ ಬ್ರಹ್ಮನ ಸಭೆಗೆ ಹೋದ ಭೃಗುವು ಬ್ರಹ್ಮನಿಗೆ ನಮಸ್ಕರಿಸಲೂ ಇಲ್ಲ ; ಅವನನ್ನು ಸ್ತುತಿಮಾಡಲೂ ಇಲ್ಲ. ತನ್ನ ತೇಜಸ್ಸಿನಿಂದ ಜ್ವಲಿಸುತ್ತಿದ್ದ ಬ್ರಹ್ಮನು ಭೃಗುವಿನ ಈ ವರ್ತನೆಯಿಂದ ಆತನ ವಿಷಯದಲ್ಲಿ ಕೋಪದಿಂದ ಕಿಡಿ-ಕಿಡಿಯಾದನು. ಆದರೆ ತನ್ನ ಮಗನಾದ ಭೃಗುವೇ ತನ್ನ ಸಭೆಗೆ ಬಂದಿರುವನೆಂಬುದನ್ನು ಸ್ಮರಿಸಿ ಮನಸ್ಸಿನಲ್ಲಿ ಹುಟ್ಟಿ ಕೊಂಡಿದ್ದ ಕ್ರೋಧಾಗ್ನಿಯನ್ನು–ಅರಣಿಮಂಥನದಿಂದ ಹುಟ್ಟಿದ ಅಗ್ನಿಯನ್ನು ನೀರಿನ ಮೂಲಕ ಆರಿಸುವಂತೆ–ವಿವೇಕಬುದ್ಧಿಯ ಮೂಲಕವಾಗಿ ಮನಸ್ಸಿನಲ್ಲಿಯೇ ಅಡಗಿಸಿಕೊಂಡುಬಿಟ್ಟನು. ಹೀಗೆ ಬ್ರಹ್ಮನನ್ನು ಪರೀಕ್ಷಿಸಿದ ನಂತರ ಭೃಗುಮಹರ್ಷಿಯು ಕೈಲಾಸಕ್ಕೆ ಶಿವನನ್ನು ಪರೀಕ್ಷಿಸುವ ಸಲುವಾಗಿ ಹೋದನು. ದೇವಾಧಿದೇವನಾದ ಭಗವಾನ್ ಶಂಕರನು ತನ್ನ ಸಹೋದರನಾದ ಭೃಗುಮಹರ್ಷಿಯು ತನ್ನ ಬಳಿಗೆ ಬಂದುದನ್ನು ನೋಡಿದೊಡನೆಯೇ ಆನಂದಭರಿತನಾಗಿ ಮೇಲೆದ್ದು ಅವನನ್ನು ಆದರದಿಂದ ಆಲಿಂಗನ ಮಾಡಿಕೊಳ್ಳಲು ತನ್ನ ಎರಡು ಭುಜಗಳನ್ನೂ ಮುಂದಕ್ಕೆ ಚಾಚಿದನು. ಭೃಗುಮಹರ್ಷಿಯು ಶಿವನ ತೋಳುಗಳ ತೆಕ್ಕೆಗೆ ಸಿಕ್ಕದೆ ಹಿಂದಕ್ಕೆ ಸರಿದು ನಿಂತ–"ನೀನು ಲೋಕಮರ್ಯಾದೆಯನ್ನೂ ಧರ್ಮಮರ್ಯಾದೆಯನ್ನೂ ಮೀರಿ ನಡೆದುಕೊಳ್ಳುತ್ತಿರುವೆ. ಆದುದರಿಂದ ನಿನ್ನ ಪ್ರೇಮಾಲಿಂಗನವು ನನಗೆ ಸಹ್ಯವಲ್ಲ"–ಎಂದು ಗದರಿಸಿ ಹೇಳಿದನು. ಶಿವನಿಗೆ ಭೃಗುವಿನ ನಿಂದನೆಯ ಮಾತನ್ನು ತಡೆದುಕೊಳ್ಳಲು ಸಾಧ್ಯವಾಗಲೇ ಇಲ್ಲ. ಆತನು

ಕೋಪದಿಂದ ತಳಮಳಗುಟ್ಟಿದನು. ಶೂಲಾಯುಧವನ್ನೆತ್ತಿ ಭೃಗುಮಹರ್ಷಿಯನ್ನು ಕೊಲ್ಲಲೆಂದೇ ಮುಂದಾದನು. ಆಗ ಪಾರ್ವತಿಯು ಶಿವನ ಕಾಲುಗಳಿಗೆ ಬಿದ್ದು ಅವನನ್ನು ಅಂಗಲಾಚಿಬೇಡಿಕೊಂಡು ಸಮಾಧಾನಗೊಳಿಸಿದಳು.

ಹೀಗೆ ಶಿವನ ಪರೀಕ್ಷೆಯೂ ಆದನಂತರ ಭೃಗುಮಹರ್ಷಿಯು ವಿಷ್ಣುವಿನ ನಿವಾಸಸ್ಥಾನವಾದ ವೈಕುಂಠಕ್ಕೆ ಹೋದನು. ಆ ಸಮಯದಲ್ಲಿ ವಿಷ್ಣುವು ಲಕ್ಷ್ಮೀದೇವಿಯ ತೊಡೆಯ ಮೇಲೆ ತಲೆಯಿಟ್ಟು ಪವಡಿಸಿದ್ದನು. ಅದನ್ನು ನೋಡಿದ ಭೃಗುಋಷಿಯು ಕಾಲಿನಿಂದ ವಿಷ್ಣುವಿನ ವಕ್ಷಃಸ್ಥಳಕ್ಕೇ ರಭಸದಿಂದ ಒದೆದನು. ಇದರಿಂದ ವಿಷ್ಣುವು ಕೋಪಗೊಳ್ಳಲಿಲ್ಲ. ಭಕ್ತ ವತ್ಸಲನಾದ, ಸತ್ಪುರುಷರಿಗೆ ಪರಮಾಶ್ರಯನಾದ, ಭಗವಾನ್ ವಿಷ್ಣುವು ಲಕ್ಷ್ಮೀದೇವಿಯೊಡನೆ ಮೇಲೆದ್ದು, ಅವಸರದಿಂದಲೇ ಮಂಚದಿಂದ ಕೆಳಗಿಳಿದು ತಲೆಯನ್ನು ತಗ್ಗಿಸಿ ಮುನಿಗೆ ನಮಸ್ಕರಿಸಿ ಹೇಳಿದನು : "ಬ್ರಾಹ್ಮಣ ಶ್ರೇಷ್ಠನೇ! ನಿನಗೆ ಸ್ವಾಗತವನ್ನು ಬಯಸುತ್ತೇನೆ. ಕ್ಷಣಕಾಲ ಈ ಆಸನದಲ್ಲಿ ಕುಳಿತು ವಿಶ್ರಮಿಸಿಕೊ. ಪ್ರಭುವೇ! ನಿನ್ನ ಶುಭಾಗಮನದ ವಾರ್ತೆಯು ನನಗೆ ತಿಳಿದಿರಲಿಲ್ಲ. ಈ ಕಾರಣದಿಂದಲೇ ನಾನು ಮುಂದಾಗಿ ನಿನ್ನ ಸ್ವಾಗತದ ವ್ಯವಸ್ಥೆಯನ್ನು ಮಾಡಲಿಲ್ಲ. ಈ ನನ್ನ ಅಪರಾಧವನ್ನು ದಯಮಾಡಿ ಕ್ಷಮಿಸು. ಮಹಾಮುನಿಯೇ! ನಿನ್ನ ಚರಣಾರವಿಂದಗಳು ಅತ್ಯಂತಕೋಮಲವಾಗಿವೆ. ವಜ್ರಸಾರದಂತಿರುವ ನನ್ನ ವಕ್ಷಃಸ್ಥಳಕ್ಕೆ ತಗುಲಿದ ಕಾರಣದಿಂದ ಸ್ವಲ್ಪ ನೋವಾಗಿರಬಹುದು"–ಎಂದೆನ್ನುತ್ತಾ ಶ್ರೀಹರಿಯು ಭೃಗುಮಹರ್ಷಿಯ ಕಾಲುಗಳನ್ನು ನೀವುತ್ತಾ ಹೇಳಿದನು :

"ಮಹರ್ಷಿಯೇ! ನಿನ್ನ ಪಾದೋದಕವು ದಿವ್ಯತೀರ್ಥಗಳನ್ನೂ ಶುದ್ಧ ಪಡಿಸುತ್ತದೆ. ಅಂತಹ ಪರಮಪವಿತ್ರವಾದ ಈ ನಿನ್ನ ಪಾದೋದಕದಿಂದ ವೈಕುಂಠಲೋಕವನ್ನೂ, ನನ್ನನ್ನೂ, ನನ್ನಲ್ಲಿರುವ ಲೋಕಪಾಲರನ್ನೂ ಪವಿತ್ರ ಗೊಳಿಸು. ಪೂಜ್ಯನೇ! ನಿನ್ನ ಚರಣಕಮಲಗಳ ಸ್ಪರ್ಶದಿಂದ ನನ್ನ ಸಮಸ್ತ ಪಾಪಗಳೂ ನಿರಸ್ತವಾದುವು. ಈಗ ನಾನು ಲಕ್ಷ್ಮೀದೇವಿಗೆ ನಿತ್ಯಾಶ್ರಯ ನಾದೆನು. ಹೇಗೆಂದರೆ ನಿನ್ನ ಪಾದಸ್ಪರ್ಶದಿಂದ ಪಾಪಗಳನ್ನು ಕಳೆದುಕೊಂಡು

ಪರಮಪವಿತ್ರವಾಗಿರುವ ಈ ನನ್ನ ವಕ್ಷಃಸ್ಥಳದಲ್ಲಿ ಲಕ್ಷ್ಮೀದೇವಿಯು ಯಾವಾಗಲೂ ವಾಸಮಾಡುವಳು."*

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಶ್ರೀಹರಿಯು ಗಂಭೀರವಾದ ವಾಣಿಯಿಂದ ಹೀಗೆಂದು ಹೇಳುತ್ತಲೇ ಭೃಗುಮಹರ್ಷಿಯು ಪರಮಸುಖಿಯೂ ಅತ್ಯಂತ ತೃಪ್ತನೂ ಆದನು. ಭಕ್ತಿಯ ಉದ್ರೇಕದಿಂದಾಗಿ ಅವನ ಕಂಠವು ಬಿಗಿಯಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಮುಂದೆ ಮಾತನಾಡಲಾಗದೆ ಋಷಿಯು ಸುಮ್ಮನಾದನು. ಅನಂತರ ಭೃಗುಮಹರ್ಷಿಯು ವಿಷ್ಣುವಿನ ಸಾನಿಧ್ಯದಿಂದ ಹೊರಟು ಸರಸ್ವತೀನದಿಯ ತೀರದಲ್ಲಿದ್ದ ಋಷಿ-ಮುನಿಗಳನ್ನು ಸೇರಿದನು. ಬ್ರಹ್ಮಾ-ಶಿವ-ವಿಷ್ಣುಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಸಂದರ್ಶಿಸಿದಾಗ ಆದ ಅನುಭವಗಳನ್ನು ಋಷಿ-ಮುನಿಗಳಿಗೆ ವಿವರಿಸಿ ಹೇಳಿದನು. ಭೃಗುವಿಗೆ ಆದ ಅನುಭವವನ್ನು ಕೇಳಿ ಋಷಿ-ಮುನಿಗಳೆಲ್ಲರೂ ಅತ್ಯಂತ ವಿಸ್ಮಿತರಾದರು. ಅವರ ಸಂದೇಹವು ದೂರವಾಯಿತು. ಬ್ರಹ್ಮಾ- ವಿಷ್ಣು-ಶಿವರಲ್ಲಿ ವಿಷ್ಣುವೇ ಶ್ರೇಷ್ಠನೆಂದು ಎಲ್ಲರೂ ಭಾವಿಸಿದರು.

**ಧರ್ಮಃ ಸಾಕ್ಷಾದ್ಯತೋ ಜ್ಞಾನಂ ವೈರಾಗ್ಯಂ ಚ ತದನ್ವಿತಮ್ ।**
**ಐಶ್ವರ್ಯಂ ಚಾಷ್ಟಧಾ ಯಸ್ಮಾದ್ಯಶಶ್ಚಾತ್ಮಮಲಾಪಹಮ್ ॥೧೬॥**

ಭಗವಾನ್ ವಿಷ್ಣುವಿನಿಂದಲೇ ಸಾಕ್ಷಾತ್ತಾದ ಧರ್ಮ, ಜ್ಞಾನ, ವೈರಾಗ್ಯ, ಎಂಟು ಪ್ರಕಾರವಾದ ಐಶ್ವರ್ಯಗಳು, ಚಿತ್ತವನ್ನು ಶುದ್ಧಿಗೊಳಿಸುವ ಯಶಸ್ಸು–ಈ ಎಲ್ಲವೂ ಪ್ರಾಪ್ತವಾಗುತ್ತವೆ.

**ಮುನೀನಾಂ ನ್ಯಸ್ತದಣ್ಡಾನಾಂ ಶಾನ್ತಾನಾಂ ಸಮಚೇತಸಾಮ್ ।**
**ಅಕಿಞ್ಚನಾನಾಂ ಸಾಧೂನಾಂ ಯಮಾಹುಃ ಪರಮಾಂ ಗತಿಮ್ ॥೧೭॥**

ಶಾಂತರೂ, ಸಮಚಿತ್ತರೂ, ಅಕಿಂಚನರೂ ಆದ ಮತ್ತು ಸಮಸ್ತ

---

* ವಿಜಯಧ್ವಜೀಯದಲ್ಲಿ ಹೆಚ್ಚು ಪಾಠವಿದ್ದು ಭೃಗುಮಹರ್ಷಿಯ ಪಾದಚಿಹ್ನೆಯನ್ನೇ ಶ್ರೀವತ್ಸಾಂಕವೆಂದು ಅಲ್ಲಿ ಹೇಳಿದೆ. ಶ್ರೀವತ್ಸಮಿತಿ ನಾಮಾ ಹಿ ಜಾಯತಾಂ ಪಾದಲಕ್ಷಣಃ । ನಿನ್ನ ಪಾದದ ಗುರುತು ನನ್ನ ಎದೆಯಲ್ಲಿ ಶ್ರೀವತ್ಸವೆಂಬ ಹೆಸರನ್ನು ಪಡೆಯಲಿ.

ರಿಗೂ ಅಭಯದಾನ ಮಾಡುವ ಸಾಧು-ಮುನಿಗಳಿಗೆ ಶ್ರೀಹರಿಯೇ ಪರಮಾಶ್ರಯನೆಂದು ವಿಷ್ಣುತತ್ತ್ವವನ್ನು ತಿಳಿದ ಜ್ಞಾನಿಗಳು ಹೇಳುತ್ತಾರೆ.

**ಸತ್ತ್ವಂ ಯಸ್ಯ ಪ್ರಿಯಾ ಮೂರ್ತಿರ್ಬ್ರಾಹ್ಮಣಾಸ್ತ್ವಿಷ್ಟದೇವತಾಃ ।**
**ಭಜನ್ತ್ಯನಾಶಿಷಃ ಶಾನ್ತಾ ಯಂ ವಾ ನಿಪುಣಬುದ್ಧಯಃ ॥೧೮॥**

ಶುದ್ಧಸತ್ತ್ವವೇ ಅವನಿಗೆ ಪ್ರಿಯವಾದ ಶರೀರವಾಗಿದೆ. ಬ್ರಾಹ್ಮಣರೇ ಅವನ ಇಷ್ಟದೇವತೆಗಳಾಗಿದ್ದಾರೆ. ನಿಷ್ಕಾಮರೂ, ಶಾಂತಸ್ವಭಾವದವರೂ ಮತ್ತು ವಿವೇಕಸಂಪನ್ನರೂ ಅಂತಹ ಶ್ರೀಹರಿಯನ್ನು ಭಜಿಸುತ್ತಾರೆ.

**ತ್ರಿವಿಧಾಕೃತಯಸ್ತಸ್ಯ ರಾಕ್ಷಸಾ ಅಸುರಾಃ ಸುರಾಃ ।**
**ಗುಣಿನ್ಯಾ ಮಾಯಯಾ ಸೃಷ್ಟಾಃ ಸತ್ತ್ವಂ ತತ್ತೀರ್ಥಸಾಧನಮ್ ॥೧೯॥**

ಭಗವಂತನ ಗುಣಮಯೀಮಾಯೆಯು ರಾಕ್ಷಸ-ಅಸುರ-ದೇವತೆಗಳೆಂಬ ಅವನ ಮೂರು ರೂಪಗಳನ್ನು ಕಲ್ಪಿಸಿದೆ. ಈ ಮೂರು ಮೂರ್ತಿಗಳಲ್ಲಿ ಶುದ್ಧಸತ್ತ್ವರೂಪವಾದ ದೇವತಾಮೂರ್ತಿಯು ಅವನ ಪ್ರಾಪ್ತಿಗೆ ಸಾಧನವಾಗುತ್ತದೆ. ಈ ಸತ್ತ್ವಮೂರ್ತಿಯೇ ಸಮಸ್ತ ಪುರುಷಾರ್ಥಗಳ ಸ್ವರೂಪನೂ ಆಗಿದ್ದಾನೆ.

ಶ್ರೀಶುಕಮುನಿಗಳು ಹೇಳುತ್ತಾರೆ :

“ಪರೀಕ್ಷಿತಮಹಾರಾಜ! ಬ್ರಹ್ಮಾ-ವಿಷ್ಣು-ಮಹೇಶ್ವರರನ್ನು ಸರಸ್ವತೀ ನದಿಯ ತೀರದಲ್ಲಿದ್ದ ಋಷಿ-ಮುನಿಗಳು ಪರೀಕ್ಷಿಸುವುದಕ್ಕಾಗಿ ಹೊರಟಿದ್ದು ತಮ್ಮ ಸಲುವಾಗಿ ಅಲ್ಲ. ಅವರಿಗೆ ಹರಿಯು ಸರ್ವೋತ್ತಮನೆಂಬ ವಿಷಯವು ಈ ಮೊದಲೇ ತಿಳಿದಿದ್ದಿತು. ಆದರೂ ಮನುಷ್ಯಸಾಮಾನ್ಯರ ಸಂಶಯವನ್ನು ನಿವಾರಿಸುವ ಸಲುವಾಗಿ ಅವರು ಈ ಯುಕ್ತಿಯನ್ನು ಕೈಗೊಂಡರು. ತ್ರಿಮೂರ್ತಿಗಳಲ್ಲಿ ವಿಷ್ಣುವೇ ಶ್ರೇಷ್ಠನೆಂದು ನಿಶ್ಚಯವಾದನಂತರ ಋಷಿ-ಮುನಿಗಳೆಲ್ಲರೂ ಪುರುಷೋತ್ತಮನ ಚರಣಕಮಲಗಳ ಸೇವೆಯನ್ನೇ ಅನವರತವಾಗಿ ಮಾಡುತ್ತಾ ಭಗವಂತನ ಪರಮಪದವನ್ನು ಸೇರಿದರು.”

ಸೂತರು ಶೌನಕಾದಿ ಮುನಿಗಳಿಗೆ ಹೇಳುತ್ತಾರೆ :

**ಇತ್ಯೇತನ್ಮುನಿತನಯಾಸ್ಯಪದ್ಮಗನ್ಧ-**
**ಪೀಯೂಷಂ ಭವಭಯಭಿತ್ಪರಸ್ಯ ಪುಂಸಃ ।**

**ಸುಶ್ಲೋಕಂ ಶ್ರವಣಪುಟೈಃ ಪಿಬತ್ಯಭೀಕ್ಷ್ಣಂ**
**ಪಾನ್ಥೋಽಧ್ವಭ್ರಮಣಪರಿಶ್ರಮಂ ಜಹಾತಿ ॥೨೧॥**

ಶೌನಕರೇ! ಹೀಗೆ ವ್ಯಾಸಮುನಿಗಳ ಪುತ್ರರಾದ ಶ್ರೀಶುಕಮುನಿಗಳ ಮುಖಾರವಿಂದದಿಂದ ಹೊರಟ ಸುಗಂಧಯುಕ್ತವಾದ, ಸಂಸಾರದ ಭಯವನ್ನು ಹೋಗಲಾಡಿಸುವ, ಪರಮಪುರುಷನ ಶ್ಲಾಘ್ಯವಾದ ಹರಿಕಥಾಮೃತವನ್ನು ಯಾರು ಕಿವಿಗಳಿಂದ ಅಡಿಗಡಿಗೂ ಪಾನಮಾಡುವರೋ ಅಂತಹವರು ಸಂಸಾರದಲ್ಲಿ ಅಲೆದಾಡುವ ಆಯಾಸದಿಂದ ಮುಕ್ತರಾಗುತ್ತಾರೆ. ಈ ಪ್ರಸಂಗವನ್ನು ಹೇಳಿದನಂತರ ಶ್ರೀಶುಕಮುನಿಗಳು ಶ್ರೀಕೃಷ್ಣನ ಪರಮಾದ್ಭುತವಾದ ಮತ್ತೊಂದು ಲೀಲಾಪ್ರಸಂಗವನ್ನು ಹೇಳಲು ಉಪಕ್ರಮಿಸಿದರು.

"ಪರೀಕ್ಷಿತಮಹಾರಾಜ! ದ್ವಾರಕಾಪಟ್ಟಣದಲ್ಲಿ ಹಿಂದೆ ನಡೆದ ಪ್ರಸಂಗವಿದು. ಬ್ರಾಹ್ಮಣಿಯೊಬ್ಬಳ ಗರ್ಭದಲ್ಲಿ ಗಂಡುಶಿಶುವಿನ ಜನನವಾಯಿತು. ಆದರೆ ಭೂಸ್ಪರ್ಶವಾಗುತ್ತಲೇ ಆ ಶಿಶುವು ಸತ್ತುಹೋಯಿತು. ಇದರಿಂದ ಅತ್ಯಂತದುಃಖಿತನಾದ ಶಿಶುವಿನ ತಂದೆಯು ಸತ್ತುಹೋಗಿದ್ದ ಶಿಶುವಿನ ಶರೀರವನ್ನೇ ಎತ್ತಿಕೊಂಡು ಅರಮನೆಯ ಮಹಾದ್ವಾರಕ್ಕೆ ಹೋದನು. ಅತ್ಯಂತದೀನವಾದ ಮನಸ್ಸಿನಿಂದ ಕೂಡಿ ತವಕಗೊಂಡಿದ್ದ ಆ ಬ್ರಾಹ್ಮಣನು ಗೋಳಾಡುತ್ತಲೇ ಈ ಮಾತನ್ನು ಹೇಳಿದನು :

**ಬ್ರಹ್ಮದ್ವಿಷಃ ಶಠಧಿಯೋ ಲುಬ್ಧಸ್ಯ ವಿಷಯಾತ್ಮನಃ ।**
**ಕ್ಷತ್ರಬನ್ಧೋಃ ಕರ್ಮದೋಷಾತ್ಪಞ್ಚತ್ವಂ ಮೇ ಗತೋಽರ್ಭಕಃ ॥**

**ಹಿಂಸಾವಿಹಾರಂ ನೃಪತಿಂ ದುಃಶೀಲಮಜಿತೇನ್ದ್ರಿಯಮ್ ।**
**ಪ್ರಜಾ ಭಜನ್ತ್ಯಃ ಸೀದನ್ತಿ ದರಿದ್ರಾ ನಿತ್ಯದುಃಖಿತಾಃ ॥೨೫॥**

"ಬ್ರಾಹ್ಮಣದ್ರೋಹಿಯಾದ, ಧೂರ್ತನಾದ, ಕೃಪಣನಾದ, ವಿಷಯಲಂಪಟನಾದ ರಾಜನ ಕ್ರಿಯಾದೋಷದಿಂದಲೇ ನನ್ನ ಮಗನು ಸತ್ತಿದ್ದಾನೆ. ಇದರಲ್ಲಿ ಸಂದೇಹವೇ ಇಲ್ಲ. ಹಿಂಸಾಪರಾಯಣನಾದ, ದುಃಶೀಲನಾದ, ವಿಷಯಲಂಪಟನಾದ ಮನುಷ್ಯನನ್ನು ರಾಜನೆಂದು ಭಾವಿಸಿ ಅವನ ಸೇವೆಯನ್ನು ಮಾಡುವ ಜನರು ದರಿದ್ರರಾಗಿ ದುಃಖದಮೇಲೆ ದುಃಖವನ್ನು ಅನುಭವಿಸುತ್ತಾ ವಿನಾಶಹೊಂದುತ್ತಾರೆ."

ಹೀಗೆ ಹೇಳಿ ಸತ್ತ ಶಿಶುವನ್ನು ಅಲ್ಲಿಯೇ ವಿಸರ್ಜಿಸಿ ಹೊರಟು ಹೋದನು. ಬ್ರಾಹ್ಮಣನ ಪತ್ನಿಯು ಪುನಃ ಗರ್ಭವತಿಯಾದಳು. ಪ್ರಸವ ಕಾಲವು ಸಮೀಪಿಸಿತು. ಬ್ರಾಹ್ಮಣನೂ ತವಕಿಸುತ್ತಿದ್ದನು. ಆ ಎರಡನೆಯ ಶಿಶುವೂ ಹುಟ್ಟಿ ಭೂಸ್ಪರ್ಶವಾಗುತ್ತಲೇ ಸತ್ತುಹೋಯಿತು. ಮೂರನೆ ಯದೂ ಹಾಗೆಯೇ ಆಯಿತು. ಬ್ರಾಹ್ಮಣ-ಬ್ರಾಹ್ಮಣಿಯರ ದುಃಖವು ಅಪಾರ. ಎರಡು-ಮೂರನೆಯ ಶಿಶುಗಳಿಗೂ ಮೊದಲನೆಯ ಮಗುವಿಗೆ ಮಾಡಿದ ಸಂಸ್ಕಾರವನ್ನೇ ಬ್ರಾಹ್ಮಣನು ಮಾಡಿದನು. ಮೃತಶಿಶುವನ್ನು ಎತ್ತಿಕೊಂಡು ಹೋಗಿ ಅರಮನೆಯ ಮಹಾದ್ವಾರದಲ್ಲಿರಿಸುವುದು ಮತ್ತು ಹಿಂದೆ ಹೇಳಿದ ಶ್ಲೋಕಗಳನ್ನೇ ಗಟ್ಟಿಯಾಗಿ ಹೇಳಿ ಮಗುವನ್ನು ಅಲ್ಲಿಯೇ ವಿಸರ್ಜಿಸಿ ಬರುವುದು. ಇದೇ ಬ್ರಾಹ್ಮಣನು ಮಾಡುತ್ತಿದ್ದ ಸಂಸ್ಕಾರ. ಅನುಕ್ರಮವಾಗಿ ಹುಟ್ಟಿ ಸತ್ತುಹೋದ ಎಂಟು ಮಕ್ಕಳಿಗೂ ಬ್ರಾಹ್ಮಣನು ಇದೇ ವಿಧವಾದ ಸಂಸ್ಕಾರಮಾಡಿದನು. ಒಂಬತ್ತನೆಯ ಶಿಶುವೂ ಹುಟ್ಟಿ ಸತ್ತಿತು. ಗೋಳಾ ಡುತ್ತಾ ಆ ಶಿಶುವನ್ನು ಎತ್ತಿಕೊಂಡು ಹೋಗಿ ಅರಮನೆಯ ಮಹಾ ದ್ವಾರದಲ್ಲಿರಿಸಿ ಪುನಃ ಹಿಂದಿನ ಗಾಥೆಯನ್ನೇ ಹೇಳಿದನು.

**ಬ್ರಹ್ಮದ್ವಿಷಃ ಶಠಧಿಯೋ ಲುಬ್ಧಸ್ಯ ವಿಷಯಾತ್ಮನಃ ।**
**ಕ್ಷತ್ರಬನ್ಧೋಃ ಕರ್ಮದೋಷಾತ್ಪಞ್ಚತ್ವಂ ಮೇ ಗತೋಽರ್ಭಕಃ ॥೨4॥**
**ಹಿಂಸಾವಿಹಾರಂ ನೃಪತಿಂ ದುಃಶೀಲಮಜಿತೇನ್ದ್ರಿಯಮ್ ।**
**ಪ್ರಜಾ ಭಜನ್ತ್ಯಃ ಸೀದನ್ತಿ ದರಿದ್ರಾ ನಿತ್ಯದುಃಖಿತಾಃ ॥೨೫॥**

"ಬ್ರಾಹ್ಮಣದ್ರೋಹಿಯಾದ, ಧೂರ್ತನಾದ, ಕೃಪಣನಾದ ವಿಷಯ ಲಂಪಟನಾದ ರಾಜನ ಕ್ರಿಯಾದೋಷದಿಂದಲೇ ನನ್ನ ಮಗನು ಸತ್ತಿದ್ದಾನೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಹಿಂಸಾಪರಾಯಣನಾದ, ದುಃಶೀಲ ನಾದ, ವಿಷಯಲಂಪಟನಾದ ಮನುಷ್ಯನನ್ನು ರಾಜನೆಂದು ಭಾವಿಸಿ ಅವನ ಸೇವೆಯನ್ನು ಮಾಡುವ ಜನರು ದರಿದ್ರರಾಗಿ ದುಃಖದ ಮೇಲೆ ದುಃಖವನ್ನು ಅನುಭವಿಸುತ್ತಾ ನಾಶಹೊಂದುತ್ತಾರೆ."

ಒಂಬತ್ತನೆಯ ಶಿಶುವು ಸತ್ತಾಗ ಬ್ರಾಹ್ಮಣನು ಹೀಗೆ ಹೇಳುತ್ತಿದ್ದ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನ ಸಮೀಪದಲ್ಲಿ ಅರ್ಜುನನೂ ಕುಳಿತಿದ್ದು ದುಃಖದಿಂದ ಗೋಳಾಡುತ್ತಿದ್ದ ಬ್ರಾಹ್ಮಣನಿಗೆ ಹೇಳಿದನು :

**ಕಿಂಸ್ವಿದ್ಬ್ರಹ್ಮಂಸ್ತ್ವನ್ನಿವಾಸೇ ಇಹ ನಾಸ್ತಿ ಧನುರ್ಧರಃ ।**
**ರಾಜನ್ಯಬನ್ಧುರೇತೇ ವೈ ಬ್ರಾಹ್ಮಣಾಃ ಸತ್ರ ಆಸತೇ ॥೨೮॥**

"ಬ್ರಾಹ್ಮಣೋತ್ತಮ! ನೀನು ವಾಸಮಾಡುತ್ತಿರುವ ನಿವಾಸದ ಬಳಿಯಲ್ಲಿ ಒಬ್ಬ ಕ್ಷತ್ರಿಯಬಂಧುವೂ ಇಲ್ಲವೇ? ಈ ಯದುವಂಶೀಯಕ್ಷತ್ರಿಯರೆಲ್ಲರೂ ಬ್ರಾಹ್ಮಣರಾಗಿ ಪ್ರಜಾಪಾಲನೆಯಧರ್ಮವನ್ನು ತೊರೆದು ಯಾವುದೋ ಯಜ್ಞದಲ್ಲಿ ತೊಡಗಿರಬಹುದೆಂದು ಭಾವಿಸುತ್ತೇನೆ.

**ಧನದಾರಾತ್ಮಜಾಪೃಕ್ತಾ ಯತ್ರ ಶೋಚನ್ತಿ ಬ್ರಾಹ್ಮಣಾಃ ।**
**ತೇ ವೈ ರಾಜನ್ಯವೇಷೇಣ ನಟಾ ಜೀವನ್ತ್ಯಸುಮ್ಭರಾಃ ॥೨೯॥**

ಯಾವನ ರಾಜ್ಯದಲ್ಲಿ ಬ್ರಾಹ್ಮಣರು ಪತ್ನೀ-ಪುತ್ರರಿಂದಲೂ, ಐಶ್ವರ್ಯದಿಂದಲೂ ವಿಮುಕ್ತರಾಗಿ ದುಃಖಿಸುವರೋ ಅಂತಹ ರಾಜ್ಯದಲ್ಲಿರುವ ರಾಜರು ನಿಜವಾದ ರಾಜರಲ್ಲ. ರಾಜರ ವೇಷದಲ್ಲಿರುವ ನಟರೇ ಸರಿ. ರಾಜನ ವೇಷವನ್ನು ಹಾಕಿಕೊಂಡು ಉದರಂಭರಣಮಾಡುತ್ತಿರುತ್ತಾರೆ. ಅಂತಹವರ ಜೀವನವು ವ್ಯರ್ಥವೇ ಸರಿ.

**ಅಹಂ ಪ್ರಜಾ ವಾಂ ಭಗವಾನ್ ರಕ್ಷಿಷ್ಯೇ ದೀನಯೋರಿಹ ।**
**ಅನಿಸ್ತೀರ್ಣಪ್ರತಿಜ್ಞೋಽಗ್ನಿಂ ಪ್ರವೇಕ್ಷ್ಯೇ ಹತಕಲ್ಮಷಃ ॥೩೦॥**

ಪೂಜ್ಯನೇ! ಮಕ್ಕಳನ್ನು ಕಳೆದುಕೊಂಡು ಅತ್ಯಂತದೀನರಾಗಿರುವ ದಂಪತಿಗಳ ಸಂತಾನವನ್ನು ನಾನು ರಕ್ಷಿಸಿಕೊಡುತ್ತೇನೆ. ನಾನೇನಾದರೂ ನನ್ನ ಈ ಪ್ರತಿಜ್ಞೆಯನ್ನು ಪೂರೈಸಿಕೊಡದಿದ್ದರೆ ಅಗ್ನಿಪ್ರವೇಶಮಾಡಿ ಪ್ರತಿಜ್ಞಾಭಂಗದ ಪಾಪವನ್ನು ಕಳೆದುಕೊಳ್ಳುತ್ತೇನೆ."

ಬ್ರಾಹ್ಮಣನು ತಿರಸ್ಕಾರದೃಷ್ಟಿಯಿಂದ ಅರ್ಜುನನಿಗೆ ಹೇಳುತ್ತಾನೆ :

**ಸಙ್ಕರ್ಷಣೋ ವಾಸುದೇವಃ ಪ್ರದ್ಯುಮ್ನೋ ಧನ್ವಿನಾಂ ವರಃ ।**
**ಅನಿರುದ್ಧೋಽಪ್ರತಿರಥೋ ನ ತ್ರಾತುಂ ಶಕ್ನುವನ್ತಿ ಯತ್ ॥೩೧॥**

**ತತ್ ಕಥಂ ನು ಭವಾನ್ ಕರ್ಮ ದುಷ್ಕರಂ ಜಗದೀಶ್ವರೈಃ ।**
**ಚಿಕೀರ್ಷಸಿ ತ್ವಂ ಬಾಲಿಶಾತ್ ತನ್ನ ಶ್ರದ್ದಧ್ಮಹೇ ವಯಮ್ ॥೩೨॥**

"ಅರ್ಜುನ! ಬಲರಾಮ, ವಾಸುದೇವ, ಧನುಷ್ಮಂತರಲ್ಲಿ ಶ್ರೇಷ್ಠನಾದ

ಪ್ರದ್ಯುಮ್ನ, ಅಪ್ರತಿರಥನಾದ ಅನಿರುದ್ಧ–ಇಂತಹ ಮಹಾ-ಮಹಾ ಪರಾಕ್ರಮಿಗಳೇ ನನ್ನ ಮಕ್ಕಳನ್ನು ರಕ್ಷಿಸಲು ಅಸಮರ್ಥರಾಗಿರುವಾಗ ಜಗದೀಶ್ವರರಿಗೂ ಕಠಿಣವೆನಿಸಿರುವ ಈ ಕಾರ್ಯವನ್ನು ಏಕಾಕಿಯಾದ ನೀನು ಹೇಗೆತಾನೇ ಮಾಡುವೆ? ಮಹಾಶೂರ-ವೀರರಿಗೇ ಆಗದಿರುವುದನ್ನು ಮಾಡಲು ಹೊರಟಿರುವ ನೀನು ಒಬ್ಬ ಮಹಾಮೂರ್ಖನೇ ಸರಿ. ಆದುದರಿಂದ ನಿನ್ನ ಮಾತಿನಲ್ಲಿ ನನಗೆ ನಂಬಿಕೆಯಿಲ್ಲ."

ಬ್ರಾಹ್ಮಣನ ಮಾತಿನಿಂದ ಖತಿಗೊಂಡ ಅರ್ಜುನನು ಗಡುಸಾದ ಧ್ವನಿಯಿಂದ ಹೇಳುತ್ತಾನೆ :

**ನಾಹಂ ಸಙ್ಕರ್ಷಣೋ ಬ್ರಹ್ಮನ್ ನ ಕೃಷ್ಣಃ ಕಾರ್ಷ್ಣಿರೇವ ಚ ।**
**ಅಹಂ ವಾ ಅರ್ಜುನೋ ನಾಮ ಗಾಣ್ಡೀವಂ ಯಸ್ಯ ವೈ ಧನುಃ ॥೩೩॥**

**ಮಾವಮಂಸ್ಥಾ ಮಮ ಬ್ರಹ್ಮನ್ವೀರ್ಯಂ ತ್ರ್ಯಮ್ಬಕತೋಷಣಮ್ ।**
**ಮೃತ್ಯುಂ ವಿಜಿತ್ಯ ಪ್ರಧನೇ ಆನೇಷ್ಯೇ ತೇ ಪ್ರಜಾಂ ಪ್ರಭೋ ॥೩೪॥**

"ಬ್ರಾಹ್ಮಣೋತ್ತಮನೇ! ನಾನು ಬಲರಾಮನಲ್ಲ ; ಕೃಷ್ಣನಲ್ಲ ; ಕೃಷ್ಣನ ಮಗ ಪ್ರದ್ಯುಮ್ನನೂ ಅಲ್ಲ. ವಿಶ್ವವಿಖ್ಯಾತವಾದ ಗಾಂಡೀವವೆಂಬ ಮಹಾಧನುಸ್ಸನ್ನು ಧರಿಸಿರುವ ಅರ್ಜುನನು ನಾನಾಗಿದ್ದೇನೆ. ನನ್ನ ಬಲ-ಪೌರುಷಗಳ ವಿಷಯವಾಗಿ ನೀನು ತಿರಸ್ಕಾರದ ಮಾತುಗಳನ್ನಾಡಿ ನನ್ನನ್ನು ಅವಮಾನಗೊಳಿಸಬೇಡ. ನನ್ನ ವೀರ್ಯ-ಪರಾಕ್ರಮಗಳಿಂದ ಯುದ್ಧದಲ್ಲಿ ಭಗವಾನ್ ಶಂಕರನನ್ನೂ ಸಂತೋಷಗೊಳಿಸಿದ್ದೇನೆ. ಈ ವಿಷಯದಲ್ಲಿ ನಾನು ಹೆಚ್ಚೇನು ಹೇಳಲಿ? ಮೃತ್ಯುವನ್ನಾದರೂ ಯುದ್ಧದಲ್ಲಿ ಜಯಿಸಿ ನಿನ್ನ ಸಂತಾನವನ್ನು ಹಿಂದಕ್ಕೆ ಕರೆತರುತ್ತೇನೆ."

ಪರಂತಪನೇ! ಪರೀಕ್ಷಿತಮಹಾರಾಜ! ಹೀಗೆ ಅರ್ಜುನನು ಬ್ರಾಹ್ಮಣನಿಗೆ ತನ್ನಲ್ಲಿ ವಿಶ್ವಾಸವು ಹುಟ್ಟುವಂತೆ ಧೈರ್ಯಹೇಳಿದನು. ಬ್ರಾಹ್ಮಣನು ಕೂಡ ಅರ್ಜುನನ ಶೌರ್ಯ-ಪರಾಕ್ರಮಗಳನ್ನು ಇತರರಿಂದಲೂ ಕೇಳಿದ್ದರಿಂದ ಪರಮಪ್ರೀತನಾಗಿ ಅರ್ಜುನನಿಂದ ಸಂತಾನವು ರಕ್ಷಿತವಾಗುವುದೆಂಬ ಪೂರ್ಣಭರವಸೆಯಿಂದ ಮನೆಗೆ ತೆರಳಿದನು.

ಭಾರ್ಯೆಯ ಪ್ರಸವದ ಸಮಯವು ಸನ್ನಿಹಿತವಾದೊಡನೆಯೇ ಬ್ರಾಹ್ಮಣನು ಅತ್ಯಂತಕಾತರತೆಯಿಂದ ಅರ್ಜುನನ ಬಳಿಗೆ ಬಂದು–'ಈ ಬಾರಿಯಾದರೂ ನನ್ನ ಸಂತಾನವನ್ನು ಮೃತ್ಯುವಿನಿಂದ ಮುಕ್ತಿಗೊಳಿಸಪ್ಪಾ!' ಎಂದು ದೈನ್ಯದಿಂದ ಹೇಳಿದನು. ಬ್ರಾಹ್ಮಣನ ದೈನ್ಯದ ಮಾತನ್ನು ಕೇಳಿದೊಡನೆಯೇ ಅರ್ಜುನನು ಶುದ್ಧಜಲದಿಂದ ಆಚಮನಮಾಡಿ ಮಹೇಶ್ವರನಿಗೆ ನಮಸ್ಕರಿಸಿ ದಿವ್ಯಾಸ್ತ್ರಗಳನ್ನು ಸ್ಮರಿಸಿ ಹೆದೆಯೇರಿಸಿ ಸಜ್ಜುಗೊಳಿಸಲ್ಪಟ್ಟಿದ್ದ ಗಾಂಡೀವಧನುಸ್ಸನ್ನು ಕೈಗೆತ್ತಿಕೊಂಡನು. ಬಳಿಕ ಅರ್ಜುನನು ಬಾಣಗಳನ್ನು ಅನೇಕ ಪ್ರಕಾರವಾದ ಅಸ್ತ್ರಮಂತ್ರಗಳಿಂದ ಅಭಿಮಂತ್ರಿಸಿ ಆ ಬಾಣಗಳನ್ನು ಬ್ರಾಹ್ಮಣಿಯ ಪ್ರಸವಗೃಹದ ಮೇಲೂ, ಕೆಳಗೂ ಮತ್ತು ಸುತ್ತಲೂ ಪ್ರಯೋಗಿಸಿ ಶರಪಂಜರವನ್ನೇ ನಿರ್ಮಿಸಿ ಯಾರೂ ಒಳಕ್ಕೆ ಪ್ರವೇಶಿಸಲಾಗದ ರೀತಿಯಲ್ಲಿ ತಡೆಗಟ್ಟಿದನು. ಹೀಗೆ ಅರ್ಜುನನು ಗಾಂಡೀವ ಧನುಸ್ಸನ್ನು ಹಿಡಿದು ಸಜ್ಜಾಗಿ ನಿಂತಿರಲಾಗಿ, ಬ್ರಾಹ್ಮಣ ಪತ್ನಿಯು ಗಂಡುಶಿಶುವಿಗೆ ಜನ್ಮವನ್ನಿತ್ತಳು. ಹುಟ್ಟಿದ ಶಿಶುವು ಪುನಃ ಪುನಃ ಅಳುತ್ತಲೇ ಇದ್ದಿತು. ಎಲ್ಲರೂ ನೋಡುತ್ತಿದ್ದಂತೆಯೇ ಶಿಶುವು ಆಕಾಶಕ್ಕೆ ಹೋಗಿ ಅಲ್ಲಿಯೇ ಮಾಯವಾಗಿಬಿಟ್ಟಿತು. (ಮೃತಶಿಶುವನ್ನು ಇಟ್ಟುಕೊಂಡು ರೋದನಮಾಡಲು ಬ್ರಾಹ್ಮಣನಿಗೆ ಈ ಬಾರಿ ಶರೀರವೂ ಸಿಕ್ಕಲಿಲ್ಲ.) ಶ್ರೀಕೃಷ್ಣನ ಸನ್ನಿಧಿಯಲ್ಲಿಯೇ ವಿಜಯನನ್ನು ಕಟುವಾಗಿ ನಿಂದಿಸುತ್ತಾ ಬ್ರಾಹ್ಮಣನು ಹೇಳಿದನು :

**ಮೌಢ್ಯಂ ಪಶ್ಯತ ಮೇ ಯೋಽಹಂ ಶ್ರದ್ದಧೇ ಕ್ಲೀಬಕತ್ಥನಮ್ ॥೪೦॥**

**ನ ಪ್ರದ್ಯುಮ್ನೋ ನಾನಿರುದ್ಧೋ ನ ರಾಮೋ ನ ಚ ಕೇಶವಃ ।**
**ಯಸ್ಯ ಶೇಕುಃ ಪರಿತ್ರಾತುಂ ಕೋಽನ್ಯಸ್ತದವಿತೇಶ್ವರಃ ॥೪೧॥**

**ಧಿಗರ್ಜುನಂ ಮೃಷಾವಾದಂ ಧಿಗಾತ್ಮಶ್ಲಾಘಿನೋ ಧನುಃ ।**
**ದೈವೋಪಸೃಷ್ಟಂ ಯೋ ಮೌಢ್ಯಾದಾನಿನೀಷತಿ ದುರ್ಮತಿಃ ॥೪೨॥**

"ನಪುಂಸಕನೊಬ್ಬನು ಹೇಳಿದ ಜಂಬದ ಮಾತನ್ನು ನಂಬಿಬಿಟ್ಟೆನಲ್ಲಾ! ನನ್ನ ಮೌಢ್ಯವನ್ನಾದರೂ ನೋಡಿರಿ! ಪ್ರದ್ಯುಮ್ನ-ಅನಿರುದ್ಧ-ಬಲರಾಮ-ಕೃಷ್ಣರಿಗೇ ರಕ್ಷಿಸಲು ಸಾಧ್ಯವಾಗಲಿಲ್ಲವೆಂದ ಮೇಲೆ ಬೇರೆ ಯಾವ ಈಶ್ವರನು

ತಾನೇ ರಕ್ಷಿಸಲು ಸಮರ್ಥನಾದಾನು? ಸುಳ್ಳನಾದ ಅರ್ಜುನನಿಗೆ ಧಿಕ್ಕಾರ ವಿರಲಿ. ಗಾಂಡೀವಧನುಸ್ಸು ತನ್ನಲ್ಲಿರುವುದೆಂದು ಜಂಬಕೊಚ್ಚಿಕೊಳ್ಳುವ ಆತನ ಆ ಧನುಸ್ಸಿಗೂ ಧಿಕ್ಕಾರವಿರಲಿ. ದುರ್ಮತಿಯಾದ ಈ ಅರ್ಜುನನು ಕೇವಲ ಮೌಢ್ಯದಿಂದ, ದೈವದಿಂದ ಪೀಡಿಸಲ್ಪಟ್ಟು ಮರಣಹೊಂದಿದ ನನ್ನ ಬಾಲಕನನ್ನು ಹಿಂದಕ್ಕೆ ಕರೆತರಲು ಇಚ್ಛಿಸಿದ್ದಾನೆ. ದೈವೇಚ್ಛೆಗೆ ವಿರುದ್ಧವಾಗಿ ವರ್ತಿಸಲು ಸಾಧ್ಯವಾಗುವುದೇ?"

ಪರೀಕ್ಷಿತಮಹಾರಾಜ! ಹೀಗೆ ಬ್ರಾಹ್ಮಣನು ಅರ್ಜುನನನ್ನು ಹೀನಾ ಮಾನವಾಗಿ ನಿಂದಿಸುತ್ತಿದ್ದಾಗ ಮಾನಧನವಾದ ಅರ್ಜುನನು ಒಡನೆಯೇ ಯೋಗಬಲದಿಂದ ಭಗವಾನ್ ಯಮಧರ್ಮನ ನಿವಾಸಸ್ಥಾನವಾದ ಸಂಯಮನೀಪುರಕ್ಕೆ ತೆರಳಿದನು. ಅಲ್ಲಿಯೂ ಅವನಿಗೆ ಬ್ರಾಹ್ಮಣಬಾಲಕನು ಸಿಕ್ಕಲಿಲ್ಲ. ಅಲ್ಲಿಂದ ಮುಂದಕ್ಕೆ ಅರ್ಜುನನು ಶಸ್ತ್ರಪಾಣಿಯಾಗಿ ಇಂದ್ರಾಗ್ನಿ, ನಿರ್ಋತಿ, ಸೋಮ, ವಾಯು, ವರುಣ–ಇವರ ಲೋಕಗಳಿಗೂ ಅನುಕ್ರಮ ವಾಗಿ ಹೋದನು. ಅಲ್ಲಿಯೂ ಬ್ರಾಹ್ಮಣಬಾಲಕನು ಸಿಕ್ಕಲಿಲ್ಲ. ರಸಾತಲವೇ ಮೊದಲಾದ ಅಧೋಲೋಕಗಳಿಗೂ ಹೋದನು. ಸ್ವರ್ಗವೇ ಮೊದಲಾದ ಊರ್ಧ್ವಲೋಕಗಳಿಗೂ ಹೋದನು. ವಿಶ್ವದ ಯಾವುದೇ ಲೋಕದಲ್ಲಿಯೂ ಅರ್ಜುನನಿಗೆ ಬ್ರಾಹ್ಮಣಬಾಲಕನು ಸಿಕ್ಕಲಿಲ್ಲ. ಬ್ರಾಹ್ಮಣನಿಗೆ ಮಾಡಿಕೊಟ್ಟಿದ್ದ ಪ್ರತಿಜ್ಞೆಯನ್ನು ಪೂರ್ಣಗೊಳಿಸಲು ಸಾಧ್ಯವಾಗಲಿಲ್ಲ. ಪ್ರತಿಜ್ಞಾ ಭಂಗವಾಗಿಬಿಟ್ಟಿತು. ಮುಂದೇನು? ಪ್ರತಿಜ್ಞೆಮಾಡುವಾಗಲೇ ಹೇಳಿದ್ದಂತೆ ಅಗ್ನಿಪ್ರವೇಶಮಾಡಲು ನಿಶ್ಚಯಿಸಿ ಅದಕ್ಕೆ ಸಿದ್ಧಮಾಡಿಕೊಳ್ಳುತ್ತಿದ್ದನು. ಶ್ರೀಕೃಷ್ಣನು ಇದನ್ನು ನೋಡಿ ಅಗ್ನಿಪ್ರವೇಶಮಾಡದಂತೆ ಅರ್ಜುನನನ್ನು ತಡೆಯುತ್ತಾ ಹೇಳಿದನು :

ದರ್ಶಯೇ ದ್ವಿಜಸೂನೂಂಸ್ತೇ ಮಾವಜ್ಞಾತ್ಮಾನಮಾತ್ಮನಾ ।
ಯೇ ತೇ ನಃ ಕೀರ್ತಿಂ ವಿಮಲಾಂ ಮನುಷ್ಯಾಃ ಸ್ಥಾಪಯಿಷ್ಯಂತಿ ॥

"ಅರ್ಜುನ! ನಿನ್ನನ್ನೇ ನೀನು ಹಳಿದುಕೊಳ್ಳಬೇಡ. ನಿನಗೆ ಬ್ರಾಹ್ಮಣನ ಎಲ್ಲ ಮಕ್ಕಳನ್ನೂ ತೋರಿಸಿಕೊಡುತ್ತೇನೆ. ಈಗ ನಿನ್ನನ್ನು

ನಿಂದಿಸುತ್ತಿರುವ ಮನುಷ್ಯರೇ ಮುಂದೆ ನಮ್ಮ ನಿರ್ಮಲವಾದ ಕೀರ್ತಿಯನ್ನು ಲೋಕದಲ್ಲಿ ಸಂಸ್ಥಾಪಿಸುತ್ತಾರೆ."

ಪರೀಕ್ಷಿತ! ಹೀಗೆ ಸರ್ವೇಶ್ವರನಾದ ಭಗವಂತನು ಅರ್ಜುನನಿಗೆ ಹೇಳಿ ದಿವ್ಯವಾದ ರಥದಲ್ಲಿ ಆತನೊಡನೆ ಕುಳಿತು ಪಶ್ಚಿಮದಿಕ್ಕಿನ ಕಡೆಗೆ ಪ್ರಯಾಣಹೊರಟನು. ರಥದಲ್ಲಿ ಕುಳಿತು ಅರ್ಜುನನೊಡನೆ ಪ್ರಯಾಣ ಮಾಡುತ್ತಿದ್ದ ಶ್ರೀಕೃಷ್ಣನು ಏಳೇಳು ಪರ್ವತಗಳಿದ್ದ ಏಳು ದ್ವೀಪಗಳನ್ನೂ, ಏಳು ಸಮುದ್ರಗಳನ್ನೂ, ಲೋಕಾಲೋಕವೆಂಬ ಪರ್ವತವನ್ನೂ ದಾಟಿ ಗಾಢಾಂಧಕಾರವನ್ನು ಪ್ರವೇಶಿಸಿದನು. ಗಾಢಾಂಧಕಾರವನ್ನು ಪ್ರವೇಶಿಸಿ ದೊಡನೆಯೇ ಶ್ರೀಕೃಷ್ಣನ ರಥವನ್ನು ಸೆಳೆದುಕೊಂಡು ಹೋಗುತ್ತಿದ್ದ ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂಬ ನಾಲ್ಕು ಕುದುರೆಗಳು ಮುಂದೇ ನಿರುವುದೆಂಬುದನ್ನು ಕಾಣದೆ ದಾರಿತಪ್ಪಿ ಯದ್ವಾ-ತದ್ವಾ ಹೋಗ ತೊಡಗಿದುವು. ಯೋಗೇಶ್ವರೇಶ್ವರನಾದ ಭಗವಾನ್ ಶ್ರೀಕೃಷ್ಣನು ತನ್ನ ಕುದುರೆಗಳಿಗೆ ಇಂತಹ ದುರವಸ್ಥೆಯು ಒದಗಿಬಂದುದನ್ನು ಗಮನಿಸಿ ಸಾವಿರ ಸೂರ್ಯರ ಪ್ರಕಾಶಕ್ಕೆ ಸಮಾನವಾದ ಪ್ರಕಾಶದಿಂದ ಬೆಳಗುತ್ತಿದ್ದ ತನ್ನದೇ ಆದ ಸುದರ್ಶನಚಕ್ರವನ್ನು ಹಾದಿಯನ್ನು ತೋರಿಸುವ ಸಲುವಾಗಿ ರಥದ ಮುಂಭಾಗಕ್ಕೆ ಕಳುಹಿಸಿದನು.

ಸುದರ್ಶನಚಕ್ರವು ತನ್ನ ಜ್ಯೋತಿರ್ಮಯವಾದ ತೇಜಸ್ಸಿನಿಂದ– ಪ್ರಕೃತಿಪರಿಣಾಮವಾದ ಮಹತ್ತತ್ತ್ವದಂತೆ ಅತ್ಯಂತಭೀಕರವಾದ ಮತ್ತು ದುರ್ಭೇದ್ಯವಾದ ಕಗ್ಗತ್ತಲನ್ನು–ಶಿಂಜಿನಿಯಿಂದ ಹೊರಬಂದ ರಾಮನ ಬಾಣವು ರಾಕ್ಷಸಸೈನ್ಯವನ್ನು ಧ್ವಂಸಮಾಡಿದಂತೆ–ಮನೋವೇಗದಿಂದ ಧ್ವಂಸ ಮಾಡುತ್ತಾ ಮುನ್ನುಗ್ಗಿಹೋಗುತ್ತಿದ್ದಿತು. ಹೀಗೆ ಸುದರ್ಶನಚಕ್ರವು ತೋರಿಸಿ ಕೊಡಲ್ಪಡುತ್ತಿದ್ದ ಹಾದಿಯಲ್ಲಿ ರಥವು ಮುಂದುವರಿದು ಹೋಗುತ್ತಾ ಗಾಢಾಂಧಕಾರದ ಅಂತಿಮಪ್ರದೇಶವನ್ನು ತಲುಪಿತು. ಅಲ್ಲಿಂದ ಮುಂದೆ ಕೊನೆಮೊದಲಿಲ್ಲದಂತೆ ಹಬ್ಬಿರುವ ಜಗ-ಜಗಿಸುವ ದಿವ್ಯಜ್ಯೋತಿಯನ್ನು ನೋಡಿ ಅರ್ಜುನನ ಕಣ್ಣುಗಳು ಕೋರೈಸಿದಂತಾಗಿ ಆತನು ತನ್ನ ಎರಡು

ಕಣ್ಣುಗಳನ್ನೂ ಮುಚ್ಚಿಕೊಂಡನು. ಬಳಿಕ ಭಗವಂತನ ರಥವು ದಿವ್ಯವಾದ ಜಲರಾಶಿಯನ್ನು ಪ್ರವೇಶಿಸಿತು. ಅತ್ಯಂತಬಲಿಷ್ಠವಾದ ಬಿರುಗಾಳಿಯು ಬೀಸುತ್ತಿದ್ದುದರಿಂದ ಜಲರಾಶಿಯಲ್ಲಿ ದೊಡ್ಡ ದೊಡ್ಡ ಅಲೆಗಳು ಮೇಲೇಳುತ್ತಿದ್ದುವು. ಮಹತ್ತರವಾದ ಆ ಅಲೆಗಳು ಜಲರಾಶಿಗೆ ಭೂಷಣಪ್ರಾಯವಾಗಿ ಕಾಣುತ್ತಿದ್ದುವು. ಜಲರಾಶಿಯ ಮಧ್ಯದಲ್ಲಿ ಸುಂದರವಾದ ಭವನವಿದ್ದಿತು. ಆ ಭವನದಲ್ಲಿ ಮಣಿಮಯವಾದ ಜಗ-ಜಗಿಸುವ ಸಾವಿರಾರು ಸ್ತಂಭಗಳಿದ್ದು ಆ ಭವನದ ಕಾಂತಿಯನ್ನು ಉಜ್ಜ್ವಲಗೊಳಿಸುತ್ತಿದ್ದುವು. ದಿವ್ಯವಾದ ಆ ಭವನದಲ್ಲಿ ಭಗವಾನ್ ಶೇಷನಾಗನು ವಿರಾಜಿಸುತ್ತಿದ್ದನು. ಅವನ ಶರೀರವು ಅತ್ಯಂತ ಭಯಾನಕವೂ ಅದ್ಭುತವೂ ಆಗಿದ್ದಿತು. ಅವನಿಗೆ ಸಾವಿರ ಹೆಡೆಗಳಿದ್ದುವು. ಪ್ರತಿಯೊಂದು ಹೆಡೆಯ ಮೇಲೂ ಸುಂದರವಾದ ಮಣಿಗಳು ಜಗ-ಜಗಿಸುತ್ತಿದ್ದುವು ಮತ್ತು ಪ್ರತಿಯೊಂದು ಹೆಡೆಯಲ್ಲಿಯೂ ಎರಡೆರಡು ಭಯಂಕರವಾದ ಕಣ್ಣುಗಳು ಕಂಗೊಳಿಸುತ್ತಿದ್ದುವು. ಆತನ ಸಮಗ್ರಶರೀರವೂ ಕೈಲಾಸಪರ್ವತದಂತೆ ಬಿಳುಪಾಗಿದ್ದಿತು. ಕತ್ತು ಮತ್ತು ನಾಲಿಗೆಗಳು ನೀಲ ವರ್ಣದಿಂದ ಶೋಭಿಸುತ್ತಿದ್ದುವು.

ಆ ಶೇಷನಾಗನನ್ನೇ ಸುಖಮಯವಾದ ಹಾಸಿಗೆಯನ್ನಾಗಿ ಮಾಡಿಕೊಂಡು ಸರ್ವವ್ಯಾಪಕನೂ ಅತ್ಯಂತಪ್ರಭಾವಶಾಲಿಯೂ ಆದ ಪುರುಷೋತ್ತಮನು ಪವಡಿಸಿರುವುದನ್ನು ಅರ್ಜುನನು ನೋಡಿದನು. ಆ ಪುರುಷೋತ್ತಮನು ನೀಲಮೇಘಶ್ಯಾಮನಾಗಿದ್ದನು. ಸುಂದರವಾದ ಪೀತಾಂಬರವನ್ನು ಉಟ್ಟಿದ್ದನು. ಪ್ರಸನ್ನವದನನಾಗಿದ್ದನು. ಸುಂದರವೂ ಮತ್ತು ವಿಶಾಲವೂ ಆದ ಕಣ್ಣುಗಳನ್ನು ಹೊಂದಿದ್ದನು. ಭಗವಂತನ ಸಾವಿರಾರು ಮುಂಗುರುಳುಗಳು ಮಹಾಮಣಿಗಳ ರಾಶಿಗಳಿಂದ ಸಿದ್ಧಗೊಳಿಸಲ್ಪಟ್ಟಿದ್ದ ಕಿರೀಟ-ಕುಂಡಲಗಳ ಕಾಂತಿಯಿಂದ ರಾರಾಜಿಸುತ್ತಿದ್ದುವು. ಪುರುಷೋತ್ತಮನಿಗೆ ದಪ್ಪವಾಗಿಯೂ ನೀಳವಾಗಿಯೂ ಇದ್ದ ಅಷ್ಟಭುಜಗಳಿದ್ದುವು. ಕಂಠದಲ್ಲಿ ಕೌಸ್ತುಭ ಮಣಿಯಿದ್ದಿತು. ವಕ್ಷಃಸ್ಥಳದಲ್ಲಿ ಶ್ರೀವತ್ಸದ ಚಿಹ್ನೆಯಿದ್ದಿತು. ಆತನು ವನಮಾಲೆಯಿಂದ ಸಮಲಂಕೃತನಾಗಿದ್ದನು. ಸುನಂದ-ನಂದಪ್ರಮುಖರಾದ ಪಾರ್ಷದರಿಂದಲೂ, ಸುದರ್ಶನನೇ ಮೊದಲಾದ ಆಯುಧಾಧಿದೇವತೆಗಳಿಂದಲೂ, ಪುಷ್ಟಿ-ಶ್ರೀ-ಕೀರ್ತಿ ಮತ್ತು ಅಜಾ ಎಂಬ ಈ ನಾಲ್ಕು ಶಕ್ತ್ಯಧಿ

ದೇವತೆಗಳಿಂದಲೂ, ಸಕಲವಿಭೂತಿಗಳಿಂದಲೂ, ಬ್ರಹ್ಮನೇ ಮೊದಲಾದ ಲೋಕಪಾಲರಿಂದಲೂ ಸೇವಿಸಲ್ಪಡುತ್ತಿದ್ದ ದೇವದೇವನಾದ ಆ ಪುರುಷೋತ್ತಮನನ್ನು ಅರ್ಜುನನು ನೋಡಿದನು.

ಪರೀಕ್ಷಿತಮಹಾರಾಜ! ಶ್ರೀಕೃಷ್ಣನು ತನ್ನ ಅನಂತಸ್ವರೂಪವೇ ಆದ ಪುರುಷೋತ್ತಮನಿಗೆ ನಮಸ್ಕರಿಸಿದನು. ಆದರೆ ಅರ್ಜುನನು ಪುರುಷೋತ್ತಮನ ದರ್ಶನದಿಂದ ಸ್ವಲ್ಪ ಭಯಗೊಂಡನು. ಶ್ರೀಕೃಷ್ಣನು ಪುರುಷೋತ್ತಮನಿಗೆ ನಮಸ್ಕರಿಸಿದನಂತರ ತಾನೂ ನಮಸ್ಕರಿಸಿ ಅರ್ಜುನನು ಕೈಗಳೆರಡನ್ನೂ ಜೋಡಿಸಿಕೊಂಡು ನಿಂತಿದ್ದನು. ಹೀಗೆ ಕೈಗಳನ್ನು ಜೋಡಿಸಿಕೊಂಡು ನಿಂತಿದ್ದ ಕೃಷ್ಣಾರ್ಜುನರನ್ನು ಕುರಿತು ಪರಬ್ರಹ್ಮಸ್ವರೂಪನೂ ಲೋಕಪಾಲರೆಲ್ಲರ ಪ್ರಭುವೂ ಆದ ಪುರುಷೋತ್ತಮನು ಅತಿಗಂಭೀರವಾದ ಧ್ವನಿಯಿಂದ ಈ ಮಾತನ್ನು ಹೇಳಿದನು :

ದ್ವಿಜಾತ್ಮಜಾ ಮೇ ಯುವಯೋರ್ದಿದೃಕ್ಷುಣಾ
ಮಯೋಪನೀತಾ ಭುವಿ ಧರ್ಮಗುಪ್ತಯೇ ।
ಕಲಾವತೀರ್ಣಾವವನೇರ್ಭರಾಸುರಾನ್
ಹತ್ವೇಹ ಭೂಯಸ್ತ್ವರಯೇತಮನ್ತಿ ಮೇ ॥೫೯॥

"ಕೃಷ್ಣಾರ್ಜುನರೇ! ನಿಮ್ಮಿಬ್ಬರನ್ನೂ ನೋಡುವ ಸಲುವಾಗಿಯೇ ಬ್ರಾಹ್ಮಣಬಾಲಕರನ್ನು ನನ್ನ ಬಳಿಗೆ ಕರೆತಂದೆನು. ನೀವಿಬ್ಬರೂ ಧರ್ಮದ ರಕ್ಷಣಾರ್ಥವಾಗಿ ನನ್ನ ಅಂಶಗಳಿಂದ ಪೃಥ್ವಿಯಲ್ಲಿ ಅವತರಿಸಿರುವಿರಿ. ಪೃಥ್ವಿಗೆ ಭಾರಭೂತರಾಗಿರುವ ದೈತ್ಯರೆಲ್ಲರನ್ನೂ ಸಂಹರಿಸಿ ನೀವಿಬ್ಬರೂ ಶೀಘ್ರಾತಿಶೀಘ್ರವಾಗಿ ನನ್ನ ಬಳಿಗೆ ಬರಬೇಕು.

ಪೂರ್ಣಕಾಮಾವಪಿ ಯುವಾಂ ನರನಾರಾಯಣಾವೃಷೀ ।
ಧರ್ಮಮಾಚರತಾಂ ಸ್ಥಿತ್ಯೈ ಋಷಭೌ ಲೋಕಸಙ್ಗ್ರಹಮ್ ॥೬೦॥

ನೀವಿಬ್ಬರೂ ಋಷಿಶ್ರೇಷ್ಠರಾದ ನರ-ನಾರಾಯಣರೇ ಆಗಿರುವಿರಿ. ಯದ್ಯಪಿ ನೀವು ಪೂರ್ಣಕಾಮರಾಗಿದ್ದರೂ, ಸರ್ವಶ್ರೇಷ್ಠರಾಗಿದ್ದರೂ, ಲೋಕದಲ್ಲಿ ಧರ್ಮವನ್ನು ನೆಲೆಗೊಳಿಸುವ ಸಲುವಾಗಿ ಧರ್ಮಾಚರಣೆಯನ್ನು ಮಾಡಿರಿ."

ಪರಬ್ರಹ್ಮಸ್ವರೂಪನಾದ ಪರಮಾತ್ಮನು ಕೃಷ್ಣಾರ್ಜುನರಿಗೆ ಹೀಗೆ ಆದೇಶವನ್ನು ನೀಡಲು, ಪ್ರಣವೋಚ್ಚಾರಣೆಯ ಮೂಲಕವಾಗಿ ಆದೇಶವನ್ನು ಅಂಗೀಕರಿಸಿದ ಕೃಷ್ಣಾರ್ಜುನರಿಬ್ಬರೂ ಪುನಃ ಪುರುಷೋತ್ತಮನಿಗೆ ನಮಸ್ಕರಿಸಿ, ಅವನ ಬಳಿಯಲ್ಲೇ ಇದ್ದ ಬಾಲಕರನ್ನು ಕರೆದುಕೊಂಡು ಅತ್ಯಂತ ಹೃಷ್ಟರಾಗಿ–ಮೊದಲು ತಾವು ಯಾವ ಮಾರ್ಗದಿಂದ ಪುರುಷೋತ್ತಮನ ಸನ್ನಿಧಾನಕ್ಕೆ ಬಂದಿದ್ದರೋ ಅದೇ ಮಾರ್ಗದ ಮೂಲಕವಾಗಿ ದ್ವಾರಕೆಯನ್ನು ಸೇರಿ, ಬ್ರಾಹ್ಮಣಬಾಲಕರನ್ನು ಅವರ ತಂದೆಗೆ ಅರ್ಪಿಸಿದರು. ಆ ಬಾಲಕರೆಲ್ಲರೂ ತಮ್ಮ-ತಮ್ಮ ವಯಸ್ಸಿಗೆ ಅನುಗುಣವಾದ ರೂಪವುಳ್ಳವ ರಾಗಿಯೂ ಆಕೃತಿಯುಳ್ಳವರಾಗಿಯೂ ಇದ್ದರು.

ಪರಬ್ರಹ್ಮಪರಮಾತ್ಮನ ಶ್ರೇಷ್ಠವಾದ ಆ ಪರಮಪದವನ್ನು ನೋಡಿ ಅರ್ಜುನನು ಅತ್ಯಾಶ್ಚರ್ಯಗೊಂಡನು. ಮನುಷ್ಯನಲ್ಲೇನಾದರೂ ಯತ್ಕಿಂಚಿತ್ ಬಲ-ಪೌರುಷಗಳಿದ್ದರೆ ಅವು ಕೇವಲ ಶ್ರೀಕೃಷ್ಣನ ಕೃಪೆಯಿಂದಲೇ ದೊರೆತವುಗಳೆಂದು ಅರ್ಜುನನಿಗೆ ದೃಢವಾಯಿತು.

ಪರೀಕ್ಷಿತಮಹಾರಾಜ! ಭಗವಂತನಾದ ಶ್ರೀಕೃಷ್ಣನು ಇಂತಹುದೇ ಅನೇಕವಾದ ಅತ್ಯಾಶ್ಚರ್ಯಕರವಾದ ವೀರ್ಯ-ಶೌರ್ಯಗಳನ್ನು ಪ್ರದರ್ಶಿ ಸುತ್ತಾ ಲೋಕದೃಷ್ಟಿಯಿಂದ ಸಾಧಾರಣಮನುಷ್ಯರಂತೆ ಸಾಂಸಾರಿಕವಾದ ಸುಖೋಪಭೋಗಗಳನ್ನು ಅನುಭವಿಸುತ್ತಾ ದೊಡ್ಡ ದೊಡ್ಡ ರಾಜ-ಮಹಾ ರಾಜರುಗಳಂತೆ ಹಲವಾರು ಯಜ್ಞಗಳನ್ನು ಮಾಡುತ್ತಿದ್ದನು. ದೇವೇಂದ್ರನು ಪ್ರಜೆಗಳ ಸಲುವಾಗಿ ಕಾಲ ಕಾಲಕ್ಕೆ ಮಳೆಗರೆಯುವಂತೆ–ಆದರ್ಶಮಹಾ ಪುರುಷನೇ ಆಗಿದ್ದ ಶ್ರೀಕೃಷ್ಣನು ಬ್ರಾಹ್ಮಣರೇ ಮೊದಲಾದ ಪ್ರಜಾವರ್ಗಕ್ಕೆ ಸಕಲವಾದ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡುತ್ತಿದ್ದನು. ಶ್ರೀಕೃಷ್ಣನು ಅಧ ರ್ಮಿಷ್ಠರಾದವರನ್ನು ತಾನು ಸಂಹರಿಸಿದುದಲ್ಲದೆ ಅರ್ಜುನನೇ ಮೊದಲಾದ ವೀರರ ಮೂಲಕವಾಗಿಯೂ ದುಷ್ಟರ ನಿರ್ಮೂಲನವನ್ನು ಮಾಡಿಸುತ್ತಾ, ಯುಧಿಷ್ಠಿರನೇ ಮೊದಲಾದ ಧಾರ್ಮಿಕರಾಜರ ಮೂಲಕವಾಗಿ ಅನಾಯಾಸ ವಾಗಿ ಲೋಕದಲ್ಲಿ ಧರ್ಮದ ಮರ್ಯಾದೆಯನ್ನು ಸಂಸ್ಥಾಪಿಸಿದನು.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೮೯ನೆಯ ಅಧ್ಯಾಯವು ಮುಗಿಯಿತು.

---

ದಶಮಸ್ಕಂಧ ೬೦ನೆಯ ಅಧ್ಯಾಯ

## ಭಗವಂತನ ಲೀಲಾವಿಹಾರವರ್ಣನೆ

ಶ್ರೀಶುಕಮುನಿಗಳು ಹೇಳುತ್ತಾರೆ :

**ಸುಖಂ ಸ್ವಪುರ್ಯಾಂ ನಿವಸನ್ದ್ವಾರಕಾಯಾಂ ಶ್ರಿಯಃ ಪತಿಃ ।**
**ಸರ್ವಸಮ್ಪತ್ಸಮೃದ್ಧಾಯಾಂ ಜುಷ್ಟಾಯಾಂ ವೃಷ್ಣಿಪುಙ್ಗವೈಃ ॥೧॥**

"ಪರೀಕ್ಷಿತಮಹಾರಾಜ! ಶ್ರಿಯಃಪತಿಯಾದ ಶ್ರೀಕೃಷ್ಣನು ಸಕಲ ವಿಧವಾದ ಸಂಪತ್ತುಗಳಿಂದಲೂ ಸಮೃದ್ಧವಾಗಿದ್ದ ತನ್ನ ಪಟ್ಟಣವಾದ ದ್ವಾರಕೆಯಲ್ಲಿ ಯಾದವಶ್ರೇಷ್ಠರಿಂದ ಪರಿವೃತನಾಗಿ ಸುಖದಿಂದ ವಾಸಮಾಡಿಕೊಂಡಿದ್ದನು. ನವಯೌವನದ ಕಾಂತಿಯಿಂದ ಬೆಳಗುತ್ತಿದ್ದ, ಶ್ರೇಷ್ಠವಾದ ವೇಷಭೂಷಣಗಳನ್ನು ಧರಿಸಿದ್ದ, ಮಿಂಚಿನಂತೆ ಕಾಂತಿಯುಳ್ಳವರಾಗಿದ್ದ, ಅಂತಃಪುರಗಳಲ್ಲಿ ಚೆಂಡಾಟಗಳನ್ನಾಡುತ್ತಿದ್ದ ಶ್ರೀಕೃಷ್ಣನ ಪ್ರೇಯಸಿಯರಿಂದ ದ್ವಾರಕೆಯು ಬೆಳಗುತ್ತಿದ್ದಿತು. ದ್ವಾರಕಾಪಟ್ಟಣದ ಬೀದಿಗಳು ಮದೋದಕವನ್ನು ಸುರಿಸುತ್ತಿದ್ದ ಮಹಾಗಜಗಳಿಂದಲೂ, ವಸ್ತ್ರಾಭರಣ ಗಳಿಂದ ಸಮಲಂಕೃತರಾದ ಭಟರಿಂದಲೂ, ಶ್ರೇಷ್ಠವಾದ ಕುದುರೆಗಳಿಂದಲೂ ಮತ್ತು ಕನಕಾಲಂಕಾರಭೂಷಿತವಾದ ರಥಗಳಿಂದಲೂ ನಿಬಿಡವಾಗಿದ್ದುವು. ದ್ವಾರಕಾಪಟ್ಟಣದಲ್ಲಿ ಅಡಿಗಡಿಗೂ ಉದ್ಯಾನಗಳೂ, ಹೂದೋಟಗಳೂ, ತೋಪುಗಳೂ ಇರುತ್ತಿದ್ದುವು. ಅವುಗಳಲ್ಲಿದ್ದ ಹೂವುಗಳಿಂದ ಸಮಲಂಕೃತವಾದ ಗಿಡ-ಮರ-ಬಳ್ಳಿಗಳಲ್ಲಿ ದುಂಬಿಗಳೂ, ಹಕ್ಕಿಗಳೂ ಕುಳಿತು ಇಂಪಾಗಿ ಗಾನಮಾಡುತ್ತಿದ್ದುವು.

ಭಗವಾನ್ ಶ್ರೀಕೃಷ್ಣನು ಹದಿನಾರು ಸಾವಿರಕ್ಕಿಂತಲೂ ಅಧಿಕರಾದ ಪತ್ನಿಯರಿಗೂ ಏಕಮಾತ್ರವಲ್ಲಭನಾಗಿದ್ದನು. ಪ್ರಭುವಿನ ಪತ್ನಿಯರ ಪ್ರತ್ಯೇಕ ಪ್ರತ್ಯೇಕವಾದ ಅರಮನೆಗಳೂ ಐಶ್ವರ್ಯದಿಂದ ಸಮೃದ್ಧವಾಗಿದ್ದುವು. ಎಷ್ಟು ಸಂಖ್ಯೆಯಲ್ಲಿ ಪತ್ನಿಯರಿದ್ದರೋ ಶ್ರೀಕೃಷ್ಣನು ಅಷ್ಟೇ ಸಂಖ್ಯೆಯಲ್ಲಿ ಚಿತ್ರ-ವಿಚಿತ್ರವಾದ ರೂಪಗಳನ್ನು ಧರಿಸಿ ಅವರೊಡನೆ ಪ್ರತ್ಯೇಕ-ಪ್ರತ್ಯೇಕವಾಗಿ ವಿಹರಿಸುತ್ತಿದ್ದನು. ಎಲ್ಲ ಪತ್ನಿಯರ ಅರಮನೆಗಳಲ್ಲಿಯೂ ಸುಂದರವಾದ ಸರೋವರಗಳಿದ್ದುವು. ಅವುಗಳಲ್ಲಿದ್ದ ನಿರ್ಮಲವಾದ ನೀರು ನೈದಿಲೆ-

ಕೆಂದಾವರೆ-ಬಿಳಿನೈದಿಲೆ-ಶತಪತ್ರ–ಇವೇ ಮುಂತಾದ ಬಗೆ-ಬಗೆಯ ಕಮಲ ಪುಷ್ಪಗಳ ಪರಾಗದಿಂದ ಸುಗಂಧಿತವಾಗಿದ್ದಿತು. ಆ ಸರೋವರಗಳಲ್ಲಿ ಹಂಸ-ಸಾರಸ ಇವೇ ಮುಂತಾದ ಜಲಚರಪಕ್ಷಿಗಳು ನಲಿದಾಡುತ್ತಿದ್ದುವು. ಭಗವಾನ್ ಶ್ರೀಕೃಷ್ಣನು ಅಂತಹ ಸುಂದರವಾದ ಸರೋವರಗಳಲ್ಲಿಯೂ ಕೆಲವೊಮ್ಮೆ ನದಿಗಳಲ್ಲಿಯೂ ತನ್ನ ಪತ್ನಿಯರೊಡನೆ ಜಲಕ್ರೀಡೆಯಾಡು ತ್ತಿದ್ದನು. ಮಹಾನುಭಾವನಾದ ಶ್ರೀಕೃಷ್ಣನು ಹಾಗೆ ಜಲಕ್ರೀಡೆಯಾಡುತ್ತಿದ್ದಾಗ ಪತ್ನಿಯರಿಂದ ಆಲಿಂಗಿಸಲ್ಪಟ್ಟು ಅವರ ಕುಚಕುಂಕುಮಗಂಧಗಳಿಂದ ಲಿಪ್ತವಾದ ವಕ್ಷಃಸ್ಥಳದಿಂದ ಕೂಡಿ ಬಹಳವಾಗಿ ಶೋಭಿಸುತ್ತಿದ್ದನು. ಆ ಸಮಯದಲ್ಲಿ ಗಂಧರ್ವರು ಶ್ರೀಕೃಷ್ಣನ ಧರ್ಮ-ಕೀರ್ತಿಗಳನ್ನು ಗಾನಮಾಡು ತ್ತಿದ್ದರು. ಸೂತ-ಮಾಗಧ-ವಂದಿಗಳು ಆನಂದತುಂದಿಲರಾಗಿ ವೀಣಾ-ಮೃದಂಗ-ಮದ್ದಳೆಗಳನ್ನು ಬಾರಿಸುತ್ತಿದ್ದರು. ಶ್ರೀಕೃಷ್ಣನ ಪತ್ನಿಯರು ಕಿಲ-ಕಿಲನೆ ನಗುತ್ತಾ ಅವನ ಸುತ್ತಲೂ ನಿಂತು ಜೀರ್ಕೊಳವೆಯಿಂದ ಶ್ರೀಕೃಷ್ಣನ ಮೇಲೆ ನೀರುಸುರಿಸುವರು. ಇದಕ್ಕೆ ಪ್ರತಿಯಾಗಿ ಶ್ರೀಕೃಷ್ಣನು ಅವರ ಮೇಲೆ ರಭಸದಿಂದ ನೀರುಗ್ಗುತ್ತಾ ಯಕ್ಷಸ್ತ್ರೀಯರೊಡನೆ ಯಕ್ಷರು ಜಲಕ್ರೀಡೆ ಯಾಡುವಂತೆ ನೀರಿನಾಟವಾಡುತ್ತಿದ್ದನು. ನೀರಿನ ಎರಚಾಟದಿಂದ ಲಲನೆ ಯರ ವಸ್ತ್ರಗಳು ನೆನೆದು ಪಾರದರ್ಶಕಗಳಾಗಿ ಅವರ ಕುಚ-ನಿತಂಬ-ತೊಡೆ ಗಳು ಕಾಣುತ್ತಿದ್ದುವು. ಅವರ ದೊಡ್ಡ ದೊಡ್ಡ ಮುಡಿಗಳಿಂದ ಪುಷ್ಪಗಳು ಉದುರುತ್ತಿದ್ದುವು. ಕೃಷ್ಣನಿಂದ ನೀರನ್ನು ಸುರಿಸಲ್ಪಡುತ್ತಿದ್ದ ಜೀರ್ಕೊಳವೆಯನ್ನು ಕಿತ್ತುಕೊಳ್ಳುವ ಸಲುವಾಗಿ ಪ್ರಮದೆಯರು ಪುರುಷೋತ್ತಮನ ಕೈಗಳು ಅಳ್ಳಾಡದಂತೆ ಅವನನ್ನು ಬಾಚಿತಬ್ಬಿಕೊಳ್ಳುವರು. ಆನಂದದಾಯಕವಾದ ಆಲಿಂಗನದ ಮದನೋತ್ಸವದಿಂದ ಕಾಮತೃಪ್ತಿಯುಂಟಾಗಿ ಅವರು ವಿಕಸಿತವಾದ ಮುಖಕಮಲಗಳಿಂದ ರಾರಾಜಿಸುತ್ತಿದ್ದರು.

ಆ ಸಮಯದಲ್ಲಿ ಶ್ರೀಕೃಷ್ಣನು ಕೂಡ ತನ್ನ ಪ್ರೇಯಸಿಯರನ್ನು–ಅವರ ಕುಚಕುಂಕುಮವು ತನ್ನ ವನಮಾಲೆಗೆ ಅಂಟಿಕೊಳ್ಳುವಂತೆ ಅವರನ್ನು ಗಾಢವಾಗಿ ಆಲಿಂಗಿಸಿಕೊಂಡು ಆನಂದಪಡಿಸುತ್ತಿದ್ದನು. ನೀರಿನಾಟದ ಸಂಭ್ರಮದಲ್ಲಿ ಶ್ರೀಕೃಷ್ಣನ ಗಂಗುರುಕೂದಲುಗಳು ಬಿಚ್ಚಿಕೊಂಡು ತಲೆಯ ಸುತ್ತಲೂ ಹರಡಿಕೊಂಡಿದ್ದುವು. ಹೀಗೆ ಮದನಮೋಹನನಾದ ಶ್ರೀಕೃಷ್ಣನು

ಪ್ರೇಯಸಿಯರಮೇಲೆ ಬಾರಿ-ಬಾರಿಗೂ ನೀರನ್ನೆರಚುತ್ತಾ ಅವರಿಂದ ನೀರನ್ನೆರಚಿಸಿಕೊಳ್ಳುತ್ತಾ ಹೆಣ್ಣಾನೆಗಳಿಂದ ಸುತ್ತುವರಿದ ಸಲಗನಂತೆಯೇ ಶೋಭಾಯಮಾನನಾಗಿ ಕಾಣುತ್ತಿದ್ದನು. ಹೀಗೆ ಜಲಕ್ರೀಡೆಯಾಡಿದ ಬಳಿಕ ಶ್ರೀಕೃಷ್ಣನೂ ಮತ್ತು ಅವನ ಪ್ರೇಯಸಿಯರೂ ಗೀತವಾದ್ಯೋಪಜೀವಿಗಳಾದ ನಟ-ನರ್ತಕರಿಗೆ ಆಟದ ಸಮಯದಲ್ಲಿ ಧರಿಸಿದ್ದ ಅಲಂಕಾರವಸ್ತುಗಳನ್ನೂ ವಸ್ತ್ರಗಳನ್ನೂ ಕೊಡುತ್ತಿದ್ದರು.

ಪರೀಕ್ಷಿತಮಹಾರಾಜ! ಈ ರೀತಿಯಲ್ಲಿ ಶ್ರೀಕೃಷ್ಣನು ತನ್ನ ಪ್ರೇಯಸಿಯರೊಡನೆ ಆಟ-ಪಾಟಗಳಲ್ಲಿ ನಿರತನಾಗಿರುತ್ತಿದ್ದನು. ಶ್ರೀಕೃಷ್ಣನು ಪ್ರಿಯಾಲಾಪಗಳಿಂದಲೂ, ಮಂದಗಮನದಿಂದಲೂ, ಕಿರುನಗೆಯಿಂದಲೂ, ಪರಿಹಾಸೋಕ್ತಿಗಳಿಂದಲೂ, ಕಡೆಗಣ್ಣಿನ ನೋಟದಿಂದಲೂ, ಆಲಿಂಗನ-ಚುಂಬನಾದಿಗಳಿಂದಲೂ ಸ್ತ್ರೀಯರ ಮನಸ್ಸನ್ನು ಸಂಪೂರ್ಣವಾಗಿ ಅಪಹರಿಸಿಬಿಟ್ಟನು.

ರಾಣಿಯರಿಗೆ ಜೀವನಸರ್ವಸ್ವವೂ ಏಕಮಾತ್ರಹೃದಯೇಶ್ವರನಾದ ಶ್ರೀಕೃಷ್ಣನೇ ಆಗಿದ್ದನು. ಅವರು ಕೆಲವು ವೇಳೆ ಯಾರೊಂದಿಗೂ ಯಾವ ಮಾತನ್ನೂ ಆಡದೆ ಕಮಲನಯನನಾದ ಶ್ಯಾಮಸುಂದರನ ಧ್ಯಾನದಲ್ಲಿಯೇ ಇದ್ದುಬಿಡುತ್ತಿದ್ದರು. ಕೆಲವೊಮ್ಮೆ ಹುಚ್ಚರಂತೆ ಅಸಂಬದ್ಧವಾದ ಮಾತುಗಳನ್ನಾಡುವರು. ಕೆಲವೊಮ್ಮೆ ಶ್ರೀಕೃಷ್ಣನ ಸಾನ್ನಿಧ್ಯದಲ್ಲೇ ಇದ್ದರೂ ಶ್ರೀಕೃಷ್ಣನ ವಿರಹವೇದನೆಯನ್ನು ಅನುಭವಿಸುತ್ತಿರುವಂತೆ ಕಾಣುತ್ತಿದ್ದರು. ತಾವು ಏನು ಹೇಳುತ್ತಿದ್ದೇವೆಂಬುದು ಅವರಿಗೇ ತಿಳಿಯುತ್ತಿರಲಿಲ್ಲ. ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಲೀನಗೊಳಿಸಿ ಹುಚ್ಚರಂತಾಗಿಬಿಟ್ಟಿದ್ದ ಶ್ರೀಕೃಷ್ಣನ ಪ್ರೇಯಸಿಯರಾಡುತ್ತಿದ್ದ ಮಾತುಗಳನ್ನು ಯಥಾವತ್ತಾಗಿ ಹೇಳುವೆನು, ಕೇಳು; ಮಹಾರಾಜ!

**ಕುರರಿ ವಿಲಪಸಿ ತ್ವಂ ವೀತನಿದ್ರಾ ನ ಶೇಷೇ**
**ಸ್ವಪಿತಿ ಜಗತಿ ರಾತ್ರ್ಯಾಮೀಶ್ವರೋ ಗುಪ್ತಬೋಧಃ ।**
**ವಯಮಿವ ಸಖಿ ಕಚ್ಚಿದ್ಗಾಢನಿರ್ಭಿನ್ನಚೇತಾ**
**ನಲಿನನಯನಹಾಸೋದಾರಲೀಲೇಕ್ಷಿತೇನ ॥೧೫॥**

“ಕುರರಪಕ್ಷಿಯೇ! ಸರ್ವೇಶ್ವರನಾದ ಶ್ರೀಕೃಷ್ಣನು ಬಾಹ್ಯವಿಷಯ

ಗಳನ್ನು ಮರೆತು ಈ ರಾತ್ರಿಯಲ್ಲಿ ಸುಖವಾಗಿ ನಿದ್ರಿಸುತ್ತಿದ್ದಾನೆ. ನೀನಾದರೋ ನಿದ್ರಿಸುತ್ತಿಲ್ಲ ಮಾತ್ರವಲ್ಲ, ಅಳುತ್ತಿರುವೆ. ಇದರಿಂದ ಪ್ರಭುವಿನ ನಿದ್ರೆಗೆ ಭಂಗವುಂಟಾಗದೇ? ಸಖಿಯೇ! ಕಮಲಾಕ್ಷನಾದ ಶ್ರೀಕೃಷ್ಣನ ಉದಾರವಾದ ಲೀಲಾಕಟಾಕ್ಷವೀಕ್ಷಣದಿಂದ ಗಾಢವಾಗಿ ಕಡದಿಹೋದ ಮನಸ್ಸುಳ್ಳವಳಾಗಿರುವೆಯಾ?

**ನೇತ್ರೇ ನಿಮೀಲಯಸಿ ನಕ್ತಮದೃಷ್ಟಬನ್ಧು-**
**ಸ್ತ್ವಂ ರೋರವೀಷಿ ಕರುಣಂ ಬತ ಚಕ್ರವಾಕಿ ।**
**ದಾಸ್ಯಂ ಗತಾ ವಯಮಿವಾಚ್ಯುತಪಾದಜುಷ್ಟಾಂ**
**ಕಿಂ ವಾ ಸ್ರಜಂ ಸ್ಪೃಹಯಸೇ ಕಬರೇಣ ವೋಢುಮ್ ॥**

ಚಕೋರಿಯೇ! ನೀನೇಕೆ ರಾತ್ರಿಯ ವೇಳೆಯಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡಿರುವೆ? ನಿನ್ನ ಪತಿದೇವನೇನಾದರೂ ದೇಶಾಂತರಕ್ಕೆ ಹೋಗಿ ಬಿಟ್ಟಿರುವನೇ? ಈ ಕಾರಣದಿಂದಲೇ ನೀನು ಕರುಣಾಜನಕವವಾದ ಸ್ವರದಲ್ಲಿ ಕೂಗಿಕೊಳ್ಳುತ್ತಿರುವೆಯಾ? ಅಯ್ಯೋ ಪಾಪ! ನೀನು ಬಹಳ ದುಃಖಿಯಾಗಿ ರುವೆ. ಅಥವಾ ನೀನೇನಾದರೂ ನಮ್ಮಂತೆಯೇ ನಿನ್ನ ಮನಸ್ಸಿನಲ್ಲಿ ಭಗವಂತ ನಾದ ಶ್ರೀಕೃಷ್ಣನ ದಾಸೀಭಾವವನ್ನು ಆಶಿಸಿರುವೆಯಾ? ಈ ಕಾರಣದಿಂದಲೇ ನೀನು ಅವನ ಚರಣಾರವಿಂದಗಳ ಬಳಿಯಲ್ಲಿ ಬಿದ್ದಿರುವ ಪುಷ್ಪಗುಚ್ಛವನ್ನು ತುರುಬಿನಲ್ಲಿ ಧರಿಸಲು ಅಪೇಕ್ಷಿಸಿರುವೆಯಾ?

**ಭೋ ಭೋಃ ಸದಾ ನಿಷ್ಟನಸೇ ಉದನ್ವ-**
**ನ್ನ ಲಬ್ಧನಿದ್ರೋಽಧಿಗತಪ್ರಜಾಗರಃ ।**
**ಕಿಂ ವಾ ಮುಕುನ್ದಾಪಹೃತಾತ್ಮಲಾಞ್ಛನಃ**
**ಪ್ರಾಪ್ತಾಂ ದಶಾಂ ತ್ವಂ ಚ ಗತೋ ದುರತ್ಯಯಾಮ್ ॥**

ಭೋ ಭೋ ಸಮುದ್ರರಾಜನೇ! ನಿದ್ರೆಯು ಬಾರದೇ ಜಾಗರಣೆ ಮಾಡುತ್ತಾ ಸದಾಕಾಲದಲ್ಲಿಯೂ ಒಂದೇಸಮನಾಗಿ ಕೂಗಿಕೊಳ್ಳುತ್ತಿರುವೆ. ಮುಕುಂದನು ಆಲಿಂಗನದ ವ್ಯಾಜದಲ್ಲಿ ನಮ್ಮ ಕುಚಕುಂಕುಮ-ಗಂಧಗಳನ್ನು ಅಪಹರಿಸಿರುವಂತೆ ನಿನ್ನಲ್ಲಿದ್ದ ಲಕ್ಷ್ಮೀ-ಕೌಸ್ತುಭರೇ ಮುಂತಾದುವನ್ನು ಅಪಹರಿಸಿದುದಕ್ಕಾಗಿ ದುರವಸ್ಥೆಯನ್ನು ಹೊಂದಿ ಹೀಗೆ ಕೂಗಿಕೊಳ್ಳು ತ್ತಿರುವೆಯಾ?

**ತ್ವಂ ಯಕ್ಷ್ಮಣಾ ಬಲವತಾಸಿ ಗೃಹೀತ ಇನ್ದೋ**
**ಕ್ಷೀಣಸ್ತಮೋ ನ ನಿಜದೀಧಿತಿಭಿಃ ಕ್ಷಿಣೋಷಿ ।**
**ಕಚ್ಚಿನ್ಮುಕುನ್ದಗದಿತಾನಿ ಯಥಾ ವಯಂ ತ್ವಂ**
**ವಿಸ್ಮೃತ್ಯ ಭೋಃ ಸ್ಥಗಿತಗೀರುಪಲಕ್ಷ್ಯಸೇ ನಃ ॥೧೮॥**

ಚಂದ್ರನೇ! ನೀನು ಬಲವಾದ ಕ್ಷಯರೋಗದಿಂದ ಪೀಡಿತನಾಗಿರುವೆ. ಅದರಿಂದಲೇ ಅತ್ಯಂತ ದುರ್ಬಲನಾಗಿರುವೆ. ಈಗ ನಿನ್ನ ಕ್ಷೀಣಿಸಿದ ಕಿರಣಗಳು ಕತ್ತಲೆಯನ್ನು ಹೋಗಲಾಡಿಸುವ ಸಾಮರ್ಥ್ಯವನ್ನು ಹೊಂದಿಲ್ಲ. ಅಥವಾ ಹೀಗಿರಲಾರದು. ನಮ್ಮಂತೆಯೇ ನೀನೂ ಕೂಡ ಶ್ಯಾಮಸುಂದರನ ಮೃದು-ಮಧುರವಾದ ರಹಸ್ಯವಾದ ಮಾತುಗಳನ್ನು ಮರೆತು ಅದನ್ನೇ ಪುನಃ ಪುನಃ ಸ್ಮರಿಸಿಕೊಳ್ಳುತ್ತಾ ಕ್ಷೀಣಕಿರಣನೂ ಮೌನಿಯೂ ಆಗಿರಬಹುದೇ?

**ಕಿಂ ತ್ವಾಚರಿತಮಸ್ಮಾಭಿರ್ಮಲಯಾನಿಲ ತೇಽಪ್ರಿಯಮ್ ।**
**ಗೋವಿನ್ದಾಪಾಙ್ಗನಿರ್ಭಿನ್ನೇ ಹೃದೀರಯಸಿ ನಃ ಸ್ಮರಮ್ ॥೧೯॥**

ಮಲಯಾನಿಲನೇ! ನಿನ್ನ ಬೀಸುವಿಕೆಯಿಂದ ನಮ್ಮ ಹೃದಯದಲ್ಲಿ ಸುಪ್ತನಾಗಿರುವ ಕಾಮದೇವನನ್ನು ಹೊಡೆದು ಎಬ್ಬಿಸುತ್ತಿರುವೆಯಲ್ಲವೇ? ನಾವೇನು ನಿನಗೆ ಅಪರಾಧವೆಸಗಿದ್ದೇವೆ? ಈ ಮೊದಲೇ ನಾವು ಗೋವಿಂದನ ಕಟಾಕ್ಷವೀಕ್ಷಣದ ಸ್ಮರಣೆಯಿಂದ ಒಡೆದುಹೋದ ಹೃದಯವುಳ್ಳವರಾಗಿದ್ದೇವೆ. ಇದರ ಜೊತೆಗೆ ನಿನ್ನ ಸಹವಾಸವೂ ಸಿಕ್ಕಿಬಿಟ್ಟರೆ ನಾವು ಹುಚ್ಚರೇ ಆಗಿಬಿಡುತ್ತೇವೆ.

**ಮೇಘ ಶ್ರೀಮಂಸ್ತ್ವಮಸಿ ದಯಿತೋ ಯಾದವೇನ್ದ್ರಸ್ಯ ನೂನಂ**
**ಶ್ರೀವತ್ಸಾಙ್ಕಂ ವಯಮಿವ ಭವಾನ್ ಧ್ಯಾಯತಿ ಪ್ರೇಮಬದ್ಧಃ ।**
**ಅತ್ಯುತ್ಕಣ್ಠಃ ಶಬಲಹೃದಯೋಽಸ್ಮದ್ವಿಧೋ ಬಾಷ್ಪಧಾರಾಃ**
**ಸ್ಮೃತ್ವಾ ಸ್ಮೃತ್ವಾ ವಿಸೃಜಸಿ ಮುಹುರ್ದುಃಖದಸ್ತತ್ಪ್ರಸಙ್ಗಃ ॥೨೦॥**

ಶ್ರೀಮಂತನಾದ ಮೇಘರಾಜನೇ! ನೀನೂ ಶ್ಯಾಮಲವರ್ಣನಾಗಿರುವುದರಿಂದ ಮೇಘಶ್ಯಾಮನಾದ ನಮ್ಮ ಪ್ರಿಯತಮನಿಗೆ ಅತ್ಯಂತಪ್ರಿಯನಾಗಿರುವೆ. ಅಂತೆಯೇ ನಿನಗೂ ಕೂಡ ಅವನ ಮೇಲೆ ಅತಿಶಯವಾದ ಪ್ರೀತಿಯಿದೆ. ಆದುದರಿಂದ ನಮ್ಮಂತೆಯೇ ನೀನೂ ಕೂಡ ಪ್ರೇಮಪಾಶ

ದಿಂದ ಬಂಧಿಸಲ್ಪಟ್ಟವನಾಗಿ ಶ್ರೀವತ್ಸಾಂಕನನ್ನೇ ಸದಾ ಧ್ಯಾನಿಸುತ್ತಿರುವೆ. ನಮ್ಮಂತೆಯೇ ನೀನೂ ಕೂಡ ಬಹಳ ಕುತೂಹಲದಿಂದ ಕೂಡಿದವನಾಗಿ, ನಾನಾ ವಿಧವಾದ ಭಾವಗಳಿಂದ ಕೂಡಿದ ಮನಸ್ಸುಳ್ಳವನಾಗಿ, ಮೇಘಶ್ಯಾಮ ನನ್ನು ಸ್ಮರಿಸುತ್ತಾ ಕಂಬನಿಗಳ ಧಾರೆಗಳನ್ನೇ ಸುರಿಸುವೆ. ನಿಶ್ಚಯವಾಗಿಯೂ ನಿನ್ನ ಈ ಸ್ಥಿತಿಯು ದುಃಖವನ್ನುಂಟುಮಾಡತಕ್ಕದ್ದೇ ಆಗಿದೆ.

**ಪ್ರಿಯರಾವಪದಾನಿ ಭಾಷತೇ ಮೃತಸಞ್ಜೀವಿಕಯಾನಯಾ ಗಿರಾ ।**
**ಕರವಾಣಿ ಕಿಮದ್ಯ ತೇ ಪ್ರಿಯಂ ವದ ಮೇ ವಲ್ಗಿತಕಣ್ಠ ಕೋಕಿಲ ॥**

ರಮಣೀಯವಾದ ಕಂಠಮಾಧುರ್ಯವುಳ್ಳ ಕೋಗಿಲೆಯೇ! ನಮ್ಮ ಪ್ರಿಯಕರನಾದ ಶ್ರೀಕೃಷ್ಣಮೂರ್ತಿಯಂತೆಯೇ ನೀನೂ ಕೂಡ ಮೃದು-ಮಧುರವಾದ, ಸತ್ತವರನ್ನೂ ಬದುಕಿಸುವ ಮಾಧುರ್ಯದಿಂದ ಕೂಡಿರುವ ಮಾತುಗಳನ್ನೇ ಆಡುವೆ. ನಿನ್ನ ಧ್ವನಿಯನ್ನು ಕೇಳಿದರೆ ನಮ್ಮ ಪ್ರಿಯ ಕರನ ಧ್ವನಿಯೇ ಜ್ಞಾಪಕಕ್ಕೆ ಬರುತ್ತದೆ. ನಿನಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಿಕೊಡಬೇಕೆಂಬುದನ್ನು ಹೇಳು. ಈಗಲೇ ಮಾಡಿ ಕೊಡುತ್ತೇನೆ.

**ನ ಚಲಸಿ ನ ವದಸ್ಯುದಾರಬುದ್ಧೇ**
**ಕ್ಷಿತಿಧರ ಚಿನ್ತಯಸೇ ಮಹಾನ್ತಮರ್ಥಮ್ ।**
**ಅಪಿ ಬತ ವಸುದೇವನನ್ದನಾಂಘ್ರಿಂ**
**ವಯಮಿವ ಕಾಮಯಸೇ ಸ್ತನೈರ್ವಿಧರ್ತುಮ್ ॥೨೨॥**

ಉದಾರಬುದ್ಧಿಯವನಾದ ಕ್ಷಿತಿಧರನೇ! ಪರ್ವತನೇ! ನೀನು ಚಲಿಸುವುದಿಲ್ಲ. ಮಾತನಾಡುವುದೂ ಇಲ್ಲ. ಯಾವುದೋ ಗಂಭೀರವಾದ ವಿಷಯವನ್ನು ಕುರಿತು ಆಲೋಚಿಸುತ್ತಿರುವವನಂತೆ ಕಾಣುತ್ತಿರುವೆ. ನಾವು ನಮ್ಮ ಸ್ತನಗಳಿಂದ ಧರಿಸಲು ಬಯಸುವ ವಾಸುದೇವನ ಚರಣಾರ ವಿಂದಗಳನ್ನು ನಿನ್ನ ಶಿಖರಗಳಿಂದೇನಾದರೂ ಧರಿಸಲು ಅಪೇಕ್ಷಿಸುತ್ತಿರು ವೆಯಾ? ಅದನ್ನೇ ಗಾಢವಾಗಿ ಯೋಚಿಸುತ್ತಿರುವೆಯಾ? ಹೇಳು.

**ಶುಷ್ಯದ್ಧ್ರದಾಃ ಕರ್ಶಿತಾ ಬತ ಸಿನ್ಧುಪತ್ನ್ಯಃ**
**ಸಂಪ್ರತ್ಯಪಾಸ್ತಕಮಲಶ್ರಿಯ ಇಷ್ಟಭರ್ತುಃ ।**

**ಯದ್ವದ್ವಯಂ ಮಧುಪತೇಃ ಪ್ರಣಯಾವಲೋಕ-**
**ಮಪ್ರಾಪ್ಯ ಮುಷ್ಟಹೃದಯಾಃ ಪುರುಕರ್ಶಿತಾಃ ಸ್ಮ ॥**

ಸಮುದ್ರರಾಜನ ಪ್ರೇಯಸಿಯರೇ! ನದಿಗಳೇ! ಮೇಘರಾಜನ ಮೂಲಕ ನಿಮ್ಮ ಪ್ರೀತಿಯ ಪತಿಯಾದ ಸಮುದ್ರರಾಜನ ನೀರನ್ನು ಪಡೆಯದೇ ಇರುವುದರಿಂದ ನಿಮ್ಮಲ್ಲಿನ ಮಡುಗಳೆಲ್ಲವೂ ಬತ್ತಿಹೋಗಿವೆ. ಕಮಲಗಳೂ ಕಾಂತಿಹೀನವಾಗಿವೆ. ನಾವು ಯಾವ ರೀತಿಯಲ್ಲಿ ಯದುಪತಿಯಾದ ಶ್ರೀಕೃಷ್ಣನ ಪ್ರೇಮಪೂರ್ಣವಾದ ಕಟಾಕ್ಷವೀಕ್ಷಣವನ್ನು ಕಾಣದೇ ನಮ್ಮ ಮನಸ್ಸುಗಳನ್ನು ಕಳೆದುಕೊಂಡು (ಅವನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ) ಬಹಳ ಕೃಶರಾಗಿದ್ದೇವೆಯೋ ಹಾಗೆಯೇ ನೀವೂ ಕೂಡ ಪತಿಯಾದ ಸಮುದ್ರರಾಜನ ಸಂಪರ್ಕವಿಲ್ಲದೆ ಬಹಳ ಕೃಶರಾಗಿರುವಿರಿ.

**ಹಂಸ ಸ್ವಾಗತಮಾಸ್ಯತಾಂ ಪಿಬ ಪಯೋ ಬ್ರೂಹ್ಯಙ್ಗ ಶೌರೇಃ ಕಥಾಂ**
**ದೂತಂ ತ್ವಾಂ ನು ವಿದಾಮ ಕಚ್ಚಿದಜಿತಃ ಸ್ವಸ್ತ್ಯಾಸ್ತ ಉಕ್ತಂ ಪುರಾ ।**
**ಕಿಂ ವಾ ನಶ್ಚಲಸೌಹೃದಃ ಸ್ಮರತಿ ತಂ ಕಸ್ಮಾದ್ಭಜಾಮೋ ವಯಂ**
**ಕ್ಷೌದ್ರಾಲಾಪಯ ಕಾಮದಂ ಶ್ರಿಯಮೃತೇ ಸೈವೈಕನಿಷ್ಠಾ ಸ್ತ್ರಿಯಾಂ**
**॥೨೪॥**

ಬಾ ಹಂಸ! ಬಾ! ನಿನಗೆ ಸ್ವಾಗತ ಬಯಸುತ್ತೇವೆ. ಈ ಪೀಠದಲ್ಲಿ ಕುಳಿತುಕೊ. ಸ್ವಲ್ಪವೇ ಸ್ವಲ್ಪ ಹಾಲುಕುಡಿ. ಶ್ಯಾಮಸುಂದರನ ಸಮಾಚಾರ ವನ್ನು ಹೇಳು. ನೀನು ಅವನ ದೂತನಾಗಿ ಬಂದಿರುವೆಯೆಂದು ನಾವು ತಿಳಿಯುತ್ತೇವೆ. ಯಾರಿಗೂ ವಶನಾಗದೇ ಇರುವ ಆ ನಮ್ಮ ಮದನಮೋಹ ನನು ಸುಕುಶಲಿಯಾಗಿರುವನಲ್ಲವೇ? ಹಂಸವೇ! ನಮ್ಮ ಅನುಭವದಂತೆ ಅವನ ಸ್ನೇಹವು ಚಂಚಲವಾದದ್ದು. ಕ್ಷಣಭಂಗುರವಾದದ್ದು. ಅವನು ನಮ್ಮೆಲ್ಲ ರನ್ನೂ ತನ್ನ ಪ್ರಿಯತಮೆಯರೆಂದು ಲಾಲಿಸಿ-ಪೋಷಿಸುತ್ತಿದ್ದನು. ಈಗ ಅದೇನಾದರೂ ಅವನ ನೆನಪಿನಲ್ಲಿರುವುದೇ? ಕೃಷ್ಣದೂತನೇ! ನಾವೀಗ ನಿನ್ನ ಅನುನಯ-ವಿನಯದ ಮಾತುಗಳನ್ನು ಕೇಳಲು ಸಿದ್ಧರಾಗಿಲ್ಲ. ಬಂದ ಹಾದಿಯನ್ನು ಹಿಡಿದು ಇಲ್ಲಿಂದ ಹೊರಟುಹೋಗು. ಅವನು ನಮ್ಮನ್ನು ಲೆಕ್ಕಿಸದಿದ್ದ ಮೇಲೆ ನಾವೇಕೆ ಅವನ ಹಿಂದೆ ಹೋಗೋಣ? ಕ್ಷುದ್ರನ ದೂತನೇ! ನಾವು ಅವನ ಹತ್ತಿರಕ್ಕೆ ಬರುವುದಿಲ್ಲ. ಏನೆಂದೇ? ನಮ್ಮ

ಇಚ್ಛೆಯನ್ನು ಪೂರ್ಣಮಾಡಿಕೊಡಲು ಅವನೇ ಇಲ್ಲಿಗೆ ಬರುವನೆಂದು ಹೇಳು ತ್ತಿರುವೆಯಾ? ಆಯಿತು. ಕಾಮದನಾದ ಅವನನ್ನೇ ಇಲ್ಲಿಗೆ ಕರೆದುಕೊಂಡು ಬಾ. ಅವನೊಡನೆ ಲಕ್ಷ್ಮಿಯನ್ನು ಕರೆತರಕೂಡದು. ಏನೆಂದೇ? ಲಕ್ಷ್ಮಿಯನ್ನು ಬಿಟ್ಟು ಅವನಿಲ್ಲಿಗೆ ಬರುವುದಿಲ್ಲವೇನು? ಇದೆಂತಹ ಮಾತು? ಹೃದಯಚೋರನ ಸಾವಿರಾರು ಪ್ರಿಯತಮೆಯರಲ್ಲಿ ಲಕ್ಷ್ಮಿಯೊಬ್ಬಳಿಗೆ ಮಾತ್ರ ಅವನ ಮೇಲೆ ಅನನ್ಯಪ್ರೇಮವಿರುವುದೆಂದು ಭಾವಿಸಿರುವನೇ? ನಮ್ಮಲ್ಲಿ ಲಕ್ಷ್ಮಿಯಂತೆ ಅನನ್ಯಪ್ರೇಮವುಳ್ಳವರು ಒಬ್ಬರಾದರೂ ಇಲ್ಲವೇ?"

ಪರೀಕ್ಷಿತಮಹಾರಾಜ! ಹೀಗೆ ಶ್ರೀಕೃಷ್ಣನ ಪ್ರೇಯಸಿಯರು ಪ್ರೇಮದಿಂದ ಮತ್ತರಾಗಿ ಯೋಗೇಶ್ವರನಾದ ಶ್ರೀಕೃಷ್ಣನಲ್ಲಿ ಅನನ್ಯಪ್ರೇಮಭಾವದಿಂದಿದ್ದರು. ಅವರು ಶ್ರೀಕೃಷ್ಣನನ್ನು ಬಿಟ್ಟು ಬೇರೆ ಏನನ್ನೂ ಯೋಚಿಸುತ್ತಿರಲಿಲ್ಲ. ಅವರಿಗೆ ಎಲ್ಲವೂ ಕೃಷ್ಣಮಯವಾಗಿಯೇ ಕಾಣುತ್ತಿದ್ದಿತು. ಹೀಗಿದ್ದುದರಿಂದಲೇ ಮಾಧವನ ಪತ್ನಿಯರೆಲ್ಲರೂ ಪರಮಗತಿಯನ್ನು ಹೊಂದಿದರು.

ಪರೀಕ್ಷಿತ! ಭಗವಾನ್ ಶ್ರೀಕೃಷ್ಣನ ಲೀಲಾಪ್ರಸಂಗಗಳು ಅನೇಕ ಪ್ರಕಾರವಾಗಿ ಅನೇಕವಿಧವಾದ ಕೀರ್ತನಗಳಿಂದ ಹಾಡಲ್ಪಡುತ್ತವೆ. ಶ್ರೀಕೃಷ್ಣಗೀತಾಮೃತದ ಮಾಧುರ್ಯವು ಹೇಗಿರುತ್ತೆಂದರೆ ಅದನ್ನು ಕೇಳಿದ ಕೂಡಲೇ ಸ್ತ್ರೀಯರ ಮನಸ್ಸು ಶ್ರೀಕೃಷ್ಣಸ್ವಾಮಿಯ ಕಡೆಗೆ ಸೆಳೆಯಲ್ಪಡುತ್ತದೆ. ಸುಮಧುರಗೀತದೊಡನೆ ಅವರ ಮನಸ್ಸೆಲ್ಲವೂ ಶ್ರೀಕೃಷ್ಣನಲ್ಲಿಯೇ ಸೇರಿಹೋಗುತ್ತದೆ. ಹೀಗಿರುವಾಗ ಜಗದಾನಂದಕಂದನಾದ ಶ್ಯಾಮಸುಂದರ ನನ್ನು ಪ್ರತ್ಯಕ್ಷವಾಗಿಯೇ ನೋಡಿದವರ ವಿಷಯವಾಗಿ ಹೇಳುವುದೇನಿದೆ? ಇದು ಸಾಮಾನ್ಯಸ್ತ್ರೀಯರ ವಿಷಯವಾಯಿತು. ಜಗದ್ಗುರುವಾದ ಶ್ರೀಕೃಷ್ಣ ಭಗವಂತನನ್ನೇ ಪತಿಯೆಂದು ಭಾವಿಸಿ ಸ್ನಾನಮಾಡಿಸುವುದು, ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡಲು ಅಣಿಮಾಡಿಕೊಡುವುದು, ಸಿಂಗರಿಸುವುದು, ಕಾಲೊತ್ತುವುದು, ಭೋಜನಮಾಡಿಸುವುದು–ಇವೇ ಮೊದಲಾದ ಸೇವಾಕಾರ್ಯಗಳನ್ನು ಅನವರತನಾಗಿ ಪರಮಪ್ರೀತಿಯಿಂದ ಮಾಡುವ ಶ್ರೀಕೃಷ್ಣನ ಪ್ರೇಯಸಿಯರ ತಪಸ್ಸನ್ನು ಏನೆಂದು ವರ್ಣಿಸೋಣ?

ಭಾರತನೇ! ಸತ್ಪುರುಷರಿಗೆ ಪರಮಾಶ್ರಯನಾದ ಶ್ರೀಕೃಷ್ಣನು ಹೀಗೆ ವೇದೋದಿತವಾದ ಸನಾತನಧರ್ಮಗಳನ್ನು ಶ್ರದ್ಧೆಯಿಂದ ಆಚರಿಸುತ್ತಾ ಗೃಹಾಸ್ಥಾಶ್ರಮವೇ ಧರ್ಮಾರ್ಥ-ಕಾಮಗಳೆಂಬ ಪುರುಷಾರ್ಥಸಾಧನೆಗೆ ಆಶ್ರಯಸ್ಥಾನವಾಗಿರುವುದೆಂಬುದನ್ನು ಪ್ರಪಂಚಕ್ಕೆ ತೋರಿಸಿಕೊಟ್ಟನು. ಗೃಹಸ್ಥಾಶ್ರಮಿಗಳ ಶ್ರೇಷ್ಠವಾದ ಧರ್ಮವನ್ನು ಆಶ್ರಯಿಸಿ (ಗೃಹಸ್ಥನಾಗಿ) ಗಾರ್ಹಸ್ಥ್ಯಧರ್ಮಗಳನ್ನು ಕಟ್ಟು-ನಿಟ್ಟಾಗಿ ಆಚರಿಸುತ್ತಿದ್ದ ಶ್ರೀಕೃಷ್ಣನಿಗೆ ಹದಿನಾರುಸಾವಿರದನೂರು ಮಂದಿ ಪತ್ನಿಯರಿದ್ದರು. ಅವರಲ್ಲಿ ರುಕ್ಮಿಣಿಯೇ ಮೊದಲಾದ ಎಂಟುಮಂದಿ ಪಟ್ಟಮಹಿಷಿಯರ ವಿಷಯವಾಗಿಯೂ ಮತ್ತು ಅವರ ಮಕ್ಕಳ ವಿಷಯವಾಗಿಯೂ ಈ ಹಿಂದೆಯೇ ನಾನು ನಿನಗೆ ವರ್ಣಿಸಿ ಹೇಳಿರುತ್ತೇನೆ. ಪರೀಕ್ಷಿತ! ಅಮೋಘಗತಿಯಾದ ಸರ್ವೇಶ್ವರನಾದ ಶ್ರೀಕೃಷ್ಣನು ತನ್ನ ಹದಿನಾರುಸಾವಿರದ ನೂರೆಂಟು ಪತ್ನಿಯರಲ್ಲಿಯೂ ಹತ್ತು-ಹತ್ತು ಮಕ್ಕಳನ್ನು ಪಡೆದುಕೊಂಡನು. (ಹೀಗೆ ಅವನ ಮಕ್ಕಳ ಸಂಖ್ಯೆ ಒಂದು ಲಕ್ಷದ ಅರುವತ್ತೊಂದು ಸಾವಿರದ ಎಂಭತ್ತು.) ಉದ್ದಾಮ ವೀರ್ಯರಾದ ಅವನ ಇಷ್ಟು ಮಕ್ಕಳಲ್ಲಿ ಹದಿನೆಂಟು ಮಂದಿ ಮಹಾರಥ ರಿದ್ದರು. ಉದಾರಯಶಸ್ಕರಾದ ಅವರೆಲ್ಲರ ಶುಭನಾಮಧೇಯಗಳನ್ನು ಹೇಳುವೆನು, ಕೇಳು : ಪ್ರದ್ಯುಮ್ನ, ಅನಿರುದ್ಧ,* ದೀಪ್ತಿಮಂತ, ಭಾನು, ಸಾಂಬ, ಮಧು, ಬೃಹದ್ಭಾನು, ಚಿತ್ರಭಾನು, ವೃಕ, ಅರುಣ, ಪುಷ್ಕರ, ವೇದಬಾಹು, ಶ್ರುತದೇವ, ಸುನಂದನ, ಚಿತ್ರಬಾಹು, ವಿರೂಪ, ಕವಿ ಮತ್ತು ನ್ಯಗ್ರೋಧ–ಇವರೇ ಆ ಹದಿನೆಂಟು ಮಂದಿ ಮಹಾರಥರು. ಭಗವಂತನ ಈ ಹದಿನೆಂಟು ಮಹಾರಥರಲ್ಲಿಯೂ ರುಕ್ಮಿಣಿಯ ಮಗನಾದ ಪ್ರದ್ಯುಮ್ನನೇ ಸರ್ವಶ್ರೇಷ್ಠನಾಗಿದ್ದನು. ಅವನು ಸಮಸ್ತಗುಣಗಳಲ್ಲಿಯೂ ತಂದೆಯಾದ ಶ್ರೀಕೃಷ್ಣನನ್ನೇ ಹೋಲುತ್ತಿದ್ದನು. ಮಹಾರಥನಾದ ಪ್ರದ್ಯುಮ್ನನು ತನ್ನ

---

* ಅನಿರುದ್ಧನು ಶ್ರೀಕೃಷ್ಣನ ಮಗನಲ್ಲ. ಪ್ರದ್ಯುಮ್ನನ ಮಗ. ಶ್ರೀಕೃಷ್ಣನ ಮಕ್ಕಳು ಮೊಮ್ಮಕ್ಕಳಲ್ಲಿ ಹದಿನೆಂಟು ಮಹಾರಥರಿದ್ದರೆಂದು ಹೇಳಬೇಕಾಗುತ್ತದೆ. ಅಥವಾ ಶ್ರೀಕೃಷ್ಣನಿಗೆ ಅನಿರುದ್ಧ ಎಂಬೊಬ್ಬ ಮಗನೂ ಇದ್ದ ಎಂದು ಭಾವಿಸ ಬೇಕಾಗುತ್ತದೆ. ಆದರೆ ಪ್ರದ್ಯುಮ್ನನ ಮಗನಾದ ಅನಿರುದ್ಧನೇ ಭಾಗವತದಲ್ಲಿ ಮತ್ತು ಹರಿವಂಶದಲ್ಲಿ ಶ್ರೇಷ್ಠನಾಯಕನಾಗಿ ಮೆರೆಯುತ್ತಾನೆ.

ಸೋದರಮಾವನಾದ ರುಕ್ಮಿಣಿಯ ಮಗಳನ್ನು ಮದುವೆಯಾದನು. ಅವಳಲ್ಲಿ ಅವನಿಗೆ ಹತ್ತು ಸಾವಿರ ಆನೆಗಳ ಬಲವಿದ್ದ ಅನಿರುದ್ಧನೆಂಬ ಮಹಾವೀರನು ಹುಟ್ಟಿದನು. ತಂದೆಯಂತೆಯೇ ಮಹಾಪರಾಕ್ರಮಿಯಾಗಿದ್ದ ಅನಿರುದ್ಧನು ರುಕ್ಮಿಯ ಮೊಮ್ಮಗಳನ್ನು ಮದುವೆಯಾಗಿ ಅವಳಲ್ಲಿ ವಜ್ರನೆಂಬ ಮಗನನ್ನು ಪಡೆದನು. ಬ್ರಾಹ್ಮಣರ ಶಾಪದಿಂದಾಗಿ ಯದುವಂಶವೇ ನಾಶವಾಗಿ ಹೋದರೂ ಯದುವಂಶದ ಕುರುಹಾಗಿ ವಜ್ರನು ಮಾತ್ರವೇ ಉಳಿದು ಕೊಂಡನು. ವಜ್ರನ ಮಗ ಪ್ರತಿಬಾಹು. ಪ್ರತಿಬಾಹುವಿನ ಮಗ ಸುಬಾಹು. ಸುಬಾಹುವಿನ ಮಗ ಶಾಂತಸೇನ. ಶಾಂತಸೇನನ ಮಗ ಶತಸೇನ.

**ನ ಹ್ಯೇತಸ್ಮಿನ್ಕುಲೇ ಜಾತಾ ಅಧನಾ ಅಬಹುಪ್ರಜಾಃ ।**
**ಅಲ್ಪಾಯುಷೋಲ್ಪವೀರ್ಯಾಶ್ಚ ಅಬ್ರಹ್ಮಣ್ಯಾಶ್ಚ ಜಜ್ಞಿರೇ ॥೩೯॥**

ಯದುವಂಶದಲ್ಲಿ ಹುಟ್ಟಿದವರಲ್ಲಿ ಯಾರೂ ಕೂಡ ನಿರ್ಧನರಾಗಿರ ಲಿಲ್ಲ ; ಅಪುತ್ರವಂತರಾಗಿರಲಿಲ್ಲ. ಅಲ್ಪಾಯುಷಿಗಳಾಗಿರಲಿಲ್ಲ ; ಅಲ್ಪ ವೀರ್ಯರೂ ಆಗಿರಲಿಲ್ಲ. ಬ್ರಹ್ಮದ್ವೇಷಿಗಳೂ ಆಗಿರಲಿಲ್ಲ. ಎಲ್ಲರೂ ಧನಿ ಕರೂ, ಬಹುಪುತ್ರವಂತರೂ, ದೀರ್ಘಾಯುಷಿಗಳೂ, ಮಹಾವೀರ್ಯರೂ, ಬ್ರಾಹ್ಮಣಭಕ್ತರೂ ಆಗಿದ್ದರು. ವಿಶ್ವವಿಖ್ಯಾತವಾದ ಕರ್ಮಗಳನ್ನು ಮಾಡಿದ ಮಹಾಯಶೋವಂತರಾದ, ವೀರ್ಯವಂತರಾದ, ಯದುವಂಶಪ್ರಸೂತ ರಾದ ಪುರುಷರ ಸಂಖ್ಯೆಯು ಅಪಾರವಾದುದು. ಹತ್ತುಸಾವಿರ ವರ್ಷಗಳ ಪರ್ಯಂತವಾಗಿ ಹೇಳಿದರೂ ಮುಗಿಯತಕ್ಕುದಲ್ಲ. ಯದುವಂಶದ ಬಾಲಕ ರಿಗೆ ಪಾಠ ಹೇಳಿಕೊಡುತ್ತಿದ್ದ ಆಚಾರ್ಯರ ಸಂಖ್ಯೆಯೇ ಮೂರು ಕೋಟಿ ಎಂಭತ್ತೆಂಟು ಲಕ್ಷ ಎಂದು ನಾವು ಕೇಳಿದ್ದೇವೆ. ಹೀಗಿರುವಾಗ ಮಹಾತ್ಮರಾದ ಯಾದವರ ಸಂಖ್ಯೆಯು ಇಷ್ಟೇ ಇದ್ದಿತೆಂದು ಹೇಗೆ ತಾನೇ ಹೇಳಲು ಸಾಧ್ಯವಾದೀತು? ಗಣಿತದ ಊಹೆಯಂತೆ ರಾಜನಾದ ಉಗ್ರಸೇನನು ಹತ್ತು ಸಾವಿರ ಹತ್ತು ಸಾವಿರ ಲಕ್ಷಯಾದವರಿಂದ ಪರಿವೃತನಾಗಿದ್ದನು. (ಒಂದರ ಮುಂದೆ ಹದಿಮೂರು ಸೊನ್ನೆಗಳನ್ನಿಟ್ಟರೆ ಆಗುವ ಸಂಖ್ಯೆ.)

ಪರೀಕ್ಷಿತಮಹಾರಾಜ! ಹಿಂದೆ ನಡೆದ ದೇವಾಸುರರ ಸಂಗ್ರಾಮದಲ್ಲಿ ಅಸಂಖ್ಯಾತರಾದ ಅಸುರರು ಅಸುನೀಗಿದರು. ಅವರೇ ಈಗ ಮನುಷ್ಯರಾಗಿ

ಹುಟ್ಟಿ ಮಹಾಗರ್ವಿಷ್ಠರಾಗಿ ಪ್ರಜೆಗಳನ್ನು ಪೀಡಿಸತೊಡಗಿದರು. ಅಂತಹ ಗರ್ವಿಷ್ಠರಾದ ಮಾನವರನ್ನು ನಿಗ್ರಹಿಸುವ ಸಲುವಾಗಿ ಶ್ರೀಹರಿಯ ಆಜ್ಞೆಯಂತೆ ದೇವತೆಗಳೆಲ್ಲರೂ ಮನುಷ್ಯರಾಗಿ ಯದುವಂಶದಲ್ಲಿ ಅವತರಿಸಿದರು. ಹಾಗೆಯೇ ಯದುವಂಶದ ಒಳಭೇದದ ನೂರೊಂದು ಕುಲಗಳಲ್ಲಿ ದೇವತೆಗಳು ಮಾನವರಾಗಿ ಹುಟ್ಟಿದರು. ಆ ಎಲ್ಲ ನೂರೊಂದು ಕುಲದ ಯಾದ ವರೂ ಭಗವಾನ್ ಶ್ರೀಕೃಷ್ಣನೇ ತಮ್ಮ ಏಕೈಕಪ್ರಭುವೆಂದೂ ಶ್ರೀಕೃಷ್ಣನು ತಮಗೆ ಆದರ್ಶಪುರುಷನೆಂದೂ ಭಾವಿಸಿದರು.

ಈ ಕಾರಣದಿಂದಲೇ ಶ್ರೀಕೃಷ್ಣನ ಅನುಯಾಯಿಗಳಾದ ಸಮಸ್ತ ಯಾದವರೂ ಸರ್ವತೋಮುಖವಾದ ಅಭಿವೃದ್ಧಿಯನ್ನು ಹೊಂದಿದರು. ಶ್ರೀಕೃಷ್ಣನಲ್ಲಿಯೇ ನೆಟ್ಟುಹೋದ ಮನಸ್ಸುಳ್ಳವರಾಗಿದ್ದ ಯಾದವರು ಮಲಗುವುದು, ಕುಳಿತುಕೊಳ್ಳುವುದು, ತಿರುಗಾಡುವುದು, ಮಾತನಾಡುವುದು, ಆಟವಾಡುವುದು ಇತ್ಯಾದಿ ಕ್ರಿಯೆಗಳನ್ನು ಯಾಂತ್ರಿಕವಾಗಿ ಮಾಡುತ್ತಿದ್ದರೇ ಹೊರತು, 'ತಮಗೊಂದು ಶರೀರವಿದೆ'–ಎಂಬ ಭಾವನೆಯೇ ಅವರಿಗಿರುತ್ತಿರಲಿಲ್ಲ.

**ತೀರ್ಥಂ ಚಕ್ರೇ ನೃಪೋನಂ ಯದಜನಿ ಯದುಷು**
**ಸ್ವಃಸರಿತ್ಪಾದಶೌಚಂ**
**ವಿದ್ವಿಟ್‌ಸ್ನಿಗ್ಧಾಃ ಸ್ವರೂಪಂ ಯಯುರಜಿತಪರಾ**
**ಶ್ರೀರ್ಯದರ್ಥೇಽನ್ಯಯತ್ನಃ ।**
**ಯನ್ನಾಮಾಮಙ್ಗಲಘ್ನಂ ಶ್ರುತಮಥ ಗದಿತಂ**
**ಯತ್ಕೃತೋ ಗೋತ್ರಧರ್ಮಃ**
**ಕೃಷ್ಣಸ್ಯೈತನ್ನ ಚಿತ್ರಂ ಕ್ಷಿತಿಭರಹರಣಂ**
**ಕಾಲಚಕ್ರಾಯುಧಸ್ಯ ॥೪೭॥**

ವಿಷ್ಣುಪಾದೋದ್ಭವಳಾದ ಗಂಗಾದೇವಿಯು ವಿಶ್ವದಲ್ಲಿಯೇ ಪವಿತ್ರತಮಳೆಂದು ಪ್ರಸಿದ್ಧಿಯನ್ನು ಹೊಂದಿದ್ದರೂ ಯಾದವಕುಲದಲ್ಲಿ ಶ್ರೀಕೃಷ್ಣನ ಕೀರ್ತಿರೂಪವಾದ ತೀರ್ಥವು ಉದಯಿಸಿದೊಡನೆಯೇ ಅದರ ಮುಂದೆ ದೇವಗಂಗೆಯ ಪಾವಿತ್ರ್ಯವು ಅಲ್ಪವೆನಿಸಿತು. ಶತ್ರು-ಮಿತ್ರರೆಂಬ ಭೇದವೇ

ಇಲ್ಲದೇ ಪರಮಪುರುಷನಾದ ಶ್ರೀಕೃಷ್ಣನನ್ನು ಭಜಿಸಿದವರೆಲ್ಲರೂ ಪರಮ ಪದವನ್ನು ಸೇರಿದರು. ಯಾವಳ ಕೃಪಾಕಟಾಕ್ಷವನ್ನು ಸಂಪಾದಿಸಲು ಬ್ರಹ್ಮನೇ ಮೊದಲಾದ ದೇವತೆಗಳೇ ನಿತ್ಯನಿರಂತರವಾಗಿ ತಪಶ್ಚರಣೆಮಾಡುವರೋ ಅಂತಹ ಲಕ್ಷ್ಮೀದೇವಿಯು ನಿತ್ಯನಿರಂತರವಾಗಿ ಅವನ ವಕ್ಷಃಸ್ಥಳದಲ್ಲಿಯೇ ನೆಲೆಸಿರುವಳು. ಭಗವಂತನ ಶುಭನಾಮವನ್ನು ಒಂದೇ ಬಾರಿ ಕೇಳಿದರೂ ಒಂದೇ ಬಾರಿ ಉಚ್ಚರಿಸಿದರೂ ಸಮಸ್ತ ಅಮಂಗಳಗಳೂ ದೂರವಾಗುತ್ತವೆ. ಋಷಿಗಳ ಪರಂಪರೆಯಲ್ಲಿ ಎಷ್ಟು ಧರ್ಮಗಳು ಪ್ರಚಲಿತವಾಗಿರುವುವೋ ಆ ಎಲ್ಲ ಧರ್ಮಗಳ ಸಂಸ್ಥಾಪಕರೂ ಭಗವಾನ್ ಶ್ರೀಕೃಷ್ಣನೇ ಆಗಿದ್ದಾನೆ. ಅವನು ಯಾವಾಗಲೂ ಕಾಲಚಕ್ರವನ್ನು ತನ್ನ ಕೈಯಲ್ಲಿ ಹಿಡಿದಿರುತ್ತಾನೆ. ಇಂತಹವನು ಭೂಭಾರಹರಣಮಾಡಿದನೆಂದರೆ ಅದರಲ್ಲಿ ಆಶ್ಚರ್ಯವೇನಿದೆ?

ಜಯತಿ ಜನನಿವಾಸೋ ದೇವಕೀಜನ್ಮವಾದೋ
ಯದುವರಪರ್ಷತ್ಸ್ವೈರ್ದೋರ್ಭಿರಸ್ಯನ್ನಧರ್ಮಮ್ ।
ಸ್ಥಿರಚರವೃಜಿನಘ್ನಃ ಸುಸ್ಮಿತಶ್ರೀಮುಖೇನ
ವ್ರಜಪುರವನಿತಾನಾಂ ವರ್ಧಯನ್ಕಾಮದೇವಮ್ ॥೪೮॥

ಭಗವಾನ್ ಶ್ರೀಕೃಷ್ಣನು ಸಮಸ್ತಜೀವಿಗಳಿಗೂ ಆಶ್ರಯಸ್ಥಾನನಾಗಿದ್ದಾನೆ. ಯದ್ಯಪಿ ಅವನು ಸದಾ-ಸರ್ವದಾ-ಸರ್ವತ್ರ ಉಪಸ್ಥಿತನಾಗಿದ್ದರೂ ಹೇಳಿಕೆಗೆ ಮಾತ್ರವೇ ದೇವಕಿಯಗರ್ಭದಲ್ಲಿ ಜನಿಸಿದ್ದಾನೆ. ಯದುವಂಶದ ವೀರರು ಪಾರ್ಷದರಂತೆ ಅವನ ಸೇವೆಯನ್ನು ಮಾಡುತ್ತಿರುತ್ತಾರೆ. ಭಗವಂತನಾದ ಶ್ರೀಕೃಷ್ಣನು ತನ್ನ ಭುಜಬಲಪರಾಕ್ರಮದಿಂದ ವಿಶ್ವದ ಅಧರ್ಮವನ್ನು ನಾಶಗೊಳಿಸುತ್ತಾನೆ. (ಬೃಂದಾವನದ) ಸ್ಥಾವರ-ಜಂಗಮಗಳ (ಗಿಡ-ಮರ-ಬಳ್ಳಿಗಳ ಮತ್ತು ಪಶು-ಪಕ್ಷಿಗಳ) ಪಾಪಗಳನ್ನು ತೊಡೆದು ಹಾಕಿದ್ದಾನೆ. ಅವನು ತನ್ನ ಕಿರುನಗೆಯಿಂದ ಯುಕ್ತವಾದ ಮುಖಾರವಿಂದದಿಂದ ವ್ರಜವಾಸಿಗಳಾದ ಮತ್ತು ಪುರವಾಸಿಗಳಾದ ಸ್ತ್ರೀಯರ ಹೃದಯಗಳಲ್ಲಿ ಕಾಮದೇವನ ಆವಿರ್ಭಾವವನ್ನುಂಟುಮಾಡುತ್ತಾನೆ. ಅಂತಹ ಜಗದಾನಂದ ಕಂದನಾದ ಶ್ರೀಕೃಷ್ಣನು ಸರ್ವತ್ರ ವಿಜಯಿಯಾಗುತ್ತಾನೆ. ಶ್ರೀಕೃಷ್ಣನಿಗೆ ಜಯವಾಗಲಿ! ವಾಸುದೇವನಿಗೆ ಜಯವಾಗಲಿ!

**ಇತ್ಥಂ ಪರಸ್ಯ ನಿಜವರ್ತ್ಮರಿರಕ್ಷಯಾऽತ್ತ-**
**ಲೀಲಾತನೋಸ್ತದನುರೂಪವಿಡಮ್ಬನಾನಿ ।**
**ಕರ್ಮಾಣಿ ಕರ್ಮಕಷಣಾನಿ ಯದೂತ್ತಮಸ್ಯ**
**ಶ್ರೂಯಾದಮುಷ್ಯ ಪದಯೋರನುವೃತ್ತಿಮಿಚ್ಛನ್ ॥೪೯॥**

ಪರೀಕ್ಷಿತಮಹಾರಾಜ! ಪ್ರಕೃತಿಗೆ ಅತೀತನಾದ ಪರಮಾತ್ಮನು ತನ್ನಿಂದಲೇ ಸ್ಥಾಪಿತವಾದ ಧರ್ಮದ ಮರ್ಯಾದೆಯನ್ನು ರಕ್ಷಿಸುವ ಸಲು ವಾಗಿ ದಿವ್ಯವಾದ ಮತ್ಸ್ಯ, ಕೂರ್ಮ, ವರಾಹ–ಇವೇ ಮುಂತಾದ ಲೀಲಾವ ತಾರಗಳನ್ನು ಗ್ರಹಣ ಮಾಡಿದನು. ಅವತಾರಗಳಿಗೆ ಅನುರೂಪವಾಗಿ ಹಲ ವಾರು ಅದ್ಭುತವಾದ ಕರ್ಮಗಳನ್ನೂ ಮಾಡಿದನು. ಅವನು ಅವತಾರಗಳಲ್ಲಿ ಮಾಡಿದ ಒಂದೊಂದು ಕರ್ಮವನ್ನು ಸ್ಮರಿಸಿಕೊಂಡರೂ ಮಾನವನು ಕರ್ಮ ಬಂಧನಗಳಿಂದ ಮುಕ್ತನಾಗುತ್ತಾನೆ. ಯಾವನು ಯದುವಂಶಶಿರೋಮಣಿ ಯಾದ ಶ್ರೀಕೃಷ್ಣನ ಚರಣಕಮಲಗಳ ಸೇವೆ ಮಾಡಲು ನಿರಂತರವಾಗಿ ಬಯಸುವನೋ ಅಂತಹವನು ಶ್ರೀಕೃಷ್ಣನ ಲೀಲಾಪ್ರಸಂಗಗಳನ್ನೇ ಪಠನ ಮಾಡುತ್ತಿರಬೇಕು ಮತ್ತು ಶ್ರವಣಮಾಡುತ್ತಿರಬೇಕು.

**ಮರ್ತ್ಯಸ್ತಯಾನುಸವಮೇಧಿತಯಾ ಮುಕುನ್ದ-**
**ಶ್ರೀಮತ್ಕಥಾಶ್ರವಣಕೀರ್ತನಚಿನ್ತಯೈತಿ ।**
**ತದ್ಧಾಮ ದುಸ್ತರಕೃತಾನ್ತಜವಾಪವರ್ಗಂ**
**ಗ್ರಾಮಾದ್ವನಂ ಕ್ಷಿತಿಭುಜೋऽಪಿ ಯಯುರ್ಯದರ್ಥಾಃ ॥**

ಪರೀಕ್ಷಿತಮಹಾರಾಜ! ಯಾವಾಗ ಮನುಷ್ಯನು ಪ್ರತಿಕ್ಷಣದಲ್ಲಿಯೂ ಶ್ರೀಕೃಷ್ಣನ ಮನೋಹರವಾದ ಲೀಲಾಪ್ರಸಂಗಗಳನ್ನು ಕೇಳುವನೋ ಕೀರ್ತಿಸುವನೋ ಮತ್ತು ಚಿಂತಿಸುವನೋ ಆಗ ಅವನ ಆ ಅನನ್ಯಭಕ್ತಿಯೇ ಆ ಭಕ್ತನನ್ನು ಶ್ರೀಕೃಷ್ಣನ ಪರಂಧಾಮಕ್ಕೆ ಒಯ್ಯುತ್ತದೆ. ಕಾಲದ ಗತಿ ಯನ್ನು ಮೀರಿ ಪರಮಪದಕ್ಕೆ ಹೋಗುವುದು ಅತ್ಯಂತದುಸ್ತರವೇ ಸರಿ. ಆದರೆ ಶ್ರೀಕೃಷ್ಣನ ಧಾಮದಲ್ಲಿ ಕಾಲದ ಆಟವೇನೂ ನಡೆಯುವುದಿಲ್ಲ. ಆ ಪರಮಧಾಮವು ಕಾಲಕ್ಕೆ ಅತೀತವಾದುದು. ಆದುದರಿಂದ ಶ್ರೀಕೃಷ್ಣನ

ಭಕ್ತರು ಸದಾ ಅವನನ್ನೇ ಧ್ಯಾನಿಸುತ್ತಾ ದುಸ್ತರವಾದ ಸಂಸಾರಸಾಗರವನ್ನು ದಾಟಿ ಅವನ ದಿವ್ಯಧಾಮವನ್ನು ಸೇರುತ್ತಾರೆ. ಅಂತಹ ದಿವ್ಯವಾದ ಧಾಮವನ್ನು ಹೊಂದುವ ಸಲುವಾಗಿಯೇ ಭೂಪಾಲರು ಕೂಡ ಗ್ರಾಮಗಳನ್ನು ತೊರೆದು ಅರಣ್ಯಕ್ಕೆ ಹೋಗುತ್ತಾರೆ.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದ ೯೦ನೆಯ ಅಧ್ಯಾಯವು ಮುಗಿಯಿತು.

**ಶ್ರೀಮದ್ಭಾಗವತದ ದಶಮಸ್ಕಂಧವು ಮುಗಿಯಿತು.**

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿಂದಾರ್ಪಣಮಸ್ತು
ಓಂ ತತ್ಸತ್

–*–

**ಸ್ವಸ್ತಿಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**

**ಕಾಲೇ ವರ್ಷತು ಪರ್ಜನ್ಯಃಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**

**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

–––

ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



# ಶ್ರೀಮದ್ಭಾಗವತ-ಏಕಾದಶಸ್ಕಂಧ

**ಜನ್ಮಾದ್ಯಸ್ಯ ಯತೋಽನ್ವಯಾದಿತರಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯತ್ಸೂರಯಃ ।**
**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥**



## ಯಾದವರಿಗೆ ಮುನಿಗಳ ಶಾಪ

**ಕೃತ್ವಾ ದೈತ್ಯವಧಂ ಕೃಷ್ಣಃ ಸರಾಮೋ ಯದುಭಿರ್ವೃತಃ ।**
**ಭುವೋಽವತಾರಯದ್ಭಾರಂ ಜವಿಷ್ಠಂ ಜನಯನ್ಕಲಿಮ್ ॥೧॥**

ಶ್ರೀಕೃಷ್ಣಪರಮಾತ್ಮನ ಲೀಲಾವಿಹಾರಗಳನ್ನು ವರ್ಣಿಸಿದ ನಂತರ ಶ್ರೀಶುಕ ಮಹರ್ಷಿಗಳು ಪರೀಕ್ಷಿದ್ರಾಜನಿಗೆ ಹೀಗೆಂದರು :

"ಮಹಾರಾಜ! ಭಗವಂತನಾದ ಶ್ರೀಕೃಷ್ಣನು ಈ ಹಿಂದೆ ಹೇಳಿದಂತೆ ಬಹುಮಂದಿ ದೈತ್ಯರನ್ನು ಸಂಹಾರಮಾಡಿದನು. ಕೆಲವರನ್ನು ಶ್ರೀಬಲರಾಮ ಮತ್ತು ಇತರ ಯಾದವರ ಸಹಾಯದಿಂದ ಸಂಹರಿಸಿದನು. ಇಷ್ಟೇ ಅಲ್ಲದೆ ಕೌರವ ಮತ್ತು ಪಾಂಡವರಲ್ಲಿ ಅತಿಬಲಶಾಲಿಯೂ ಮತ್ತು ಶೀಘ್ರ ಫಲಕಾರಿಯೂ ಆದ ಕಲಹವನ್ನುಂಟುಮಾಡಿ ಆ ಮೂಲಕವೂ ದೈತ್ಯರ ವಧೆ ಆಗುವಂತೆ ಏರ್ಪಡಿಸಿದನು. ಹೀಗೆ ಬಹುಮುಖವಾಗಿ ದೈತ್ಯರ ಸಂಹಾರ ಮಾಡಿ ಭಗವಂತನು ಭೂಮಿಯ ಭಾರವನ್ನು ಇಳಿಸಿದನು.*

---

* ಜವಿಷ್ಠಂ = ಎಂಬುದರ ಬದಲಿಗೆ 'ಯವಿಷ್ಠಂ' ಎಂಬ ಪಾಠವನ್ನು ಎರಡನೆಯ ಶ್ಲೋಕದಲ್ಲಿ 'ನೃಪಾನ್' ಎಂಬುದರ ಬದಲಿಗೆ 'ಪರಾನ್' ಎಂಬ ಪಾಠವನ್ನೂ ಹಾಗೆಯೇ ನಾಲ್ಕನೆಯ ಶ್ಲೋಕದಲ್ಲಿ 'ವೇಣುಸ್ತಂಬಸ್ಯ' ಎಂಬುದರ ಬದಲಿಗೆ 'ವೇಣುಸಂಘಸ್ಯ' ಎಂಬ ಪಾಠವನ್ನೂ ವಿಜಯಧ್ವಜೀಯದಲ್ಲಿ ಇಟ್ಟುಕೊಳ್ಳಲಾಗಿದೆ.

**ಯೇ ಕೋಪಿತಾಃ ಸುಬಹು ಪಾಣ್ಡುಸುತಾಃ ಸಪತ್ನೈ-**
**ರ್ದುರ್ದ್ಯೂತಹೇಲನಕಚಗ್ರಹಣಾದಿಭಿಸ್ತಾನ್ ।**
**ಕೃತ್ವಾ ನಿಮಿತ್ತಮಿತರೇತರತಃ ಸಮೇತಾನ್**
**ಹತ್ವಾ ನೃಪಾನ್ ನಿರಹರತ್ಕ್ಷಿತಿಭಾರಮೀಶಃ ॥೨॥**

ದುಷ್ಟರಾದ ಕೌರವರು ಕಪಟವಾದ ಜೂಜಾಟ, ದ್ರೌಪದಿಯ ತುರುಬನ್ನು ಹಿಡಿದು ಸಭೆಗೆ ಎಳೆದು ತರುವಿಕೆ ಮತ್ತು ಇನ್ನೂ ಬಗೆ-ಬಗೆಯ ಅತ್ಯಾಚಾರ-ಅಪಮಾನಗಳಿಂದ ಪಾಂಡವರ ಕೋಪವನ್ನು ಕೆರಳಿಸಿದ್ದರು. ಹೀಗೆ ಕೆರಳಿದ್ದ ಪಾಂಡವರನ್ನು ನೆಪವನ್ನಾಗಿ ಮಾಡಿಕೊಂಡು ಎರಡೂ ಪಕ್ಷಗಳಲ್ಲಿ ಸೇರಿದ್ದ ರಾಜರನ್ನು ಸಂಹಾರಮಾಡಿಸಿ ಸ್ವಾಮಿಯು ಭೂಮಿಯಭಾರವನ್ನು ತಗ್ಗಿಸಿದನು.*

**ಭೂಭಾರರಾಜಪೃತನಾ ಯದುಭಿರ್ನಿರಸ್ಯ**
**ಗುಪ್ತೈಃ ಸ್ವಬಾಹುಭಿರಚಿನ್ತಯದಪ್ರಮೇಯಃ ।**
**ಮನ್ಯೇಽವನೇರ್ನನು ಗತೋಽಪ್ಯಗತಂ ಹಿ ಭಾರಂ**
**ಯದ್ಯಾದವಂ ಕುಲಮಹೋ ಅವಿಷಹ್ಯಮಾಸ್ತೇ ॥೩॥**

---

* ಕೃತ್ವಾ ನಿಮಿತ್ತ ಮಿತರೇತರತಃ ಸಮೇತಾನ್ –ದುಷ್ಟಸಂಹಾರಕ್ಕೆ ಪಾಂಡವಾದಿಗಳು ನಿಮಿತ್ತಮಾತ್ರ. ಕಾಲರೂಪಿಯಾದ ನಾನು ಇವರೆಲ್ಲರನ್ನೂ ಈಗಾಗಲೇ ಸಂಹರಿಸಿಯಾಗಿದೆ. ನೀನು ಈ ಸಂಹಾರದಲ್ಲಿ ನಿಮಿತ್ತಮಾತ್ರವಾಗು–ಎಂದು ಭಗವಂತನು ಅರ್ಜುನನಿಗೆ ಗೀತೆಯಲ್ಲಿ ಮಾಡಿದ ಉಪದೇಶವು ಇಲ್ಲಿ ನೆನಪಿಸಲ್ಪಟ್ಟಿದೆ. 'ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ।' ಗೀತಾ ಅಧ್ಯಾಯ ೧೧ ಶ್ಲೋಕ ೩೩ (ವೀರರಾಘವೀಯ)

ಪೂತನೆಯೇ ಮುಂತಾದ ಪ್ರಕಟ ದೈತ್ಯರನ್ನು ಭಗವಂತನು ತಾನೇ ಸಂಹಾರಮಾಡಿದ್ದಾನೆ. (ಪ್ರಲಂಬ, ಮುಷ್ಟಿಕ, ಬಲ್ವಲಾದಿಗಳನ್ನು ಬಲರಾಮನ ಮೂಲಕ ಸಂಹಾರಮಾಡಿಸಿದ್ದಾನೆ.) ಬಂಧುಗಳ ವೇಷದಲ್ಲಿ ಕಾಣಿಸುತ್ತಿದ್ದ ಅಸುರರನ್ನು ಅವರು ಪರಸ್ಪರ ಕಲಹವಾಡುವಂತೆ ಮಾಡುವುದರ ಮೂಲಕ ಸಂಹಾರಮಾಡಿಸಿದ್ದಾನೆ. ಹೀಗೆ ಬಹು ಮುಖವಾಗಿದೆ ಭಗವಂತನ ಭೂಭಾರಾವತರಣದ ಮಾರ್ಗ.

(ಶ್ರೀಧರೀಯ ಭಾಷ್ಯ)

ಇನ್ನು ಉಳಿದಿರುವುದು ದೇವಾಂಶಸಂಭೂತರಾಗಿ ಬಂಧುಗಳೇ ಆಗಿದ್ದರೂ ಆಸುರಗುಣಗಳನ್ನು ಸ್ವಾಗತಿಸಿ ಭೂಮಿಗೆ ಭಾರವಾಗಿದ್ದ ಯಾದವರ ಸಂಹಾರ–ಅದನ್ನು

ಅಳೆಯಲು ಅಸಾಧ್ಯವಾದ ಮಹಿಮೆಯಿಂದಲೂ, ಸಂಕಲ್ಪದಿಂದಲೂ ಸಂಪನ್ನನಾದ ಆ ಭಗವಂತನು ತನ್ನ ಬಾಹುಗಳ ಬಲದಿಂದ ಸುರಕ್ಷಿತರಾಗಿದ್ದ ಯಾದವರ ಮೂಲಕವೂ ಭೂಮಿಗೆ ಭಾರವಾಗಿದ್ದ ರಾಜರನ್ನೂ ಅವರ ಸೇನೆಗಳನ್ನೂ ನಾಶಪಡಿಸಿದ ಬಳಿಕ ಹೀಗೆ ಯೋಚಿಸಿದನು : ಈ ರೀತಿಯಲ್ಲಿ ಭೂಮಿಯ ಭಾರವು ಬಹುಮಟ್ಟಿಗೆ ಕಡಿಮೆಯಾಗಿದ್ದರೂ ಅದು ಇನ್ನೂ ಪೂರ್ಣವಾಗಿ ಇಳಿದಿಲ್ಲ. ಏಕೆಂದರೆ ಸಹಿಸಲು ಅಶಕ್ಯವಾಗಿರುವ ಶೌರ್ಯ-ಪರಾಕ್ರಮಾದಿಗಳಿಂದ ಕೊಬ್ಬಿರುವ ಯಾದವರ ಕುಲವು ಹಾಗೆಯೇ ಉಳಿದಿದೆ.*

**ನೈವಾನ್ಯತಃ ಪರಿಭವೋಽಸ್ಯ ಭವೇತ್ ಕಥಂಚಿ-**
**ನ್ಮತ್ಸಂಶ್ರಯಸ್ಯ ವಿಭವೋನ್ನಹನಸ್ಯ ನಿತ್ಯಮ್ ।**
**ಅನ್ತಃಕಲಿಂ ಯದುಕುಲಸ್ಯ ವಿಧಾಯ ವೇಣು-**
**ಸ್ತಮ್ಬಸ್ಯ ವಹ್ನಿಮಿವ ಶಾನ್ತಿಮುಪೈಮಿ ಧಾಮ ॥೪॥**

---

ಪರಸ್ಪರಕಲಹನಿರ್ಮಾಣದ ನೆಪದಲ್ಲಿಯೇ ಸ್ವಾಮಿಯು ನೆರವೇರಿಸಿಬಿಡುತ್ತಾನೆ. ಅವನಿಗೆ ಶತ್ರುಗಳೂ ಇಲ್ಲ ; ಮಿತ್ರರೂ ಇಲ್ಲ. 'ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ' ಧರ್ಮೋದ್ಧಾರವೊಂದೇ ಆತನ ಲಕ್ಷ್ಯ.

* **ಶ್ಲೋಕ ೩ : 'ಗುಪ್ತೈಃ ಸ್ವಬಾಹುಭಿಃ'** ಇಲ್ಲಿ ಬಾಹುಶಬ್ದವನ್ನು ಬಹುವಚನದಲ್ಲಿ ಬಳಸಿರುವುದು ಅರ್ಥಪೂರ್ಣವಾಗಿದೆ. ಭಗವಾನ್ ಶ್ರೀಕೃಷ್ಣನು ಅವತಾರದಶೆಯಲ್ಲಿ ಬಹುಕಾಲ ಚತುರ್ಭುಜನಾಗಿದ್ದನು–ಎಂಬುದು ಇಲ್ಲಿ ಸೂಚಿತವಾಗಿದೆ. ಈ ವಿಷಯವನ್ನು ಶ್ರೀಧರೀಯ, ವೀರರಾಘವೀಯ–ಎರಡು ವ್ಯಾಖ್ಯಾನಗಳಲ್ಲಿ ಗಮನಿಸಲಾಗಿದೆ. **'ಬಾಹುಭಿರಿತಿ ಬಹುವಚನಂ ವಸ್ತುತಃ ಚತುರ್ಭುಜಾಭಿಪ್ರಾಯೇಣ'**

(ಶ್ರೀಧರೀಯ)

**'ಸ್ವಾಸಾಧಾರಣ ಚತುರ್ಭುಜತ್ವಾಭಿಪ್ರಾಯೇಣ'** (ವೀರರಾಘವೀಯ) ಶ್ರೀಕೃಷ್ಣಪರಮಾತ್ಮನು ಕಾಮರೂಪಿ. ನಂದಗೋಕುಲದಲ್ಲಿ ತನ್ನ ದೈವತ್ವವನ್ನು ಮರೆಸಲು ದ್ವಿಭುಜನಾಗಿದ್ದನು. ಅನಂತರ ಆತನು ತನ್ನ ಸಹಜಚತುರ್ಭುಜರೂಪ ದಲ್ಲಿಯೇ ದರ್ಶನಕೊಡುತ್ತಿದ್ದನು. ಆತನ ಸಂಕಲ್ಪಮಾತ್ರದಿಂದ ಪಂಚಾಯುಧ ಗಳೂ ಗರುಡಧ್ವಜಾದಿಗಳೂ ಆತನ ಸೇವೆಗಾಗಿ ಪ್ರಕಟವಾಗುತ್ತಿದ್ದುವು. ಗೀತೋಪ ದೇಶಸಮಯದಲ್ಲಿ ಆತನು ಚತುರ್ಭುಜನಾಗಿದ್ದ.

**'ತೇನೈವ ರೂಪೇಣ ಚತುರ್ಭುಜೇನ'** (ಗೀತಾ ಅಧ್ಯಾಯ ೧೧ ಶ್ಲೋಕ ೪೬)

ಅದು ನಾಶವಾಗುವವರೆಗೂ ಭೂಭಾರವು ಇದ್ದೇ ಇರುತ್ತದೆ. ಆದರೆ ಇವರು ನನ್ನ ಆಶ್ರಮಕ್ಕೆ ಒಳಪಟ್ಟಿದ್ದಾರೆ ಮತ್ತು ಅತ್ಯಂತ ವೈಭವೋಪೇತರಾಗಿದ್ದಾರೆ. ಆದುದರಿಂದ ಇವರನ್ನು ಬೇರೆ ಯಾರೂ ಸಂಹರಿಸಲಾರರು; ಜಯಿಸಲಾರರು. ಹಾಗಾದರೆ ಇವರನ್ನು ನಾಶಪಡಿಸಿ ಭೂಭಾರವನ್ನು ಅಡಗಿಸುವುದು ಹೇಗೆ? ಎಂದರೆ, **"ಅಂತಃಕಲಿಂ ಯದುಕುಲಸ್ಯ ವಿಧಾಯ ವೇಣುಸ್ತಮ್ಬಸ್ಯ ವಹ್ನಿಮಿವ ಶಾನ್ತಿಮುಪೈಮಿ ಧಾಮ"** ಇವರಲ್ಲಿ ಅಂತಃಕಲಹವನ್ನುಂಟುಮಾಡಿದರೆ ಅದು ಸಾಧ್ಯವಾಗುತ್ತದೆ. ಬಿದಿರು ಮೆಳೆಗಳ ಸಂಘರ್ಷದಿಂದುಂಟಾದ ಬೆಂಕಿಯು ಆ ಇಡೀ ಪೊದೆಯನ್ನು ಧ್ವಂಸಮಾಡುವಂತೆ ಇವರಲ್ಲಿ ಉಂಟಾಗುವ ಒಳಜಗಳವು ಇವರ ಇಡೀ ಕುಲವನ್ನೇ ಧ್ವಂಸ ಮಾಡಿಬಿಡುವುದು. ಆಗ ನಾನು ನಿಶ್ಚಿಂತೆಯಿಂದ ನನ್ನ ಪರಮವೈಕುಂಠಧಾಮಕ್ಕೆ ತೆರಳಬಹುದು.*

ಹೀಗೆ ನಿಶ್ಚಯಮಾಡಿಕೊಂಡ ಸತ್ಯಸಂಕಲ್ಪನಾದ ಭಗವಂತನು ಒಂದು ಬ್ರಾಹ್ಮಣಶಾಪದ ನೆಪದಿಂದ ತನ್ನ ಆ ಕುಲವನ್ನು ಉಪಸಂಹಾರ ಮಾಡಿಕೊಂಡುಬಿಟ್ಟನು. ಆ ಮಹಾಪ್ರಭುವು ಜಗತ್ತಿನ ಸರ್ವಸೌಂದರ್ಯವನ್ನೂ ತಿರಸ್ಕರಿಸುವ ತನ್ನ ಸರ್ವಾತಿಶಯವಾದ ರೂಪಲಾವಣ್ಯಸಂಪತ್ತಿನಿಂದಲೂ ಸರ್ವಮೋಹಕವಾದ ಮಧುರವಾಣಿಯಿಂದಲೂ, ದಿವ್ಯವಾದ ಕೃತಿಗಳಿಂದಲೂ, ಚೆಲುವಾದ ನೋಟದ ಸೊಬಗಿನಿಂದಲೂ ಎಲ್ಲರ ಕಣ್ಮನಗಳನ್ನೂ ಸೆಳೆಯುತ್ತಾ ತನ್ನ ಕೀರ್ತಿಯು ಇಡೀ ಜಗತ್ತಿನಲ್ಲಿ ವ್ಯಾಪಿಸಿ ಕಂಗೊಳಿಸುವಂತೆ ಮಾಡಿದ್ದನು. ಆ ಕೀರ್ತಿಯು ಗಾನ, ಶ್ರವಣ, ಸ್ಮರಣಾದಿ ಅನುಸಂಧಾನದಿಂದಲೇ ಜನರು ಅಜ್ಞಾನದ ಇರುಳನ್ನು ಕಳೆದುಕೊಳ್ಳಲಿ ಎಂದು ಸಂಕಲ್ಪಮಾಡಿ ಸ್ವಧಾಮಕ್ಕೆ ಪ್ರಯಾಣಬೆಳೆಸಿದನು."

---

* 'ಶಾನ್ತಿಮುಪೈಮಿ ಧಾಮ' ಶಾಂತಿಯನ್ನು ಹೊಂದಿ ಅನಂತರ ಸ್ವಧಾಮವಾದ ವೈಕುಂಠಕ್ಕೆ ಹೋಗುತ್ತೇನೆ. (ಶ್ರೀಧರೀಯ)

ವೀರರಾಘವೀಯದಲ್ಲಿ–ಈ ಪಾಠದ ಜೊತೆಗೆ 'ಶಾನ್ತಮುಪೈಮಿ ಧಾಮ' ಎಂಬ ಪಾಠವನ್ನು ಸಂಭಾವನೆ ಮಾಡಿದೆ. ಶಾಂತವಾಗಿರುವ ಎಂದರೆ ಹಸಿವು-ಬಾಯಾರಿಕೆಯೇ ಮುಂತಾದ ಆರು ಊರ್ಮಿಗಳಿಲ್ಲದ ನನ್ನ ಸ್ವಧಾಮವಾದ ವೈಕುಂಠಕ್ಕೆ ಹೋಗುವೆನು–ಎಂದು ಇದರ ಪ್ರಕಾರ ಅರ್ಥವಾಗುತ್ತದೆ.

'ಶಾಂತಂ–ಊರ್ಮಿಷಟ್ಕರಹಿತಂ ಶ್ರೀವೈಕುಂಠಾಖ್ಯಂ ಸ್ಥಾನಂ'

ರಾಜನು ಹೇಳುತ್ತಾನೆ :

**ಬ್ರಹ್ಮಣ್ಯಾನಾಂ ವದಾನ್ಯಾನಾಂ ನಿತ್ಯಂ ವೃದ್ಧೋಪಸೇವಿನಾಮ್ ।**
**ವಿಪ್ರಶಾಪಃ ಕಥಮಭವದ್ವೃಷ್ಣೀನಾಂ ಕೃಷ್ಣಚೇತಸಾಮ್ ॥೮॥**

**ಯನ್ನಿಮಿತ್ತಃ ಸ ವೈ ಶಾಪೋ ಯಾದೃಶೋ ದ್ವಿಜಸತ್ತಮ ।**
**ಕಥಮೇಕಾತ್ಮನಾಂ ಭೇದ ಏತತ್ಸರ್ವಂ ವದಸ್ವ ಮೇ ॥೯॥**

ಮಹರ್ಷಿಯ ಈ ಹೇಳಿಕೆಯನ್ನು ಕೇಳಿದ ಪರೀಕ್ಷಿದ್ರಾಜನಿಗೆ ಆ ವೃತ್ತಾಂತದ ವಿವರಣೆಯನ್ನು ಕೇಳುವ ಮನಸ್ಸಾಯಿತು. ಆತನು "ಮಹಾತ್ಮರೇ! ಯಾದವರಾದರೋ ಸದಾ ಬ್ರಾಹ್ಮಣರಲ್ಲಿ ವಿಶೇಷವಾದ ಭಕ್ತಿಯುಳ್ಳವರಾಗಿದ್ದರು. ಉದಾರಿಗಳಾಗಿದ್ದರು ಮತ್ತು ಜ್ಞಾನವೃದ್ಧರ, ವಯೋವೃದ್ಧರ ಸೇವೆಯನ್ನು ಸದಾ ಮಾಡುತ್ತಿದ್ದರು. ಇದಲ್ಲದೆ ಅವರ ಮನಸ್ಸು ಶ್ರೀಕೃಷ್ಣ ಪರಮಾತ್ಮನಲ್ಲಿ ಲಗ್ನವಾಗಿತ್ತು. ಇಂತಹವರು ಬ್ರಾಹ್ಮಣರ ಶಾಪಕ್ಕೆ ಹೇಗೆ ಗುರಿಯಾದರು? ಅವರಿಗೆ ಬಂದ ಶಾಪ ಯಾವುದು? ಏತಕ್ಕೆ ಆ ಶಾಪವು ಬಂದಿತು? ಯಾದವರು ಐಕಮತ್ಯವನ್ನು ಹೊಂದಿದ್ದವರು. ಶ್ರೀಕೃಷ್ಣಪರಮಾತ್ಮನಲ್ಲಿ ಏಕಾತ್ಮತೆಯನ್ನು ಹೊಂದಿದ್ದ ಋಷಿಗಳಿಗಾದರೂ ಶಾಪವನ್ನು ಕೊಡುವ ಭೇದದೃಷ್ಟಿ ಏಕೆ ಉಂಟಾಯಿತು? **ಕಥಮೇಕಾತ್ಮನಾಂ ಭೇದಃ?** ಇದೆಲ್ಲವನ್ನೂ ಕೃಪೆಯಿಂದ ತಿಳಿಸೋಣವಾಗಲೀ, ಮಹರ್ಷಿಗಳೇ!" ಎಂದು ಪ್ರಾರ್ಥನೆಮಾಡಿದನು.*

ಶ್ರೀಶುಕ ಮಹರ್ಷಿಗಳು ಹೀಗೆ ಉತ್ತರಿಸಿದರು :

**ಬಿಭ್ರದ್ವಪುಃ ಸಕಲಸುನ್ದರಸನ್ನಿವೇಶಂ**
**ಕರ್ಮಾಚರನ್ ಭುವಿ ಸಮುಙ್ಗಲಮಾಪ್ತಕಾಮಃ ।**
**ಆಸ್ಥಾಯ ಧಾಮ ರಮಮಾಣ ಉದಾರಕೀರ್ತಿಃ**
**ಸಂಹರ್ತುಮೈಚ್ಛತ ಕುಲಂ ಸ್ಥಿತಕೃತ್ಯಶೇಷಃ ॥೧೦॥**

---

* '**ಕಥಮೇಕಾತ್ಮನಾಂ ವೃಷ್ಣೀನಾಂ ಭೇದಃ**'–ಏಕಚಿತ್ತರಾಗಿದ್ದ ಆ ಯಾದವರಲ್ಲಿ ಭೇದವು (ಒಡಕು) ಹೇಗೆ ಉಂಟಾಯಿತು? (ಶ್ರೀಧರೀಯ)

ಪರಸ್ಪರ ಐಕಮತ್ಯವನ್ನು ಹೊಂದಿದ್ದ ಯಾದವರಲ್ಲಿ ಭೇದವು (ಒಡಕು) ಹೇಗೆ ಉಂಟಾಯಿತು? ಅಥವಾ 'ಏಕಾತ್ಮನಾಂ' ಎಂಬ ಪದವನ್ನು 'ವಿಪ್ರಾಣಾಂ' ಎಂಬುದಕ್ಕೆ ವಿಶೇಷಣವನ್ನಾಗಿ ತೆಗೆದುಕೊಂಡು ಸರ್ವಾತ್ಮವಾದ ಪರಬ್ರಹ್ಮದ

"ಪರೀಕ್ಷಿತ! ಪೂರ್ಣಕಾಮನಾಗಿ ಉದಾರವಾದ ಕೀರ್ತಿಯಿಂದ ಸಂಪನ್ನನಾಗಿದ್ದ ಶ್ರೀಕೃಷ್ಣಪರಮಾತ್ಮನು ಸರ್ವಾಂಗಗಳಲ್ಲಿಯೂ ಸುಂದರತರವಾಗಿದ್ದ ದಿವ್ಯಮಂಗಳ ವಿಗ್ರಹದಿಂದ ಕಂಗೊಳಿಸುತ್ತಾ ಭೂಮಿಯಲ್ಲಿ ಪರಮ ಮಂಗಳಕರವಾದ ಕರ್ಮಗಳನ್ನು ಆಚರಿಸುತ್ತಾ ದ್ವಾರಕಾನಗರದಲ್ಲಿ ರಮಿಸುತ್ತಿದ್ದನಷ್ಟೆ! ಕಡೆಗೆ ಆತನು ಯಾದವಸಂಹಾರವೆಂಬ ತನ್ನ ಉಳಿಕೆಯ ಕರ್ತವ್ಯವನ್ನು ನೆರವೇರಿಸಿಬಿಡಲು ಸಂಕಲ್ಪಮಾಡಿದನು.

**ಕರ್ಮಾಣಿ ಪುಣ್ಯನಿವಹಾನಿ ಸುಮಙ್ಗಲಾನಿ**
**ಗಾಯಜ್ಜಗತ್ಕಲಿಮಲಾಪಹರಾಣಿ ಕೃತ್ವಾ ।**
**ಕಾಲಾತ್ಮನಾ ನಿವಸತಾ ಯದುದೇವಗೇಹೇ**
**ಪಿಣ್ಡಾರಕಂ ಸಮಗಮನ್ ಮುನಯೋ ನಿಸೃಷ್ಟಾಃ ॥೧೧॥**

ಆತನು ಮಾಡಿದ ಎಲ್ಲ ಕರ್ಮಗಳೂ ಅತ್ಯಂತ ಪುಣ್ಯಕರಗಳೂ ; ಶುಭಕರಗಳು ; ಗಾನಮಾಡುವವರ ಎಲ್ಲ ಕಲಿದೋಷಗಳನ್ನೂ ತೊಳೆದು ಹಾಕುವ ಮಹಿಮೆಯುಳ್ಳವುಗಳು. ಯದುರಾಜನಾದ ಉಗ್ರಸೇನನ ರಾಜಧಾನಿಯಾದ ದ್ವಾರಕೆಯಲ್ಲಿ ಹೀಗೆ ವಾಸವಾಗಿದ್ದ ಆ ಕಾಲಶರೀರಿಯಾದ ದೇವದೇವನ ಸಂಕಲ್ಪದಿಂದ ಪ್ರೇರಿತರಾಗಿ ಕೆಲವು ಮುನಿವರ್ಯರು ಒಮ್ಮೆ ರಾಜಧಾನಿಯ ಬಳಿಯಲ್ಲಿದ್ದ ಪಿಂಡಾರಕವೆಂಬ ಕ್ಷೇತ್ರಕ್ಕೆ ಬಂದರು.[1]

---

ಉಪಾಸನೆಯಿಂದ ಎಲ್ಲರಲ್ಲೂ ಸಮಚಿತ್ತರಾಗಿದ್ದ ಮುನಿಗಳಿಗೆ ಯಾದವರನ್ನು ನಿಗ್ರಹಿಸಲು ಕಾರಣವಾದ ಭೇದದೃಷ್ಟಿಯು ಹೇಗೆ ಉಂಟಾಯಿತು? 'ಸರ್ವಾತ್ಮ ಬ್ರಹ್ಮೋಪಾಸನೇನ **ಸರ್ವತ್ರ ಸಮಚಿತ್ತಾನಾಂ ಋಷೀಣಾಂ ಕಥಂ ಭೇದಃ ಯದುಷು** ನಿಗ್ರಹ ನಿದಾನಭೂತಭೇದದೃಷ್ಟಿಃ **ಕಥಮಭೂತ್**'

* ಶ್ಲೋಕ ೧೦ : 'ಪುಣ್ಯನಿವಹಾನಿ ಸುಮಂಗಲಾನಿ **ಕರ್ಮಾಣಿ ಕುರ್ವನ್**'– ಅಶ್ವಮೇಧವೇ ಮುಂತಾದ ಕರ್ಮಗಳು ಪುಣ್ಯವನ್ನು ಮಾತ್ರ ಕೊಡುತ್ತವೆ. ಮಕ್ಕಳನ್ನು ಮುದ್ದಿಸುವುದೇ ಮುಂತಾದ ಕರ್ಮಗಳು ತತ್ಕಾಲದಲ್ಲಿ ಮಾತ್ರ ಸುಖವನ್ನು ಕೊಡುತ್ತದೆ. ಪ್ರಾಯಶ್ಚಿತ್ತಾದಿ ಕರ್ಮಗಳು ಪಾಪಪರಿಹಾರವನ್ನು ಉಂಟು ಮಾಡುತ್ತವೆ. ಭಗವಂತನಾದ ಶ್ರೀಕೃಷ್ಣನ ಕರ್ಮಗಳಾದರೋ ಸರ್ವತೋಮುಖ ವಾಗಿ ಸದಾ ಪೂರ್ಣಸುಖವನ್ನೇ ಉಂಟುಮಾಡುವುವು. (ಶ್ರೀಧರೀಯ)

1 ಶ್ಲೋಕ ೧೧ : '**ಕರ್ಮಾಣಿ ಕೃತ್ವಾ ವಿಸೃಷ್ಟಾ ಮುನಯಃ**' ಭಗವಂತನ ಕರೆಯಂತೆ ಬಂದು ಕರ್ಮಗಳನ್ನು ಆಚರಿಸಿದ ಬಳಿಕ ಕಳುಹಿಸಿಕೊಡಲ್ಪಟ್ಟ ಋಷಿಗಳು–

ವಿಶ್ವಾಮಿತ್ರ, ಅಸಿತ, ಕಣ್ವ, ದುರ್ವಾಸ, ಭೃಗು, ಅಂಗಿರಸ್ಸು, ಕಶ್ಯಪ, ವಾಮದೇವ, ಅತ್ರಿ, ವಸಿಷ್ಠ ಮತ್ತು ನಾರದ ಮುಂತಾದವರೇ ಆ ಮುನಿಶ್ರೇಷ್ಠರು.

ಆಗ ಅಲ್ಲಿ ಆಟವಾಡುತ್ತಿದ್ದ ಕೆಲವು ತುಂಟರಾದ ಯಾದವಕುಮಾರರು ಅವರ ಬಳಿಗೆ ಬಂದರು. ಅವರು ಜಾಂಬವತಿಯ ಪುತ್ರನಾದ ಸಾಂಬನಿಗೆ ಹೆಂಗಸಿನ ವೇಷಹಾಕಿ ಕರೆತಂದು ಕಪಟವಿನಯದಿಂದ ಮಹರ್ಷಿಗಳಿಗೆ ನಮಸ್ಕಾರ ಮಾಡಿ "ಎಲೈ ಬ್ರಾಹ್ಮಣೋತ್ತಮರೇ! ಚೆಲುವಿನ ಗಣಿಯಾಗಿರುವ ಈ ನಾರೀಮಣಿಯು ಗರ್ಭಿಣಿಯಾಗಿದ್ದಾಳೆ. ಶೀಘ್ರದಲ್ಲೇ ಶಿಶುವನ್ನು ಪ್ರಸವಿಸುವಳು. ಗಂಡು ಮಗುವನ್ನು ಹಡೆಯಬೇಕೆಂಬ ಬಯಕೆ ಈಕೆಗಿದೆ. ಹುಟ್ಟುವ ಮಗುಗಂಡಾಗುವುದೋ ಹೆಣ್ಣಾಗುವುದೋ ಎಂದು ತಿಳಿದುಕೊಳ್ಳಲು ತಮ್ಮ ಬಳಿ ಬಂದಿದ್ದಾಳೆ. ಆದರೆ ತಾನೇ ನೇರವಾಗಿ ತಮ್ಮನ್ನು ಕೇಳಲು ನಾಚಿಕೆಗೊಂಡು ನಮ್ಮ ಮೂಲಕ ತಮ್ಮನ್ನು ಪ್ರಾರ್ಥಿಸುತ್ತಿದ್ದಾಳೆ. ತಮ್ಮ ದರ್ಶನ ಅಮೋಘವಾದುದು. ಸರ್ವಜ್ಞರಾದ ತಾವು ಆ ವಿಷಯವನ್ನು ತಿಳಿಸಬಲ್ಲಿರೆಂಬುದರಲ್ಲಿ ಸಂಶಯವಿಲ್ಲ. ಈಕೆಗೆ ಎಂಥಾ ಮಗು ಹುಟ್ಟುವುದು? ಅಪ್ಪಣೆಯಾಗಬೇಕು"–ಎಂದು ಕೇಳಿಕೊಂಡರು. ತಮ್ಮನ್ನು ಮೋಸಗೊಳಿಸಲು ಪ್ರಯತ್ನಿಸಿದ ಈ ಕುಚೋದ್ಯದ ಪ್ರಶ್ನೆಯನ್ನು ಕೇಳಿ ಮುನಿಗಳಿಗೆ ತುಂಬಾ ಕೋಪ ಬಂದಿತು. "ಎಲೈ ಮೂರ್ಖರೇ! ಈಕೆ ಏನನ್ನು ಹೆರುವಳು ಎಂಬುದನ್ನು ಹೇಳಬೇಕೇ? ಹೇಳುತ್ತೇವೆ ; ಕೇಳಿರಿ : ಇವಳು ಒಂದು ಒನಕೆಯನ್ನು ಹಡೆಯುವಳು. ಅದು ನಿಮ್ಮ ಕುಲವನ್ನೇ ನಾಶಮಾಡುವುದು"–ಎಂದು ಅವರು ಗುಡುಗಿದರು. ಇದನ್ನು ಕೇಳಿ ಯದುಕುಮಾರರಿಗೆ ತುಂಬಾ ಗಾಬರಿಯಾಯಿತು. ಸಾಂಬನ

---

ಎಂದು ಶ್ರೀಧರೀಯ. 'ಕರ್ಮಾರ್ಥಮಾಹೂತಃ ಕರ್ಮಾಣಿ ಕೃತ್ವಾ ವಿಸೃಷ್ಟಾ ಮುನಯಃ' ವೀರರಾಘವೀಯದ ಪ್ರಕಾರ–'ಕಾಲಾತ್ಮನಾ ವಿಸೃಷ್ಟಾಃ ಕಾಲಶರೀರ ತಯಾ ಸಂಹಾರಕೇಣ ಭಗವತಾ ವಿಸೃಷ್ಟಾಃ ಪ್ರಚೋದಿತಾಃ ಮುನಯಃ ಭಗವತ್ಸಙ್ಕಲ್ಪಪ್ರೇರಿತಾಃ'- ಕಾಲಶರೀರಕನಾಗಿ ಸಂಹಾರಕಾರಕನಾಗಿರುವ ಭಗವಂತನಿಂದ ಪ್ರಚೋದಿತರಾದ, ಭಗವಂತನ ಸಂಕಲ್ಪದಿಂದ ಪ್ರೇರಿತರಾದ, ಋಷಿಗಳು–ಎಂದು ಅರ್ಥವಾಗುತ್ತದೆ.

ಸ್ತ್ರೀವೇಷವನ್ನು ಬಿಚ್ಚಿ ಹೊಟ್ಟೆಯನ್ನು ನೋಡಲು ಅಲ್ಲಿಂದ ನಿಜವಾಗಿಯೂ ಒಂದು ಕಬ್ಬಿಣದ ಒನಕೆಯೇ ಹೊರಬಂದಿತು. ಅವರು ಪಶ್ಚಾತ್ತಾಪದಿಂದ ತಲೆ ಚಚ್ಚಿಕೊಳ್ಳುತ್ತಾ "ಅಯ್ಯೋ! ಎಂಥಾ ದುರ್ಭಾಗ್ಯರು ನಾವು! ಎಂಥಾ ಅನರ್ಥವನ್ನು ತಂದುಕೊಂಡೆವು! ಇದನ್ನು ಕೇಳಿ ಜನ ನಮ್ಮನ್ನು ಏನೆಂದಾರು!"–ಎಂದು ಕಳವಳಿಸುತ್ತ ಆ ಒನಕೆಯನ್ನೆತ್ತಿಕೊಂಡು ಮನೆಗೆ ಬಂದರು. ಪೆಚ್ಚುಮೋರೆಹಾಕಿಕೊಂಡು ಆ ಒನಕೆಯೊಡನೆ ರಾಜಸಭೆಗೆ ಬಂದು ಎಲ್ಲ ಯಾದವರೆದುರಿಗೆ ಘಟನೆಯನ್ನು ಅರಿಕೆಮಾಡಿಕೊಂಡರು. 'ಈ ಬ್ರಾಹ್ಮಣರ ಶಾಪವು ಸುಳ್ಳಾಗುವುದಿಲ್ಲ'–ಎಂಬುದು ದ್ವಾರಕಾನಿವಾಸಿಗಳಿಗೆ ತಿಳಿಯಿತು. ಶಾಪದ ಫಲವಾಗಿ ಹುಟ್ಟಿದ ಒನಕೆಯನ್ನು ಅವರು ನೋಡಿದ್ದರಷ್ಟೆ! ಅವರಿಗೆ ಮಿತಿಮೀರಿದ ಆಶ್ಚರ್ಯವಾಯಿತು. ಅಂಜಿಕೆಯಾಯಿತು. ದುಗುಡವಾಯಿತು. ಇನ್ನೇನು ಮಾಡುವುದು? ಯದುಪತಿ ಉಗ್ರಸೇನನು ಆ ಒನಕೆಯನ್ನು ಚೂರುಚೂರುಮಾಡಿಸಿ ಆ ಚೂರುಗಳನ್ನೂ ಮತ್ತು ಉಳಿಕೆಯಾದ ಉಕ್ಕಿನ ಮೊಳೆಯನ್ನೂ ಸಮುದ್ರಕ್ಕೆ ಬಿಸಾಡಿಸಿಬಿಟ್ಟನು. ಆ ಉಕ್ಕಿನ ಚೂರನ್ನು ಕಡಲಿನಲ್ಲಿದ್ದ ಒಂದು ಮೀನು ನುಂಗಿಕೊಂಡಿತು. ನೀರಿನಲ್ಲಿ ಕದಡಲ್ಪಟ್ಟಿದ್ದ, ಒನಕೆಯ ಪುಡಿಗಳು ಅಲೆಗಳ ಹೊಡೆತದಿಂದ ಒತ್ತರಿಸಲ್ಪಡುತ್ತಾ ತೀರಕ್ಕೆ ಬಂದು ಬಿದ್ದು ಜೊಂಡುಹುಲ್ಲಿನ ಜಾತಿಯ ಗಿಡಗಳಾಗಿ ಬೆಳೆದುವು. ಉಕ್ಕಿನ ಚೂರನ್ನು ತಿಂದಿದ್ದ ಮೀನು ಇತರ ಮೀನುಗಳೊಡನೆ 'ಜರ' ಎಂಬ ಒಬ್ಬ ಬೆಸ್ತರವನ ಕೈಗೆ ಸಿಕ್ಕಿತು. ಆತನು ಅದನ್ನು ಕೊಯ್ದು ಅದರ ಹೊಟ್ಟೆಯಲ್ಲಿ ದೊರಕಿದ ಕಬ್ಬಿಣದ ಮೊಳೆಯನ್ನು ಎತ್ತಿಕೊಂಡು ತನ್ನ ಬಾಣದ ಅಂಚಿನಲ್ಲಿ ಸೇರಿಸಿಕೊಂಡನು.*

**ಭಗವಾನ್ ಜ್ಞಾತಸರ್ವಾರ್ಥ ಈಶ್ವರೋಽಪಿ ತದನ್ಯಥಾ ।**
**ಕರ್ತುಂ ನೈಚ್ಛದ್ವಿಪ್ರಶಾಪಂ ಕಾಲರೂಪ್ಯನ್ವಮೋದತ ॥೨೪॥**

ರಾಜೇಂದ್ರ! ಇದೆಲ್ಲವೂ ಶ್ರೀಕೃಷ್ಣನ ಸಂಕಲ್ಪದಿಂದಲೇ ನಡೆದ ಕಾರ್ಯಗಳು. ಸರ್ವಜ್ಞನಾದ ಆತನಿಗೆ ಈ ಘಟನೆಯೂ ಮತ್ತು ಇದರ ಫಲವೂ ಎಲ್ಲವೂ ತಿಳಿದಿತ್ತು. ಆ ಬ್ರಾಹ್ಮಣಶಾಪವನ್ನು ವಿಫಲಗೊಳಿಸುವ

* ಈ ಘಟನೆಯನ್ನು ಅವರು ನೇರವಾಗಿ ಶ್ರೀಕೃಷ್ಣನಿಗೆ ಅರಿಕೆಮಾಡದೆ ರಾಜಸಭೆಯಲ್ಲಿ ನಿವೇದಿಸಿದರು–ಎಂಬುದನ್ನು ಗಮನಿಸಬೇಕು.

ಸಾಮರ್ಥ್ಯವೂ ಆತನಿಗಿತ್ತು. ಆದರೂ ಆತನು ಅದನ್ನು ವಿಫಲಗೊಳಿಸದೆ ಅದರ ಅನುಮೋದನೆಯನ್ನೇ ಮಾಡಿದನು. ಏಕೆಂದರೆ ಹೀಗೆ ಯಾದವ ಸಂಹಾರವಾಗಬೇಕೆಂಬುದು ಕಾಲರೂಪಿಯಾದ ಆತನ ಸತ್ಯವಾದ ಸಂಕಲ್ಪ ದಲ್ಲಿಯೇ ಸೇರಿತ್ತು.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ಏಕಾದಶಸ್ಕಂಧದ *೧ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೨ನೆಯ ಅಧ್ಯಾಯ

## ಯೋಗೇಶ್ವರರ ಉಪದೇಶ

**ಗೋವಿನ್ದಭುಜಗುಪ್ತಾಯಾಂ ದ್ವಾರವತ್ಯಾಂ ಕುರೂದ್ವಹ ।**
**ಅವಾತ್ಸೀನ್ನಾರದೋಽಭೀಕ್ಷ್ಣಂ ಕೃಷ್ಣೋಪಾಸನಲಾಲಸಃ ॥೧॥**

ಶ್ರೀಶುಕಮುನಿಗಳು ಹೇಳುತ್ತಾರೆ :

"ಎಲೈ ಕುರುಶ್ರೇಷ್ಠನೇ! ಕೇಳು : ಶ್ರೀಕೃಷ್ಣನು ದ್ವಾರಕೆಯಲ್ಲಿ ವಾಸವಾಗಿದ್ದು ಅದನ್ನು ಸಂರಕ್ಷಿಸುತ್ತಿದ್ದಾಗ ಆತನ ಪರಮಭಕ್ತರಾದ ನಾರದಮಹರ್ಷಿಗಳು ಆ ಪ್ರಭುವಿನ ಬಳಿ ಕುಳಿತು ಆತನನ್ನು ಆರಾಧಿಸುವ ಉತ್ಕಟವಾದ ಇಚ್ಛೆಯಿಂದ ಅಲ್ಲಿಗೆ ಅಡಿಗಡಿಗೆ ಬರುತ್ತಿದ್ದರು. ಅಲ್ಲಿ ಬಹುಕಾಲ ಇರುತ್ತಿದ್ದರು.

---

* ಸಾಧುಸಂರಕ್ಷಣೆಮಾಡಿ ದುಷ್ಟರನ್ನು ನಿಗ್ರಹಿಸಿ ಭೂಭಾರವನ್ನು ಅಡಗಿಸುವುದು ಭೂಧರನಾದ ಭಗವಂತನ ಅವತಾರದ ಉದ್ದೇಶ. ಈ ದಿಸೆಯಲ್ಲಿ ಆತನು ಬಾಲ್ಯ-ಯೌವನ ದಶೆಗಳಲ್ಲಿ ನಡೆಸಿದ ದಿವ್ಯಲೀಲೆಗಳನ್ನು ಹತ್ತನೆಯ ಸ್ಕಂಧದಲ್ಲಿ ವಿವರಿಸಿ ಈ ಹನ್ನೊಂದನೆಯ ಸ್ಕಂಧವು ಭಗವಂತನ ಸಂಕಲ್ಪನಿರ್ವಹಣೆಯನ್ನೂ ಭಾಗವತದ ಪರಮತತ್ತ್ವಗಳನ್ನೂ ಕಥಾಸಂವಾದರೂಪದಲ್ಲಿಯೂ ಉಪದೇಶರೂಪದಲ್ಲಿಯೂ ಪ್ರತಿಪಾದಿಸುವ ಅತಿಮುಖ್ಯವಾದ ಒಂದು ಭಾಗವಾಗಿದೆ. ಬ್ರಾಹ್ಮಣಶಾಪದ ನೆಪದಲ್ಲಿ ಯಾದವರನ್ನು ಸಂಹರಿಸಿ ಭೂಮಿಯ ಉಳಿಕೆಯ ಭಾರವನ್ನು ಇಳಿಸಲು ಭಗವಂತನು ಸಂಕಲ್ಪಿಸಿದ್ದು , ವಸುದೇವ-ಉದ್ಧವರನ್ನು ಕುರಿತು ಮಾಡಿದ ಉಪದೇಶಗಳ ಮೂಲಕ ಭಾಗವತಧರ್ಮ, ಭಾಗವತಲಕ್ಷಣ, ಬಂಧಮೋಕ್ಷವಿವೇಕ, ಸಿದ್ಧಿ,

ಆತನ ಅಡಿದಾವರೆಗಳನ್ನು ಭಜಿಸುವವರಿಗೆ ಮೃತ್ಯುವಿನ ಭಯ ವಿಲ್ಲವು. ದೇವಶ್ರೇಷ್ಠರಿಗೂ ಆರಾಧ್ಯನಾದ ಸ್ವಾಮಿ ಅವನು. ಹೀಗಿರುವಾಗ ಎಲ್ಲೆಡೆಯಲ್ಲಿಯೂ ಮೃತ್ಯುಭಯಕ್ಕೆ ಈಡಾಗಿರುವ ಯಾವ ಇಂದ್ರಿಯ ವಂತನು ತಾನೇ ಆತನ ಪಾದಕಮಲಗಳನ್ನು ಭಜಿಸದೇ ಇರುವನು? ಅತ್ಯಂತ ವಿವೇಕಿಯಾಗಿರಲಿ ಅಥವಾ ಕಡುಮೂಢನೇ ಆಗಿರಲಿ ; ತನ್ನ ಯಾವುದಾದರೂ ಇಂದ್ರಿಯದಿಂದ ಒಮ್ಮೆ ಅವುಗಳ ರುಚಿಯನ್ನು ಅನುಭವಿ ಸಿದ್ದರೂ ಆತನು ಅವುಗಳನ್ನು ಬಿಡಲಾರನು. ಇನ್ನು ಭಕ್ತಶ್ರೇಷ್ಠರೂ ಋಷಿ ಶ್ರೇಷ್ಠರೂ ಆದ ನಾರದರ ವಿಷಯದಲ್ಲಿ ಹೇಳತಕ್ಕದ್ದೇನಿದೆ? ದೇವರ್ಷಿಗಳು ಒಮ್ಮೆ ತನ್ನ ಮನೆಗೆ ದಯಮಾಡಿಸಿದಾಗ ವಸುದೇವನು ಅವರಿಗೆ ಪೂಜೆ ಯನ್ನು ಸಲ್ಲಿಸಿ ಅವರು ಸುಖವಾಗಿ ಕುಳಿತಿದ್ದಾಗ ನಮಸ್ಕಾರಮಾಡಿ ಅವರಲ್ಲಿ ಹೀಗೆ ವಿಜ್ಞಾಪಿಸಿದನು :

"ಪೂಜ್ಯರೇ! ನಿಮ್ಮಂತಹ ಮಹಾತ್ಮರು ತಾಪತ್ರಯಗಳಿಂದ ಪೀಡಿತ ರಾದ ನಮ್ಮ ಮನೆಗೆ ಬರುವುದು ನಮ್ಮ ಒಳ್ಳೆಯದಕ್ಕೋಸ್ಕರವೇ ಹೊರತು ಬೇರಾವುದಕ್ಕೂ ಅಲ್ಲ. ಇದರಲ್ಲಿ ನಿಮ್ಮ ಸ್ವಾರ್ಥವು ಕಿಂಚಿತ್ತೂ ಇಲ್ಲ. ತಂದೆ-ತಾಯಿಗಳು ದೂರದೇಶದಿಂದ ತಮ್ಮ ಮಕ್ಕಳ ಬಳಿಗೆ ಬರುವುದು ಅವರ ಹಿತ ಮತ್ತು ಸಂತೋಷಗಳಿಗಾಗಿಯೇ ಅಲ್ಲವೇ? ಹಾಗೆಯೇ ಭಗವಂತನನ್ನು ಪಡೆಯುವುದಕ್ಕೆ ಮಾರ್ಗವಾಗಿರುವ ನಿಮ್ಮಂತಹವರು ನಮ್ಮಲ್ಲಿಗೆ ಪಾದಗಳನ್ನು ಬೆಳೆಯಿಸುವುದು ನಮ್ಮ ಶ್ರೇಯಸ್ಸಿಗಾಗಿಯೇ.

ವಿಚಾರಮಾಡಿನೋಡಿದರೆ : ದೇವತೆಗಳೂ ಕೂಡ ಸಂಪೂರ್ಣವಾಗಿ, ಭಗವನ್ಮಯರಾಗಿರುವ ನಿಮ್ಮಂತಹ ಸಾಧುಗಳಿಗೆ ಸರಿಸಮಾನರಾಗಲಾರರು. ಏಕೆಂದರೆ ದೇವತೆಗಳು ಮಾಡುವ ಎಲ್ಲ ಕರ್ಮಗಳೂ ಯಾವಾಗಲೂ ಸುಖ ಕರವಾಗಿರಬೇಕೆಂಬ ನಿಯಮವಿಲ್ಲ. ಉದಾಹರಣೆಗೆ ಇಂದ್ರನು ಸಸ್ಯಗಳಿಗೆ

---

ವಿಭೂತಿ, ಸತ್ಸಂಗ, ವರ್ಣಾಶ್ರಮಧರ್ಮ, ಭಕ್ತಿ-ಜ್ಞಾನ-ಕರ್ಮಯೋಗಗಳೇ ಮುಂತಾದ ಭಗವದ್ಗೀತೋಕ್ತ ಧರ್ಮಗಳ ನಿರೂಪಣೆ ಮತ್ತು ಯಾದವಸಂಹಾರಾ ನಂತರ ಅವತಾರಪ್ರಯೋಜನವನ್ನು ಸಂಪೂರ್ಣವಾಗಿ ಸಾಧಿಸಿದ ಭಗವಂತನು ತನ್ನ ಪರಮಧಾಮಕ್ಕೆ ತೆರಳುವಿಕೆ–ಎಂಬಿಷ್ಟು ಮುಖ್ಯವಿಷಯಗಳು ಇಲ್ಲಿ ಅಡಕವಾಗಿವೆ. ಜ್ಞಾನ-ಭಕ್ತಿ-ವೈರಾಗ್ಯಗಳ ಸುಂದರಕೋಶವಾಗಿದೆ. ಈ ಸ್ಕಂಧ.

ಪೋಷಕವಾದ ಮಳೆಯನ್ನು ಕರೆದು ಲೋಕಕ್ಕೆ ಸುಖವನ್ನುಂಟುಮಾಡು ವಂತೆಯೇ ಅತಿವೃಷ್ಟಿ-ಅನಾವೃಷ್ಟಿಗಳ ಮೂಲಕ ಲೋಕಕ್ಕೆ ಪೀಡೆಯನ್ನೂ ಉಂಟುಮಾಡುವನು.

**ಭೂತಾನಾಂ ದೇವಚರಿತಂ ದುಃಖಾಯ ಚ ಸುಖಾಯ ಚ ।**
**ಸುಖಾಯೈವ ಹಿ ಸಾಧೂನಾಂ ತ್ವಾದೃಶಾಮಚ್ಯುತಾತ್ಮನಾಮ್ ॥೫॥**

**ಭಜನ್ತಿ ಯೇ ಯಥಾ ದೇವಾನ್ದೇವಾ ಅಪಿ ತಥೈವ ತಾನ್ ।**
**ಛಾಯೇವ ಕರ್ಮಸಚಿವಾಃ ಸಾಧವೋ ದೀನವತ್ಸಲಾಃ ॥೬॥**

ಇದಲ್ಲದೆ ದೇವತೆಗಳು ಕರ್ಮಕ್ಕೆ ಅಧೀನರಾಗಿಯೇ ಫಲವನ್ನು ಕೊಡುತ್ತಾರೆ. ತಮ್ಮನ್ನು ಯಾರು ಸೇವಿಸುತ್ತಾರೆಯೋ ಅವರ ಸೇವಾಕರ್ಮವನ್ನು ಗಮನಿಸಿ ನೆರಳಿನಂತೆ ಅದಕ್ಕೆ ತಕ್ಕಂತೆ ಮಾತ್ರ ಫಲವನ್ನು ಕೊಡುತ್ತಾರೆ. ಆದರೆ ನಿಮ್ಮಂತಹ ಸತ್ಪುರುಷರು ದೀನಜನರ ಕರ್ಮಾದಿಗಳನ್ನು ಪರಿಗಣಿಸದೇ ಸ್ವಾಭಾವಿಕವಾದ ದಯೆಯಿಂದಲೇ ಸಲಹುತ್ತಾರೆ.

ಮಹಾತ್ಮರೇ! ನಿಮ್ಮ ಶುಭವಾದ ಆಗಮನ ಮತ್ತು ದರ್ಶನಗಳಿಂದಲೇ ನಾವು ಕೃತಕೃತ್ಯರಾದೆವು. ಆದರೂ ನಮಗೆ ಭಾಗವತಧರ್ಮಗಳನ್ನು ಉಪದೇಶಮಾಡಬೇಕೆಂದು ಪ್ರಾರ್ಥಿಸುತ್ತೇವೆ. ಯಾವುದನ್ನು ಶ್ರದ್ಧೆಯಿಂದ ಕೇಳಿದರೆ ಮನುಷ್ಯನು ಎಲ್ಲ ಭಯಗಳ ದೆಸೆಯಿಂದಲೂ ಬಿಡುಗಡೆ ಹೊಂದುವನೋ ಅಂತಹ ಪವಿತ್ರವಾದ ಭಾಗವತಧರ್ಮಗಳನ್ನು ನಮಗೆ ಬೋಧಿಸಿರಿ. ಮೋಕ್ಷಪ್ರದನಾದ ಸಾಕ್ಷಾತ್ ಭಗವಂತನೇ ನನಗೆ ಪುತ್ರನಾಗಿ ಹುಟ್ಟಿರುವುದೇನೋ ನಿಜವೇ. ಆದರೂ ನಾನು ದೇವನ ಮಾಯೆಯಿಂದ ಮೋಹಿತನಾಗಿ ಆತನನ್ನು 'ನೀನು ನನಗೆ ಪುತ್ರನಾಗಿ ಜನಿಸಬೇಕು' ಎಂದು ಪ್ರಾರ್ಥಿಸಿದೆನೇ ಹೊರತು 'ಮುಕ್ತಿಯನ್ನು ದಯಪಾಲಿಸು' ಎಂದು ಬೇಡ ಲಿಲ್ಲ. ಆದುದರಿಂದ ಎಲ್ಲೆಡೆಗಳಲ್ಲೂ ಭಯದಿಂದ ಕೂಡಿದ ಬಗೆ-ಬಗೆಯ ವ್ಯಸನಗಳಿಂದ ತುಂಬಿರುವ ಈ ಸಂಸಾರವನ್ನು ಶೀಘ್ರವಾಗಿ ಮತ್ತು ಸುಲಭ ವಾಗಿ ದಾಟುವ ಯಾವ ಉಪಾಯವುಂಟೋ ಅದನ್ನು ನನಗೆ ಉಪದೇಶಿಸುವ ಅನುಗ್ರಹಮಾಡಿ ಕಾಪಾಡಿರಿ."

ಧೀಮಂತನಾದ ವಸುದೇವನ ಈ ಪ್ರಶ್ನೆಯನ್ನು ಕೇಳಿ ದೇವರ್ಷಿ

ನಾರದರು ಅತ್ಯಂತ ಸಂತುಷ್ಟರಾದರು. ಶ್ರೀಹರಿಯ ದಿವ್ಯವಾದ ಗುಣಗಳು ಅವರಿಗೆ ನೆನಪಾದುವು. ವಸುದೇವನನ್ನು ಅಭಿನಂದಿಸುತ್ತಾ ಅವರು ಅವನಿಗೆ ಹೀಗೆ ಉತ್ತರ ನೀಡಿದರು :

"ಯದುವಂಶಶಿರೋಮಣಿಯೇ! ಸರ್ವಲೋಕಗಳಿಗೂ ಕ್ಷೇಮ ವನ್ನುಂಟುಮಾಡುವ ಭಾಗವತಧರ್ಮಗಳನ್ನು ಕೇಳಲು ಬಯಸಿರುವ ನೀನು ಕಡುಧನ್ಯನು. ಈ ಧರ್ಮಗಳನ್ನು ಯಾರು ಕೇಳುವರೋ, ಯಾರು ಹೇಳು ವರೋ, ಯಾರು ಧ್ಯಾನಿಸುವರೋ, ಯಾರು ಶ್ರದ್ಧೆಯಿಂದ ತಿಳಿದುಕೊಳ್ಳು ವರೋ ಮತ್ತು ಅನುಮೋದಿಸುವರೋ ಅವರು ಭೂತದ್ರೋಹಿಗಳೇ ಆದರೂ ಪವಿತ್ರಾತ್ಮರಾಗುವರಪ್ಪಾ. ಯಾವನ ವಿಷಯವಾಗಿ ಶ್ರವಣವನ್ನಾಗಲೀ ಸಂಕೀರ್ತನೆಯನ್ನಾಗಲೀ ಮಾಡಿದರೆ ಪರಮಪುಣ್ಯವೂ ಪರಮ ಕಲ್ಯಾಣವೂ ಉಂಟಾಗುವುದೋ ಅಂತಹ ಪವಿತ್ರಕೀರ್ತಿಯಾದ ಪರಮಾತ್ಮನ ಗುಣಗಳನ್ನು ಹೇಳುವಂತೆ ಪ್ರೇರಿಸಿ ಆತನ ಸ್ಮರಣೆಯನ್ನು ತಂದುಕೊಟ್ಟು ನೀನು ನನ್ನನ್ನೂ ಕೃತಾರ್ಥನನ್ನಾಗಿಸಿದೆ. ಇದೇ ಭಾಗವತಧರ್ಮದ ವಿಷಯ ವಾಗಿ ಹಿಂದೊಮ್ಮೆ ಮಹಾತ್ಮನಾದ ವಿದೇಹರಾಜನಿಗೂ ಭಾಗವತಶ್ರೇಷ್ಠರಾದ ಋಷಭಪುತ್ರರಿಗೂ ನಡೆದ ಸಂವಾದರೂಪವಾದ ಒಂದು ಇತಿಹಾಸವುಂಟು. ಅದನ್ನೇ ನಿನಗೆ ತಿಳಿಸುವೆನು ಕೇಳು.

ಸ್ವಾಯಂಭುವಮನುವಿಗೆ ಪ್ರಿಯವ್ರತನೆಂಬ ಪುತ್ರನಿದ್ದನೆಂಬುದನ್ನು ಕೇಳಿರುವೆಯಷ್ಟೇ! ಆ ಪ್ರಿಯವ್ರತಮಹಾರಾಜನಿಗೆ ಆಗ್ನೀಧ್ರನೆಂಬ ಪುತ್ರನು ಜನಿಸಿದನು. ಆಗ್ನೀಧ್ರನ ಪುತ್ರನು ನಾಭಿಯು. ನಾಭಿಯ ಪುತ್ರನು ಮಹಾತ್ಮ ನಾದ ಋಷಭನು. ಮೋಕ್ಷಧರ್ಮವನ್ನು ಉಪದೇಶಮಾಡುವುದಕ್ಕೋಸ್ಕರ ಭಗವಂತನಾದ ಶ್ರೀವಾಸುದೇವನೇ ತನ್ನ ಅಂಶದಿಂದ ಈ ಋಷಭನ ರೂಪದಲ್ಲಿ ಅವತಾರಮಾಡಿದನೆಂದು ಹೇಳುತ್ತಾರೆ. ಆತನಿಗೆ ನೂರು ಮಂದಿ ಪುತ್ರರಿದ್ದರು. ಅವರೆಲ್ಲರೂ ವೇದಗಳಲ್ಲಿ ಪಾರದರ್ಶಿಗಳಾದ ವಿದ್ವಾಂಸ ರಾಗಿದ್ದರು. ಆ ನೂರು ಮಂದಿಯಲ್ಲಿ ಜ್ಯೇಷ್ಠಪುತ್ರನಾದ ಭರತನು ಭಗವಂತ ನಾದ ನಾರಾಯಣನ ಪರಮಭಕ್ತನು. ಹಿಂದೆ ಅಜನಾಭವೆಂದು ಕರೆಯ ಲ್ಪಡುತ್ತಿದ್ದ ಈ ಅದ್ಭುತವಾದ ಭೂಭಾಗಕ್ಕೆ ಭಾರತವರ್ಷವೆಂಬ ಹೆಸರು

ಬರುವುದಕ್ಕೆ ಈತನ ಪುಣ್ಯನಾಮಧೇಯವೇ ಕಾರಣವು. ಈ ರಾಜರ್ಷಿಯು ಈ ಭೂಮಿಯ ರಾಜ್ಯಭೋಗಗಳನ್ನು ಅನುಭವಿಸಿ ಕಡೆಗೆ ಎಲ್ಲವನ್ನೂ ತ್ಯಜಿಸಿ ಅರಣ್ಯಕ್ಕೆ ತೆರಳಿದನು. ಅಲ್ಲಿ ಶ್ರೀಭಗವಂತನನ್ನು ಉಪಾಸನೆಮಾಡಿ ಮೂರು ಜನ್ಮಗಳಲ್ಲಿ ಆತನ ದಿವ್ಯಪದವನ್ನು ಸೇರಿಕೊಂಡನು. ಋಷಭದೇವನ ಮಿಕ್ಕ ತೊಂಭತ್ತೊಂಭತ್ತು ಮಂದಿ ಪುತ್ರರಲ್ಲಿ ಒಂಭತ್ತು ಮಂದಿ ಭಾರತವರ್ಷದ ಬೇರೆ ಬೇರೆ ಎಡೆಗಳಲ್ಲಿರುವ ಒಂಭತ್ತು ದ್ವೀಪಗಳಿಗೆ ಅಧಿಪತಿಗಳಾದರು. ಉಳಿದ ತೊಂಭತ್ತು ಮಂದಿ ಕುಮಾರರಲ್ಲಿ ಎಂಭತ್ತೊಂದು ಮಂದಿ ಕರ್ಮಕಾಂಡಪ್ರವರ್ತಕರಾದ ದ್ವಿಜಶ್ರೇಷ್ಠರಾದರು. ಮಿಕ್ಕ ಒಂಭತ್ತು ಮಂದಿ ಪುತ್ರರು ಆತ್ಮವಿದ್ಯೆಯನ್ನು ಉಪದೇಶಿಸುವ ಮುನಿಶ್ರೇಷ್ಠರಾದರು. ಅಧ್ಯಾತ್ಮವಿದ್ಯೆಯಲ್ಲಿ ಅತ್ಯಂತವಿಶಾರದರಾಗಿ ಜ್ಞಾನವೈರಾಗ್ಯಸಂಪನ್ನರಾಗಿದ್ದ ಅವರು ದಿಗಂಬರರಾಗಿದ್ದರು. ಅವರ ವೈರಾಗ್ಯಭಾಗ್ಯ ಅದ್ಭುತವಾದುದು. ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ ಮತ್ತು ಕರಭಾಜನ ಎಂಬುವು ಅವರ ಪುಣ್ಯನಾಮ ಧೇಯಗಳು. ಅವರು ಚೇತನಾಚೇತನಾತ್ಮಕವಾಗಿ ಭಗವದ್ರೂಪವಾಗಿರುವ ಈ ಜಗತ್ತು ತಮ್ಮ ಆತ್ಮದಿಂದ ಬೇರೆಯಾದದ್ದಲ್ಲ, ಎಲ್ಲವೂ ಭಗವದಾತ್ಮ ಕವೇ ಆಗಿದೆ–ಎಂದು ಅನುಭವಿಸುತ್ತಾ ಭೂಮಿಯಲ್ಲಿ ಯಾವ ತಡೆಯೂ ಇಲ್ಲದೆ ಯಥೇಷ್ಟವಾಗಿ ಸಂಚರಿಸುತ್ತಿದ್ದರು. ಜೀವನ್ಮುಕ್ತರಾಗಿದ್ದ ಆ ಮಹಾತ್ಮರು–ದೇವತೆಗಳು, ಸಿದ್ಧರು, ಗಂಧರ್ವರು, ಯಕ್ಷರು, ಮನುಷ್ಯರು, ಕಿನ್ನರರು ಮತ್ತು ನಾಗದೇವತೆಗಳು–ಇವರ ಲೋಕಗಳಲ್ಲಿಯೂ ಮತ್ತು ಮುನಿ-ಚಾರಣರ, ಭೂತನಾಥರ, ವಿದ್ಯಾಧರರ, ಬ್ರಾಹ್ಮಣರ ಮತ್ತು ಗೋವುಗಳ ಸ್ಥಾನಗಳಲ್ಲಿಯೂ ಯಾವ ಅಡೆ-ತಡೆಯೂ ಇಲ್ಲದೆ ಧಾರಾಳ ವಾಗಿ ಸಂಚಾರಮಾಡುತ್ತಿದ್ದರು.

ಹೀಗೆ ಸಂಚರಿಸುತ್ತಿದ್ದಾಗ ಒಮ್ಮೆ ಅವರು, ಮಹಾತ್ಮನಾದ ವಿದೇಹ ರಾಜನಾದ ನಿಮಿಯು ಮಹರ್ಷಿಗಳ ಮೂಲಕ ಮಹಾಯಜ್ಞವನ್ನು ಆಚರಿಸು ತ್ತಿದ್ದ ಸಮಯದಲ್ಲಿ, ಆ ಯಜ್ಞಭೂಮಿಗೆ ದಯಮಾಡಿಸಿದರು. ಸೂರ್ಯ ನಂತೆ ತೇಜಸ್ವಿಗಳಾಗಿದ್ದ ಆ ಪರಮಭಾಗವತೋತ್ತಮರನ್ನು ಕಂಡು ಯಜ್ಞಕ್ಕೆ ಯಜಮಾನನಾಗಿದ್ದ ನಿಮಿಮಹಾರಾಜನೂ, ಮೂರ್ತಾಕಾರವನ್ನು

ತಾಳಿದ್ದ ಯಜ್ಞದ ಅಗ್ನಿಗಳೂ ಮತ್ತು ಋತ್ವಿಕ್ಕುಗಳೇ ಮುಂತಾದ ಬ್ರಾಹ್ಮಣರೂ ಎಲ್ಲರೂ ಎದ್ದುನಿಂತು ಅವರನ್ನು ಸ್ವಾಗತಿಸಿದರು. ವಿದೇಹರಾಜನು ಆ ಮುನಿಗಳು ನಾರಾಯಣನ ಪರಮಭಕ್ತರು ಎಂಬುದನ್ನರಿತು ಅತ್ಯಂತ ಪ್ರೀತಿಯಿಂದ ಅವರನ್ನು ಆಸನಗಳಲ್ಲಿ ಕುಳ್ಳಿರಿಸಿ ಯಥಾವಿಧಿಯಾಗಿ ಪೂಜಿಸಿದನು. ಬ್ರಹ್ಮಪುತ್ರರಾದ ಸನಕಾದಿಗಳಂತೆ ತಮ್ಮ ತೇಜಸ್ಸಿನಿಂದ ಬೆಳುಗುತ್ತಿದ್ದ ಆ ಒಂಭತ್ತು ಮಂದಿ ಮಹಾತ್ಮರನ್ನು ಕುರಿತು ಪರಮಪ್ರೀತಿಯಿಂದ ಕೂಡಿ, ವಿನಯದಿಂದ ಬಗ್ಗಿದ್ದ ರಾಜನು ಹೀಗೆ ಪ್ರಶ್ನೆಮಾಡಿದನು :

**ಮನ್ಯೇ ಭಗವತಸ್ಸಾಕ್ಷಾತ್ಪಾರ್ಷದಾನ್ವೋ ಮಧುದ್ವಿಷಃ ।**
**ವಿಷ್ಣೋರ್ಭೂತಾನಿ ಲೋಕಾನಾಂ ಪಾವನಾಯ ಚರನ್ತಿ ಹಿ ॥೨೮॥**

"ಎಲೈ ಮಹಾತ್ಮರೇ! ನೀವು ಭಗವಂತನಾದ ಸಾಕ್ಷಾತ್ ಮಧುಸೂದನನ ಪಾರ್ಷದರೇ ಆಗಿರಬೇಕೆಂದು ನಾನು ಭಾವಿಸುತ್ತೇನೆ. ಏಕೆಂದರೆ ನೀವು ಲೋಕಗಳನ್ನು ಪವಿತ್ರಗೊಳಿಸುವುದಕ್ಕಾಗಿ ಸಂಚಾರಮಾಡುತ್ತಿದ್ದೀರಿ. ಮಹಾವಿಷ್ಣುವಿನ ಪಾರ್ಷದರು ಲೋಕಗಳನ್ನು ಪಾವನಗೊಳಿಸುವುದಕ್ಕಾಗಿ ಸಂಚಾರಮಾಡುತ್ತಿರುವುದು ಪ್ರಸಿದ್ಧವಾಗಿದೆಯಷ್ಟೆ!

**ದುರ್ಲಭೋ ಮಾನುಷೋ ದೇಹೋ ದೇಹಿನಾಂ ಕ್ಷಣಭಙ್ಗುರಃ ।**
**ತತ್ರಾಪಿ ದುರ್ಲಭಂ ಮನ್ಯೇ ವೈಕುಣ್ಠಪ್ರಿಯದರ್ಶನಮ್ ॥೨೯॥**

ಲೋಕದಲ್ಲಿ ಜೀವಿಗಳಿಗೆ ಮನುಷ್ಯಜನ್ಮ ದೊರೆಯುವುದು ಕಡು ದುರ್ಲಭ. ಹಾಗೆ ದೊರೆತರೂ ಅದು ಕ್ಷಣಿಕ. ಏಕೆಂದರೆ ಅದರಲ್ಲಿ ಸಾವಿನ ಭಯವು ಸದಾ ಇದ್ದೇ ಇರುತ್ತದೆ. ಹೀಗೆ ಅನಿಶ್ಚಿತವಾಗಿರುವ ಮನುಷ್ಯ ಜೀವನದಲ್ಲಿಯೂ ಅಚ್ಯುತನಿಗೆ ಪ್ರಿಯರಾಗಿರುವ ಮಹಾತ್ಮರ ದರ್ಶನವು ಮತ್ತೂ ದುರ್ಲಭವೆಂದು ಭಾವಿಸುತ್ತೇನೆ.

ಆದುದರಿಂದ, ಎಲೈ ಪವಿತ್ರಾತ್ಮರೇ! ಲೋಕದಲ್ಲಿ ಅತ್ಯಂತ ಕಲ್ಯಾಣಕರವಾದ ಪದಾರ್ಥ ಯಾವುದು? ಅದರ ಸ್ವರೂಪವೇನು? ಅದನ್ನು ಹೊಂದುವ ಸಾಧನ ಯಾವುದು?–ಎಂಬುದನ್ನು ನನಗೆ ತಿಳಿಸುವ ಕೃಪೆ ಮಾಡಿರಿ. **"ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಙ್ಗಃ ಶೇವಧಿರ್ನೃಣಾಮ್"** ಈ ಸಂಸಾರದಲ್ಲಿ ಮನುಷ್ಯರಿಗೆ ಸತ್ಸಹವಾಸವು ಅರ್ಧಕ್ಷಣ ಕಾಲ ದೊರಕಿದರೂ

ಅದೇ ದೊಡ್ಡನಿಧಿಗೆ ಸಮಾನವು. ಯಾವುದನ್ನು ಆಚರಿಸಿದರೆ ವಿಕಾರರಹಿತನಾದ ಪರಮಾತ್ಮನು ಪ್ರಸನ್ನನಾಗಿ ತನ್ನನ್ನು ಶರಣುಹೊಂದಿದವನಿಗೆ ತನ್ನನ್ನು ಕೂಡ ಕೊಟ್ಟುಕೊಂಡುಬಿಡುತ್ತಾನೆಯೋ ಅಂತಹ ಅಮೂಲ್ಯವಾದ ಭಾಗವತಧರ್ಮಗಳನ್ನು ನಾವು ಕೇಳಲು ಅಧಿಕಾರಿಗಳಾಗಿದ್ದರೆ ದಯೆಯಿಟ್ಟು ನಮಗೆ ಅವುಗಳನ್ನು ತಿಳಿಸಿರಿ."

ನಾರದರು ವಸುದೇವನಿಗೆ ಹೇಳುತ್ತಾರೆ :

"ಎಲೈ ವಸುದೇವನೇ! ವಿದೇಹರಾಜನು ಹೀಗೆ ತಮ್ಮನ್ನು ಪ್ರಾರ್ಥಿಸಲು ಆ ಶ್ರೇಷ್ಠತಮರಾದ ಮುನಿಗಳು ಆತನನ್ನೂ ಆತನ ಮಾತನ್ನೂ ಗೌರವಿಸಿ, ಸಭಾಸದರಿಂದಲೂ ಋತ್ವಿಕ್ಕುಗಳಿಂದಲೂ ಕೂಡಿದ್ದ ಆ ರಾಜನನ್ನು ಕುರಿತು ಪ್ರೀತಿಯಿಂದ ಹೀಗೆಂದರು :

ಮೊದಲು ಆ ಮಹಾಯೋಗೀಶ್ವರರಲ್ಲಿ ಒಬ್ಬರಾದ ಕವಿ ಎಂಬುವರು ಹೀಗೆಂದರು :

**ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ**
**ಪಾದಾಮ್ಬುಜೋಪಾಸನಮತ್ರ ನಿತ್ಯಮ್ ।**
**ಉದ್ವಿಗ್ನಬುದ್ಧೇರಸದಾತ್ಮಭಾವಾದ್ವಿ-**
**ಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥೩೩॥**

"ಎಲೈ ನಿಮಿರಾಜೇಂದ್ರನೇ! ಕೇಳು. ಈ ಲೋಕದಲ್ಲಿ ಅತ್ಯಂತ ಕಲ್ಯಾಣವನ್ನುಂಟುಮಾಡುವುದು, ಅತ್ಯಂತಕ್ಷೇಮಕರವಾದುದು ಮತ್ತು ಸರ್ವ ಭಯರಹಿತವಾದುದು ಯಾವುದು?–ಎಂದರೆ ಭಕ್ತಜನರ ಹೃದಯದಿಂದ ಎಂದೂ ದೂರವಾಗದೇ ಇರುವ ಭಗವಂತನಾದ ಅಚ್ಯುತನ ಶ್ರೀಚರಣಕಮಲಗಳನ್ನು ನಿತ್ಯನಿರಂತರವಾಗಿ ಉಪಾಸನೆಮಾಡುವುದು ಮಾತ್ರವೇ–ಎಂಬುದು ನನ್ನ ನಿಶ್ಚಿತವಾದ ಅಭಿಪ್ರಾಯವಪ್ಪಾ. ದೇಹವೇ ಮುಂತಾದ ಅಸದ್ವಸ್ತು ಗಳನ್ನು ಆತ್ಮವೆಂದು ಭಾವಿಸಿ, ಅವುಗಳಲ್ಲಿ ಅಹಂಕಾರ-ಮಮಕಾರಗಳನ್ನು ಹೊಂದಿರುವುದರಿಂದ ಯಾರ ಚಿತ್ತವು ಕಲುಷಿತವಾಗಿದೆಯೋ ಅಂತಹ ವರ ಭಯವೂ ಕೂಡ ಈ ಉಪಾಸನೆಯನ್ನು ಮಾಡಿದರೆ ಪೂರ್ಣವಾಗಿ ತೊಲಗಿಹೋಗುತ್ತದೆ. ಆ ಪರಮಾತ್ಮನನ್ನು ಸುಲಭವಾಗಿ ಹೊಂದುವುದ

ಕ್ಕಾಗಿ ಯಾವ ಉಪಾಯಗಳನ್ನು ಆತನು ತಾನೇ ಉಪದೇಶಮಾಡಿದ್ದಾನೆಯೋ ಅವುಗಳೇ ಭಾಗವತಧರ್ಮ ಎನಿಸುತ್ತದೆ. ಈ ಧರ್ಮಗಳನ್ನು ಅವಲಂಬಿಸಿ ನಡೆದರೆ ಮನುಷ್ಯನು ಯಾವ ಪ್ರಮಾದಕ್ಕೂ ಒಳಗಾಗುವು ದಿಲ್ಲ. ಆತನಿಗೆ ಯಾವ ಎಡರು-ತೊಡರುಗಳೂ ಇರುವುದಿಲ್ಲ.

**ಯಾನಾಸ್ಥಾಯ ನರೋ ರಾಜನ್ ನ ಪ್ರಮಾದ್ಯೇತ ಕರ್ಹಿಚಿತ್ ।**
**ಧಾವನ್ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥೩೫॥**

ಕಣ್ಣುಮುಚ್ಚಿಕೊಂಡು ಓಡಿದರೂ, ವಿಧಿ-ವಿಧಾನಗಳಲ್ಲಿ ಏನಾದರೂ ಕುಂದು-ಕೊರತೆಯಾದರೂ, ಆತನು ಜಾರುವುದಿಲ್ಲ. ಪತಿತನಾಗುವುದಿಲ್ಲ. ಫಲವನ್ನು ಕಳೆದುಕೊಳ್ಳುವುದಿಲ್ಲ. ಅಂತಹ ಅಪಾಯರಹಿತವಾದ ಉಪಾಯ ವಾಗಿದೆ ಈ ಧರ್ಮಗಳ ಆಚರಣೆ.*

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾನುಸೃತಸ್ವಭಾವಾತ್ ।**
**ಕರೋತಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯೇತ್ತತ್ ॥೩೬॥**

ಈ ಭಾಗವತಧರ್ಮದ ಅನುಯಾಯಿಯು ತಾನು ದೇಹದಿಂದಾಗಲೀ ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ, ಇಂದ್ರಿಯಗಳಿಂದಾಗಲೀ, ಬುದ್ಧಿಯೇ ಮುಂತಾದುವುಗಳಿಂದಾಗಲೀ ಏನೇನು ಮಾಡುತ್ತಾನೆಯೋ ಅವೆಲ್ಲವನ್ನೂ ಪರತತ್ತ್ವವಾದ ನಾರಾಯಣನಿಗೆ ಸಮರ್ಪಿಸಿಬಿಡಬೇಕು. ಭಗ ವಂತನಿಂದ ವಿಮುಖನಾಗಬಾರದು. ಹಾಗೆ ವಿಮುಖನಾದವನಿಗೆ ದೇಹ-ಗೇಹಾದಿ ಇತರ ಪದಾರ್ಥಗಳು ತನ್ನ ಸ್ವರೂಪವೆಂಬ ಭ್ರಮೆಯುಂಟಾಗುವುದು. ಬುದ್ಧಿಯು ತಲೆಕೆಳಕಾಗುವುದು. ನಿಜಸ್ವರೂಪದ ಮರೆವು ಉಂಟಾಗುವುದು.

---

* ಧಾವನ್ನಿಮೀಲ್ಯ ವಾ ನೇತ್ರೇ–ಇಲ್ಲಿ ನೇತ್ರೇನಿಮಿಲ್ಯ–ಎಂದರೆ ತಿಳಿಯದೇ ಇದ್ದರೂ–ಎಂದರ್ಥ. ನಿಮೀಲಿನಂ–ಎಂದರೆ ಅಜ್ಞಾನ.

ಶ್ರುತಿಸ್ಮೃತೀ ಉಭೇ ನೇತ್ರೇ ವಿಪ್ರಾಣಾಂ ಪರಿಕೀರ್ತಿತೇ ।
ಏಕೇನ ವಿಕಲಃ ಕಾಣಃ ದ್ವಾಭ್ಯಾಮನ್ಧಃ ಪ್ರಕೀರ್ತಿತಃ ॥ (ಶ್ರೀಧರೀಯ)

ಆದುದರಿಂದ ವಿವೇಕಿಯಾದವರು ಗುರುವಿನಲ್ಲಿ ದೇವತಾಬುದ್ಧಿಯನ್ನಿಟ್ಟು ಕೊಂಡು ಅನನ್ಯಭಕ್ತಿಯಿಂದ ಪರಮಾತ್ಮನನ್ನು ಆರಾಧಿಸಬೇಕು.*

**ಭಯಂ ದ್ವಿತೀಯಾಭಿನಿವೇಶತಃ ಸ್ಯಾ-**
**ದೀಶಾದಪೇತಸ್ಯ ವಿಪರ್ಯಯೋಽಸ್ಮೃತಿಃ ।**
**ತನ್ಮಾಯಯಾತೋ ಬುಧ ಆಭಜೇತ್ತಂ**
**ಭಕ್ತ್ಯೈಕಯೇಶಂ ಗುರುದೇವತಾತ್ಮಾ ॥೩೭॥**

**ಅವಿದ್ಯಮಾನೋಽಪ್ಯವಭಾತಿ ಹಿ ದ್ವಯೋ-**
**ರ್ಧ್ಯಾತುರ್ಧಿಯಾ ಸ್ವಪ್ನಮನೋರಥೌ ಯಥಾ ।**
**ತತ್ಕರ್ಮಸಙ್ಕಲ್ಪವಿಕಲ್ಪಕಂ ಮನೋ**
**ಬುಧೋ ನಿರುನ್ಧ್ಯಾದಭಯಂ ತತಃ ಸ್ಯಾತ್ ॥೩೮॥**

**ಶೃಣ್ವನ್ ಸುಭದ್ರಾಣಿ ರಥಾಙ್ಗಪಾಣೇ-**
**ರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ ।**
**ಗೀತಾನಿ ನಾಮಾನಿ ತದರ್ಥಕಾನಿ**
**ಗಾಯನ್ವಿಲಜ್ಜೋ ವಿಚರೇದಸಙ್ಗಃ ॥೩೯॥**

**ಏವಂವ್ರತಃ ಸ್ವಪ್ರಿಯನಾಮಕೀರ್ತ್ಯಾ**
**ಜಾತಾನುರಾಗೋ ದ್ರುತಚಿತ್ತ ಉಚ್ಚೈಃ ।**
**ಹಸತ್ಯಥೋ ರೋದಿತಿ ರೌತಿ ಗಾಯ-**
**ತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ ॥೪೦॥**

ಚಿದಚಿದಾತ್ಮಕನಾದ ಪರಮಾತ್ಮನನ್ನು ಬಿಟ್ಟು ವಾಸ್ತವವಾಗಿ ಯಾವ

---

* **ಅನುಸೃತಸ್ವಭಾವಾತ್ :** ವಿಧಿಪೂರ್ವಕವಾಗಿ ಮಾಡಿದ ಕರ್ಮಗಳನ್ನಲ್ಲದೆ ಸ್ವಭಾವವನ್ನು ಅನುಸರಿಸಿ ಬಂದ ಲೌಕಿಕಕರ್ಮಗಳನ್ನೂ ಕೂಡ ನಾರಾಯಣನಿಗೆ ಸಮರ್ಪಿಸಬೇಕು. (ಶ್ರೀಧರೀಯ)

ವೀರರಾಘವೀಯದಲ್ಲೂ ಇದೇ ಅಭಿಪ್ರಾಯವನ್ನೇ ಹೇಳಿದೆ ಮತ್ತು

**ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥**

ಎಂಬ ಗೀತಾಶ್ಲೋಕವನ್ನೂ ಶ್ರವಣವನ್ನಾಗಿ ಉದ್ಧರಿಸಿದೆ. ಸಂಸಾರವಾಸನೆಯಿಂದ ಕೂಡಿದ್ದರೂ ಕೂಡ–ಎಂಬ ಮತ್ತೊಂದು ಅರ್ಥವನ್ನೂ ಇಲ್ಲಿ ಕೊಟ್ಟಿದೆ.

ಪದಾರ್ಥವೂ ಇಲ್ಲವೇ ಇಲ್ಲ. ಆದರೂ ಕನಸಿನ ಅನುಭವದಂತೆ ಮತ್ತು ಕಲ್ಪಿತವಾದ ಮನೋರಥಗಳಂತೆ ಅಂತಹ ಬೇರೆ ಪದಾರ್ಥವು ಇರುವಂತೆ ತೋರುತ್ತದೆ. ಆದುದರಿಂದ ವಿವೇಕಿಯಾದವನು ಜಗತ್ತಿಗೆ ಸಂಬಂಧಪಟ್ಟ ಆ ಸಂಕಲ್ಪ-ವಿಕಲ್ಪಗಳಿಂದ ಕೂಡಿದ ಮನಸ್ಸನ್ನು ನಿಯಂತ್ರಿಸಬೇಕು. ಹಾಗೆ ಮಾಡಿದರೆ ತಾನೇ ಭಯರಹಿತವಾದ ಪದವಿಯು ದೊರೆಯುವುದು! ಲೋಕದಲ್ಲಿ ಪ್ರಸಿದ್ಧವಾಗಿರುವ, ಮಹಾತ್ಮರು ಗಾನಮಾಡಿರುವ, ಶ್ರೀಭಗವಂತನ ಯಾವ ಪರಮಕಲ್ಯಾಣಕರವಾದ ದಿವ್ಯನಾಮಗಳು, ಜನ್ಮಗಳು ಮತ್ತು ಲೀಲೆಗಳುಂಟೋ ಅವುಗಳನ್ನು ಗಾನಮಾಡುತ್ತಾ ನಿಸ್ಸಂಗನಾಗಿ ಸಂಚರಿಸುತ್ತಿರಬೇಕು. ಅವುಗಳನ್ನು ಗಾನಮಾಡುವ ವಿಷಯದಲ್ಲಿ ನಾಚಿಕೆ ಯಿಲ್ಲದಿರಬೇಕು. ಸಂಕೋಚಪಟ್ಟುಕೊಳ್ಳಬಾರದು. ಈ ಭಾಗವತವ್ರತವನ್ನು ಕೈಗೊಂಡವನಿಗೆ ತನ್ನ ಪ್ರಿಯತಮನಾದ ಪರಮಾತ್ಮನ ಹೆಸರನ್ನು ಸಂಕೀರ್ತನೆ ಮಾಡಿದೊಡನೆಯೇ ಭಗವಂತನಲ್ಲಿ ಅನುರಾಗವು ಉಕ್ಕಿ ಬರುತ್ತದೆ. ಅವನ ಚಿತ್ತವು ಕರಗುತ್ತದೆ. ಲೋಕದ ಆಚರಣೆಗೆ ಹೊರಗಾಗಿ ಆತನು ಹುಚ್ಚನಂತೆ ಕೆಲವೊಮ್ಮೆ ಗಟ್ಟಿಯಾಗಿ ನಗುತ್ತಾನೆ. ಕೆಲವೊಮ್ಮೆ ಅಳುತ್ತಾನೆ. ಕೆಲವುಬಾರಿ ಕೂಗಿಕೊಳ್ಳುತ್ತಾನೆ. ಹಾಡುತ್ತಾನೆ ಮತ್ತು ಕುಣಿದಾಡುತ್ತಾನೆ.*

---

* **ಭಯಂ ದ್ವಿತೀಯಾಭಿನಿವೇಶಿತಃ ಸ್ಯಾತ್ ।** ತಾನು ಬ್ರಹ್ಮಾತ್ಮಕನಲ್ಲ ಸ್ವತಂತ್ರನು–ಎಂದು ಭಾವಿಸಿದರೆ ಭಯವುಂಟಾಗುತ್ತದೆ. (ವೀರರಾಘವೀಯ)

**ಗುರುದೇವತಾತ್ಮಾ**–ಗುರುವೇ ದೇವರು ಮತ್ತು ಪ್ರಿಯತಮನಾದ ಆತ್ಮನು–ಎಂಬ ದೃಷ್ಟಿಯಿಂದ ಕೂಡಿದವನಾಗಿ. (ಶ್ರೀಧರೀಯ)

ಗುರುವಿನಲ್ಲಿ ದೇವತಾಬುದ್ಧಿಯನ್ನು ಇಟ್ಟುಕೊಂಡವನಾಗಿ. (ವೀರರಾಘವೀಯ)

**ಯಸ್ಯದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ**–ಎಂಬ ಶ್ರುತಿಯನ್ನು ಇಲ್ಲಿ ಗಮನಿಸಬೇಕು. (ಶ್ಲೋಕ ೩೭)

ಭಗವಂತನು ಭಕ್ತರಿಂದ ಕೆಲವೊಮ್ಮೆ ಪರಾಜಿತನಾಗುವುದನ್ನು ನೆನೆದು ಗಟ್ಟಿ ಯಾಗಿ ನಗುತ್ತಾನೆ. ಇಷ್ಟು ಕಾಲದವರೆಗೆ ಸ್ವಾಮಿಯು ನನ್ನನ್ನು ಉಪೇಕ್ಷೆಮಾಡಿ ಬಿಟ್ಟನಲ್ಲಾ! ಎಂದು ಅಳುತ್ತಾನೆ. ಭಗವಂತನ ವಿಷಯದಲ್ಲಿ ಅತ್ಯಂತ ಉತ್ಸುಕತೆ ಯುಂಟಾಗಿ ಕೂಗಿಕೊಳ್ಳುತ್ತಾನೆ. 'ಎಲೈ ಶ್ರೀಹರಿಯೇ! ನನ್ನನ್ನು ಅನುಗ್ರಹಿಸು'– ಎಂದು ಅತಿ ಹರ್ಷದಿಂದ ಹಾಡುತ್ತಿರುತ್ತಾನೆ. ದಾಂಭಿಕನಂತೆ ಲೋಕದ ತೋರಿಕೆ

**ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ**
**ಜ್ಯೋತೀಂಷಿ ಸತ್ತ್ವಾನಿ ದಿಶೋ ದ್ರುಮಾದೀನ್ ।**
**ಸರಿತ್ಸಮುದ್ರಾಂಶ್ಚ ಹರೇಃ ಶರೀರಂ**
**ಯತ್ಕಿಂಚ ಭೂತಂ ಪ್ರಣಮೇದನನ್ಯಃ ॥೪೧॥**

ಎಲೈ ರಾಜನೇ! ಲೋಕದಲ್ಲಿ ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಚಂದ್ರ-ಸೂರ್ಯಾದಿ ಜ್ಯೋತಿಗಳು, ಪ್ರಾಣಿಗಳು, ದಿಕ್ಕುಗಳನ್ನು, ವೃಕ್ಷವನಸ್ಪತಿ ಮುಂತಾದುವು, ನದಿಗಳು, ಸಮುದ್ರಗಳು–ಇವುಗಳೆಲ್ಲವೂ ನಾರಾಯಣನ ಶರೀರಗಳೇ ಆಗಿವೆ. ಎಲ್ಲವೂ ಭಗವದಾತ್ಮಕಗಳೇ ಆಗಿವೆ. ಭಗವಂತನಿಂದ ಬೇರೆ ಅಲ್ಲ–ಎಂಬ ಭಾವದಿಂದ ಅವುಗಳಿಗೆ ನಮಸ್ಕಾರಮಾಡಬೇಕು.*

**ಭಕ್ತಿಃ ಪರೇಶಾನುಭವೋ ವಿರಕ್ತಿ-**
**ರನ್ಯತ್ರ ಚೈಷ ತ್ರಿಕ ಏಕಕಾಲಃ ।**
**ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು-**
**ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋಽನುಘಾಸಮ್ ॥೪೨॥**

ಊಟಮಾಡುತ್ತಿರುವವನಿಗೆ ಪ್ರತಿಯೊಂದು ತುತ್ತನ್ನು ಸೇವಿಸುವಾಗಲೂ ತೃಪ್ತಿ, ಪುಷ್ಟಿ ಮತ್ತು ಹಸಿವಿನ ನಿವಾರಣೆ ಇವು ಮೂರೂ ಒಟ್ಟಿಗೆ ಉಂಟಾಗುತ್ತವೆಯಲ್ಲವೇ? ಹಾಗೆಯೇ ಭಗವಂತನನ್ನು ಶರಣು ಹೊಂದಿ ಅವನನ್ನು ಭಜಿಸುವವನಿಗೆ ಆ ಭಜನೆಯ ಪ್ರತಿಕ್ಷಣದಲ್ಲಿಯೂ ಭಗವಂತನಲ್ಲಿ ಭಕ್ತಿ, ಅವನ ಸ್ವರೂಪದ ಅನುಭವ ಮತ್ತು ಅವನನ್ನು ಬಿಟ್ಟು ಉಳಿದ ವಸ್ತುಗಳಲ್ಲಿ ವೈರಾಗ್ಯ–ಇವು ಒಟ್ಟಿಗೆ ಉಂಟಾಗುತ್ತವೆ.

---

ಗಾಗಿ ಇದನ್ನು ಮಾಡುವುದಿಲ್ಲ. ಭೂತಾವೇಶಬಂದವನಂತೆ ಪರವಶನಾಗಿ ಮಾಡುತ್ತಾನೆ. (ಶ್ರೀಧರೀಯ) (ಶ್ಲೋಕ ೪೦)

* ಪರಮಭಾಗವತನು ಪಂಚಭೂತಗಳು, ನದೀ-ಸಮುದ್ರಗಳು ಮುಂತಾದುವು ಗಳನ್ನೂ ಅವು ಶ್ರೀಹರಿಯ ದೇಹವಾಗಿವೆ–ಎಂದು ಭಾವಿಸಿ ಅವುಗಳಿಗೆ ನಮಸ್ಕಾರ ಮಾಡಬೇಕು. (ಶ್ರೀಧರೀಯ)

ಅನನ್ಯಃ = ಪಂಚಭೂತಾದಿಗಳು ಮಾತ್ರವಲ್ಲದೆ ತಾನೂ ಕೂಡ ಭಗವಂತನಿಂದ ಪ್ರತ್ಯೇಕವಾಗಿ ಸಿದ್ಧನಾಗದೆ ಆತನಿಗೆ ಶರೀರಭೂತನಾದವನು–ಎಂದು ಭಾವಿಸಬೇಕು. (ವೀರರಾಘವೀಯ) (ಶ್ಲೋಕ ೪೧)

**ಇತ್ಯಚ್ಯುತಾಂಘ್ರಿಂ ಭಜತೋಽನುವೃತ್ತ್ಯಾ**
**ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।**
**ಭವನ್ತಿ ವೈ ಭಾಗವತಸ್ಯ ರಾಜಂ-**
**ಸ್ತತಃ ಪರಾಂ ಶಾನ್ತಿಮುಪೈತಿ ಸಾಕ್ಷಾತ್ ॥೪೩॥**

ವಿದೇಹಮಹಾರಾಜ! ಹೀಗೆ ಸತತವಾದ ಅಭ್ಯಾಸದಿಂದ ಭಗವಂತನ ಪಾದಾರವಿಂದಗಳನ್ನು ಅನನ್ಯಪ್ರೇಮದಿಂದ ಭಜಿಸುವ ಭಾಗವತನಿಗೆ ಭಗವಂತನಲ್ಲಿ ನಿರತಿಶಯವಾದ ಭಕ್ತಿಯೂ, ಭಗವಂತನಿಂದ ಅತಿರಿಕ್ತವಾದ ವಸ್ತುಗಳಲ್ಲಿ ವಿರಕ್ತಿಯೂ ಮತ್ತು ಭಗವಂತನ ಸ್ವರೂಪಾನುಭವವೂ ಉಂಟಾಗುತ್ತವೆ. ಅನಂತರ ಅವನು ಆತ್ಯಂತಿಕಕ್ಷೇಮರೂಪವಾದ ಮುಕ್ತಿಯನ್ನು ಪಡೆದುಕೊಳ್ಳುತ್ತಾನೆ."

ಪರೀಕ್ಷಿತಮಹಾರಾಜ! ನವಮುನಿಗಳಲ್ಲಿ ಹಿರಿಯನಾದ ಕವಿಯು ಭಾಗವತಧರ್ಮವನ್ನು ಹೀಗೆ ಹೇಳಿದನಂತರ ನಿಮಿರಾಜನು ಪುನಃ ಮುನಿಗಳನ್ನು ಪ್ರಶ್ನಿಸುತ್ತಾನೆ :

**ಅಥ ಭಾಗವತಂ ಬ್ರೂತ ಯದ್ಧರ್ಮೋ ಯಾದೃಶೋ ನೃಣಾಮ್ ।**
**ಯಥಾ ಚರತಿ ಯದ್ಬ್ರೂತೇ ಯೈರ್ಲಿಙ್ಗೈರ್ಭಗವತ್ಪ್ರಿಯಃ ॥೪೪॥**

"ಯೋಗೀಶ್ವರರೇ! ನೀವೀಗ ದಯಮಾಡಿ ಭಗವದ್ಭಕ್ತನ ಲಕ್ಷಣಗಳನ್ನು ವರ್ಣಿಸಿ ಹೇಳಿರಿ. ಭಗವದ್ಭಕ್ತನ ಧರ್ಮವೇನು? ಅವನ ಸ್ವಭಾವವೆಂತಹುದು? ಅವನು ಮನುಷ್ಯರೊಡನೆ ಹೇಗೆ ವ್ಯವಹರಿಸುತ್ತಾನೆ? ಹೇಗೆ ಮಾತಾನಾಡುತ್ತಾನೆ? ಎಂತಹ ಲಕ್ಷಣಗಳಿರುವುದರಿಂದ ಅವನು ಭಗವಂತನಿಗೆ ಅತ್ಯಂತಪ್ರಿಯನಾಗುತ್ತಾನೆ?"*

ನಿಮಿರಾಜನ ಈ ಪ್ರಶ್ನೆಗಳಿಗೆ ಉತ್ತರವನ್ನು ಹರಿ ಎಂಬ ಯೋಗಿಗಳು ಕೊಡುತ್ತಾರೆ :

**ಸರ್ವಭೂತೇಷು ಯಃ ಪಶ್ಯೇದ್ಭಗವದ್ಭಾವಮಾತ್ಮನಃ ।**
**ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮಃ ॥೪೫॥**

---

* ಹೋಲಿಕೆ : ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ವಾ ॥ (ಭ.ಗೀ. ೫೪-೨)

"ಯಾವನು ತನ್ನ ಬ್ರಹ್ಮಭಾವವು ಸಮಸ್ತಪ್ರಾಣಿಗಳಲ್ಲಿಯೂ ಇರುವುದೆಂಬುದನ್ನು ಮನಗಾಣುವನೋ ಮತ್ತು ಬ್ರಹ್ಮಸ್ವರೂಪನಾದ ತನ್ನಲ್ಲಿಯೇ ಸಮಸ್ತಪ್ರಾಣಿಗಳನ್ನು ಕಂಡುಕೊಳ್ಳುವನೋ ಅವನೇ ಭಾಗವತೋತ್ತಮನು. (ಅಥವಾ ಸರ್ವನಿಯಾಮಕನಾದ ಶ್ರೀಹರಿಯ ನಿರತಿಶಯವಾದ ಸಾನ್ನಿಧ್ಯವನ್ನು ಸಮಸ್ತಪ್ರಾಣಿಗಳಲ್ಲಿಯೂ ತಾರತಮ್ಯವಿಲ್ಲದೇ ಕಾಣುವನೋ ಮತ್ತು ಸಮಸ್ತಪ್ರಾಣಿಗಳೂ ಬ್ರಹ್ಮಸ್ವರೂಪನಾದ ಪರಮಾತ್ಮನಲ್ಲಿಯೇ ಇವೆಯೆಂಬುದನ್ನು ಕಂಡುಕೊಳ್ಳುವನೋ ಅವನೇ ಭಾಗವತೋತ್ತಮನು. ಜ್ಞಾನೀ ಭಕ್ತನು.)

**ಈಶ್ವರೇ ತದಧೀನೇಷು ಬಾಲಿಶೇಷು ದ್ವಿಷತ್ಸು ಚ ।**
**ಪ್ರೇಮಮೈತ್ರೀಕೃಪೋಪೇಕ್ಷಾ ಯಃ ಕರೋತಿ ಸ ಮಧ್ಯಮಃ ॥೪೬॥**

ಯಾವನು ಈಶ್ವರನಲ್ಲಿ ಪ್ರೇಮಭಕ್ತಿಯನ್ನಿಟ್ಟುಕೊಂಡಿರುವನೋ, ಅವನಿಗೆ ಅಧೀನರಾದ ಭಕ್ತರಲ್ಲಿ ಸ್ನೇಹವನ್ನು ಬೆಳೆಸುವನೋ, ಮೂರ್ಖರ ವಿಷಯದಲ್ಲಿ ಕೃಪೆದೋರುವನೋ, ಭಗವದ್ವೇಷಿಗಳ ವಿಷಯದಲ್ಲಿ ಉಪೇಕ್ಷೆಯಿಂದಿರುವನೋ ಅಂತಹವನು ಮಧ್ಯಮವರ್ಗದ ಭಾಗವತನೆನಿಸಿಕೊಳ್ಳುತ್ತಾನೆ.*

**ಅರ್ಚಾಯಾಮೇವ ಹರಯೇ ಪೂಜಾಂ ಯಃ ಶ್ರದ್ಧಯೇಹತೇ ।**
**ನ ತದ್ಭಕ್ತೇಷು ಚಾನ್ಯೇಷು ಸ ಭಕ್ತಃ ಪ್ರಾಕೃತಃ ಸ್ಮೃತಃ ॥೪೭॥**

ಯಾವನು ಅರ್ಚಾವಿಗ್ರಹಗಳನ್ನು ಮಾತ್ರ ಶ್ರದ್ಧೆಯಿಂದ ಪೂಜಿಸು

---

* ಈಶ್ವರನೇ ಮುಂತಾದ ನಾಲ್ವರಲ್ಲಿ ಪ್ರೇಮ, ಮೈತ್ರಿ, ಕೃಪೆ ಮತ್ತು ಉಪೇಕ್ಷೆಗಳನ್ನು ತೋರಿಸುವವನು ಮಧ್ಯಮ ಮಟ್ಟದ ಭಾಗವತನು. ಏಕೆಂದರೆ : ಅವನಿಗೆ ಅವರಲ್ಲಿ ಭೇದದೃಷ್ಟಿಯಿದೆ. (ಶ್ರೀಧರೀಯ)

ಇದೇ ಅರ್ಥಬರುವ ಶ್ಲೋಕವನ್ನು ಶ್ರೀಕೃಷ್ಣನು ಗೀತೆಯಲ್ಲಿ ಹೇಳುತ್ತಾನೆ :

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥** (ಭ.ಗೀ. ೬-೩೦)

ಯಾವನು ನನ್ನನ್ನು ಎಲ್ಲ ಕಡೆಗಳಲ್ಲಿಯೂ ನೋಡುತ್ತಾನೆಯೋ ಮತ್ತು ನನ್ನಲ್ಲಿ ಎಲ್ಲವನ್ನೂ ನೋಡುತ್ತಾನೆಯೋ ಅಂತಹವನಿಗೆ ನಾನು ಇಲ್ಲದೇ ಹೋಗುವುದಿಲ್ಲ. ಅವನು ನನಗೆ ಇಲ್ಲದೇ ಹೋಗುವುದಿಲ್ಲ.

ವನೋ, ಯಾವಾಗಲೂ ಭಗವಂತನ ವಿಗ್ರಹಗಳ ಆರಾಧನೆಯಲ್ಲಿಯೇ ನಿರತನಾಗಿರುವನೋ, ಭಗವದ್ಭಕ್ತರ ವಿಷಯದಲ್ಲಿ ಮೈತ್ರಿಯಿಂದಾಗಲೀ, ಇತರರ ವಿಷಯದಲ್ಲಿ ಕೃಪಾದೃಷ್ಟಿಯಿಂದಾಗಲೀ ಇರುವುದಿಲ್ಲವೋ ಅಂತಹವನು ಸಾಧಾರಣಭಕ್ತನೆಂದು ಪರಿಗಣಿತನಾಗುತ್ತಾನೆ.

**ಗೃಹೀತ್ವಾಪೀನ್ದ್ರಿಯೈರರ್ಥಾನ್ ಯೋ ನ ದ್ವೇಷ್ಟಿ ನ ಹೃಷ್ಯತಿ ।**
**ವಿಷ್ಣೋರ್ಮಾಯಾಮಿದಂ ಪಶ್ಯನ್ಸ ವೈ ಭಾಗವತೋತ್ತಮಃ ॥೪೮॥**

ಯಾವನು ಕಣ್ಣು-ಕಿವಿ–ಇವೇ ಮುಂತಾದ ಇಂದ್ರಿಯಗಳ ಮೂಲಕವಾಗಿ ಆ ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳನ್ನು ಗ್ರಹಿಸಿದರೂ ತನ್ನ ಇಚ್ಛೆಗೆ ಪ್ರತಿಕೂಲವಾದ ವಿಷಯಗಳು ಬಂದಾಗ ಅವನ್ನು ದ್ವೇಷಿಸುವುದಿಲ್ಲವೋ ತನ್ನ ಇಚ್ಛೆಗೆ ಅನುಕೂಲವಾದ ವಿಷಯಗಳು ಒದಗಿ ಬಂದಾಗ ಸಂತೋಷಗೊಳ್ಳುವುದಿಲ್ಲವೋ, ಸುಖವನ್ನೇ ಆಗಲೀ ದುಃಖವನ್ನೇ ಆಗಲೀ ಭಗವಂತನ ಮಾಯಾಕಲ್ಪಿತವೆಂದು ಭಾವಿಸಿ ಅವೆರಡನ್ನೂ ಸಮವಾಗಿ ಭಾವಿಸುವನೋ ಅಂತಹವನೇ ಭಾಗವತೋತ್ತಮನು.

**ದೇಹೇನ್ದ್ರಿಯ ಪ್ರಾಣಮನೋಧಿಯಾಂ ಯೋ**
**ಜನ್ಮಾಪ್ಯಯಕ್ಷುದ್ಭಯತರ್ಷಕೃಚ್ಛ್ರೈಃ ।**
**ಸಂಸಾರಧರ್ಮೈರವಿಮುಹ್ಯಮಾನಃ**
**ಸ್ಮೃತ್ಯಾ ಹರೇರ್ಭಾಗವತಪ್ರಧಾನಃ ॥೪೯॥**

ಯಾವನು ಶ್ರೀಹರಿಯನ್ನೇ ನಿರಂತರವಾಗಿ ಧ್ಯಾನಮಾಡುತ್ತಾ ತನ್ಮಯನಾಗಿ, ಶರೀರ-ಇಂದ್ರಿಯ-ಪ್ರಾಣ-ಮನಸ್ಸು-ಬುದ್ಧಿಗಳಿಗೆ ಸಂಬಂಧಿಸಿದ ಹುಟ್ಟು-ಸಾವು, ಶ್ರಮ, ಹಸಿವು-ಬಾಯಾರಿಕೆ, ಭಯ, ಆಸೆಗಳೆಂಬ ಸಂಸಾರಧರ್ಮಗಳಿಂದ ವಿಮೋಹಗೊಳ್ಳುವುದಿಲ್ಲವೋ ಅವನೇ ಭಾಗವತೋತ್ತಮನು.

**ನ ಕಾಮಕರ್ಮಬೀಜಾನಾಂ ಯಸ್ಯ ಚೇತಸಿ ಸಮ್ಭವಃ ।**
**ವಾಸುದೇವೈಕನಿಲಯಃ ಸ ವೈ ಭಾಗವತೋತ್ತಮಃ ॥೫೦॥**

ಯಾವನ ಮನಸ್ಸಿನಲ್ಲಿ ಕಾಮ್ಯಕರ್ಮಗಳ ಅಂಕುರವೇ ಇಲ್ಲದೆ

ಯಾವನು ವಾಸುದೇವನನ್ನೇ ಪರಮಾಶ್ರಯನನ್ನಾಗಿ ಹೊಂದಿರುವನೋ ಅವನೇ ಭಾಗವತೋತ್ತಮನು.

**ನ ಯಸ್ಯ ಜನ್ಮಕರ್ಮಭ್ಯಾಂ ನ ವರ್ಣಾಶ್ರಮಜಾತಿಭಿಃ ।**
**ಸಜ್ಜತೇಽಸ್ಮಿನ್ನಹಂಭಾವೋ ದೇಹೇ ವೈ ಸ ಹರೇಃ ಪ್ರಿಯಃ ॥೫೧॥**

ಯಾವನಿಗೆ ತನ್ನ ದೇಹದಲ್ಲಿ ತಾನು ಸತ್ಕುಲಪ್ರಸೂತನೆಂದಾಗಲೀ, ಶ್ರೌತ-ಸ್ಮಾರ್ತಕರ್ಮಗಳನ್ನು ನಿಷ್ಠೆಯಿಂದ ಮಾಡುತ್ತಿರುವೆನೆಂದಾಗಲೀ, ಶ್ರೇಷ್ಠವರ್ಣದಲ್ಲಿ ಹುಟ್ಟಿರುವೆನೆಂದಾಗಲೀ, ಶ್ರೇಷ್ಠವಾದ ಆಶ್ರಮಧರ್ಮದಲ್ಲಿ ಇರುವೆನೆಂದಾಗಲೀ ಅಹಂಕಾರವು ಆವಿರ್ಭವಿಸುವುದಿಲ್ಲವೋ–ನಿರಹಂಕಾರನಾಗಿ ನಿರಾಡಂಬರದಿಂದಿರುತ್ತಾ ಹರಿಯನ್ನೇ ಸದಾಕಾಲದಲ್ಲಿಯೂ ಧ್ಯಾನಿಸುವನೋ ಅಂತಹವನೇ ಶ್ರೀಹರಿಗೆ ಅತ್ಯಂತಪ್ರಿಯನಾದವನು.

**ನ ಯಸ್ಯ ಸ್ವಃ ಪರ ಇತಿ ವಿತ್ತೇಷ್ವಾತ್ಮನಿ ವಾ ಭಿದಾ ।**
**ಸರ್ವಭೂತಸಮಃ ಶಾನ್ತಃ ಸ ವೈ ಭಾಗವತೋತ್ತಮಃ ॥೫೨॥**

ಯಾವನಿಗೆ ಐಶ್ವರ್ಯದ ವಿಷಯದಲ್ಲಿ ತನ್ನದು–ಇತರರದ್ದು ಎಂಬ ಭೇದಭಾವನೆ ಇರುವುದಿಲ್ಲವೋ, ತನ್ನವರು-ಬೇರೆಯವರು ಎಂಬ ಭೇದ ಭಾವನೆ ಇರುವುದಿಲ್ಲವೋ, ಸಮಸ್ತಪ್ರಾಣಿಗಳನ್ನೂ ಸಮಾನವಾಗಿ ಕಾಣುತ್ತಾ ಶಾಂತನಾಗಿರುವನೋ ಅವನೇ ಭಾಗವತೋತ್ತಮನು.

**ತ್ರಿಭುವನವಿಭವಹೇತವೇಽಪ್ಯಕುಣ್ಠ-**
**ಸ್ಮೃತಿರಜಿತಾತ್ಮಸುರಾದಿಭಿರ್ವಿಮೃಗ್ಯಾತ್ ।**
**ನ ಚಲತಿ ಭಗವತ್ಪದಾರವಿನ್ದಾ-**
**ಲ್ಲವನಿಮಿಷಾರ್ಧಮಪಿ ಯಃ ಸ ವೈಷ್ಣವಾಗ್ರ್ಯಃ ॥೫೩॥**

ಬ್ರಹ್ಮೇಂದ್ರಾದಿಗಳಿಂದಲೂ ಅರಸಲ್ಪಡುವ, ಅವರಿಗೂ ಲಭಿಸದಿರುವ ಅಜಿತನಾದ ಶ್ರೀಹರಿಯ ದಿವ್ಯಪಾದಾರವಿಂದಗಳನ್ನು ಮೂರು ಲೋಕಗಳ ಆಧಿಪತ್ಯಕ್ಕಾದರೂ ಕ್ಷಣಕಾಲ ಕೂಡ ಯಾವನು ಮರೆಯುವುದಿಲ್ಲವೋ ಆ ಮಹಾನುಭಾವನೇ ವೈಷ್ಣವಾಗ್ರೇಸರನು.

**ಭಗವತ ಉರುವಿಕ್ರಮಾಂಘ್ರಿಶಾಖಾ-**
**ನಖಮಣಿಚನ್ದ್ರಿಕಯಾ ನಿರಸ್ತತಾಪೇ ।**

**ಹೃದಿ ಕಥಮುಪಸೀದತಾಂ ಪುನಃ ಸ**
**ಪ್ರಭವತಿ ಚನ್ದ್ರ ಇವೋದಿತೇಽರ್ಕತಾಪಃ ॥೫೪॥**

ಭಗವಂತನ ಪಾದಗಳಲ್ಲಿನ ಉಗುರುಗಳೆಂಬ ಮಣಿಗಳ ಬೆಳದಿಂಗಳಿನಂತಹ ಕಾಂತಿಯಿಂದ, ಒಮ್ಮೆ ಭಕ್ತರ ಹೃದಯಸಂತಾಪವು ದೂರವಾಯಿತೆಂದರೆ ಪುನಃ ಅವರ ಹೃದಯದಲ್ಲಿ ತಾಪವು ಹೇಗೆ ತಾನೇ ಉಂಟಾದೀತು? ಚಂದ್ರೋದಯವಾದನಂತರ ಸೂರ್ಯನ ತಾಪವು ಇರಲು ಸಾಧ್ಯವೇ?

**ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾ-**
**ದ್ಧರಿರವಶಾಭಿಹಿತೋಽಪ್ಯಘೌಘನಾಶಃ ।**
**ಪ್ರಣಯರಶನಯಾ ಧೃತಾಂಘ್ರಿಪದ್ಮಃ**
**ಸ ಭವತಿ ಭಾಗವತಪ್ರಧಾನ ಉಕ್ತಃ ॥೫೫॥**

ನಾಮೋಚ್ಚಾರಣೆ ಮಾಡಬೇಕೆಂಬ ಆಕಾಂಕ್ಷೆಯಿಲ್ಲದೇ ಯಾವುದೋ ನೆಪದಿಂದ ಭಗವಂತನ ದಿವ್ಯನಾಮವನ್ನು ಉಚ್ಚರಿಸಿದರೂ ಪರಮದಯಾಳುವಾದ ಶ್ರೀಹರಿಯು ಅಂತಹವನ ಸಮಸ್ತಪಾಪಗಳನ್ನೂ ದೂರೀಕರಿಸುತ್ತಾನೆ. ಹೀಗಿರುವಾಗ ಪ್ರೇಮಪಾಶದಿಂದ ಅವನ ಚರಣಾರವಿಂದಗಳನ್ನು ಹೃದಯದಲ್ಲಿ ಕಟ್ಟಿಹಾಕಿಕೊಂಡಿರುವ ಭಕ್ತಶ್ರೇಷ್ಠನ ವಿಷಯದಲ್ಲಿ ಹೇಳುವುದೇನಿದೆ? ಅಂತಹವನ ಹೃದಯವನ್ನು ಶ್ರೀಹರಿಯು ಕ್ಷಣಮಾತ್ರವಾದರೂ ಬಿಟ್ಟು ಹೋಗುವುದಿಲ್ಲ. ಅಂತಹವನೇ ಭಾಗವತಪ್ರಧಾನನು ; ಭಾಗವತೋತ್ತಮನು."*

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ಏಕಾದಶಸ್ಕಂಧದ ೨ನೆಯ ಅಧ್ಯಾಯವು ಮುಗಿಯಿತು.

---

* ಇಲ್ಲಿ ಹೇಳಿರುವ ಭಾಗವತನ ವರ್ಣನೆಯು ಶ್ರೀವಿಷ್ಣುಪುರಾಣದಲ್ಲಿ ಬರುವ ವೈಷ್ಣವೋತ್ತಮನ ವರ್ಣನೆಯನ್ನೂ ಮತ್ತು ಗೀತೆಯಲ್ಲಿ ಹೇಳಿರುವ ಸ್ಥಿತಪ್ರಜ್ಞನ ಮತ್ತು ಭಕ್ತನ ವರ್ಣನೆಯನ್ನೂ ಕೆಲವು ವಿಷಯಗಳಲ್ಲಿ ಹೋಲುತ್ತದೆ.

ಏಕಾದಶಸ್ಕಂಧ ೩ನೆಯ ಅಧ್ಯಾಯ

## ಮಾಯೆಯ ಸ್ವರೂಪ : ಮಾಯೆಯಿಂದ ಪಾರಾಗುವ ಉಪಾಯ : ಬ್ರಹ್ಮ ಮತ್ತು ಕರ್ಮಯೋಗದ ನಿರೂಪಣೆ

ನಿಮಿರಾಜನು ಪ್ರಶ್ನಿಸುತ್ತಾನೆ :

**ಪರಸ್ಯ ವಿಷ್ಣೋರೀಶಸ್ಯ ಮಾಯಿನಾಮಪಿ ಮೋಹಿನೀಮ್ ।**
**ಮಾಯಾಂ ವೇದಿತುಮಿಚ್ಛಾಮೋ ಭಗವನ್ತೋ ಬ್ರುವನ್ತು ನಃ ॥೧॥**

**ನಾನುತೃಪ್ಯೇ ಜುಷನ್ಯುಷ್ಮದ್ವಚೋ ಹರಿಕಥಾಮೃತಮ್ ।**
**ಸಂಸಾರತಾಪನಿಸ್ತಪ್ತೋ ಮರ್ತ್ಯಸ್ತತ್ತಾಪಭೇಷಜಮ್ ॥೨॥**

“ಮಹಾತ್ಮರೇ! ದೊಡ್ಡ ದೊಡ್ಡ ಮಾಯಾವಿಗಳನ್ನೂ ವಿಮೋಹಗೊಳಿಸುವ ಸರ್ವಶ್ರೇಷ್ಠನಾದ, ಈಶನಾದ ಮಹಾವಿಷ್ಣುವಿನ ಮಾಯೆಯ ಸ್ವರೂಪವನ್ನು ತಿಳಿಯಲು ಅಪೇಕ್ಷಿಸುತ್ತೇವೆ. ಮಾಯಾಸ್ವರೂಪವನ್ನು ಚೆನ್ನಾಗಿ ತಿಳಿದಿರುವ ತಾವು ಈ ವಿಷಯವನ್ನು ನಮಗೆ ಹೇಳಿರಿ. ಸಂಸಾರ ತಾಪದಲ್ಲಿ ಬೆಂದುಹೋಗಿರುವ ಮರಣಧರ್ಮವುಳ್ಳ ನಾನು ಸಂಸಾರದ ತಾಪಕ್ಕೆ ಔಷಧಿಪ್ರಾಯವಾಗಿರುವ, ನಿಮ್ಮ ವಾಣಿಯ ರೂಪದಲ್ಲಿ ಹೊರಬರುತ್ತಿರುವ ಹರಿಕಥಾಮೃತವನ್ನು ಎಷ್ಟು ಕುಡಿದರೂ ತೃಪ್ತನಾಗುತ್ತಿಲ್ಲ ಮತ್ತು ಕೇಳಬೇಕೆಂಬ ಪಿಪಾಸೆಯು ಹೆಚ್ಚುತ್ತಿರುವುದೇ ಹೊರತು ಸಾಕೆನ್ನಿಸುತ್ತಿಲ್ಲ.”

ಮೂರನೆಯ ಯೋಗೀಶ್ವರರಾದ ಅಂತರಿಕ್ಷರು* ಹೇಳುತ್ತಾರೆ :

**ಏಭಿರ್ಭೂತಾನಿ ಭೂತಾತ್ಮಾ ಮಹಾಭೂತೈರ್ಮಹಾಭುಜ ।**
**ಸಸರ್ಜೋಚ್ಚಾವಚಾನ್ಯಾದ್ಯಃ ಸ್ವಮಾತ್ರಾತ್ಮಪ್ರಸಿದ್ಧಯೇ ॥೩॥**

**ಏವಂ ಸೃಷ್ಟಾನಿ ಭೂತಾನಿ ಪ್ರವಿಷ್ಟಃ ಪಞ್ಚಧಾತುಭಿಃ ।**
**ಏಕಧಾ ದಶಧಾऽತ್ಮಾನಂ ವಿಭಜನ್ ಜುಷತೇ ಗುಣಾನ್ ॥೪॥**

---

* ಅಂತರಿಕ್ಷ ಶಬ್ದಕ್ಕೆ ಊರ್ಧ್ವಲೋಕ ಅಧೋಲೋಕಗಳ ಮಧ್ಯದಲ್ಲಿರುವ ಸ್ಥಾನವೆಂದರ್ಥ. ಹಾಗೆಯೇ ಮಾಯೆಗೊಳಗಾದವನು ಅದರಿಂದ ತಿರಸ್ಕೃತನಾಗುವುದರಿಂದ ಮಾಯಾಸ್ವರೂಪವನ್ನು ಬಣ್ಣಿಸಲಾರನು. ಮುಕ್ತನು ಬ್ರಹ್ಮಸ್ವರೂಪದ ಅನುಭವವನ್ನು ಮಾತ್ರ ಬಲ್ಲವನಾದುದರಿಂದ ಮಾಯೆಯ ಸ್ವರೂಪವನ್ನು ವಿವರಿಸಲಾರನು.

**ಗುಣೈರ್ಗುಣಾನ್ ಸ ಭುಞ್ಜಾನ ಆತ್ಮಪ್ರದ್ಯೋತಿತೈಃ ಪ್ರಭುಃ ।**
**ಮನ್ಯಮಾನ ಇಂದ ಸೃಷ್ಟಮಾತ್ಮಾನಮಿಹ ಸಜ್ಜತೇ ॥೫॥**

"ಮಹಾಭುಜನೇ! ವಿದೇಹರಾಜ! ಭಗವಂತನ ಮಾಯೆಯು ಸ್ವರೂಪತಃ ಅನಿರ್ವಚನೀಯವಾದುದು. ಆದುದರಿಂದ ಮಾಯೆಯ ಕಾರ್ಯಗಳ ಮೂಲಕವಾಗಿ ಅದರ ಸ್ವರೂಪವನ್ನು ನಿರೂಪಿಸಬಹುದಾಗಿದೆ. ಸಮಸ್ತ ಪ್ರಾಣಿಗಳಿಗೂ ಕಾರಣಭೂತನಾಗಿರುವ ಆದಿಪುರುಷನಾದ ಪರಮಾತ್ಮನು, ತನ್ನ ಅಂಶಭೂತರಾದ ಜೀವರ ವಿಷಯೋಪಭೋಗಗಳಿಗೂ ಮತ್ತು ಮೋಕ್ಷ ಸಿದ್ಧಿಗೂ ತಾನೇ ಸೃಷ್ಟಿಸಿದ ಪೃಥ್ವಿಯೇ ಮೊದಲಾದ ಪಂಚಭೂತಗಳಿಂದ ಹಲವು ಬಗೆಯ ಪ್ರಾಣಿಗಳನ್ನು ಹುಟ್ಟಿಸಿದನು. ಹೀಗೆ ಪಂಚಮಹಾಭೂತಗಳ ಮೂಲಕವಾಗಿ ಸೃಷ್ಟಿಸಲ್ಪಟ್ಟ ಪ್ರಾಣಿಗಳಲ್ಲಿ ಅಂತರ್ಯಾಮಿಯ ರೂಪದಿಂದ ಪರಮಾತ್ಮನೇ ಅನುಪ್ರವೇಶಮಾಡುತ್ತಾನೆ. ಪುನಃ ತನ್ನನ್ನೇ ಮನಸ್ಸನ್ನಾಗಿಯೂ ಐದು ಕರ್ಮೇಂದ್ರಿಯ–ಐದು ಜ್ಞಾನೇಂದ್ರಿಯಗಳನ್ನಾಗಿಯೂ ವಿಭಾಗಿಸಿಕೊಂಡು ಜೀವಸ್ವರೂಪನಾಗಿ ಇಂದ್ರಿಯಗಳ ವಿಷಯಗಳನ್ನು ಉಪಭೋಗಿಸುತ್ತಾನೆ. ಹತ್ತು ಇಂದ್ರಿಯಗಳನ್ನೂ ಮನಸ್ಸನ್ನೂ ಪಡೆದುಕೊಂಡ ಆ ಜೀವನು ಅಂತರ್ಯಾಮಿಯಾದ ಪರಮಾತ್ಮನಿಂದ ಪ್ರಕಾಶಿತವಾದ ಇಂದ್ರಿಯಗಳ ಮೂಲಕವಾಗಿ ವಿಷಯೋಪಭೋಗಗಳನ್ನು ಅನುಭವಿಸುತ್ತಾ ಪಂಚಭೂತಗಳಿಂದ ನಿರ್ಮಿತವಾದ ಈ ದೇಹವನ್ನೇ ತನ್ನದೆಂದು ಭಾವಿಸಿಕೊಳ್ಳುತ್ತಾನೆ ಮತ್ತು ಅದರಲ್ಲಿಯೇ ವಿಶೇಷವಾದ ಆಸಕ್ತಿಯನ್ನು ಹೊಂದುತ್ತಾನೆ. (ಇದೇ ಭಗವಂತನ ಮಾಯೆ)*

---

ಅಂತರಿಕ್ಷದಂತೆ ಮಧ್ಯವರ್ತಿಯಾದವನು ತಿಳಿಸಬಲ್ಲನಾದುದರಿಂದ ಈ ಮಾಯಾ ಸ್ವರೂಪವನ್ನು ಕುರಿತು ಅಂತರಿಕ್ಷನು ಹೇಳುತ್ತಾನೆ. (ದೀಪಿಕಾ)

* ಮಾಯೆಯನ್ನು ಅದರ ಸ್ವರೂಪದಿಂದ ವರ್ಣಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಅದರ ಕರ್ಮದ ಮೂಲಕ ಆ ಮಾಯೆಯನ್ನು ವರ್ಣಿಸಲು ತೊಡಗಿದ್ದಾರೆ. (ಶ್ರೀಧರೀಯ)

ಇಲ್ಲಿ ಮಾಯಾಶಬ್ದವು ಅದರ ಕಾರ್ಯವನ್ನೂ ಬೋಧಿಸುತ್ತದೆ. ಆದುದರಿಂದ ಅವೆರಡನ್ನೂ ಕುರಿತು ಇಲ್ಲಿ ಪ್ರಶ್ನೆಮಾಡಲಾಗಿದೆ. (ವೀರರಾಘವೀಯ)

**ಕರ್ಮಾಣಿ ಕರ್ಮಭಿಃ ಕುರ್ವನ್ಸನಿಮಿತ್ತಾನಿ ದೇಹಭೃತ್ ।**
**ತತ್ತತ್ಕರ್ಮಫಲಂ ಗೃಹ್ಣನ್ಭ್ರಮತೀಹ ಸುಖೇತರಮ್ ॥೬॥**

ಜೀವನು ಕರ್ಮೇಂದ್ರಿಯಗಳಿಂದ ಸಕಾಮಕರ್ಮಗಳನ್ನು ಮಾಡುತ್ತಾ ಅವುಗಳ ಫಲಗಳನ್ನು ಅನುಭವಿಸುತ್ತಾ ಸಂಸಾರಸಾಗರದಲ್ಲಿ ಮುಳುಗಿ ತೇಲುತ್ತಿರುತ್ತಾನೆ.

ಅಮಂಗಳಕರವಾದ ಹಲವಾರು ದೇಹಗಳನ್ನೂ ಕರ್ಮಾನುಸಾರವಾಗಿ ಪಡೆದುಕೊಳ್ಳುತ್ತಾ ಅಸ್ವತಂತ್ರನಾಗಿ ಮಹಾಪ್ರಳಯಪರ್ಯಂತವಾಗಿ ಜನನಾನಂತರ ಮರಣವನ್ನೂ ಮರಣಾನಂತರ ಪುನರ್ಜನ್ಮವನ್ನೂ ಪಡೆಯುತ್ತಲೇ ಇರುತ್ತಾನೆ. ಜನನ-ಮರಣಗಳ ಸುಳಿಯನ್ನು ಬಿಟ್ಟು ಹೊರಕ್ಕೆ ಬರುವುದೇ ಇಲ್ಲ.

ಜಗತ್ಪ್ರಳಯವಾಗಿ ಪಂಚಮಹಾಭೂತಗಳ ವಿನಾಶಕಾಲವು ಸನ್ನಿಹಿತವಾದೊಡನೆಯೇ ಆದ್ಯಂತರಹಿತನಾದ, ಕಾಲಸ್ವರೂಪನಾದ ಪರಮಾತ್ಮನು ಸ್ಥೂಲವಾದ ಆಕಾಶಾದಿಗಳನ್ನೂ ಸೂಕ್ಷ್ಮವಾದ ಮಹದಾದಿಗಳನ್ನೂ ಒಳಗೊಂಡ ವ್ಯಕ್ತಪ್ರಪಂಚವನ್ನು ಅವ್ಯಕ್ತದ ಕಡೆಗೆ (ಅವುಗಳ ಮೂಲಕಾರಣದ ಕಡೆಗೆ) ಸೆಳೆಯುತ್ತಾನೆ.

**ಶತವರ್ಷಾ ಹ್ಯನಾವೃಷ್ಟಿರ್ಭವಿಷ್ಯತ್ಯುಲ್ಬಣಾ ಭುವಿ ।**
**ತತ್ಕಾಲೋಪಚಿತೋಷ್ಣಾರ್ಕೋ ಲೋಕಾಂಸ್ತ್ರೀನ್ಪ್ರತಪಿಷ್ಯತಿ ॥೯॥**

ಆ ಸಮಯದಲ್ಲಿ ನೂರುವರ್ಷಗಳವರೆಗೆ ಮಳೆಯೇ ಇಲ್ಲದೆ ಮಹಾಘೋರವಾದ ಕ್ಷಾಮವು ಸಂಭವಿಸುತ್ತದೆ. ಕಾಲಶಕ್ತಿಯಿಂದ ಉಲ್ಬಣಿಸುವ ಸೂರ್ಯನು ಮೂರು ಲೋಕಗಳನ್ನು ಸುಟ್ಟುಹಾಕುತ್ತಾನೆ.

---

ಇಲ್ಲಿ ವೀರರಾಘವೀಯದಲ್ಲಿ ಈ ಕೆಳಗಿನ ನಾಲ್ಕು ಶ್ಲೋಕಗಳನ್ನೂ ಪಠಿಸುತ್ತಾರೆ.

ನಿರ್ಗುಣೇ ಕೇವಲೇ ಸಾಕ್ಷಾದಾತ್ಮನೋ ಯದ್ವಿಪರ್ಯಯಃ ।
ಸೈಷಾ ಭಗವತೋ ಮಾಯಾ ಯಯೇದಂ ನಿರ್ಮಮೇ ಪ್ರಭುಃ ॥

ಇನ್ದ್ರಿಯಾರ್ಥಭ್ರಮೋ ಜಾಗ್ರತ್ಸ್ವಪ್ನೋಽನ್ತಃ ಕರಣಭ್ರಮಃ ।
ಸುಪ್ತಂ ತದ್ವಾಸನಾ ಬೀಜಂ ತುರ್ಯಾಮೂರ್ತಿಸ್ತದನ್ವಯಃ ॥

ವಿಶುದ್ಧಂ ಜ್ಞಾನಮೇವೈಕಂ ಮಾಯಯಾ ಭಾಸತೇ ತ್ರಿಧಾ ।
ಗ್ರಾಹಕಾದ್ಯೈರ್ಯಥಾ ಸ್ವಪ್ನಂ ತತ್ತತ್ಸಂವಿತಿ ಯಾ ಫಲಮ್ ॥

**ಪಾತಾಲತಲಮಾರಭ್ಯ ಸಙ್ಕರ್ಷಣಮುಖಾನಲಃ ।**
**ದಹನ್ನೂರ್ಧ್ವಶಿಖೋ ವಿಷ್ವಗ್ವರ್ಧತೇ ವಾಯುನೇರಿತಃ ॥೧೦॥**

ಆ ಸಮಯದಲ್ಲಿ ಸಂಕರ್ಷಣಸ್ವರೂಪನಾದ ಶೇಷನಾಗನು ತನ್ನ ಸಾವಿರ ಮುಖಗಳಿಂದಲೂ ಭಯಂಕರವಾದ ಜ್ವಾಲೆಗಳನ್ನು ಕಕ್ಕುತ್ತಿರುತ್ತಾನೆ. ಆ ಮಹಾಜ್ವಾಲೆಗಳು (ವಾಯುವಿನಿಂದ ಪ್ರೇರಿತವಾಗಿ) ಪಾತಾಳ ಲೋಕದಿಂದ ಆರಂಭಿಸಿ ಮೇಲು-ಮೇಲಕ್ಕೆ ಹಬ್ಬುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಪ್ರಸರಿಸಿಬಿಡುತ್ತವೆ. (ಇವೆಲ್ಲವೂ ಭಗವಂತನ ಮಹಾಮಾಯೆಯ ಪ್ರಭಾವವೇ ಆಗಿವೆ.)

**ಸಾಂವರ್ತಕೋ ಮೇಘಗಣೋ ವರ್ಷತಿ ಸ್ಮ ಶತಂ ಸಮಾಃ ।**
**ಧಾರಾಭಿರ್ಹಸ್ತಿಹಸ್ತಾಭಿರ್ಲೀಯತೇ ಸಲಿಲೇ ವಿರಾಟ್ ॥೧೧॥**

ಬಳಿಕ ಪ್ರಳಯಕಾಲದ ಸಾಂವರ್ತಗಳೆಂಬ ಮೇಘಗಳು ಆನೆಯ ಸೊಂಡಿಲಿನಷ್ಟು ಗಾತ್ರದ ವರ್ಷಧಾರೆಗಳ ಮೂಲಕವಾಗಿ ನೂರುವರ್ಷಗಳ ವರೆಗೆ ಮಳೆಯನ್ನು ಸುರಿಸುತ್ತವೆ. ಹದಿನಾಲ್ಕು ಲೋಕಗಳನ್ನೂ ದೇಹದಲ್ಲಿ ಅಡಗಿಸಿಕೊಂಡಿರುವ ವಿರಾಟ್ಪುರುಷನು ಬ್ರಹ್ಮಾಂಡದೊಡನೆ ನೀರಿನಲ್ಲಿ ಲೀನ ವಾಗುತ್ತಾನೆ.

**ತತೋ ವಿರಾಜಮುತ್ಸೃಜ್ಯ ವೈರಾಜಃ ಪುರುಷೋ ನೃಪ ।**
**ಅವ್ಯಕ್ತಂ ವಿಶತೇ ಸೂಕ್ಷ್ಮಂ ನಿರಿನ್ಧನ ಇವಾನಲಃ ॥೧೨॥**

ಕಟ್ಟಿಗೆಯಿಲ್ಲದೆ ಅಗ್ನಿಯು ಶಾಂತವಾಗಿಬಿಡುವಂತೆ ವಿರಾಟ್ಪುರುಷನು ತನ್ನ ಬ್ರಹ್ಮಾಂಡಶರೀರವನ್ನು ಪರಿತ್ಯಜಿಸಿ ಸೂಕ್ಷ್ಮಸ್ವರೂಪನಾದ ಅವ್ಯಕ್ತದಲ್ಲಿ ಲೀನವಾಗಿಬಿಡುತ್ತಾನೆ.

**ವಾಯುನಾ ಹೃತಗನ್ಧಾ ಭೂಃ ಸಲಿಲತ್ವಾಯ ಕಲ್ಪತೇ ।**
**ಸಲಿಲಂ ತದ್ಧೃತರಸಂ ಜ್ಯೋತಿಷ್ಟ್ವಾಯೋಪಕಲ್ಪತೇ ॥೧೩॥**

ಪ್ರಳಯಕಾಲದಲ್ಲಿ ವಾಯುವು ಭೂಮಿಯಲ್ಲಿರುವ ಗಂಧವನ್ನು ಸೆಳೆದು ಕೊಳ್ಳುತ್ತದೆ. ಗಂಧರಹಿತವಾದ ಭೂಮಿಯು ತನ್ನ ಗುಣವನ್ನು ಕಳೆದು ಕೊಂಡನಂತರ ನೀರಾಗಿ ಬಿಡುತ್ತದೆ. ಪುನಃ ವಾಯುವು ನೀರಿನ ಗುಣವಾದ

---

ವೈತಥ್ಯಾದ್ವ್ಯಭಿಚಾರಾಚ್ಚ ಮಾಯಾತ್ವೈವಿಧ್ಯಮಾತ್ಮನಿ ।
ಯಥಾ ಮನೋ ರಥಸ್ವಪ್ನ ಇತ್ಯಾಮೃಶ್ಯೋಪಶಾಮ್ಯತಿ ॥ (ಶ್ಲೋಕ ೩)

ರಸವನ್ನು ಹೀರಿಕೊಳ್ಳುತ್ತದೆ. ರಸದಿಂದ ಹೀನವಾದ ಜಲವು ಅಗ್ನಿಯಾಗುತ್ತದೆ.

**ಹೃತರೂಪಂ ತು ತಮಸಾ ವಾಯೌ ಜ್ಯೋತಿಃ ಪ್ರಲೀಯತೇ ।**
**ಹೃತಸ್ಪರ್ಶೋಽವಕಾಶೇನ ವಾಯುರ್ನಭಸಿ ಲೀಯತೇ ॥೧೪॥**

ಬಳಿಕ ಅಂಧಕಾರವು ಅಗ್ನಿಯ ರೂಪವನ್ನು (ಅಗ್ನಿಯ ರೂಪವಾದ ಬೆಳಕನ್ನು) ಅಪಹರಿಸುತ್ತದೆ. ಅಗ್ನಿಯು ತನ್ನ ಗುಣವಾದ ಬೆಳಕನ್ನು ಕಳೆದುಕೊಂಡನಂತರ ವಾಯುವಿನಲ್ಲಿ ಲೀನವಾಗಿಬಿಡುತ್ತದೆ. ಆ ಸಮಯದಲ್ಲಿ ಅವಕಾಶರೂಪವಾದ ಆಕಾಶವು ವಾಯುವಿನ ಸ್ಪರ್ಶಶಕ್ತಿಯನ್ನು ಅಪಹರಿಸುತ್ತದೆ. ಇದರಿಂದಾಗಿ ವಾಯುವು ಆಕಾಶದಲ್ಲಿ ಲೀನವಾಗಿಬಿಡುತ್ತದೆ. ಇವೆಲ್ಲವೂ ಭಗವಂತನ ಮಾಯೆಗಳೇ ಆಗಿವೆ.

**ಕಾಲಾತ್ಮನಾ ಹೃತಗುಣಂ ನಭ ಆತ್ಮನಿ ಲೀಯತೇ ।**
**ಇನ್ದ್ರಿಯಾಣಿ ಮನೋ ಬುದ್ಧಿಃ ಸಹ ವೈಕಾರಿಕೈರ್ನೃಪ ।**
**ಪ್ರವಿಶನ್ತಿ ಹ್ಯಹಙ್ಕಾರಂ ಸ್ವಗುಣೈರಹಮಾತ್ಮನಿ ॥೧೫॥**

ಬಳಿಕ ಕಾಲರೂಪಿಯಾದ ಈಶ್ವರನು ಆಕಾಶದ ಗುಣವಾದ ಶಬ್ದವನ್ನು ಅಪಹರಿಸುತ್ತಾನೆ. ಶಬ್ದಗುಣವನ್ನು ಕಳೆದುಕೊಂಡ ಆಕಾಶವು ತಾಮಸಾಹಂಕಾರದಲ್ಲಿ ಲೀನವಾಗುತ್ತದೆ. ಇಂದ್ರಿಯಗಳು ಮತ್ತು ಬುದ್ಧಿಯು ರಾಜಸಾಹಂಕಾರದಲ್ಲಿ ಲೀನವಾಗುತ್ತವೆ. ಮನಸ್ಸು ಸಾತ್ತ್ವಿಕಾ ಹಂಕಾರದಿಂದ ಉತ್ಪನ್ನರಾದ ದೇವತೆಗಳೊಡನೆ ಸಾತ್ತ್ವಿಕಾಹಂಕಾರದಲ್ಲಿ ಲೀನವಾಗುತ್ತದೆ. ತನ್ನ ಮೂರು ಪ್ರಕಾರವಾದ ಕಾರ್ಯಗಳೊಡನೆ ಅಹಂಕಾರವು ಮಹತ್ತತ್ತ್ವದಲ್ಲಿ ಲೀನವಾಗುತ್ತದೆ. ಮಹತ್ತತ್ತ್ವವು ಪ್ರಕೃತಿಯಲ್ಲಿಯೂ ಪ್ರಕೃತಿಯು ಬ್ರಹ್ಮನಲ್ಲೂ ಲೀನವಾಗಿ ಬಿಡುತ್ತವೆ.

ಮಹಾರಾಜ! ಸೃಷ್ಟಿ-ಸ್ಥಿತಿ-ಲಯಗಳನ್ನುಂಟುಮಾಡುವ ತ್ರಿಗುಣಾತ್ಮಕವಾದ ವಿಷ್ಣುವಿನ ಮಾಯೆಯೇ ಇದಾಗಿದೆ. ನೀನು ಪ್ರಶ್ನಿಸಿದಂತೆ ನಿನಗೆ ಮಾಯೆಯ ರೂಪವನ್ನು ವಿವರಿಸಿ ಹೇಳಿದ್ದೇನೆ. ಬೇರೆ ಯಾವುದನ್ನು ನೀನು ಕೇಳಲು ಅಪೇಕ್ಷಿಸುವೆ?”

ನಿಮಿರಾಜನು ಹೇಳುತ್ತಾನೆ :

**ಯಥೈತಾಮೈಶ್ವರೀಂ ಮಾಯಾಂ ದುಸ್ತರಾಮಕೃತಾತ್ಮಭಿಃ ।**
**ತರನ್ತ್ಯಞ್ಜಃ ಸ್ಥೂಲಧಿಯೋ ಮಹರ್ಷ ಇದಮುಚ್ಯತಾಮ್ ॥೧೭॥**

“ಮಹರ್ಷಿಗಳೇ! ಇಂದ್ರಿಯನಿಗ್ರಹವಿಲ್ಲದೇ ಇರುವವರಿಂದ ದಾಟಲು ಅಸಾಧ್ಯವಾದ ಈ ಈಶ್ವರಸಂಬಂಧವಾದ ಮಾಯೆಯನ್ನು ಸ್ಥೂಲಬುದ್ಧಿಯುಳ್ಳ ಮನುಷ್ಯರು ಸ್ಥೂಲದಲ್ಲಿಯೇ ದೇಹದಲ್ಲಿಯೇ ಆತ್ಮಬುದ್ಧಿಯಿರುವ ಮನುಷ್ಯರು ಸುಲಭವಾಗಿ ಹೇಗೆ ದಾಟಿಯಾರು?–ಎಂಬ ವಿಷಯವನ್ನು ನನಗೆ ದಯಮಾಡಿ ಹೇಳಿರಿ.”

ಯೋಗೀಶ್ವರರಲ್ಲಿ ನಾಲ್ಕನೆಯವರಾದ ಪ್ರಬುದ್ಧರು ಹೇಳುತ್ತಾರೆ :

**ಕರ್ಮಾಣ್ಯಾರಭಮಾಣಾನಾಂ ದುಃಖಹತ್ಯೈ ಸುಖಾಯ ಚ ।**
**ಪಶ್ಯೇತ್ಪಾಕವಿಪರ್ಯಾಸಂ ಮಿಥುನೀಚಾರಿಣಾಂ ನೃಣಾಮ್ ॥೧೮॥**

“ಮಹಾರಾಜ! ವಿವಾಹವಾಗಿ ಸಂಸಾರಬಂಧನದಲ್ಲಿ ಬೀಳುವ ಮನುಷ್ಯರು ಸುಖದ ಪ್ರಾಪ್ತಿಗಾಗಿಯೂ ದುಃಖದ ನಿವೃತ್ತಿಗಾಗಿಯೂ ನಾನಾ ಪ್ರಕಾರವಾದ ಕರ್ಮಗಳನ್ನು ಮಾಡುತ್ತಿರುತ್ತಾರೆ. ಇಂತಹ ಸಂದರ್ಭಗಳಲ್ಲಿ ಮಾಯೆಯಿಂದ ಪಾರಾಗಬೇಕೆಂದು ಬಯಸುವ ಮನುಷ್ಯರು, ಕರ್ಮಗಳು ಎಂತಹ ವಿಪರೀತವಾದ ಫಲಗಳನ್ನು ಕೊಡುತ್ತವೆಯೆಂಬುದರ ಬಗೆಗೆ ವಿಚಾರಮಾಡಬೇಕು. ಸಂಸಾರಿಜೀವರಿಗೆ ಸುಖಕ್ಕೆ ಬದಲಾಗಿ ದುಃಖವೇ ಉಂಟಾಗುತ್ತದೆ. ದುಃಖದ ನಿವೃತ್ತಿಗೆ ಬದಲಾಗಿ ದಿನ-ದಿನಕ್ಕೂ ದುಃಖವು ಅಧಿಕವಾಗುತ್ತಾ ಹೋಗುತ್ತದೆ.

**ನಿತ್ಯಾರ್ತಿದೇನ ವಿತ್ತೇನ ದುರ್ಲಭೇನಾತ್ಮಮೃತ್ಯುನಾ ।**
**ಗೃಹಾಪತ್ಯಾಪ್ತಪಶುಭಿಃ ಕಾ ಪ್ರೀತಿಃ ಸಾಧಿತೈಶ್ಚಲೈಃ ॥೧೯॥**

ಧನದ ವಿಷಯವನ್ನೇ ತೆಗೆದುಕೊಳ್ಳೋಣ. ಧನವು ಸುದುರ್ಲಭವಾದುದು. ಸಂಪಾದಿಸಲೂ ಕಷ್ಟ. ಸಂಪಾದಿಸಿದ್ದನ್ನು ರಕ್ಷಿಸುವುದೂ ಕಷ್ಟ. ರಾಜರು-ಚೋರರು ನಿತ್ಯವೂ ಉಪಟಳವನ್ನು ಕೊಡುತ್ತಲೇ ಇರುತ್ತಾರೆ. ಆದುದರಿಂದ ಧನವೆಂಬುದು ನಿತ್ಯವೂ ಪೀಡಾಪ್ರದವಾದುದು.

ಧನವೇ ಕೆಲವುವೇಳೆ ಮರಣಕ್ಕೂ ಕಾರಣವಾಗುತ್ತದೆ. ಮೇಲಾಗಿ ಮನೆ, ಮಕ್ಕಳು, ಮಡದಿ, ಬಂಧುಗಳು, ಪಶುಗಳು, ಐಶ್ವರ್ಯ–ಈ ಎಲ್ಲವೂ ಅನಿತ್ಯವಾದುವುಗಳು. ನಾಶವಾಗತಕ್ಕುವುಗಳು. ಶಾಶ್ವತವಾಗಿ ಉಳಿಯ ತಕ್ಕುವುಗಳಲ್ಲ. ಇಂತಹ ವಸ್ತುಗಳ ಸಂಗ್ರಹದಿಂದ ಸಂತೋಷವು ಹೇಗೆತಾನೇ ದೊರಕೀತು? ಪಡೆಯಲೂ ದುಃಖ ; ಕಾಪಾಡಲೂ ದುಃಖ ; ಪೋಷಿಸಲೂ ದುಃಖ ; ಪೋಲಾದರೂ ದುಃಖ. ಇಂತಹ ನಿತ್ಯದುಃಖದಾಯಕಗಳಾದ ವಸ್ತು ಗಳಿಂದ ಪ್ರಯೋಜನವೇನೆಂಬುದನ್ನು ಚಿಂತಿಸತೊಡಗಿದರೆ ಮಾಯೆಯಿಂದ ಪಾರಾಗಬಹುದು.

**ಏವಂ ಲೋಕಂ ಪರಂ ವಿದ್ಯಾನ್ನಶ್ವರಂ ಕರ್ಮನಿರ್ಮಿತಮ್ ।**
**ಸತುಲ್ಯಾತಿಶಯಧ್ವಂಸಂ ಯಥಾ ಮಣ್ಡಲವರ್ತಿನಾಮ್ ॥೨೦॥**

ಮಾಯೆಯಿಂದ ಪಾರಾಗಲು ಬಯಸುವ ಮನುಷ್ಯನು ಮರಣಾನಂತರ ದಲ್ಲಿ ಕರ್ಮಫಲಗಳಿಂದ ಪ್ರಾಪ್ತವಾಗುವ ಲೋಕಗಳೂ ಅನಿತ್ಯವಾದುವೆಂದೂ ನಾಶವಾಗತಕ್ಕುವುಗಳೆಂದೂ ತಿಳಿಯಬೇಕು. ಸ್ಪರ್ಧೆ ಮತ್ತು ಅಸೂಯೆಗಳಿಂದ ಕೂಡಿದ ರಾಜರಂತೆ ಸಮಾನರು, ಅಧಿಕರು, ನಾಶ–ಇವುಗಳಿಂದ ಕೂಡಿದ ಪರಲೋಕವನ್ನೂ ಅಶಾಶ್ವತವಾದುವುಗಳೆಂದು ತಿಳಿಯಬೇಕು. ಪುಣ್ಯಫಲವು ಮುಗಿದೊಡನೆಯೇ ಆ ಲೋಕಗಳಿಂದ ಹೊರಬರಬೇಕಾಗುತ್ತದೆ.

**ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಮ್ ।**
**ಶಾಬ್ದೇ ಪರೇ ಚ ನಿಷ್ಣಾತಂ ಬ್ರಹ್ಮಣ್ಯುಪಶಮಾಶ್ರಯಮ್ ॥೨೧॥**

ಆದುದರಿಂದ ಮೋಕ್ಷದ ಸ್ವರೂಪವನ್ನು ತಿಳಿಯಲು ಅಪೇಕ್ಷಿಸುವ ವನು, ಮಾಯೆಯಿಂದ ಮುಕ್ತನಾಗಲು ಬಯಸುವವನು, ವೇದ-ವೇದಾಂಗ ಪಾರಂಗತನಾದ ಪರಬ್ರಹ್ಮತತ್ತ್ವವನ್ನು ಅನುಭವದ ಮೂಲಕವಾಗಿ ತಿಳಿದಿರುವ ಶಾಂತಾತ್ಮನಾದ ಸದ್ಗುರುವನ್ನು ಆಶ್ರಯಿಸಬೇಕು.*

---

* ಬ್ರಹ್ಮಜಿಜ್ಞಾಸುವು ಆಶ್ರಯಿಸಬೇಕಾದ ಗುರುವು ಶಾಬ್ದಬ್ರಹ್ಮದಲ್ಲಿ ಅಂದರೆ ವೇದದಲ್ಲಿ ನಿಷ್ಣಾತನಾಗಿರಬೇಕು. ಇಲ್ಲದಿದ್ದರೆ ಅವನಿಗೆ ಶಿಷ್ಯನ ಸಂಶಯಗಳನ್ನು ನಿವಾರಿಸಲು ಸಾಧ್ಯವಾಗುವುದಿಲ್ಲ. ಹಾಗೆಯೇ ಆತನು ಬ್ರಹ್ಮಾಪರೋಕ್ಷಜ್ಞಾನಿಯೂ

**ತತ್ರ ಭಾಗವತಾನ್ ಧರ್ಮಾನ್ಶಿಕ್ಷೇದ್ಗುರ್ವಾತ್ಮದೈವತಃ ।**
**ಅಮಾಯಯಾಮವೃತ್ತ್ಯಾ ಯೈಸ್ತುಷ್ಯೇದಾತ್ಮಾऽತ್ಮದೋ ಹರಿಃ ॥೨೨॥**

ಸಾಧಕನು ಗುರುವನ್ನು ತನಗೆ ಅತ್ಯಂತ ಪ್ರಿಯವಾದ ಆತ್ಮನೇ–ಎಂದೂ ತನ್ನ ಇಷ್ಟದೇವತೆಯೆಂದೂ ಭಾವಿಸಬೇಕು. ಆತನನ್ನು ನಿಷ್ಕಾಪಟ್ಯಭಾವದಿಂದ ಸೇವಿಸುತ್ತಾ ಅವನ ಬಳಿಯಲ್ಲೇ ಇದ್ದುಕೊಂಡು ಭಾಗವತಧರ್ಮವನ್ನೂ, ಭಗವಂತನನ್ನು ಹೊಂದಲು ಸಾಧ್ಯವಾಗುವ ಭಕ್ತಿ-ಜ್ಞಾನ-ವೈರಾಗ್ಯ ಮಾರ್ಗಗಳನ್ನೂ ತಿಳಿದುಕೊಳ್ಳಬೇಕು. ಇಂತಹ ಸಾಧನೆಗಳಿಂದ ಸರ್ವಾತ್ಮನಾದ, ಭಕ್ತರಿಗೆ ತನ್ನನ್ನೇ ಕೊಟ್ಟುಕೊಳ್ಳುವ, ದಯಾಮಯನಾದ ಭಗವಂತನು ಪ್ರಸನ್ನನಾಗುತ್ತಾನೆ.

**ಸರ್ವತೋ ಮನಸೋऽಸಙ್ಗಮಾದೌ ಸಙ್ಗಂ ಚ ಸಾಧುಷು ।**
**ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ**
**ಯಥೋಚಿತಮ್ ॥೨೩॥**

ಸದ್ಗುರುವಿನ ಮೂಲಕವಾಗಿ ಮೊದಲು ದೇಹ-ಗಾಹೇದಿಗಳಲ್ಲಿ ಅನಾಸಕ್ತಿಯನ್ನು ಕಲಿಯಬೇಕು. ಅನಂತರ ಭಗವಂತನ ಭಕ್ತರನ್ನು ಹೇಗೆ ಪ್ರೀತಿಸಬೇಕೆಂಬುದನ್ನು ತಿಳಿದುಕೊಳ್ಳಬೇಕು. ಸತ್ಪುರುಷರ ಸಹವಾಸವನ್ನು ಮಾಡಬೇಕು. ದೀನರಲ್ಲಿ ದಯಾಪರನಾಗಿರಬೇಕು. ಸತ್ಪುರುಷರಲ್ಲಿ ಮೈತ್ರಿ

---

ಆಗಿರಬೇಕು. ಇಲ್ಲದೇ ಇದ್ದರೆ ಆತನು ಜ್ಞಾನದಲ್ಲಿ ಸಂಚರಿಸಲು ಸಾಧ್ಯವಾಗುವು ದಿಲ್ಲ. ಆತನು ಪರಬ್ರಹ್ಮದಲ್ಲಿ ನಿಷ್ಣಾತನಾಗಿರುವುದಕ್ಕೆ ಲಕ್ಷಣವೇನೆಂದರೆ ಆತನು ಪ್ರಶಾಂತಿಗೆ ಆಶ್ರಯನಾಗಿರುವುದು. (ಶ್ರೀಧರೀಯ)

ಶ್ರೀಗುರುವಿಗೆ ಆಗಮಜನ್ಯಜ್ಞಾನವೂ ಇರಬೇಕು. ಯೋಗಾನುಭವಜ್ಞಾನವೂ ಇರಬೇಕು. ಇಲ್ಲದಿದ್ದರೆ ಶಿಷ್ಯನು “**ಭಿನ್ನನಾವಾಶ್ರಿತಃ ಸ್ತಬ್ಧಃ ಯಥಾಪಾರಂ ನ ಗಚ್ಛತಿ ।ಜ್ಞಾನಹೀನಂ ಗುರುಂ ಪ್ರಾಪ್ಯ ನಾತೋ ಮೋಕ್ಷಮವಾಪ್ನುಯಾತ್ ॥** ಎಂಬಂತೆ–ಒಡಕಲ ಹಡಗನ್ನು ಹತ್ತಿದ ಮೂರ್ಖನೂ ಅಹಂಕಾರಿಯೂ ಆದ ಹಡಗು ಪ್ರಯಾಣಿಕನಂತೆ ಆಗುತ್ತಾನೆ. ಜ್ಞಾನಹೀನನಾದ ಗುರುವನ್ನು ಆಶ್ರಯಿಸಿದ ಶಿಷ್ಯನು ದಡವನ್ನು ಮುಟ್ಟಲಾರನು. ಗುರುವು ರಾಗ-ದ್ವೇಷರಹಿತನೂ ಆಗಿರಬೇಕು.

‘ಶ್ರೋತ್ರಿಯಂ ಬ್ರಹ್ಮನಿಷ್ಠಂ’–ಎಂಬ ಗುರುಲಕ್ಷಣವೂ ಇಲ್ಲಿ ಸೂಚಿತವಾಗಿದೆ.

(ವೀರರಾಘವೀಯ)

ಯಿಂದಿರಬೇಕು. ಗುರುಜನರಲ್ಲಿ ವಿನಯದಿಂದ ವರ್ತಿಸಬೇಕು. ಇಂತಹ ಗುಣಗಳನ್ನು ಗುರುವಿನ ಅನುಗ್ರಹದಿಂದ ಮೈಗೂಡಿಸಿಕೊಳ್ಳಬೇಕು.

**ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾಂ ಚ ಸಮತ್ವಂ ದ್ವನ್ದ್ವಸಂಜ್ಞಯೋಃ ॥೨೪॥**

ಮೃತ್ತಿಕೆ-ನೀರು ಮುಂತಾದುವುಗಳಿಂದ ಶರೀರದ ಹೊರಭಾಗವನ್ನು ಶುದ್ಧಿಗೊಳಿಸಿಕೊಳ್ಳಬೇಕು. ನಿಷ್ಕಾಪಟ್ಯ, ಅನಸೂಯೆ–ಇವುಗಳಿಂದ ಅಂತಶ್ಶುದ್ಧಿಯನ್ನು ಮಾಡಿಕೊಳ್ಳಬೇಕು. ಸ್ವಧರ್ಮಾನುಷ್ಠಾನವನ್ನು ಮಾಡಬೇಕು. ಕ್ಷಮಾಶೀಲನಾಗಿರಬೇಕು. ಮೌನಿಯಾಗಿರಬೇಕು. ಕೆಲಸಕ್ಕೆ ಬಾರದ, ಭಗವಂತನಿಗೆ ಸಂಬಂಧಿಸದ ಮಾತುಗಳನ್ನು ಆಡಲೇಬಾರದು. ವೇದಾಧ್ಯಯನ ವನ್ನು ಮಾಡಬೇಕು. ನೇರ್ಮೆಯಿಂದಿರಬೇಕು. ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಬೇಕು. ಮಾತಿನಿಂದಾಗಲೀ ಕರ್ಮದಿಂದಾಗಲೀ ಯಾರಿಗೂ ಹಿಂಸೆಮಾಡಬಾರದು. ದ್ವಂದ್ವಗಳೆಂಬ ಸಂಜ್ಞೆಯಿಂದ ಕರೆಯ ಲ್ಪಡುವ ಶಿತೋಷ್ಣಾದಿಗಳನ್ನೂ, ಸುಖ-ದುಃಖಗಳನ್ನೂ, ಲಾಭಾಲಾಭ ಗಳನ್ನೂ, ಮಾನಾಪಮಾನಗಳನ್ನೂ, ನಿಂದಾ-ಸ್ತುತಿಗಳನ್ನೂ ಸಮವಾಗಿ ಕಾಣುವುದನ್ನು ಅಭ್ಯಸಿಸಬೇಕು.

**ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಮನಿಕೇತತಾಮ್ ।**
**ವಿವಿಕ್ತಚೀರವಸನಂ ಸನ್ತೋಷಂ ಯೇನ ಕೇನಚಿತ್ ॥೨೫॥**

ಎಲ್ಲ ಕಡೆಗಳಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ಚೇತನರೂಪದಲ್ಲಿ ಆತ್ಮನಿದ್ದಾನೆಂದೂ ನಿಯಂತೃವಿನ ರೂಪದಲ್ಲಿ ಈಶ್ವರನಿದ್ದಾನೆಂದೂ ತಿಳಿದು ಕೊಳ್ಳಬೇಕು. ಗೃಹೈಶ್ವರ್ಯಾದಿಗಳಲ್ಲಿ ತನ್ನದೆಂಬ ಅಭಿಮಾನವನ್ನೂ ಪತ್ನೀ-ಪುತ್ರರಲ್ಲಿ ತನ್ನವರೆಂಬ ಮಮತೆಯನ್ನೂ ಬಿಡಬೇಕು. ಏಕಾಕಿಯಾಗಿರಬೇಕು. ನಾರುಮಡಿಯನ್ನುಡಬೇಕು. ಯಾವುದಾದರೂ ಕಡೆಯಿಂದ ದೈವದತ್ತವಾಗಿ ಸಿಕ್ಕದ ಆಹಾರದಿಂದಲೇ ಸಂತೋಷಿಸಬೇಕು.

**ಶ್ರದ್ಧಾಂ ಭಾಗವತೇ ಶಾಸ್ತ್ರೇಽನಿನ್ದಾಮನ್ಯತ್ರ ಚಾಪಿ ಹಿ ।**
**ಮನೋವಾಕ್ಕರ್ಮದಣ್ಡಂ ಚ ಸತ್ಯಂ ಶಮದಮಾವಪಿ ॥೨೬॥**

ಭಗವಂತನನ್ನು ಹೊಂದುವ ಮಾರ್ಗವನ್ನು ಸೂಚಿಸುವ ಶಾಸ್ತ್ರಗಳಲ್ಲಿ

ಅಪಾರವಾದ ಶ್ರದ್ಧೆಯನ್ನಿಡಬೇಕು. ಬೇರೆ ಯಾವುದೇ ಶಾಸ್ತ್ರವನ್ನಾದರೂ ನಿಂದಿಸಬಾರದು. ಪ್ರಾಣಾಯಾಮದಿಂದ ಮನಸ್ಸನ್ನೂ, ಮೌನದಿಂದ ಮಾತನ್ನೂ, ವೈರಾಗ್ಯದಿಂದ ಕರ್ಮಗಳನ್ನೂ ನಿಗ್ರಹಿಸಬೇಕು. ಇದ್ದುದನ್ನು ಇದ್ದಂತೆಯೇ ಹೇಳಬೇಕು. ಅಂತರಿಂದ್ರಿಯ-ಬಹಿರಿಂದ್ರಿಯಗಳನ್ನು ನಿಗ್ರಹಿಸಬೇಕು.*

**ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತಕರ್ಮಣಃ ।**
**ಜನ್ಮಕರ್ಮಗುಣಾನಾಂ ಚ ತದರ್ಥೇಽಖಿಲಚೇಷ್ಟಿತಮ್ ॥೨೭॥**

ಅದ್ಭುತಕರ್ಮನಾದ ಪರಮಾತ್ಮನ ದಿವ್ಯವಾದ ಹುಟ್ಟು-ಕಾರ್ಯ ಮತ್ತು ಗುಣಗಳನ್ನು ಕೇಳಬೇಕು, ಹಾಡಬೇಕು ಮತ್ತು ಅವನನ್ನೇ ಸದಾಕಾಲದಲ್ಲಿಯೂ ಧ್ಯಾನಿಸುತ್ತಿರಬೇಕು. ತಾನು ಮಾಡುವ ಸಮಸ್ತ ಕರ್ಮಗಳನ್ನೂ ಅವನಿಗೇ ಸಮರ್ಪಿಸಿಬಿಡಬೇಕು.

**ಇಷ್ಟಂ ದತ್ತಂ ತಪೋ ಜಪ್ತಂ ವೃತ್ತಂ ಯಚ್ಚಾತ್ಮನಃ ಪ್ರಿಯಮ್ ।**
**ದಾರಾನ್ಸುತಾನ್ ಗೃಹಾನ್ ಪ್ರಾಣಾನ್ಯತ್ಪರಸ್ಮೈ ನಿವೇದನಮ್ ॥೨೮॥**

ತಾನು ಮಾಡುವ ಯಜ್ಞ, ದಾನ, ಜಪ-ತಪಾದಿಗಳು, ಸದಾಚಾರ ಇವೇ ಮೊದಲಾದ ಶುಭಕರ್ಮಗಳನ್ನೂ ತನ್ನವರೆನಿಸಿಕೊಂಡ ಪತ್ನೀ-ಪುತ್ರ-ಬಂಧುಗಳನ್ನೂ ತನ್ನದೆನಿಸಿಕೊಂಡ ಮನೆ, ಮಠ, ಐಶ್ವರ್ಯಾದಿಗಳು ಎಲ್ಲಕ್ಕಿಂತಲೂ ಹೆಚ್ಚು ಪ್ರಿಯವಾದ ತನ್ನ ಪ್ರಾಣ—ಈ ಎಲ್ಲವನ್ನೂ ಸರ್ವೇಶ್ವರನಾದ ಪರಮಾತ್ಮನ ಪಾದಾರವಿಂದಗಳಲ್ಲಿ ಸಮರ್ಪಿಸಬೇಕು. ತನಗೆ ಪ್ರಿಯವಾದ ಯಾವುದೇ ವಸ್ತುವನ್ನಾದರೂ ಪರಮಾತ್ಮನಿಗೆ ಸಮರ್ಪಿಸಬೇಕು. ಇದನ್ನೇ ಸತತವಾಗಿ ಅಭ್ಯಾಸಮಾಡಬೇಕು.

**ಏವಂ ಕೃಷ್ಣಾತ್ಮನಾಥೇಷು ಮನುಷ್ಯೇಷು ಚ ಸೌಹೃದಮ್ ।**
**ಪರಿಚರ್ಯಾಂ ಚೋಭಯತ್ರ ಮಹತ್ಸು ನೃಷು ಸಾಧುಷು ॥೨೯॥**

ಯಾವ ಸತ್ಪುರುಷರು ಸಚ್ಚಿದಾನಂದಪರಬ್ರಹ್ಮಸ್ವರೂಪನಾದ ಶ್ರೀಕೃಷ್ಣನನ್ನೇ ತಮ್ಮ ಆತ್ಮನೆಂದೂ ತಮ್ಮ ಒಡೆಯನೆಂದೂ ಭಾವಿಸಿ

---

* 'ನಿನ್ದಾಂ'—ಎಂದು ಪದವಿಭಾಗಮಾಡಿ ನಾಸ್ತಿಕಮತಗಳನ್ನು ಖಂಡಿಸಬೇಕು—ಎಂದೂ ಅರ್ಥಹೇಳುವುದುಂಟು.

ಕೊಂಡಿರುವರೋ ಅಂತಹವರ ಸ್ನೇಹವನ್ನು ಮಾಡಬೇಕು. ಭಗವಂತನ ಮತ್ತು ಭಾಗವತರ ಸೇವೆಯನ್ನು ಮಾಡಬೇಕು. ಮಹಾತ್ಮರಾದ ಮತ್ತು ಸಾಧು-ಸತ್ಪುರುಷರ ಸೇವೆಮಾಡುವುದನ್ನು ಕಲಿಯಬೇಕು.

**ಪರಸ್ಪರಾನುಕಥನಂ ಪಾವನಂ ಭಗವದ್ಯಶಃ ।**
**ಮಿಥೋ ರತಿರ್ಮಿಥಸ್ತುಷ್ಟಿರ್ನಿವೃತ್ತಿರ್ಮಿಥ ಆತ್ಮನಃ ॥೩೦॥**

ಭಗವಂತನ ಪರಮಪಾವನವಾದ ಯಶಸ್ಸಿಗೆ ಸಂಬಂಧಿಸಿದಂತೆ ಪರಸ್ಪರ ಮಾತು-ಕತೆಗಳನ್ನಾಡಬೇಕು. ಭಗವಂತನ ಗುಣಗಾನವನ್ನು ಬಿಟ್ಟು ಬೇರೆ ಯಾವುದೇ ವ್ಯರ್ಥವಾದ ಮಾತುಗಳನ್ನೂ ಇತರರೊಡನೆ ಆಡಬಾರದು. ಭಗವದ್ಭಕ್ತರೊಡನೆ ಕಲೆಯುವುದು, ಅವರೊಡನೆ ಭಗವಂತನ ಲೀಲಾವಿನೋದಗಳನ್ನು ಹೇಳಿಕೊಂಡು ಸಂತೋಷಪಡುವುದು, ಭಗವಂತನ ಗುಣಗಾನಗಳಲ್ಲಿಯೇ ಮಗ್ನನಾಗಿ ಪ್ರಾಪಂಚಿಕವಾದ ವಿಷಯಗಳಿಂದ ನಿವೃತ್ತಿ ಹೊಂದುವುದು–ಇವುಗಳನ್ನು ಅಭ್ಯಾಸಮಾಡಬೇಕು.

**ಸ್ಮರನ್ತಃ ಸ್ಮಾರಯನ್ತಶ್ಚ ಮಿಥೋಽಘೌಘಹರಂ ಹರಿಮ್ ।**
**ಭಕ್ತ್ಯಾ ಸಂಜಾತಯಾ ಭಕ್ತ್ಯಾ ಬಿಭ್ರತ್ಯುತ್ಪುಲಕಾಂ ತನುಮ್ ॥೩೧॥**

ಪಾಪಗಳ ರಾಶಿಯನ್ನೇ ಕ್ಷಣಮಾತ್ರದಲ್ಲಿ ವಿನಾಶಗೊಳಿಸುವ ಶ್ರೀಕೃಷ್ಣನ ಲೀಲಾಪ್ರಸಂಗಗಳನ್ನು ಪುನಃ-ಪುನಃ ಸ್ಮರಿಸುತ್ತಿರಬೇಕು. ಬೇರೆಯವರಿಗೂ ಜ್ಞಾಪಿಸಿಕೊಡುತ್ತಿರಬೇಕು. ಈ ಪ್ರಕಾರವಾಗಿ ಸಾಧನ ಭಕ್ತಿಯನ್ನು ಅಭ್ಯಾಸಮಾಡುತ್ತಿದ್ದರೆ ಪ್ರೇಮಭಕ್ತಿಯುಂಟಾಗಿ ಪ್ರೇಮೋದ್ರೇಕದಿಂದ ಭಾಗವತನು ಪುಳಕಿತನಾಗುತ್ತಾನೆ. ಆನಂದತುಂದಿಲನಾಗುತ್ತಾನೆ.

**ಕ್ವಚಿದ್ರುದನ್ತ್ಯಚ್ಯುತಚಿನ್ತಯಾ ಕ್ವಚಿ-**
**ದ್ಧಸನ್ತಿ ನನ್ದನ್ತಿ ವದನ್ತ್ಯಲೌಕಿಕಾಃ ।**
**ನೃತ್ಯನ್ತಿ ಗಾಯನ್ತ್ಯನುಶೀಲಯನ್ತ್ಯಜಂ**
**ಭವನ್ತಿ ತೂಷ್ಣೀಂ ಪರಮೇತ್ಯ ನಿರ್ವೃತಾಃ ॥೩೨॥**

ಭಗವದ್ಭಕ್ತಿಯಿಂದ ಪುಳಕಿತರಾದ ಭಕ್ತೋತ್ತಮರು ಅಲೌಕಿಕವಾಗಿ

ನಡೆದುಕೊಳ್ಳುತ್ತಾರೆ. ಲೋಕದ ಜನರಿಗೆ ಅವರ ವರ್ತನೆಯು ಅಲೌಕಿಕವಾಗಿ ಕಾಣುತ್ತದೆ. ಅಚ್ಯುತನ ಚಿಂತನೆಯಲ್ಲಿಯೇ ಸದಾಮಗ್ನರಾಗಿರುವ ಆ ಭಾಗವತರು ಹೃನ್ಮಂದಿರದಲ್ಲಿ ಅವನ ರೂಪವನ್ನು ಕಾಣದೆ ವಿರಹದಿಂದ ಗಳ-ಗಳನೆ ಅತ್ತುಬಿಡುತ್ತಾರೆ. ಮತ್ತೊಂದುಕ್ಷಣದಲ್ಲಿಯೇ ಭಗವಂತನ ಶ್ರೀವಿಗ್ರಹವನ್ನು ಕಂಡುಕೊಂಡು ಪಕ-ಪಕನೆ ನಗುತ್ತಾರೆ ; ಸಂತೋಷಿಸುತ್ತಾರೆ. ಭಗವಂತನೊಡನೆ ಮಾತನಾಡುತ್ತಾರೆ. ಇದು ಬೇರೆಯವರಿಗೆ ಅಸಹಜವಾಗಿ ಕಾಣುತ್ತದೆ. ಭಗವಂತನನ್ನು ಚಿತ್ತಪಥದಲ್ಲಿ ಕಂಡು ಕುಣಿದಾಡುತ್ತಾರೆ. ಅವನ ಲೀಲಾಪ್ರಸಂಗಗಳನ್ನು ನೆನೆಸಿಕೊಂಡು ಸುಮಧುರವಾಗಿ ಹಾಡುತ್ತಾರೆ. ಭಗವಂತನ ಹಾವಭಾವಗಳನ್ನೇ ಅನುಕರಿಸುತ್ತಾರೆ. ಒಮ್ಮೆ ಮನಸ್ಸನ್ನು ಪರಮಾತ್ಮನ ಚರಣಾರವಿಂದಗಳಲ್ಲಿ ಲೀನಗೊಳಿಸಿ ಆನಂದಪರವಶರಾಗಿ ಮೌನಿಗಳಾಗುತ್ತಾರೆ. ಹೀಗೆ ಪ್ರೇಮೀಭಕ್ತರು ಹಲವಾರು ರೀತಿಗಳಲ್ಲಿ ಪರಮಾತ್ಮನ ಧ್ಯಾನವನ್ನೇ ಮಾಡುತ್ತಾ ಕಟ್ಟಕಡೆಗೆ ಅವನಲ್ಲಿಯೇ ಸೇರಿಹೋಗುತ್ತಾರೆ. ಭಗವಂತನ ಮಾಯೆಯಿಂದ ಮುಕ್ತರಾಗುತ್ತಾರೆ.

ಪರೀಕ್ಷಿತಮಹಾರಾಜ! ಹೀಗೆ ಮನುಷ್ಯನು ಭಾಗವತಧರ್ಮಗಳನ್ನು ಕಲಿತು ಇಂತಹ ಶ್ರೇಷ್ಠವಾದ ಧರ್ಮದ ನಿರಂತರವಾದ ಆಚರಣೆಯಿಂದ ಭಕ್ತಿಭಾವವನ್ನು ಹೊಂದಿ ನಾರಾಯಣಪರಾಯಣನಾಗಿ ದಾಟಲು ಅಶಕ್ಯವಾದ ವಿಷ್ಣುಮಾಯೆಯನ್ನು ಬಹಳ ಸುಲಭವಾಗಿ ದಾಟುತ್ತಾನೆ."

ಪುನಃ ರಾಜನು ಪ್ರಶ್ನಿಸುತ್ತಾನೆ :

**ನಾರಾಯಣಾಭಿಧಾನಸ್ಯ ಬ್ರಹ್ಮಣಃ ಪರಮಾತ್ಮನಃ ।**
**ನಿಷ್ಠಾಮರ್ಹಥ ನೋ ವಕ್ತುಂ ಯೂಯಂ ಹಿ ಬ್ರಹ್ಮವಿತ್ತಮಾಃ ॥೩೪॥**

"ಮುನಿಗಳೇ! ನೀವು ಬ್ರಹ್ಮವಿದರಲ್ಲಿ ಶ್ರೇಷ್ಠರಾಗಿರುವಿರಿ. 'ನಾರಾಯಣ'–ಎಂಬ ಶುಭನಾಮದಿಂದ ಕರೆಯಲ್ಪಡುವ ಪರಬ್ರಹ್ಮ ಪರಮಾತ್ಮನ ನಿಜಸ್ವರೂಪವನ್ನು ವರ್ಣಿಸಿಹೇಳಿರಿ."

ಐದನೆಯ ಅವಧೂತಶ್ರೇಷ್ಠರಾದ ಪಿಪ್ಪಲಾಯನರು ಹೇಳುತ್ತಾರೆ :

**ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ**
**ಯತ್ ಸ್ವಪ್ನಜಾಗರಸುಷುಪ್ತಿಷು ಸದ್ಬಹಿಶ್ಚ ।**
**ದೇಹೇನ್ದ್ರಿಯಾಸುಹೃದಯಾನಿ ಚರನ್ತಿ ಯೇನ**
**ಸಂಜೀವಿತಾನಿ ತದವೇಹಿ ಪರಂ ನರೇನ್ದ್ರ ॥೩೫॥**

"ರಾಜೇಂದ್ರ! ಯಾವನು ಈ ಪ್ರಪಂಚದ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ನಿಮಿತ್ತಕಾರಣನೂ ಮತ್ತು ಉಪಾದಾನಕಾರಣನೂ ಆಗಿರುವನೋ, ಕರ್ತೃವೂ-ಕಾರಣನೂ ಆಗಿದ್ದರೂ ತಾನು ಕಾರಣದಿಂದ ರಹಿತನಾಗಿರುವನೋ ಸ್ವಪ್ನ-ಜಾಗ್ರತ್-ಸುಷುಪ್ತಿ-ಸಮಾಧಿಸ್ಥಿತಿಗಳಲ್ಲಿ ಯಾವನು ಸಮಾನನಾಗಿರುವನೋ, ಸಾಕ್ಷೀಭೂತನಾಗಿರುವನೋ ದೇಹೇಂದ್ರಿಯ-ಪ್ರಾಣ-ಮನಸ್ಸುಗಳು ಯಾವನಿಂದ ಚೈತನ್ಯವನ್ನು ಪಡೆದು ತಮ್ಮ-ತಮ್ಮ ಕಾರ್ಯಗಳನ್ನು ನಿರ್ವಹಿಸುವುವೋ ಅವನನ್ನೇ ನೀನು ಪರಬ್ರಹ್ಮಪರಮಾತ್ಮನಾದ ನಾರಾಯಣನೆಂದು ತಿಳಿ.

**ನೈತನ್ಮನೋ ವಿಶತಿ ವಾಗುತ ಚಕ್ಷುರಾತ್ಮಾ**
**ಪ್ರಾಣೇನ್ದ್ರಿಯಾಣಿ ಚ ಯಥಾನಲಮರ್ಚಿಷಃ ಸ್ವಾಃ ।**
**ಶಬ್ದೋಽಪಿ ಬೋಧಕನಿಷೇಧತಯಾಽತ್ಮಮೂಲ-**
**ಮರ್ಥೋಕ್ತಮಾಹ ಯದೃತೇ ನ ನಿಷೇಧಸಿದ್ಧಿಃ ॥೩೬॥**

ಅಗ್ನಿಯಿಂದ ಚಿಮ್ಮಿದ ಕಿಡಿಗಳು ಅಗ್ನಿಯನ್ನು ಪ್ರಕಾಶಗೊಳಿಸಲಾರವು. ಅಂತೆಯೇ ಆತ್ಮನಿಂದಲೇ ಸತ್ತಾಸ್ಫೂರ್ತಿಯನ್ನು ಪಡೆದು ಮನಸ್ಸು-ವಾಕ್ಕು-ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪ್ರಾಣಗಳು, ಬುದ್ಧಿ–ಇವುಗಳು ಆತ್ಮನನ್ನು ಪ್ರಕಾಶಗೊಳಿಸಲಾರವು. ಆತ್ಮಸ್ವರೂಪದ ಪ್ರತಿಪಾದನೆಯಲ್ಲಿ ಪರಮಪ್ರಮಾಣವೆನಿಸಿದ ವೇದಗಳು ಕೂಡ-ನೇತಿ-ನೇತಿ ಇದಲ್ಲ, ಅದಲ್ಲ, ಅಸ್ಥೂಲ, ಅನಣು, ಅಗ್ರಾಹ್ಯ, ಸ್ಥೂಲವಲ್ಲ, ಅಣುವೂ ಅಲ್ಲ, ಗ್ರಹಿಸತಕ್ಕದ್ದೂ ಅಲ್ಲ–ಮುಂತಾಗಿ ನಿಷೇಧರೂಪವಾಗಿ ಬ್ರಹ್ಮವಸ್ತುವನ್ನು ಬೋಧಿಸುತ್ತವೆ. ಬ್ರಹ್ಮವಸ್ತುವಿಲ್ಲದೆ ನಿಷೇಧವು ಸಿದ್ಧಿಸುವುದಿಲ್ಲ. ಆದುದರಿಂದ ವೇದಗಳು ಬ್ರಹ್ಮವಸ್ತುವನ್ನು ಪರ್ಯಾಯವಾಗಿ ಪ್ರತಿಪಾದಿಸುತ್ತವೆಯೇ ಹೊರತು ಅದನ್ನು ಪ್ರಕಾಶಗೊಳಿಸುವ ಸಾಮರ್ಥ್ಯ ವೇದಗಳಿಗೂ ಇಲ್ಲ.

'ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।' ಆದುದರಿಂದ ಬ್ರಹ್ಮವಸ್ತುವಿನಿಂದ ಸತ್ತಾಸ್ಫೂರ್ತಿಯನ್ನು ಪಡೆದ ಯಾವುದೇ ವಸ್ತುಗಳು ಕೂಡ ಆತ್ಮನನ್ನು ಪ್ರಕಾಶಗೊಳಿಸಲಾರವು.

ಸತ್ತ್ವಂ ರಜಸ್ತಮ ಇತಿ ತ್ರಿವೃದೇಕಮಾದೌ
ಸೂತ್ರಂ ಮಹಾನಹಮಿತಿ ಪ್ರವದನ್ತಿ ಜೀವಮ್ ।
ಜ್ಞಾನಕ್ರಿಯಾರ್ಥಫಲರೂಪತಯೋರುಶಕ್ತಿ
ಬ್ರಹ್ಮೈವ ಭಾತಿ ಸದಸಚ್ಚ ತಯೋಃ ಪರಂ ಯತ್ ॥೩೭॥

ಸೃಷ್ಟಿಗೆ ಮೊದಲು ಏಕಮೇವಾದ್ವೈತವೆನಿಸಿದ ಬ್ರಹ್ಮವಸ್ತುವಿದ್ದಿತು. ಇದೇ ಬ್ರಹ್ಮವಸ್ತುವೇ ಮಹತ್ತರವಾದ ಮಾಯಾಶಕ್ತಿಯನ್ನು ಅಧಿಕರಿಸಿ ಸತ್ತ್ವ-ರಜಸ್ತಮೋಗುಣಗಳೊಡನೆ ಸೇರಿ ಪ್ರಧಾನವೆಂಬ ಹೆಸರನ್ನು ಪಡೆದು ಕೊಂಡಿತು. ಹಾಗೆ ಪ್ರಧಾನವೆನಿಸಿಕೊಂಡ ಬ್ರಹ್ಮವಸ್ತುವು ಕ್ರಿಯಾಶಕ್ತಿಯ ಅವಿರ್ಭಾವದಿಂದ ಸೂತ್ರಾತ್ಮಾ ಅಥವಾ ಹಿರಣ್ಯಗರ್ಭ–ಎಂಬ ಹೆಸರನ್ನು ಪಡೆಯಿತು.

ಜ್ಞಾನಶಕ್ತಿಯ ಆವಿರ್ಭಾವದಿಂದ ಮಹತ್ತತ್ತ್ವವೆಂಬ ಹೆಸರನ್ನು ಪಡೆಯಿತು. ಅನಂತರ ಅದು ಅಹಂಕಾರವಾಗಿ ಪರಿಣಮಿಸಿ ಅಹಂಕಾರಕ್ಕೆ ಅಧಿಷ್ಠಾನವಾದ ಜೀವವಾಗಿ ಪರಿಣಮಿಸಿತು. ಬಳಿಕ ಅದೇ ಬ್ರಹ್ಮವಸ್ತುವೇ ದೇವತಾರೂಪದಿಂದಲೂ, ಇಂದ್ರಿಯರೂಪದಿಂದಲೂ, ವಿಷಯರೂಪ ದಿಂದಲೂ ಸುಖಾದಿರೂಪದಿಂದಲೂ ಹಲವು ಬಗೆಯಾಗಿ ಕಾಣಿಸತೊಡ ಗಿತು. ಇವೆಲ್ಲವೂ ಬ್ರಹ್ಮವಸ್ತುವಿನ ಅನಂತರೂಪಗಳೇ ಆಗಿವೆ. ಬ್ರಹ್ಮವಸ್ತುವಿನ ಶಕ್ತಿಯು ಅನಂತವಾದುದು. ದೃಶ್ಯ, ಅದೃಶ್ಯ, ಕಾರ್ಯ-ಕಾರಣ, ಸತ್ಯ- ಅಸತ್ಯ ಎಲ್ಲವೂ ಬ್ರಹ್ಮವೇ ಆಗಿದೆ. ಇವುಗಳಿಗಿಂತ ಬೇರೆಯಾಗಿ ಯಾವುದೇ ಇದ್ದರೂ ಅದೂ ಕೂಡ ಬ್ರಹ್ಮವಸ್ತುವೇ ಆಗಿದೆ.

ನಾತ್ಮಾ ಜಜಾನ ನ ಮರಿಷ್ಯತಿ ನೈಧತೇಽಸೌ
ನ ಕ್ಷೀಯತೇ ಸವನವಿದ್ವ್ಯಭಿಚಾರಿಣಾಂ ಹಿ ।
ಸರ್ವತ್ರ ಶಶ್ವದನಪಾಯ್ಯುಪಲಬ್ಧಿಮಾತ್ರಂ
ಪ್ರಾಣೋ ಯಥೇನ್ದ್ರಿಯಬಲೇನ ವಿಕಲ್ಪಿತಂ ಸತ್ ॥

ಕಾರ್ಯಪ್ರಪಂಚಕ್ಕೆ ಹುಟ್ಟು-ಸಾವು ಇವೇ ಮೊದಲಾದ ವಿಕಾರಗಳಿರುವಂತೆ–ಕಾರ್ಯಪ್ರಪಂಚಕ್ಕೆ ಕಾರಣವಾದ ಬ್ರಹ್ಮಕ್ಕೂ ಇಂತಹ ವಿಕಾರಗಳಿವೆಯೆಂದು ಭಾವಿಸಬಾರದು. ಬ್ರಹ್ಮವಸ್ತುವಿಗೆ ಹುಟ್ಟೂ ಇಲ್ಲ ; ಸಾವೂ ಇಲ್ಲ. ಅದು ಬೆಳೆಯುವುದೂ ಇಲ್ಲ ; ಕ್ಷಯಿಸುವುದೂ ಇಲ್ಲ. ವ್ಯಭಿಚಾರಿಗಳ (ಅನಿತ್ಯವಾದ ಪ್ರಾಣಿಗಳ) ಕಾಲವನ್ನು ತಿಳಿದಿರತಕ್ಕುದು. ಎಲ್ಲೆಡೆಯಲ್ಲಿಯೂ ಯಾವಾಗಲೂ ನಾಶವಿಲ್ಲದೇ ಇರತಕ್ಕುದು. ಅನುಭವೈಕವೇದ್ಯವಾದುದು. ಯಾವ ರೀತಿಯಲ್ಲಿ ಪ್ರಾಣವು ಒಂದೇ ಆಗಿದ್ದು ಸ್ಥಾನಭೇದದಿಂದ ಹಲವಾರು ಹೆಸರುಗಳಿಂದ ಕರೆಯಲ್ಪಡುತ್ತದೆಯೋ ಅದೇ ರೀತಿಯಲ್ಲಿ ಬ್ರಹ್ಮಜ್ಞಾನವು ಒಂದೇ ಆಗಿದ್ದರೂ ಇಂದ್ರಿಯಗಳ ಸಹಯೋಗದ ಕಾರಣದಿಂದ ಜ್ಞಾನವೂ ಕೂಡ ಅನೇಕ ಪ್ರಕಾರವಾಗಿರುವುದೆಂಬ ಕಲ್ಪನೆಯುಂಟಾಗುತ್ತದೆ.

**ಅಣ್ಡೇಷು ಪೇಶಿಷು ತರುಷ್ವವಿನಿಶ್ಚಿತೇಷು**
**ಪ್ರಾಣೋ ಹಿ ಜೀವಮುಪಧಾವತಿ ತತ್ರ ತತ್ರ ।**
**ಸನ್ನೇ ಯದಿನ್ದ್ರಿಯಗಣೇಽಹಮಿ ಚ ಪ್ರಸುಪ್ತೇ**
**ಕೂಟಸ್ಥ ಆಶಯಮೃತೇ ತದನುಸ್ಮೃತಿರ್ನಃ ॥೩೯॥**

ಪ್ರಪಂಚದಲ್ಲಿ ನಾಲ್ಕು ವಿಧವಾದ ಪ್ರಾಣಿಗಳಿವೆ. ಮೊಟ್ಟೆಯೊಡೆದು ಹೊರಬರುವ ಪಕ್ಷಿಗಳು ಮತ್ತು ಸರ್ಪಗಳು ಅಂಡಜಗಳು. ಗರ್ಭಾಶಯದಿಂದ ಹುಟ್ಟುವ ಮನುಷ್ಯರು ಮತ್ತು ಪಶುಗಳು ಜರಾಯುಜಪ್ರಾಣಿಗಳು. ಶಾಖದಿಂದ ಅಥವಾ ಬೆವರಿನಿಂದ ಹುಟ್ಟುವ ಹುಳು, ನೊಣ ಮುಂತಾದುವು ಸ್ವೇದಜಗಳು, ಭೂಮಿಯನ್ನು ಭೇದಿಸಿಕೊಂಡು ಹುಟ್ಟುವ ಮರ-ಗಿಡ-ಬಳ್ಳಿಗಳು ಉದ್ಭಿಜ್ಜಗಳು. ನಾಲ್ಕು ವಿಧವಾದ ಈ ಎಲ್ಲ ಶರೀರಗಳಲ್ಲಿಯೂ ಪ್ರಾಣಶಕ್ತಿಯು ಜೀವನನ್ನು ಅನುಸರಿಸಿಕೊಂಡೇ ಹೋಗುತ್ತಿರುತ್ತದೆ. ಶರೀರಗಳು ಭಿನ್ನ-ಭಿನ್ನವಾಗಿದ್ದರೂ ಪ್ರಾಣವೆಂಬುದು ಒಂದೇ ಆಗಿರುತ್ತದೆ. ಸುಷುಪ್ತ್ಯವಸ್ಥೆ* ಯಲ್ಲಿ ಇಂದ್ರಿಯಗಳು ನಿಶ್ಚೇಷ್ಟವಾದಾಗ ಅಹಂಕಾರವು

---

* ಸುಷುಪ್ತ್ಯವಸ್ಥೆಯನ್ನು ಬೃಹದಾರಣ್ಯಕವು ಹೀಗೆ ವರ್ಣಿಸುತ್ತದೆ :
ಯತ್ರಸುಪ್ತೋ ನ ಕಂಚನ ಕಾಮಂ ಕಾಮಯತೇ ।
ನ ಕಂಚನ ಸ್ವಪ್ನಂ ಪಶ್ಯತಿ ತತ್ಸುಷುಪ್ತಮ್ ॥

ಕೂಡ ಮಲಗಿಬಿಟ್ಟಿರುವಾಗ (ಲೀನವಾಗಿ ಹೋಗಿರುವಾಗ), ಶರೀರವೇ ಇಲ್ಲವೆಂಬ ಸ್ಥಿತಿಯುಂಟಾದಾಗ, ಕೂಟಸ್ಥನೂ ಇಲ್ಲದಿದ್ದರೆ–'ನಾನು ಸುಖವಾಗಿ ನಿದ್ರಿಸಿದೆನು'–ಎಂಬ ಅನುಭವದ ಮಾತು ಹೇಗೆತಾನೇ ಬರಲು ಸಾಧ್ಯವಾಗುತ್ತಿತ್ತು? ಹಿಂದೆ ಕೂಟಸ್ಥನಲ್ಲಿಯೇ ಸೇರಿಹೋಗಿದ್ದ ಸ್ಮರಣೆಯುಂಟಾಗಿ ಸುಷುಪ್ತ್ಯವಸ್ಥೆಯಲ್ಲಿ ಅದರ ಅನುಭವವು ಭಾಸವಾಗುವುದರಿಂದ ಮನುಷ್ಯನು–'ಸುಖವಾಗಿ ನಿದ್ರಿಸಿದೆನು'–ಎಂದು ಹೇಳುತ್ತಾನೆ. ಆತ್ಮನ ಅಸ್ತಿತ್ವಕ್ಕೆ ಇದೇ ಒಂದು ಪ್ರಮಾಣವಾಗಿದೆ.

**ಯರ್ಹ್ಯಬ್ಜನಾಭ ಚರಣೈಷಣಯೋರುಭಕ್ತ್ಯಾ**
**ಚೇತೋಮಲಾನಿ ವಿಧಮೇದ್ಗುಣಕರ್ಮಜಾನಿ ।**
**ತಸ್ಮಿನ್ವಿಶುದ್ಧ ಉಪಲಭ್ಯತ ಆತ್ಮತತ್ತ್ವಂ**
**ಸಾಕ್ಷಾದ್ಯಥಾಮಲದೃಶೋಃ ಸವಿತೃಪ್ರಕಾಶಃ ॥೪೦॥**

ಕಮಲನಾಭನಾದ ಶ್ರೀಹರಿಯ ಪಾದಾರವಿಂದಗಳನ್ನು ಹೊಂದಬೇಕೆನ್ನುವ ಗುರುತರವಾದ ಭಕ್ತಿಭಾವವು ಹೃದಯದಲ್ಲುಂಟಾಗಿ ಭಕ್ತಿರೂಪವಾದ ಆ ಅಗ್ನಿಯೇ ಮನಸ್ಸಿನಲ್ಲಿರುವ ಕರ್ಮಜನ್ಯನಾದ ಕೊಳೆಗಳೆಲ್ಲವನ್ನೂ ಸುಟ್ಟುಹಾಕುತ್ತದೆ. ಹೀಗೆ ಮನಸ್ಸನ್ನು ಪರಾಭಕ್ತಿಯೆಂಬ ಅಗ್ನಿಯಲ್ಲಿ ಹಾಕಿ ಪುಟಗೊಳಿಸಿದೊಡನೆಯೇ ರೋಗದಿಂದ ರಹಿತವಾದ, ನಿರ್ಮಲವಾದ ಕಣ್ಣುಗಳಿಗೆ ಸೂರ್ಯಪ್ರಕಾಶವು ಕಾಣುವಂತೆ–ಶುದ್ಧವಾದ ಮನಸ್ಸಿಗೆ ಆತ್ಮತತ್ತ್ವವು ಗೋಚರಿಸುತ್ತದೆ."

ಹೀಗೆ ಪಿಪ್ಪಲಾಯನರು ನಾರಾಯಣನ ಸ್ವರೂಪವನ್ನು ಹೇಳಿದನಂತರ ನಿಮಿರಾಜನು ಪುನಃ ಮುನಿಗಳನ್ನು ಪ್ರಶ್ನಿಸುತ್ತಾನೆ :

**ಕರ್ಮಯೋಗಂ ವದತ ನಃ ಪುರುಷೋ ಯೇನ ಸಂಸ್ಕೃತಃ ।**
**ವಿಧೂಯೇಹಾಶು ಕರ್ಮಾಣಿ ನೈಷ್ಕರ್ಮ್ಯಂ ವಿನ್ದತೇ ಪರಮ್ ॥೪೧॥**

---

ಸರ್ವೇಂದ್ರಿಯ ವ್ಯಾಪಾರಗಳ ಉಪರಮೆ. ಕರಚರಣ ಮೊದಲಾದ ಇಂದ್ರಿಯಗಳ ಕಾರ್ಯಗಳ ವಿಶ್ರಾಂತಿ. ಯಾವ ರೀತಿಯ ಸ್ವಪ್ನವನ್ನೂ ಕಾಣದಿರುವ ನಿದ್ರಾವಸ್ಥೆ.

**ಏವಂ ಪ್ರಶ್ನಮೃಷೀನ್ ಪೂರ್ವಮಪೃಚ್ಛಂ ಪಿತುರನ್ತಿಕೇ ।**
**ನಾಬ್ರುವನ್ಬ್ರಹ್ಮಣಃ ಪುತ್ರಾಸ್ತತ್ರ ಕಾರಣಮುಚ್ಯತಾಮ್ ॥೪೨॥**

"ಯೋಗೀಶ್ವರರೇ! ನೀವೀಗ ನನಗೆ ಕರ್ಮಯೋಗವನ್ನು ಉಪದೇಶಿಸಿರಿ. ಯಾವ ಕರ್ಮಯೋಗದ ಸಾಧನೆಯಿಂದ ಮನುಷ್ಯನು ಸಂಸ್ಕೃತನಾಗಿ, ಶುದ್ಧಮನಸ್ಕನಾಗಿ, *ನೈಷ್ಕರ್ಮ್ಯಸಿದ್ಧಿಯನ್ನು ಹೊಂದುವನೋ (ಕರ್ತೃತ್ವ-ಕರ್ಮ ಮತ್ತು ಕರ್ಮಫಲಗಳಿಂದ ನಿವೃತ್ತನಾಗಿ ಜ್ಞಾನವನ್ನು ಹೊಂದುವನೋ) ಅಂತಹ ಕರ್ಮಯೋಗವನ್ನು ಹೇಳಿರಿ. ಹಿಂದೊಮ್ಮೆ ಇದೇ ಪ್ರಶ್ನೆಯನ್ನು ನಾನು ನಮ್ಮ ತಂದೆಯವರ ಸಮ್ಮುಖದಲ್ಲಿ ಬ್ರಹ್ಮನ ಮಾನಸಪುತ್ರರಾದ ಸನಕಾದಿಗಳನ್ನು ಕೇಳಿದ್ದೆನು. ಅವರು ಸರ್ವಜ್ಞರಾಗಿದ್ದರೂ ಈ ನನ್ನ ಪ್ರಶ್ನೆಗೆ ಉತ್ತರಿಸಲಿಲ್ಲ. ಇದಕ್ಕಾದರೂ ಕಾರಣವೇನು? ದಯಮಾಡಿ ಹೇಳಿರಿ."

ನಿಮಿರಾಜನ ಈ ಪ್ರಶ್ನೆಗೆ ಆರನೆಯವರಾದ ಆವಿಹೋತ್ರಮುನಿಗಳು ಉತ್ತರಿಸುತ್ತಾರೆ :

**ಕರ್ಮಾಕರ್ಮವಿಕರ್ಮೇತಿ ವೇದವಾದೋ ನ ಲೌಕಿಕಃ ।**
**ವೇದಸ್ಯ ಚೇಶ್ವರಾತ್ಮತ್ವಾತ್ ತತ್ರ ಮುಹ್ಯನ್ತಿ ಸೂರಯಃ ॥೪೩॥**

"ಮಹಾರಾಜ! ಕರ್ಮ–ಎಂದರೆ ಶಾಸ್ತ್ರವಿಹಿತವಾದ ಕರ್ಮ. ಅಕರ್ಮ–ಎಂದರೆ ಶಾಸ್ತ್ರನಿಷಿದ್ಧವಾದ ಕರ್ಮ. ವಿಕರ್ಮ–ಎಂದರೆ ಶಾಸ್ತ್ರವಿಹಿತವಾದ ಕರ್ಮಗಳನ್ನು ಮಾಡದೇ ಇರುವುದು. ಈ ಮೂರರ ರಹಸ್ಯಗಳೂ ವೇದಗಳಿಂದಲೇ ತಿಳಿದುಬರತಕ್ಕುವುಗಳು. ಲೌಕಿಕವಾಗಿ ಇವುಗಳ ರಹಸ್ಯವು ತಿಳಿದುಬರುವುದಿಲ್ಲ. ವೇದಗಳಾದರೋ ಅಪೌರುಷೇಯವಾದುವುಗಳು. ಇದಕ್ಕೆ ಕರ್ತೃಗಳು ಯಾರೂ ಇಲ್ಲ. ಇದರ ದ್ರಷ್ಟಾರರಿದ್ದಾರೆ. ಮೇಲಾಗಿ ವೇದಗಳು

---

* ನೈಷ್ಕರ್ಮ್ಯ: ಕರ್ಮಗಳ ಅನುಷ್ಠಾನವು ಜ್ಞಾನನಿಷ್ಠೆಗೆ ಉಪಾಯವಾದುದರಿಂದ ನೈಷ್ಕರ್ಮ್ಯ ಶಬ್ದಕ್ಕೆ ಕರ್ಮಯೋಗವನ್ನು ದಾಟುವುದು–ಎಂದರ್ಥ.

ನ ಕರ್ಮಣಾಮನಾರಮ್ಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ॥ (ಭ.ಗೀ. ೩-೪)

ಕರ್ಮಗಳನ್ನು ಆರಂಭಿಸದೇ ಇರುವುದರಿಂದಲೇ ಪುರುಷನು ನೈಷ್ಕರ್ಮ್ಯವನ್ನು ಹೊಂದುವುದಿಲ್ಲ. ನೈಷ್ಕರ್ಮ್ಯಂ = ಕರ್ಮಶೂನ್ಯತ್ವಂ–ಕರ್ಮಶೂನ್ಯವಾದಸ್ಥಿತಿ. ನಿಷ್ಕ್ರಿಯವಾದ ಆತ್ಮಸ್ವರೂಪದಲ್ಲಿ ಸ್ಥಿಮಿತವಾಗಿರುವಿಕೆ.

ಪರಮಾತ್ಮನಿಗೆ ಆತ್ಮಸ್ವರೂಪವಾಗಿರತಕ್ಕುವುಗಳು. ಆದುದರಿಂದ ವೇದಗಳ ರಹಸ್ಯಗಳನ್ನು ತಿಳಿಯುವುದು ಅತ್ಯಂತ ಕಠಿಣ. ದೊಡ್ಡ-ದೊಡ್ಡ ವಿದ್ವಾಂಸರು ಕೂಡ ವೇದವಿಹಿತವಾದ ಕರ್ಮಗಳನ್ನು ನಿಶ್ಚಯಿಸಿ ಹೇಳಲು ವಿಮೋಹಿತರಾಗುತ್ತಾರೆ.*

**ಪರೋಕ್ಷವಾದೋ ವೇದೋಽಯಂ ಬಾಲಾನಾಮನುಶಾಸನಮ್ ।**
**ಕರ್ಮಮೋಕ್ಷಾಯ ಕರ್ಮಾಣಿ ವಿಧತ್ತೇ ಹ್ಯಗದಂ ಯಥಾ ॥೪೪॥**

ಮಕ್ಕಳಿಗೆ ಸಕ್ಕರೆಯನ್ನು ಕೊಡುವೆನೆಂದು ಹೇಳಿ ತಾಯಿಯು ಔಷಧಿಯನ್ನು ಕುಡಿಸುವಂತೆ–ಈ ವೇದವು, ಅಪರೋಕ್ಷವಾದ (ಕಣ್ಣಿಗೆ ಕಾಣಿಸದ) ಸ್ವರ್ಗಾದಿಗಳ ಸಲುವಾಗಿ ಯಜ್ಞ-ಯಾಗಾದಿಗಳನ್ನು ಮಾಡೆಂದು ಶಾಸನ ಮಾಡುತ್ತಾ ಕರ್ಮಗಳ ನಿವೃತ್ತಿಗಾಗಿಯೇ ಈ ಕರ್ಮಗಳನ್ನೂ ವಿಧಿಸುತ್ತದೆ. ವೇದೋಕ್ತವಾದ ಯಜ್ಞ-ಯಾಗಾದಿಗಳೂ ಕರ್ಮನಿವೃತ್ತಿಗಾಗಿಯೇ ವಿಧಿಸಲ್ಪಟ್ಟ ಕರ್ಮಗಳಾಗಿವೆ.

**ನಾಚರೇದ್ಯಸ್ತು ವೇದೋಕ್ತಂ ಸ್ವಯಮಜ್ಞೋಽಜಿತೇನ್ದ್ರಿಯಃ ।**
**ವಿಕರ್ಮಣಾ ಹ್ಯಧರ್ಮೇಣ ಮೃತ್ಯೋರ್ಮೃತ್ಯುಮುಪೈತಿ ಸಃ ॥೪೫॥**

---

* ಶ್ರೀಕೃಷ್ಣನು ಗೀತೆಯಲ್ಲೂ ಇದನ್ನೇ ಹೇಳುತ್ತಾನೆ :

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥** (೪.೧೬)

ಕರ್ಮವು ಯಾವುದು? ಅಕರ್ಮವು ಯಾವುದು?–ಎಂಬುದರಲ್ಲಿ ಕವಿಗಳೂ, ವಿದ್ವಾಂಸರೂ ಸಹ ವಿಮೋಹಿತರಾಗಿರುತ್ತಾರೆ. ಆದುದರಿಂದ ನಿನಗೆ ಕರ್ಮದ ರಹಸ್ಯವನ್ನು ಹೇಳುವೆನು. ಇದನ್ನು ತಿಳಿದುಕೊಂಡರೆ ನೀನು ಅಶುಭದಿಂದ ಬಿಡುಗಡೆಯನ್ನು ಹೊಂದುವೆ.

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥** (೪-೧೭)

ಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ವಿಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಅಕರ್ಮದ (ನಿಷಿದ್ಧಕರ್ಮದ) ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಕರ್ಮದ ವಿಧಿಯು ಗಹನವಾದುದು.

'ತತ್ರ ಮುಹ್ಯನ್ತಿ ಸೂರಯಃ'–ಎಂದು ಭಾಗವತದಲ್ಲಿ ಹೇಳಿದ್ದರೆ ಗೀತೆಯಲ್ಲಿ ಶ್ರೀಕೃಷ್ಣನು 'ಕವಯೋಽಪ್ಯತ್ರ ಮೋಹಿತಾಃ'–ಎಂದು ಹೇಳಿದ್ದಾನೆ.

ಯಾವ ಅಜ್ಞನಾದ ಮತ್ತು ಜಿತೇಂದ್ರಿಯನಲ್ಲದ ಯಾವನು ವೇದೋಕ್ತವಾದ ಕರ್ಮಗಳನ್ನು ಆಚರಿಸುವುದಿಲ್ಲವೋ ಅಂತಹವನು ವಿಹಿತವಾದ ಕರ್ಮವನ್ನು ಆಚರಿಸದೆ ಇರುವ ಕಾರಣ ಕರ್ಮಭ್ರಷ್ಟತೆಯಿಂದ ಅಧರ್ಮವನ್ನಾಚರಿಸಿ ಪಾಪಿಷ್ಠನಾಗಿ ಹುಟ್ಟು-ಸಾವುಗಳ ಚಕ್ರದಲ್ಲಿ ಸಿಕ್ಕಿಹಾಕಿಕೊಂಡು ತೊಳಲುತ್ತಿರುತ್ತಾನೆ. ವೇದೋಕ್ತಕರ್ಮಗಳನ್ನು ಮಾಡುತ್ತಾ ಅಕರ್ಮನಾಗಬೇಕೇ ಹೊರತು, (ಕರ್ಮಗಳ ಫಲದಿಂದ ನಿವೃತ್ತನಾಗಬೇಕೇ ಹೊರತು) ಕರ್ಮಗಳನ್ನು ಬಿಟ್ಟು ಕರ್ಮಭ್ರಷ್ಟನಾದರೆ ಪಾಪಿಷ್ಠನಾಗುತ್ತಾನೆ. ವೇದೋಕ್ತಕರ್ಮಗಳನ್ನು ಮಾಡುವುದರಿಂದ ಚಿತ್ತಶುದ್ಧಿಯಾಗುತ್ತದೆ. ಚಿತ್ತಶುದ್ಧಿಯಾದರೆ ಇಂದ್ರಿಯಗಳ ಜಯವಾಗುತ್ತದೆ. ಇಂದ್ರಿಯಗಳ ಜಯದಿಂದ ಕರ್ಮಗಳನ್ನು ಮಾಡಿಯೂ ಅಕರ್ಮನಾಗುತ್ತಾನೆ.

**ವೇದೋಕ್ತಮೇವ ಕುರ್ವಾಣೋ ನಿಸ್ಸಙ್ಗೋऽರ್ಪಿತಮೀಶ್ವರೇ ।**
**ನೈಷ್ಕರ್ಮ್ಯಾಂ ಲಭತೇ ಸಿದ್ಧಿಂ ರೋಚನಾರ್ಥಾ ಫಲಶ್ರುತಿಃ ॥೪೬॥**

ಆದುದರಿಂದ ಫಲದ ಅಭಿಲಾಷೆಯನ್ನು ಬಿಟ್ಟು ವಿಶ್ವಾತ್ಮನಾದ ಭಗವಂತನಿಗೇ ಸಮಸ್ತವನ್ನೂ ಅರ್ಪಿಸುತ್ತಾ ಯಾರು ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನಮಾಡುವರೋ ಅಂತಹ ಕರ್ಮಠರು ಕರ್ಮದ ನಿವೃತ್ತಿಯಿಂದ ಪ್ರಾಪ್ತವಾಗುವ ಜ್ಞಾನರೂಪವಾದ ಸಿದ್ಧಿಯನ್ನು ಪಡೆಯುತ್ತಾರೆ. ವೇದಗಳಲ್ಲಿ ಹೇಳಲ್ಪಟ್ಟಿರುವ, ಸ್ವರ್ಗಪ್ರಾಪ್ತಿರೂಪವಾದ ಫಲಶ್ರುತಿಯು ಸಾಧಕನಿಗೆ ಕರ್ಮಗಳಲ್ಲಿ ಆಸಕ್ತಿಯನ್ನು ಹುಟ್ಟಿಸುವ ಸಲುವಾಗಿ ಸಕಾಮ ಕರ್ಮಗಳನ್ನು ಮಾಡುತ್ತಾ ಮಾಡುತ್ತಾ ಕಡೆಗೆ ನಿಷ್ಕಾಮಕರ್ಮನಾಗಲೆಂದು.

**ಯ ಆಶು ಹೃದಯಗ್ರನ್ಥಿಂ ನರ್ಜಿಹೀರ್ಷುಃ ಪರಾತ್ಮನಃ ।**
**ವಿಧಿನೋಪಚರೇದ್ದೇವಂ ತನ್ತ್ರೋಕ್ತೇನ ಚ ಕೇಶವಮ್ ॥೪೭॥**

ಯಾವನು ಶ್ರೇಷ್ಠನಾದ ಜೀವನ ಹೃದಯಗ್ರಂಥಿಯನ್ನು (ಅಹಂಕಾರರೂಪವಾದ ಬಂಧನವನ್ನು) ಬಹಳಬೇಗ ಕಿತ್ತುಹಾಕಲು ಇಚ್ಛಿಸುವನೋ ಅಂತಹವನು ಅದರ ಸಾಧನೆಗಾಗಿ ಕೇಶವದೇವರನ್ನು ಆಗಮದಲ್ಲಿ

ಹೇಳಲ್ಪಟ್ಟಿರುವಂತೆ ಮತ್ತು ವೇದೋಕ್ತವಾದ ವಿಧಾನದಿಂದ ಆರಾಧಿಸಬೇಕು.

**ಲಬ್ಧಾನುಗ್ರಹ ಆಚಾರ್ಯಾತ್ತೇನ ಸನ್ದರ್ಶಿತಾಗಮಃ ।**
**ಮಹಾಪುರುಷಮಭ್ಯರ್ಚೇನ್ಮೂರ್ತ್ಯಾಭಿಮತಯಾಽತ್ಮನಃ ॥೪೮॥**

ಮೊದಲು ಗುರುಶುಶ್ರೂಷೆಯನ್ನುಮಾಡಿ ಆಚಾರ್ಯನ ಅನುಗ್ರಹವನ್ನು ಪಡೆಯಬೇಕು. ಬಳಿಕ ಆಚಾರ್ಯನ ಮೂಲಕವಾಗಿ ಅನುಷ್ಠಾನದ ವಿಧಿ-ವಿಧಾನಗಳನ್ನು ತಿಳಿದುಕೊಳ್ಳಬೇಕು. ಅನಂತರ ತನಗೆ ಇಷ್ಟವಾದ, ಪ್ರಿಯವಾದ ಮೂರ್ತಿಯನ್ನು ಇಟ್ಟುಕೊಂಡು ಅದರ ಮೂಲಕವಾಗಿ ಭಗವಂತನಾದ ಪುರುಷೋತ್ತಮನನ್ನು ಆರಾಧಿಸಬೇಕು.

**ಶುಚಿಃ ಸಮ್ಮುಖಮಾಸೀನಃ ಪ್ರಾಣಸಂಯಮನಾದಿಭಿಃ ।**
**ಪಿಣ್ಡಂ ವಿಶೋಧ್ಯ ಸಂನ್ಯಾಸಕೃತರಕ್ಷೋಽರ್ಚಯೇದ್ಧರಿಮ್ ॥೪೯॥**

ಮೊದಲು ಸ್ನಾನಾದಿಗಳ ಮೂಲಕವಾಗಿ ಶರೀರಶುದ್ಧಿಯನ್ನು ಮಾಡಿ ಕೊಂಡು ನಿರ್ಮಲಮನಸ್ಕನಾಗಿ ಅಂತಃಕರಣವನ್ನು ಶುದ್ಧಿಗೊಳಿಸಬೇಕು. ಇಷ್ಟದೇವತೆಯ ಮುಂದೆ ಕುಳಿತು ಪ್ರಾಣಾಯಾಮವೇ ಮೊದಲಾದುವು ಗಳಿಂದ ಭೂತಶುದ್ಧಿಯನ್ನು ಮಾಡಿಕೊಳ್ಳಬೇಕು. ನಾಡೀಶುದ್ಧಿಯನ್ನು ಮಾಡಿಕೊಳ್ಳಬೇಕು. ಅನಂತರ ಅಂಗನ್ಯಾಸ-ಕರನ್ಯಾಸಾದಿಗಳಿಂದ ಆತ್ಮ ರಕ್ಷಣೆಯನ್ನು ಮಾಡಿಕೊಂಡು ಇಷ್ಟದೇವತೆಯನ್ನು ಪೂಜಿಸಬೇಕು.

**ಅರ್ಚಾದೌ ಹೃದಯೇ ಚಾಪಿ ಯಥಾಲಬ್ಧೋಪಚಾರಕೈಃ ।**
**ದ್ರವ್ಯಕ್ಷಿತ್ಯಾತ್ಮಲಿಙ್ಗಾನಿ ನಿಷ್ಪಾದ್ಯ ಪ್ರೋಕ್ಷ್ಯ ಚಾಸನಮ್ ॥೫೦॥**

**ಪಾದ್ಯಾದೀನುಪಕಲ್ಪ್ಯಾಥ ಸಂನಿಧಾಪ್ಯ ಸಮಾಹಿತಃ ।**
**ಹೃದಾದಿಭಿಃ ಕೃತನ್ಯಾಸೋ ಮೂಲಮನ್ತ್ರೇಣ ಚಾರ್ಚಯೇತ್ ॥೫೧॥**

ಮೊದಲು ಪುಷ್ಪವೇ ಮೊದಲಾದ ಸಾಮಗ್ರಿಗಳನ್ನು ಪ್ರೋಕ್ಷಣಾದಿ ಗಳಿಂದ ಶುದ್ಧಗೊಳಿಸಿಕೊಳ್ಳಬೇಕು. ಪೂಜಾಭೂಮಿಯನ್ನು ಸಂಪ್ರೋಕ್ಷಿಸ ಬೇಕು. ತನ್ನನ್ನು ಪ್ರೋಕ್ಷಿಸಿಕೊಂಡು ಸಮಸ್ತಪದಾರ್ಥಗಳನ್ನೂ ಪೂಜೆಗೆ

ಯೋಗ್ಯವಾದುವುಗಳನ್ನಾಗಿ ಮಾಡಿಕೊಳ್ಳಬೇಕು. ಕುಳಿತುಕೊಳ್ಳುವ ಆಸನವನ್ನು ಸಂಪ್ರೋಕ್ಷಿಸಬೇಕು. ಅರ್ಘ್ಯ-ಪಾದ್ಯಾದಿಗಳಿಗೆ ಪ್ರತ್ಯೇಕ-ಪ್ರತ್ಯೇಕವಾದ ಪಾತ್ರಗಳನ್ನು ಸಿದ್ಧಮಾಡಿಕೊಳ್ಳಬೇಕು. ಬಳಿಕ ಏಕಾಗ್ರಚಿತ್ತನಾಗಿ ಹೃದಯಕಮಲದಲ್ಲಿ ಪರಮಾತ್ಮನನ್ನು ಧ್ಯಾನಿಸಬೇಕು. ಬಳಿಕ ಹೃದಯದಲ್ಲಿ ಧ್ಯಾನಮಾಡಿದ ಮೂರ್ತಿಯನ್ನೇ ಮುಂದೆ ಇಟ್ಟುಕೊಂಡಿರುವ ಶ್ರೀವಿಗ್ರಹದಲ್ಲಿ ಆವಾಹಿಸಬೇಕು. ಅನಂತರ 'ಹೃದಯಾಯ ನಮಃ । ಶಿರಸೇ ಸ್ವಾಹಾ'–ಇವೇ ಮುಂತಾದ ಮಂತ್ರಗಳಿಂದ ನ್ಯಾಸಮಾಡಬೇಕು. ಅನಂತರ ಇಷ್ಟದೇವತೆಯ ಮೂಲಮಂತ್ರದ ಮೂಲಕ, ದೇಶ-ಕಾಲಕ್ಕನುಗುಣವಾಗಿ ದೊರೆತಿರುವ ಪೂಜಾಸಾಮಗ್ರಿಗಳಿಂದ ಇಷ್ಟದೇವತೆಯನ್ನು ಪೂಜಿಸಬೇಕು. ಅಥವಾ ಮಾನಸಿಕವಾಗಿ ಹೃದಯದಲ್ಲಾದರೂ ಇಷ್ಟ ಮೂರ್ತಿಯನ್ನು ಪೂಜಿಸಬಹುದು.

**ಸಾಙ್ಗೋಪಾಙ್ಗಾಂ ಸಪಾರ್ಷದಾಂ ತಾಂ ತಾಂ ಮೂರ್ತಿಂ ಸ್ವಮನ್ತ್ರತಃ ।**
**ಪಾದ್ಯಾರ್ಘ್ಯಾಚಮನೀಯಾದ್ಯೈಃಸ್ನಾನವಾಸೋವಿಭೂಷಣೈಃ ॥೫೨॥**

**ಗನ್ಧಮಾಲ್ಯಾಕ್ಷತಸ್ರಗ್ಭಿರ್ಧೂಪದೀಪೋಪಹಾರಕೈಃ ।**
**ಸಾಙ್ಗಂ ಸಂಪೂಜ್ಯ ವಿಧಿವತ್ಸ್ತವೈಃ ಸ್ತುತ್ವಾ ನಮೇದ್ಧರಿಮ್ ॥೫೩॥**

ಹೃದಯವೇ ಮೊದಲಾದ ಅಂಗಗಳಿಂದಲೂ, ಆಯುಧ-ಆಭೂಷಣಗಳೇ ಮೊದಲಾದ ಉಪಾಂಗಗಳಿಂದಲೂ, ಪಾರ್ಷದರಿಂದಲೂ ಸಹಿತವಾದ ಆ ಶ್ರೀವಿಗ್ರಹವನ್ನು ಪಾದ್ಯ-ಅರ್ಘ್ಯ-ಆಚಮನೀಯಗಳಿಂದಲೂ, ಸ್ನಾನ-ವಸ್ತ್ರ-ಆಭರಣಾದಿಗಳಿಂದಲೂ, ಗಂಧ-ಪುಷ್ಪಹಾರ-ಅಕ್ಷತೆ* ಮಾಲಿಕೆಗಳಿಂದಲೂ ಧೂಪ-ದೀಪ-ನೈವೇದ್ಯಗಳಿಂದಲೂ ಸಾಂಗೋಪಾಂಗವಾಗಿ ವಿಧಿವತ್ತಾಗಿ ಸಂಪೂಜಿಸಿ ಆರತಿಯನ್ನೆತ್ತಿ ಸ್ತೋತ್ರಗಳಿಂದ ಶ್ರೀಹರಿಯನ್ನು ಸ್ತುತಿಸಿ ನಮಸ್ಕರಿಸಬೇಕು.

---

* ಶ್ರೀಹರಿಯನ್ನು ಪೂಜಿಸುವಾಗ ಅಕ್ಷತೆಯನ್ನು ಕೇವಲ ತಿಲಕಾಲಂಕಾರಕ್ಕಾಗಿ ಉಪಯೋಗಿಸಬೇಕು. ಪೂಜೆಗೆ ಬಳಸಬಾರದು.

ನಾಕ್ಷತೈರರ್ಚಯೇದ್ವಿಷ್ಣುಂ ನ ಕೇತಕ್ಯಾ ಮಹೇಶ್ವರಮ್ ।

**ಆತ್ಮಾನಂ ತನ್ಮಯಂ ಧ್ಯಾಯನ್ಮೂರ್ತಿಂ ಸಂಪೂಜಯೇದ್ಧರೇಃ ।**
**ಶೇಷಾಮಾಧಾಯ ಶಿರಸಿ ಸ್ವಧಾಮ್ನ್ಯುದ್ವಾಸ್ಯ ಸತ್ಕೃತಮ್ ॥೫೪॥**

ತಾನು ಭಗವನ್ಮಯನಾಗಿರುವೆನೆಂದು ಭಾವಿಸುತ್ತಾ ಧ್ಯಾನವನ್ನು ಮಾಡಿ ಹರಿಯ ಶ್ರೀವಿಗ್ರಹವನ್ನು ಸಂಪೂಜಿಸಬೇಕು. ಪೂಜೆಯಾದ ನಂತರ ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ದೇವತೋದ್ವಾಸನೆಯನ್ನು ಮಾಡಿ ಸತ್ಕೃತವಾದ ದಿವ್ಯಮಂಗಳವಿಗ್ರಹವನ್ನು ಸಂಪುಟದಲ್ಲಿಯೂ ಮತ್ತು ಹೃದಯಗುಹೆಯಲ್ಲಿಯೂ ಸಮಾರೋಪಿಸಿ ಪೂಜೆಯನ್ನು ಮುಗಿಸಬೇಕು.

**ಏವಮಗ್ನ್ಯರ್ಕತೋಯಾದಾವತಿಥೌ ಹೃದಯೇ ಚ ಯಃ ।**
**ಯಜತೀಶ್ವರಮಾತ್ಮಾನಮಚಿರಾನ್ಮುಚ್ಯತೇ ಹಿ ಸಃ ॥೫೫॥**

ಈ ಪ್ರಕಾರವಾಗಿ ಯಾವ ಪುರುಷನು ಅಗ್ನಿ-ಸೂರ್ಯ-ಜಲ-ಅತಿಥಿ, ಹೃದಯ ಮುಂತಾದುವುಗಳಲ್ಲಿ ಆತ್ಮಸ್ವರೂಪನಾಗಿರುವ ಶ್ರೀಹರಿಯನ್ನು ಪೂಜಿಸುವನೋ ಅಂತಹವನು ಶೀಘ್ರವಾಗಿ ಮುಕ್ತನಾಗುತ್ತಾನೆ ; ಮಾಯೆಯಿಂದ ಬಿಡುಗಡೆಯನ್ನು ಹೊಂದುತ್ತಾನೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ಏಕಾದಶಸ್ಕಂಧದ ೩ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೪ನೆಯ ಅಧ್ಯಾಯ

## ಭಗವಂತನ ಅವತಾರಗಳ ವರ್ಣನೆ

ನಿಮಿಯು ಹೇಳುತ್ತಾನೆ :

**ಯಾನಿ ಯಾನೀಹ ಕರ್ಮಾಣಿ ಯೈರ್ಯೈಃ ಸ್ವಚ್ಛನ್ದಜನ್ಮಭಿಃ ।**
**ಚಕ್ರೇ ಕರೋತಿ ಕರ್ತಾ ವಾ ಹರಿಸ್ತಾನಿ ಬ್ರುವನ್ತು ನಃ ॥೧॥**

"ಯೋಗೀಶ್ವರರೇ! ಭಗವಂತನು ಸ್ವೇಚ್ಛೆಯಿಂದ ತನ್ನ ಭಕ್ತರ ಭಕ್ತಿಗೆ ಪರವಶನಾಗಿ ಅನೇಕ ಪ್ರಕಾರವಾದ ಅವತಾರಗಳನ್ನೆತ್ತಿ ಅನೇಕ ಪ್ರಕಾರವಾದ ಲೀಲೆಗಳನ್ನು ಭಕ್ತಜನರಿಗೆ ತೋರಿಸುತ್ತಿರುತ್ತಾನೆ. ತಾವು ದಯ

ಮಾಡಿ ಆ ಭಗವಂತನು ಈ ಹಿಂದೆ ಮಾಡಿರುವ, ಈಗ ಮಾಡುತ್ತಿರುವ ಮತ್ತು ಮುಂದೆ ಮಾಡಲಿರುವ ಅವತಾರ ಲೀಲಾಪ್ರಸಂಗಗಳನ್ನು ದಯಮಾಡಿ ಹೇಳಿರಿ.”

ಏಳನೆಯವರಾದ ದ್ರುಮಿಲರು ಹೇಳುತ್ತಾರೆ :

ಯೋ ವಾ ಅನನ್ತಸ್ಯ ಗುಣಾನನನ್ತಾ-
ನನುಕ್ರಮಿಷ್ಯನ್ ಸ ತು ಬಾಲಬುದ್ಧಿಃ ।
ರಜಾಂಸಿ ಭೂಮೇರ್ಗಣಯೇತ್ ಕಥಞ್ಚಿತ್
ಕಾಲೇನ ನೈವಾಖಿಲಶಕ್ತಿಧಾಮ್ನಃ ॥೨॥

“ಮಹಾರಾಜ! ಭಗವಂತನು ಅನಂತನು. ಅವನ ಗುಣಗಳೂ ಅನಂತವಾಗಿವೆ. ಅಂತಹ ಅನಂತನ ಅನಂತಗುಣಗಳನ್ನು ಎಣಿಕೆ ಮಾಡಿ ಹೇಳಲು ಇಚ್ಛಿಸುವವನು ಮೂರ್ಖನೇ ಸರಿ. ಭೂಮಿಯಲ್ಲಿರುವ ಧೂಳಿನ ಕಣಗಳನ್ನಾದರೂ ಎಣಿಕೆಮಾಡಬಹುದು. ಆದರೆ ಸಮಸ್ತಶಕ್ತಿಗಳಿಗೂ ಆಶ್ರಯಭೂತನಾದ ಭಗವಂತನ ಅನಂತವಾದ ಕಲ್ಯಾಣಗುಣಗಳನ್ನು ಯಾವನೂ, ಯಾವಾಗಲೂ, ಯಾವುದೇ ಪ್ರಕಾರದಿಂದಲೂ ಎಣಿಕೆ ಮಾಡಲಾರನು.

ಭೂತೈರ್ಯದಾ ಪಞ್ಚಭಿರಾತ್ಮಸೃಷ್ಟೈಃ
ಪುರಂ ವಿರಾಜಂ ವಿರಚಯ್ಯ ತಸ್ಮಿನ್ ।
ಸ್ವಾಂಶೇನ ವಿಷ್ಟಃ ಪುರುಷಾಭಿಧಾನ-
ಮವಾಪ ನಾರಾಯಣ ಆದಿದೇವಃ ॥೩॥

ಆದಿದೇವನಾದ ನಾರಾಯಣನು ಯಾವಾಗ ತನ್ನಿಂದ ಸೃಷ್ಟಿಸಲ್ಪಟ್ಟ ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ–ಎಂಬ ಪಂಚಭೂತಗಳಿಂದ ಬ್ರಹ್ಮಾಂಡವೆಂಬ ಪುರವನ್ನು ವಿರಚಿಸಿ ಅದರಲ್ಲಿ ತನ್ನ ಅಂಶದಿಂದ ಪ್ರವೇಶಿಸಿದನೋ–ಆಗ ಆತನಿಗೆ ಪುರುಷನೆಂಬ ಹೆಸರು ಬಂದಿತು.

ಯತ್ಕಾಯ ಏಷ ಭುವನತ್ರಯಸಂನಿವೇಶೋ
ಯಸ್ಯೇನ್ದ್ರಿಯೈಸ್ತನುಭೃತಾಮುಭಯೇನ್ದ್ರಿಯಾಣಿ ।

**ಜ್ಞಾನಂ ಸ್ವತಃ ಶ್ವಸನತೋ ಬಲಮೋಜ ಈಹಾ**
**ಸತ್ತ್ವಾದಿಭಿಃ ಸ್ಥಿತಿಲಯೋದ್ಭವ ಆದಿಕರ್ತಾ ॥೪॥**

ವಿರಾಟ್‌ಪುರುಷನ ಬ್ರಹ್ಮಾಂಡಶರೀರದಲ್ಲಿ ಮೂರುಲೋಕಗಳೂ ಸನ್ನಿಹಿತವಾಗಿವೆ. ಆತನ ಇಂದ್ರಿಯಗಳಿಂದಲೇ ದೇಹಧಾರಿಗಳ ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಮಾಡಲ್ಪಟ್ಟಿವೆ. ವಿರಾಟ್ ಪುರುಷನ ಸ್ವರೂಪದಿಂದಲೇ ಸ್ವತಃಸಿದ್ಧವಾದ ಜ್ಞಾನದ ಸಂಚಾರವಾಗುತ್ತದೆ. ಅವನ ಶ್ವಾಸ-ಪ್ರಶ್ವಾಸದಿಂದಲೇ ಪ್ರಾಣಿಗಳಿಗೆ ದೇಹಶಕ್ತಿಯೂ, ಇಂದ್ರಿಯಶಕ್ತಿಯೂ, ಕ್ರಿಯಾಶಕ್ತಿಯೂ ಉಂಟಾಗುತ್ತದೆ. ಆತನ ಸತ್ತ್ವಾದಿಗುಣಗಳಿಂದಲೇ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಾಗುತ್ತವೆ. ವಿರಾಟ್‌ಪುರುಷನಿಗೆ ಯಾವ ಶರೀರವಿರುವುದೋ ಅದೇ ಆದಿಕರ್ತೃವಾದ ನಾರಾಯಣನ ಶರೀರವಾಗಿದೆ.

**ಆದಾವಭೂಚ್ಛತಧೃತೀ ರಜಸಾಸ್ಯ ಸರ್ಗೇ**
**ವಿಷ್ಣುಃ ಸ್ಥಿತೌ ಕ್ರತುಪತಿರ್ದ್ವಿಜಧರ್ಮಸೇತುಃ ।**
**ರುದ್ರೋಽಪ್ಯಯಾಯ ತಮಸಾ ಪುರುಷಃ ಸ ಆದ್ಯ**
**ಇತ್ಯುದ್ಭವಸ್ಥಿತಿಲಯಾಃ ಸತತಂ ಪ್ರಜಾಸು ॥೫॥**

ಮೊದ-ಮೊದಲು ಜಗತ್ತಿನ ಉತ್ಪತ್ತಿಯಸಲುವಾಗಿ ಯಾವನ ರಜೋಗುಣದ ಅಂಶದಿಂದ ಶತಧೃತಿಯಾದ ಬ್ರಹ್ಮನು ಹುಟ್ಟಿದನೋ, ಯಾವನ ಸತ್ತ್ವಗುಣದ ಅಂಶದಿಂದ ಪ್ರಪಂಚದ ಸ್ಥಿತಿಗಾಗಿ, ಬ್ರಾಹ್ಮಣರ ಮತ್ತು ಧರ್ಮಸೇತುವಿಗೆ ರಕ್ಷಣೆಗಾಗಿ ಯಜ್ಞಪತಿಯಾದ ವಿಷ್ಣುವು ಹುಟ್ಟಿದನೋ ಮತ್ತು ಯಾವನ ತಮೋಗುಣದ ಅಂಶದಿಂದ ಜಗತ್ತಿನ ಸಂಹಾರಕ್ಕಾಗಿ ರುದ್ರನು ಹುಟ್ಟಿದನೋ ಅವನೇ ಆದಿಪುರುಷನು. ಈ ಪ್ರಕಾರವಾಗಿ ಆ ಆದಿಪುರುಷನ ಪ್ರೇರಣೆಯಿಂದಲೇ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳು ನಿತ್ಯ-ನಿರಂತರವಾಗಿ ನಡೆಯುತ್ತಲೇ ಇರುತ್ತವೆ.

ದಕ್ಷಪ್ರಜಾಪತಿಯ ಒಬ್ಬಳ ಮಗಳ ಹೆಸರು ಮೂರ್ತಿ–ಎಂದು. ಅವಳು ಧರ್ಮನ ಪತ್ನಿಯಾಗಿದ್ದಳು. ಅವಳ ಗರ್ಭದಲ್ಲಿ ಆದಿಪುರುಷನಾದ ಭಗವಂತನು ನರ-ನಾರಾಯಣನೆಂಬ ಶುಭ ನಾಮವನ್ನು ಹೊಂದಿ ಮುನಿ

ಶ್ರೇಷ್ಠನೂ ಶಾಂತಾತ್ಮನೂ ಆಗಿ ಅವತರಿಸಿದನು. ಅವನು ನರ-ನಾರಾಯಣಾವತಾರದಲ್ಲಿ ಕರ್ಮಬಂಧನದಿಂದ ಮುಕ್ತಿಯನ್ನು ಹೊಂದುವ ಮತ್ತು ನೈಷ್ಕರ್ಮ್ಯಸಿದ್ಧಿಯನ್ನು ಪಡೆಯಬಹುದಾದ, ಆತ್ಮತತ್ತ್ವವನ್ನು ಸಾಕ್ಷಾತ್ಕರಿಸಿಕೊಳ್ಳಲು ದಿವ್ಯಸಾಧನವಾದ ಭಗವದಾರಾಧನಾರೂಪವಾದ ಕರ್ಮಗಳನ್ನು ಶಿಷ್ಯರಿಗೆ ಉಪದೇಶಿಸಿದನು. ಶಿಷ್ಯರಿಗೆ ಉಪದೇಶಿಸುತ್ತಿದ್ದುದೂ ಅಲ್ಲದೇ ತಾನೇ ಆ ಕರ್ಮಗಳ ಅನುಷ್ಠಾನವನ್ನೂ ಮಾಡುತ್ತಿದ್ದನು. ದೊಡ್ಡ-ದೊಡ್ಡ ಋಷಿ-ಮುನಿಗಳೆಲ್ಲರೂ ನರ-ನಾರಾಯಣರೂಪದಲ್ಲಿದ್ದ ಆದಿಪುರುಷನ ಸೇವೆಮಾಡುತ್ತಿದ್ದರು. ಈಗಲೂ ಕೂಡ ಆತನು ನರ-ನಾರಾಯಣರೂಪದಿಂದ (ಬದರಿಕಾಶ್ರಮದಲ್ಲಿ) ಅದೇ ಕರ್ಮಗಳನ್ನು ಅನುಷ್ಠಾನಮಾಡುತ್ತಾ ವಿರಾಜಿಸುತ್ತಿದ್ದಾನೆ.

"ಆ ನರ-ನಾರಾಯಣರೂಪದ ಆದಿಪುರುಷನು ತಪಸ್ಸಿನ ಮೂಲಕವಾಗಿ ತನ್ನ ಸ್ಥಾನವಾದ ಸ್ವರ್ಗಲೋಕವನ್ನು ಕಸಿದುಕೊಳ್ಳುತ್ತಾನೆಂಬ ಶಂಕೆಯಿಂದ ಇಂದ್ರನು ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡುವ ಸಲುವಾಗಿ ವಸಂತನೇ ಮೊದಲಾದ ಸೈನಿಕರೊಡನೆ ಮನ್ಮಥನನ್ನು ಬದರಿಕಾಶ್ರಮಕ್ಕೆ ಕಳುಹಿಸಿಕೊಟ್ಟನು. ಕಾಮದೇವನಿಗೆ ಆದಿಪುರುಷನಾದ ಭಗವಂತನ ಮಹಿಮೆಯು ತಿಳಿದಿರಲಿಲ್ಲ. ಆದುದರಿಂದ ಅವನು ನರ-ನಾರಾಯಣರನ್ನು ಸಾಮಾನ್ಯ ಋಷಿಗಳೆಂದು ಭಾವಿಸಿ ಅಪ್ಸರೆಯರೊಡನೆಯೂ, ವಸಂತನೊಡನೆಯೂ, ಮೆಲ್ಲ-ಮೆಲ್ಲನೆ ಬೀಸುವ ಸುಗಂಧಯುಕ್ತವಾದ ವಾಯುವಿನೊಡನೆಯೂ ಬದರಿಕಾಶ್ರಮಕ್ಕೆ ಹೋಗಿ, ಸ್ತ್ರೀಯರ ಕಟಾಕ್ಷವೀಕ್ಷಣವೆಂಬ ಬಾಣಗಳ ಮೂಲಕವಾಗಿ ನರ-ನಾರಾಯಣರನ್ನು ಗಾಯಗೊಳಿಸಲು ಪ್ರಯತ್ನಿಸಿದನು. ನರ-ನಾರಾಯಣರೂಪದಲ್ಲಿದ್ದ ಆದಿದೇವನಿಗೆ ಇದೆಲ್ಲವೂ ಇಂದ್ರನ ಚೇಷ್ಟೆಯೆಂದು ತಿಳಿದುಹೋಯಿತು. ಸಾವಿರಾರು ಸ್ತ್ರೀಯರ ಹಾವ-ಭಾವಗಳಿಂದಲೂ ವಸಂತ-ಮಂದಮಾರುತರ ಚೇಷ್ಟೆಗಳಿಂದಲೂ ವಿಮನಸ್ಕರಾಗದೆ ಸ್ಥಿರಚಿತ್ತರಾಗಿ ತಪಸ್ಸುಮಾಡುತ್ತಿದ್ದ ಋಷಿಶ್ರೇಷ್ಠರಾದ ನರ-ನಾರಾ ಯಣರನ್ನು ಕಂಡು ಕಾಮದೇವನಿಗೂ ಅವನ ಪರಿವಾರದವರಿಗೂ ಶಾಪದ ಭಯವುಂಟಾಯಿತು. ಭಯಗೊಂಡು ತರ-ತರನೆ ನಡುಗುತ್ತಿದ್ದ ಕಾಮದೇವ

ನನ್ನೂ ಮತ್ತು ಅವನ ಪರಿವಾರದವರನ್ನೂ ಕುರಿತು ನಸುನಗುತ್ತಾ ನರ-ನಾರಾಯಣರು ಹೇಳಿದರು :

**ಮಾ ಭೈಷ್ಟ ಭೋ ಮದನ ಮಾರುತ ದೇವವಧ್ವೋ**
**ಗೃಹ್ಣೀತ ನೋ ಬಲಿಮಶೂನ್ಯಮಿಮಂ ಕುರುಧ್ವಮ್ ॥೮॥**

"ಎಲವೊ ಮನ್ಮಥ! ಎಲೈ ಮಾರುತನೇ! ಎಲೈ ದೇವಾಂಗನೆಯರೇ! ಭಯಪಡಬೇಡಿರಿ. ನಾವು ನಿಮ್ಮನ್ನು ಸತ್ಕರಿಸಲು ಇಚ್ಛಿಸಿದ್ದೇವೆ. ನಮ್ಮ ಆತಿಥ್ಯವನ್ನು ಸ್ವೀಕರಿಸಿ ಈ ಆಶ್ರಮವನ್ನು ಸಾರ್ಥಕಗೊಳಿಸಿರಿ." ನರ-ನಾರಾಯಣರ ರೂಪದಲ್ಲಿದ್ದ ಆದಿದೇವನು ಕಾಮದೇವನೇ ಮುಂತಾದವರಿಗೆ ಅಭಯದಾನಮಾಡುತ್ತಾ ಹೀಗೆ ಹೇಳಲು ಕಾಮಾದೇವಾದಿಗಳು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಹೇಳಿದರು :

"ಪ್ರಭುವೇ! ಆತ್ಮಾರಾಮರ ಮತ್ತು ಧೀರಪುರುಷರ ಸಮೂಹಗಳಿಂದ ಸತತವಾಗಿ ನಮಸ್ಕರಿಸಲ್ಪಡುವ ದಿವ್ಯವಾದ ಪಾದಾರವಿಂದಗಳುಳ್ಳ ನಿನ್ನ ವಿಷಯದಲ್ಲಿ ಅಪರಾಧಿಗಳಿಗೂ ಅಭಯದಾನದ ಇಂತಹ ಮಾತು ಆಶ್ಚರ್ಯಕರವಾದುದೇನೂ ಅಲ್ಲ. ನೀನು ಮಾಯಾತೀತನಾಗಿ ನಿರ್ವಿಕಾರನೂ ಆಗಿರುವೆ.

**ತ್ವಾಂ ಸೇವತಾಂ ಸುರಕೃತಾ ಬಹವೋऽನ್ತರಾಯಾಃ**
**ಸ್ವೌಕೋ ವಿಲಙ್ಘ್ಯ ಪರಮಂ ವ್ರಜತಾಂ ಪದಂ ತೇ ।**
**ನಾನ್ಯಸ್ಯ ಬರ್ಹಿಷಿ ಬಲೀನ್ದದತಃ ಸ್ವಭಾಗಾ-**
**ನ್ಧತ್ತೇ ಪದಂ ತ್ವಮವಿತಾ ಯದಿ ವಿಘ್ನಮೂರ್ಧ್ನಿ ॥೧೦॥**

ನಿನ್ನನ್ನು ಸೇವಿಸುವ ಪ್ರೇಮೀಭಕ್ತರು ಅವರ ಭಕ್ತಿಯ ಪ್ರಭಾವದಿಂದ ದೇವತೆಗಳ ರಾಜಧಾನಿಯಾದ ಅಮರಾವತಿಯನ್ನೂ ಉಲ್ಲಂಘಿಸಿ ನಿನ್ನ ಪರಮಪದವನ್ನು ಸೇರುತ್ತಾರೆ. ಹೀಗೆ ಭಕ್ತಶಿರೋಮಣಿಗಳು ನೇರವಾಗಿ ನಿನ್ನನ್ನು ಸೇರುವುದು ದೇವತೆಗಳಿಗೆ ಇಷ್ಟವಾಗುವುದಿಲ್ಲ. ಆದುದರಿಂದ ಭಕ್ತರು ಯಾವಾಗ ಭಜನೆಯನ್ನು ಆರಂಭಿಸುವರೋ ಆಗ ದೇವತೆಗಳು ಹಲವಾರು ವಿಧಗಳಲ್ಲಿ ಅವರು ಮಾಡುವ ಭಜನೆಗೆ, ಸೇವೆಗೆ ವಿಘ್ನವನ್ನುಂಟು ಮಾಡುತ್ತಾರೆ. ಆದರೆ ಯಾರು ಕರ್ಮ ಮಾರ್ಗದಲ್ಲಿಯೇ ಇದ್ದುಕೊಂಡು

ಯಜ್ಞ-ಯಾಗಾದಿಗಳನ್ನು ಮಾಡುತ್ತಾ ದೇವತೆಗಳಿಗೆ ಕಾಲ ಕಾಲಕ್ಕೆ ಹವಿರ್ಭಾಗಗಳನ್ನು ಅರ್ಪಿಸುವರೋ ಅಂತಹವರ ಕರ್ಮಮಾರ್ಗಕ್ಕೆ ದೇವತೆಗಳು ಯಾವ ವಿಧವಾದ ವಿಘ್ನವನ್ನೂ ಉಂಟುಮಾಡುವುದಿಲ್ಲ. ಮಿಗಿಲಾಗಿ ಅವರು ಕರ್ಮಮಾರ್ಗದಲ್ಲಿಯೇ ನಿರತರಾಗಿರುವಂತೆ ಪ್ರೋತ್ಸಾಹಿಸುತ್ತಾರೆ.

ಆದರೆ ಪ್ರಭುವೇ! ದೇವತೆಗಳುಂಟುಮಾಡುವ ವಿಘ್ನಗಳಿಂದ ನಿನ್ನ ಭಕ್ತರು ಭಕ್ತಿಮಾರ್ಗದಿಂದ ಚ್ಯುತರಾಗುವುದಿಲ್ಲ. ನಿನ್ನ ಪಾದಾರವಿಂದಗಳ ಆಶ್ರಯವನ್ನು ಪಡೆದು ವಿಘ್ನಗಳೆಂಬ ಭೂತಗಳ ತಲೆಯ ಮೇಲೆ ಹೆಜ್ಜೆಗಳನ್ನಿಡುತ್ತಾ ಅವನ್ನು ಮೆಟ್ಟಿಕೊಂಡು ನಿನ್ನನ್ನು ಸೇರಿಯೇ ಸೇರುತ್ತಾರೆ.

**ಕ್ಷುತ್ತೃಟ್ತ್ರಿಕಾಲಗುಣಮಾರುತಜೈಹ್ವ್ಯ ಶೈಶ್ನಾ-**
**ನಸ್ಮಾನಪಾರಜಲಧೀನತಿತೀರ್ಯ ಕೇಚಿತ್ ।**
**ಕ್ರೋಧಸ್ಯ ಯಾನ್ತಿ ವಿಫಲಸ್ಯ ವಶಂ ಪದೇ ಗೋ-**
**ರ್ಮಜ್ಜನ್ತಿ ದುಶ್ಚರತಪಶ್ಚ ವೃಥೋತ್ಸೃಜನ್ತಿ ॥೧೧॥**

ಕೆಲವರು ಸಾಧಕರು, ಸಾಮಾನ್ಯರಿಂದ ದಾಟಲು ಅಸಾಧ್ಯವಾದ ಮಹಾಸಾಗರಗಳಂತಿರುವ ಹಸಿವು-ಬಾಯಾರಿಕೆಗಳನ್ನೂ, ಮೂರು ಋತುಗಳಲ್ಲಿ ಸಂಭವಿಸುವ ಬಿಸಿಲು-ಚಳಿ-ಮಳೆ-ಗಾಳಿಗಳನ್ನೂ, ನಾಲಿಗೆಯ ಚಾಪಲ್ಯವನ್ನೂ, ಸ್ತ್ರೀಭೋಗವನ್ನೂ ಮತ್ತು ವಿಘ್ನಕಾರಿಗಳಾದ ನಮ್ಮನ್ನೂ ದಾಟಿ ಮುಂದೆ ಹೋಗುತ್ತಾರೆ. ಆದರೆ ಅಂತಹ ದುಶ್ಚರತಪಸ್ವಿಗಳು ಕೂಡ ಕೆಲವು ಸಮಯಗಳಲ್ಲಿ ಗೋಷ್ಪಾದದಷ್ಟು ನೀರನ್ನು ದಾಟಲಾಗದವರಂತೆ ಕ್ರೋಧಕ್ಕೆ ವಶರಾಗಿ ತಾವು ಕಷ್ಟಪಟ್ಟು ಗಳಿಸಿದ್ದ ತಪಃಫಲಗಳೆಲ್ಲವನ್ನು ಕ್ಷಣ ಮಾತ್ರದಲ್ಲಿ ಹಾಳುಮಾಡಿಕೊಳ್ಳುತ್ತಾರೆ."

ಕಾಮದೇವ-ವಸಂತಾದಿದೇವತೆಗಳು ನರ-ನಾರಾಯಣರ ರೂಪದಲ್ಲಿದ್ದ ಆದಿಪುರುಷನನ್ನು ಹೀಗೆ ಸ್ತೋತ್ರಮಾಡುತ್ತಿರಲು ಸರ್ವಶಕ್ತನಾದ ಆ ಭಗವಂತನು ತನ್ನ ಯೋಗಮಾಯೆಯಿಂದ ಅದ್ಭುತವಾದ ರೂಪ-ಲಾವಣ್ಯಗಳಿಂದ ಸಂಪನ್ನೆಯರಾಗಿದ್ದ, ವಿಚಿತ್ರವಾದ ವಸ್ತ್ರಾಭರಣಗಳಿಂದ ಸಮಲಂಕೃತೆಯರಾಗಿದ್ದ, ಭಗವಂತನ ಸೇವೆಯಲ್ಲಿ ನಿರತರಾಗಿದ್ದ ಹಲವಾರು ರಮಣೀಮಣಿಯರನ್ನು ಪ್ರದರ್ಶಿಸಿದನು. ದೇವರಾಜನಾದ ಇಂದ್ರನ ಅನು

ಯಾಯಿಗಳಾದ ಅಪ್ಸರೆಯರು ಸಾಕ್ಷಾತ್ ಲಕ್ಷ್ಮೀದೇವಿಯಂತೆಯೇ ಕಡು ಚೆಲುವೆಯರಾಗಿದ್ದ ಆ ಸ್ತ್ರೀಯರನ್ನು ನೋಡಿ ಅವರ ಸೌಂದರ್ಯಕ್ಕೆ ತಮ್ಮ ಸೌಂದರ್ಯವು ಸಾಟಿಯಲ್ಲವೆಂದು ಭಾವಿಸಿಕೊಳ್ಳುತ್ತಾ ಕಳೆಗುಂದಿದವರಾಗಿ ಅವರ ಶರೀರದಿಂದ ಹೊರಸೂಸುತ್ತಿದ್ದ ಸುಗಂಧವನ್ನು ಆಘ್ರಾಣಿಸುತ್ತಾ ವಿಮೋಹಿತರಾದರು. ತಲೆತಗ್ಗಿಸಿಕೊಂಡು ನಿಂತಿದ್ದ ಅಪ್ಸರೆಯರನ್ನು ನೋಡಿ ಗಹ-ಗಹಿಸಿ ನಗುತ್ತಿರುವನೋ ಎಂಬಂತೆ ದೇವದೇವೇಶನಾದ ಆ ಪುರುಷನು ಅವರನ್ನು ಕುರಿತು ಹೇಳಿದನು :

"ಕಾಮದೇವ! ನೀವು ಈ ಸ್ತ್ರೀಸಮೂಹದಿಂದ ನಿಮಗೆ ಅನುರೂಪ ವಾದ ಸೌಂದರ್ಯದಿಂದ ಕೂಡಿರುವ, ಸ್ವರ್ಗಕ್ಕೆ ಭೂಷಣಪ್ರಾಯಳಾಗ ಬಹುದಾದ ಯಾವಳನ್ನಾದರೂ ಒಬ್ಬಳನ್ನು ಆರಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗಿರಿ."

ಭಗವಂತನ ಈ ಆಜ್ಞೆಯನ್ನು ದೇವರಾಜನ ಅನುಯಾಯಿಗಳಾದ ಕಾಮದೇವನೇ ಮೊದಲಾದವರು ಶಿರಸಾವಹಿಸಿ, ಪುನಃ ಆದಿಪುರುಷನಿಗೆ ನಮಸ್ಕರಿಸಿ, ಭಗವಂತನು ಪ್ರದರ್ಶಿಸಿದ್ದ ಸ್ತ್ರೀಯರಲ್ಲಿ ಊರ್ವಶೀ ಎಂಬುವ ಳನ್ನು ಆರಿಸಿಕೊಂಡು ಅಪ್ಸರೆಯರಲ್ಲಿ ಶ್ರೇಷ್ಠಳೆನಿಸಿದ ಆಕೆಯನ್ನು ಮುಂದೆ ಮಾಡಿಕೊಂಡು ಸ್ವರ್ಗಕ್ಕೆ ತೆರಳಿದರು. ಊರ್ವಶಿಯೊಡನೆ ನೇರವಾಗಿ ಇಂದ್ರನ ಸಭೆಗೆ ಹೋದ ಅವರು ಸಿಂಹಾಸನದಲ್ಲಿ ಕುಳಿತಿದ್ದ ಇಂದ್ರನಿಗೆ ನಮಸ್ಕರಿಸಿ, ಸಭೆಯಲ್ಲಿ ಆಸೀನರಾಗಿದ್ದ ದೇವತೆಗಳೆಲ್ಲರಿಗೂ ಕೇಳಿಸುವಂತೆ ಬದರಿಕಾಶ್ರಮದಲ್ಲಿದ್ದ ನರ-ನಾರಾಯಣರ ಬಲವೆಷ್ಟೆಂಬುದನ್ನು ವರ್ಣಿಸಿ ಹೇಳಿದರು. ಇಂದ್ರನು ವಿಸ್ಮಯಗೊಂಡನಲ್ಲದೆ ನರ-ನಾರಾಯಣರ ಮಹಿಮೆಯನ್ನು ಕೇಳಿ ಭಯಗ್ರಸ್ತನೂ ಆದನು. ಇದೇ ಆದಿಪುರುಷನ ನರ-ನಾರಾಯಣಾವತಾರವು.

**ಹಂಸಸ್ವರೂಪ್ಯವದದಚ್ಯುತ ಆತ್ಮಯೋಗಂ**
**ದತ್ತಃ ಕುಮಾರ ಋಷಭೋ ಭಗವಾನ್ ಪಿತಾ ನಃ ।**
**ವಿಷ್ಣುಃ ಶಿವಾಯ ಜಗತಾಂ ಕಲಯಾವತೀರ್ಣ-**
**ಸ್ತೇನಾಹೃತಾ ಮಧುಭಿದಾ ಶ್ರುತಯೋ ಹಯಾಸ್ಯೇ ॥೧೭॥**

ಸ್ವಸ್ವರೂಪದಿಂದ ಯಾವಾಗಲೂ ಚ್ಯುತನಾಗದೇ ಇರುವ ಆ ನಾರಾಯಣನು ಜಗತ್ತಿನ ಕ್ಷೇಮಕ್ಕಾಗಿ ಹಲವಾರು ಕಲಾವತಾರಗಳನ್ನೆತ್ತಿದ್ದಾನೆ. ಹಂಸ, ದತ್ತಾತ್ರೇಯ, ಸನಕ, ಸನಂದನ, ಸನಾತನ, ಸನತ್ಕುಮಾರ, ನನ್ನ ತಂದೆಯಾದ ಋಷಭ–ಇವರೂ ಆತನ ಕಲಾರೂಪದಲ್ಲಿ ಅವತರಿಸಿ ಜನರಿಗೆ ಆತ್ಮಸಾಕ್ಷಾತ್ಕಾರದ ಸಾಧನಗಳನ್ನು ಉಪದೇಶಿಸಿದ್ದಾರೆ. ಆದಿದೇವನು ಹಯಗ್ರೀವಾವತಾರವನ್ನೆತ್ತಿ ವೇದಗಳನ್ನು ಕದ್ದೊಯ್ದಿದ್ದ ಮಧು-ಕೈಟಭರೆಂಬ ರಾಕ್ಷಸರನ್ನು ಸಂಹರಿಸಿ ವೇದಗಳನ್ನು ಉದ್ಧರಿಸಿದನು.

**ಗುಪ್ತೋಽಪ್ಯಯೇ ಮನುರಿಲೌಷಧಯಶ್ಚ ಮಾತ್ಸ್ಯೇ**
**ಕ್ರೌಡೇ ಹತೋ ದಿತಿಜ ಉದ್ಧರತಾಮ್ಭಸಃ ಕ್ಷ್ಮಾಮ್ ।**
**ಕೌರ್ಮೇ ಧೃತೋಽದ್ರಿರಮೃತೋನ್ಮಥನೇ ಸ್ವಪೃಷ್ಠೇ**
**ಗ್ರಾಹಾತ್ಪ್ರಪನ್ನಮಿಭರಾಜಮಮುಞ್ಚದಾರ್ತಮ್ ॥೧೮॥**

ಪ್ರಳಯಕಾಲದಲ್ಲಿ ಆದಿಪುರುಷನು ಮತ್ಸ್ಯಾವತಾರವನ್ನುಮಾಡಿ ಮುಂದೆ ಮನುವಾಗುವ ಸತ್ಯವ್ರತನನ್ನೂ, ಪೃಥ್ವಿಯನ್ನೂ, ಓಷಧಿಲತೆ ಗಳನ್ನೂ, ಧಾನ್ಯಾದಿಗಳನ್ನೂ ಸಂರಕ್ಷಿಸಿದನು. ಪುನಃ ವರಾಹಾವತಾರವನ್ನು ಮಾಡಿ ಭೂಮಂಡಲವನ್ನು ರಸಾತಲದಿಂದ ಮೇಲಕ್ಕೆತ್ತಿದನಲ್ಲದೆ ಪ್ರತಿಭಟಿಸಿ ಬಂದ ದೈತ್ಯರಾಜನಾದ ಹಿರಣ್ಯಾಕ್ಷನನ್ನು ಸಂಹರಿಸಿದನು. ಅನಂತರ ಆತನು ಕೂರ್ಮಾವತಾರವನ್ನೆತ್ತಿ ಅಮೃತಮಂಥನದ ಕಾರ್ಯವನ್ನು ಸಂಪನ್ನಗೊಳಿಸಲು ಮಂದರಾಚಲವನ್ನು ತನ್ನ ಬೆನ್ನಮೇಲೆ ಧರಿಸಿದನು. ಪುನಃ ಆದಿಪುರುಷನು ಕಲಾವತಾರವನ್ನೆತ್ತಿ ಮೊಸಳೆಯಿಂದ ಪೀಡಿತನಾಗಿ ಶರಣಾಗತನಾಗಿ ಪ್ರಾರ್ಥಿಸಿದ ಗಜರಾಜನನ್ನು ಮೊಸಳೆಯ ದವಡೆಯಿಂದ ಮುಕ್ತಿಗೊಳಿಸಿದನು.

**ಸಂಸ್ತುನ್ವತೋಽಬ್ಧಿ ಪತಿತಾನ್ ಶ್ರಮಣಾನೃಷೀಂಶ್ಚ**
**ಶಕ್ರಂ ಚ ವೃತ್ರವಧತಸ್ತಮಸಿ ಪ್ರವಿಷ್ಟಮ್ ।**
**ದೇವಸ್ತ್ರಿಯೋಽಸುರಗೃಹೇ ಪಿಹಿತಾ ಅನಾಥಾ**
**ಜಘ್ನೇಽಸುರೇನ್ದ್ರಮಭಯಾಯ ಸತಾಂ ನೃಸಿಂಹೇ ॥**

ನೀರಿನಲ್ಲಿ ಬಿದ್ದು ಉದ್ಧಾರಕ್ಕಾಗಿ ಪ್ರಾರ್ಥಿಸುತ್ತಿದ್ದ ಶ್ರಮಣಋಷಿ

ಗಳನ್ನು ಆದಿಪುರುಷನು ಅಂಶಾವತಾರವನ್ನೆತ್ತಿ ಉದ್ಧರಿಸಿದನು.* ವೃತ್ರಾಸುರನ ವಧೆಯಿಂದಾಗಿ ಇಂದ್ರನು ಬ್ರಹ್ಮಹತ್ಯಾಪಾಪಕ್ಕೆ ಗುರಿಯಾದನು. ಇದರಿಂದ ಭಯಗೊಂಡ ಇಂದ್ರನು ಬಚ್ಚಿಟ್ಟುಕೊಂಡನು. ಆ ಸಮಯದಲ್ಲಿ ಕಲಾವತಾರವನ್ನೆತ್ತಿದ ಆದಿಪುರುಷನು ಇಂದ್ರನನ್ನು ಬ್ರಹ್ಮಹತ್ಯಾದೋಷದಿಂದ ಬಿಡಿಸಿದನು. ರಾಕ್ಷಸರ ಅರಮನೆಗಳಲ್ಲಿ ಬಂಧಿಸಲ್ಪಟ್ಟು ಅನಾಥೆಯರಾಗಿದ್ದ ದೇವಸ್ತ್ರೀಯರನ್ನು ಭಗವಂತನು ಕಲಾವತಾರವನ್ನೆತ್ತಿ ಬಿಡುಗಡೆಮಾಡಿದನು. ನೃಸಿಂಹಾವತಾರದಲ್ಲಿ ಸತ್ಪುರುಷರಿಗೆ ಅಭಯದಾನ ಮಾಡುವ ಸಲುವಾಗಿ ಅಸುರೇಂದ್ರನಾದ ಹಿರಣ್ಯಕಶಿಪುವನ್ನು ಸಂಹರಿಸಿದನು.

ದೇವಾಸುರೇ ಯುಧಿ ಚ ದೈತ್ಯಪತೀನ್ಸುರಾರ್ಥೇ
ಹತ್ವಾನ್ತರೇಷು ಭುವನಾನ್ಯದಧಾತ್ಕಲಾಭಿಃ ।
ಭೂತ್ವಾಥ ವಾಮನ ಇಮಾಮಹರದ್ಬಲೇಃ ಕ್ಷ್ಮಾಂ
ಯಾಚ್ಞಾಚ್ಛಲೇನ ಸಮದಾದದಿತೇಃ ಸುತೇಭ್ಯಃ ॥೨೦॥

ಆ ಆದಿಪುರುಷನು ದೇವತೆಗಳನ್ನು ರಕ್ಷಿಸುವ ಸಲುವಾಗಿ ದೇವಾಸುರ ಯುದ್ಧಗಳಲ್ಲಿ ದೈತ್ಯಶ್ರೇಷ್ಠರೆಲ್ಲರನ್ನೂ ಸಂಹರಿಸಿದನು. ಎಲ್ಲ ಮನ್ವಂತರಗಳಲ್ಲಿಯೂ ತನ್ನ ಶಕ್ತಿಯಿಂದ ಹಲವಾರು ಕಲಾವತಾರಗಳನ್ನೆತ್ತಿ ತ್ರಿಭುವನಗಳನ್ನು ಸಂರಕ್ಷಿಸಿದನು. ಪುನಃ ವಾಮನಾವತಾರವನ್ನೆತ್ತಿ ಯಾಚನೆ ಮಾಡುವ ನೆಪದಿಂದ ತ್ರಿಭುವನಗಳನ್ನೂ ಬಲಿಚಕ್ರವರ್ತಿಯಿಂದ ಕಸಿದುಕೊಂಡು ಅದಿತಿಯ ಮಕ್ಕಳಾದ ದೇವೇಂದ್ರನೇ ಮೊದಲಾದವರಿಗೆ ಕೊಟ್ಟುಬಿಟ್ಟನು.

---

* ಒಮ್ಮೆ ವಾಲಖಿಲ್ಯರೆಂಬ ಶ್ರಮಣರು ಕಶ್ಯಪನ ಆಜ್ಞೆಯಂತೆ ಪತ್ರಸಹಿತವಾದ ಮುತ್ತುಗದ ಮರದ ಒಂದೊಂದು ಕೊಂಬೆಯನ್ನು ಒಬ್ಬೊಬ್ಬರೂ ತರುತ್ತಾ ಸೂಕ್ಷ್ಮಶರೀರದವರಾಗಿದ್ದುದರಿಂದ ಗೋವಿನ ಗೊರಸಿನಿಂದ ಉಂಟಾಗಿದ್ದ ಹಳ್ಳದಲ್ಲಿ ಬಿದ್ದುಬಿಟ್ಟರು. ಏರಿಬರಲು ಸ್ತುತಿಸಿದ ಅವರನ್ನು ಭಗವಂತನು ಉದ್ಧರಿಸಿದನು.

(ಗರುಡೋಪಾಖ್ಯಾನ : ಸಿದ್ಧಾಂತದೀಪಿಕೆ)

**ನಿಃಕ್ಷತ್ರಿಯಾಮಕೃತ ಗಾಂ ಚ ತ್ರಿಃ ಸಪ್ತಕೃತ್ವೋ**
**ರಾಮಸ್ತು ಹೈಹಯಕುಲಾಪ್ಯಯಭಾರ್ಗವಾಗ್ನಿಃ ।**
**ಸೋಽಬ್ಧಿಂ ಬಬನ್ಧ ದಶವಕ್ತ್ರ ಮಹನ್ಸಲಙ್ಕಂ**
**ಸೀತಾಪತಿರ್ಜಯತಿ ಲೋಕಮಲಘ್ನಕೀರ್ತಿಃ ॥೨೧॥**

ಪುನಃ ಆ ಆದಿಪುರುಷನು ಹೈಹಯರ ವಂಶವೆಂಬ ಬಿದಿರುಮೆಳೆಗೆ ಅಗ್ನಿಪ್ರಾಯನಾದ ಭಾರ್ಗವರಾಮನಾಗಿ ಅವತರಿಸಿ ಇಪ್ಪತ್ತೊಂದು ಬಾರಿ ಭೂಮಂಡಲದಲ್ಲಿದ್ದ ದುಷ್ಟಕ್ಷತ್ರಿಯರಾಜರನ್ನು ಆಕ್ರಮಿಸಿ ಭೂಮಂಡಲವನ್ನೇ ಕ್ಷತ್ರಿಯರಿಂದ ರಹಿತವನ್ನಾಗಿ ಮಾಡಿಬಿಟ್ಟನು. ಆದಿಪುರುಷನೇ ಪುನಃ ರಾಮನಾಗಿ ಅವತರಿಸಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ದಶಮುಖನಾದ ರಾವಣನನ್ನು ಸಂಹರಿಸಿದನು. ಜನರ ಪಾಪಗಳೆಲ್ಲವನ್ನೂ ನಾಶಗೊಳಿಸುವ ನೆಂಬ ಕೀರ್ತಿಯನ್ನುಗಳಿಸಿರುವ ಸೀತಾಪತಿಯಾದ ಶ್ರೀರಾಮಚಂದ್ರನು ಭಕ್ತರ ಮನಸ್ಸನ್ನೂ ಜಯಿಸಿದ್ದಾನೆ.

**ಭೂಮೇರ್ಭರಾವತರಣಾಯ ಯದುಷ್ವಜನ್ಮಾ**
**ಜಾತಃ ಕರಿಷ್ಯತಿ ಸುರೈರಪಿ ದುಷ್ಕರಾಣಿ ।**
**ವಾದೈರ್ವಿಮೋಹಯತಿ ಯಜ್ಞಕೃತೋಽತದರ್ಹಾನ್**
**ಶೂದ್ರಾನ್ಕಲೌ ಕ್ಷಿತಿಭುಜೋ ನ್ಯಹನಿಷ್ಯದನ್ತೇ ॥೨೨॥**

ನಿಮಿರಾಜನೇ! ಆದಿಪುರುಷನು ಹುಟ್ಟು-ಸಾವುಗಳಿಂದ ರಹಿತನಾಗಿ ದ್ದರೂ ಭೂಮಿಯ ಭಾರವನ್ನು ಇಳಿಸುವ ಸಲುವಾಗಿ ಯದುವಂಶದಲ್ಲಿ ಜನ್ಮವನ್ನು ತಳೆದು ದೇವತೆಗಳಿಂದಲೂ ಮಾಡಲಾಗದ ಅದ್ಭುತಕರ್ಮಗಳನ್ನು ಮಾಡುತ್ತಾನೆ. ಪುನಃ ಆದಿಪುರುಷನು ಮುಂದೆ ಬೌದ್ಧಾವತಾರವನ್ನೆತ್ತಿ ಯಜ್ಞಕ್ಕೆ ಅನಧಿಕಾರಿಗಳಾದವರು ಯಜ್ಞಮಾಡುವುದನ್ನು ನೋಡಿ ಅನೇಕ ಪ್ರಕಾರವಾದ ತರ್ಕ-ವಿತರ್ಕಗಳಿಂದ ಅವರನ್ನು ಯಜ್ಞಕರ್ಮದಿಂದ ವಿಮುಖರನ್ನಾಗಿ ಮಾಡುತ್ತಾನೆ. ಕಲಿಯುಗದ ಅಂತ್ಯದಲ್ಲಿ ಕಲ್ಕ್ಯವತಾರವನ್ನು ಮಾಡಿ ಅಧರ್ಮಿಷ್ಠರಾದ ರಾಜರನ್ನು ಸಂಹರಿಸುತ್ತಾನೆ.

ಮಹಾಬಾಹುವಾದ ವಿದೇಹರಾಜನೇ! ಆದಿಪುರುಷನ ಕೀರ್ತನೆಯು ಅನಂತವಾದುದು. ಮಹಾತ್ಮರಾದವರು ಜಗತ್ಪತಿಯಾದ ಭಗವಂತನ

ಇಂತಹುದೇ ಅವತಾರಕಥೆಗಳನ್ನು ಮತ್ತು ಆ ಅವತಾರಗಳಲ್ಲಿ ಅವನು ಮಾಡಿರುವ ಅದ್ಭುತಕರ್ಮಗಳನ್ನು ವರ್ಣನೆಮಾಡಿ ಹೇಳಿರುತ್ತಾರೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ಏಕಾದಶಸ್ಕಂಧದ ೪ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೫ನೆಯ ಅಧ್ಯಾಯ

## ಭಕ್ತಿಹೀನರಿಗೆ ಪ್ರಾಪ್ತವಾಗುವ ದುರ್ಗತಿ : ಭಗವಂತನ ಪೂಜಾವಿಧಿಯ ವರ್ಣನೆ

ನಿಮಿರಾಜನು ಪ್ರಶ್ನಿಸುತ್ತಾನೆ :

**ಭಗವನ್ತಂ ಹರಿಂ ಪ್ರಾಯೋ ನ ಭಜನ್ತ್ಯಾತ್ಮವಿತ್ತಮಾಃ ।**
**ತೇಷಾಮಶಾನ್ತಕಾಮಾನಾಂ ಕಾ ನಿಷ್ಠಾವಿಜಿತಾತ್ಮನಾಮ್ ॥೧॥**

"ಆತ್ಮವಿದರಲ್ಲಿ ಅತ್ಯಂತಶ್ರೇಷ್ಠರಾಗಿರುವ ಮುನಿಸತ್ತಮರೇ! ಯಾರು ಐಹಿಕಾಮುಷ್ಮಿಕಕಾಮನೆಗಳು ತೀರದೆ ಭೋಗಜೀವನದಲ್ಲಿಯೇ ಆಸಕ್ತರಾಗಿರುವರೋ, ಜಿತೇಂದ್ರಿಯರಾಗಿರುವುದಿಲ್ಲವೋ ಪ್ರಾಯಶಃ ಭಗವಂತನಾದ ಶ್ರೀಹರಿಯನ್ನು ಒಮ್ಮೆಯಾದರೂ ಭಜಿಸುವುದಿಲ್ಲವೋ–ಅಂತಹವರು ಯಾವ ಗತಿಯನ್ನು ಹೊಂದುತ್ತಾರೆ?"

ಯೋಗೀಶ್ವರರಲ್ಲಿ ಎಂಟನೆಯವರಾದ ಚಮಸರು ಹೇಳುತ್ತಾರೆ :

**ಮುಖಬಾಹೂರುಪಾದೇಭ್ಯಃ ಪುರುಷಸ್ಯಾಶ್ರಮೈಃ ಸಹ ।**
**ಚತ್ವಾರೋ ಜಜ್ಞಿರೇ ವರ್ಣಾ ಗುಣೈರ್ವಿಪ್ರಾದಯಃ ಪೃಥಕ್ ॥೨॥**

**ಯ ಏಷಾಂ ಪುರುಷಂ ಸಾಕ್ಷಾದಾತ್ಮಪ್ರಭವಮೀಶ್ವರಮ್ ।**
**ನ ಭಜನ್ತ್ಯವಜಾನನ್ತಿ ಸ್ಥಾನಾದ್ಭ್ರಷ್ಟಾಃಪತನ್ತ್ಯಧಃ ॥೩॥**

"ಮಹಾರಾಜ! ವಿರಾಟ್‌ಪುರುಷನ ಮುಖದಿಂದ ಸತ್ತ್ವಗುಣ ಪ್ರಧಾನನಾದ ಬ್ರಾಹ್ಮಣನೂ, ಭುಜಗಳಿಂದ ಸತ್ತ್ವ-ರಜೋಗುಣಗಳಿಂದ ಕೂಡಿದ ಕ್ಷತ್ರಿಯನೂ, ತೊಡೆಗಳಿಂದ ರಜಸ್ತಮೋಗುಣಗಳಿಂದ ಕೂಡಿದ ವೈಶ್ಯನೂ, ಕಾಲಿನಿಂದ ತಮೋಗುಣಪ್ರಧಾನನಾದ ಶೂದ್ರನೂ ಹುಟ್ಟಿದರು.

ವಿರಾಟ್‌ಪುರುಷನ ತೊಡೆಗಳಿಂದ ಗೃಹಸ್ಥಾಶ್ರಮವೂ, ಹೃದಯದಿಂದ ಬ್ರಹ್ಮಚರ್ಯಾಶ್ರಮವೂ, ವಕ್ಷಃಸ್ಥಳದಿಂದ ವಾನಪ್ರಸ್ಥಾಶ್ರಮವೂ, ತಲೆಯಿಂದ ಸಂನ್ಯಾಸಾಶ್ರಮವೂ ಆವಿರ್ಭವಿಸಿದುವು. ಈ ನಾಲ್ಕು ವರ್ಣಗಳಿಗೂ ಮತ್ತು ಆಶ್ರಮಗಳಿಗೂ ಜನ್ಮದಾತನು ಸ್ವತಃ ಭಗವಂತನೇ ಆಗಿದ್ದಾನೆ. ಭಗವಂತನೇ ಇವೆಲ್ಲಕ್ಕೂ ಸ್ವಾಮಿಯೂ, ನಿಯಾಮಕನೂ ಮತ್ತು ಆತ್ಮಸ್ವರೂಪನೂ ಆಗಿದ್ದಾನೆ. ಆದುದರಿಂದ ಈ ವರ್ಣ ಮತ್ತು ಆಶ್ರಮಗಳಲ್ಲಿರತಕ್ಕ, ತಮ್ಮ ಉತ್ಪತ್ತಿಗೆ ಕಾರಣನಾದ ಭಗವಂತನನ್ನು ಯಾರು ಭಜಿಸುವುದಿಲ್ಲವೋ, ಭಜಿಸುವುದಕ್ಕೆ ಬದಲಾಗಿ ಅನಾದರಣೆ ಮಾಡುವರೋ–ಅಂತಹವರು ತಮ್ಮ ಸ್ಥಾನದಿಂದಲೂ, ಆಶ್ರಮದಿಂದಲೂ, ಮನುಷ್ಯ ಜನ್ಮದಿಂದಲೂ ಕೂಡ ಜಾರಿ ಅಧಃಪತನವನ್ನುಹೊಂದುತ್ತಾರೆ.

**ದೂರೇ ಹರಿಕಥಾಃ ಕೇಚಿದ್ದೂರೇಚಾಚ್ಯುತಕೀರ್ತನಾಃ ।**
**ಸ್ತ್ರಿಯಃ ಶೂದ್ರಾದಯಶ್ಚೈವ ತೇಽನುಕಮ್ಪ್ಯಾ ಭವಾದೃಶಾಮ್ ॥೪॥**

ಹಲವಾರು ಮಂದಿ ಸ್ತ್ರೀಯರೂ, ಹಲವಾರು ಮಂದಿ ಶೂದ್ರರೂ ಕೂಡ ಹರಿಕಥಾದಿಗಳಿಂದಲೂ, ಹರಿಭಜನ-ಕೀರ್ತನಾದಿಗಳಿಂದಲೂ ಬಹಳ ದೂರವಿರುತ್ತಾರೆ. ಅವರಿಗೆ ಹರಿಕಥೆಗಳನ್ನು ಕೇಳಲು ಮತ್ತು ಹರಿಭಜನೆ ಮಾಡಲು ಅವಕಾಶವೇ ಇರುವುದಿಲ್ಲ. ಮಹಾರಾಜ! ನೀನು ಅಂತಹವರ ವಿಷಯದಲ್ಲಿ ಅನುಕಂಪೆಯನ್ನು ತೋರಿಸಬೇಕು. ಅಂತಹವರಿಗೂ ಹರಿಕಥೆಗಳನ್ನು ಕೇಳಲು ಭಜನೆಮಾಡಲು ಅವಕಾಶವನ್ನು ಮಾಡಿಕೊಟ್ಟು ಅವರನ್ನು ಉದ್ಧರಿಸಬೇಕು.

**ವಿಪ್ರೋ ರಾಜನ್ಯವೈಶ್ಯೌ ಚ ಹರೇಃ ಪ್ರಾಪ್ತಾಃ ಪದಾನ್ತಿಕಮ್ ।**
**ಶ್ರೌತೇನ ಜನ್ಮನಾಥಾಪಿ ಮುಹ್ಯನ್ತ್ಯಾಮ್ನಾಯವಾದಿನಃ ॥೫॥**

ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು ಜನ್ಮದಿಂದಲೂ, ಉಪನಯನಾದಿ ಸಂಸ್ಕಾರಗಳಿಂದಲೂ, ವೇದಗಳ ಅಧ್ಯಯನದಿಂದಲೂ ಭಗವಂತನ ಚರಣ ಕಮಲಗಳ ಸಮೀಪವನ್ನು ಮುಟ್ಟುವರೆಂಬುದೇನೋ ನಿಜ. ಆದರೆ ಅವರು ವೇದದ ಪರಮಾರ್ಥವನ್ನು ತಿಳಿಯದೆ ಅರ್ಥವಾದದಲ್ಲಿಯೇ* ಮಗ್ನರಾಗಿ

* ಅರ್ಥವಾದ : ಇವು ಅತಿಶಯವಾದ ನಿಂದೆ ಅಥವಾ ಪ್ರಶಂಸಾರೂಪವಾಗಿರುತ್ತದೆ. ಆದರೆ ಇವುಗಳಿಗೆ ಆ ನಿಂದೆಯಲ್ಲಿ ಅಥವಾ ಪ್ರಶಂಸೆಯಲ್ಲಿ ತಾತ್ಪರ್ಯವಿಲ್ಲ. ನಿಂದಿಸ

ವಿಮೋಹಿತರಾಗುತ್ತಾರೆ. ಫಲಾಪೇಕ್ಷೆಯಿಂದ ವೇದೋಕ್ತವಾದ ಕರ್ಮಗಳನ್ನು ಮಾಡುವುದರಲ್ಲಿಯೇ ಆಸಕ್ತರಾಗಿರುತ್ತಾರೆ.

**ಕರ್ಮಣ್ಯಕೋವಿದಾಃ ಸ್ತಬ್ಧಾ ಮೂರ್ಖಾಃ ಪಣ್ಡಿತಮಾನಿನಃ ।**
**ವದನ್ತಿ ಚಾಟುಕಾನ್ಮೂಢಾ ಯಯಾ ಮಧ್ವ್ಯಾ ಗಿರೋತ್ಸುಕಾಃ ॥೬॥**

ಕರ್ಮದ ರಹಸ್ಯವನ್ನೇ ಅರಿಯದ ಅವರಿಗೆ ತತ್ತ್ವವು ತಿಳಿಯದು. ನಿಷ್ಕಾಮಕರ್ಮದ ಮಹತ್ತ್ವವೇ ಅವರಿಗೆ ತಿಳಿದಿರುವುದಿಲ್ಲ. ಗರ್ವಿಷ್ಠರೂ, ಮೂರ್ಖರೂ ಆಗಿರುವ ಇವರು ತಾವೇ ಮಹಾಪಂಡಿತರೆಂದು ಭಾವಿಸಿ ಕೊಳ್ಳುತ್ತಾರೆ. ಮೂಢರಾದ ಇವರು ವೇದಗಳಲ್ಲಿ ಬರುವ ಜೇನುತುಪ್ಪದಂತಹ ವಾಕ್ಯಗಳಿಂದ ಉತ್ಸಾಹಿತರಾಗಿ, ವೇದೋಕ್ತವಾದ ಮತ್ತು ಪ್ರಿಯವಾಗಿ ಕಾಣುವ ವಾಕ್ಕುಗಳನ್ನೇ ಉದ್ಧರಿಸುತ್ತಾ ಕಾಮ್ಯಕರ್ಮಗಳನ್ನು ಪ್ರೋತ್ಸಾಹಿಸುತ್ತಾರೆ.*

---

ಲ್ಪಟ್ಟಿರುವುದನ್ನು ಬಿಡಬೇಕು. ಮತ್ತು ಪ್ರಶಂಸೆಮಾಡಲ್ಪಟ್ಟಿರುವುದನ್ನು ಆಚರಿಸಬೇಕು–ಎಂದು ಅರ್ಥ.

ಉದಾಹರಣೆಗೆ ಸೂರ್ಯೋದಯದನಂತರ ಮಾಡುವ ಹೋಮವನ್ನು ನಿಂದೆ ಮಾಡಿದರೆ ಅದಕ್ಕೆ ಆ ನಿಂದೆಯಲ್ಲಿ ತಾತ್ಪರ್ಯವಿಲ್ಲ. ಉದಯಕ್ಕೆ ಮೊದಲು ಹೋಮಮಾಡಬೇಕು–ಎಂಬುದರಲ್ಲಿ ಅಭಿಪ್ರಾಯ. ಹಾಗೆಯೇ ಉದಯಕ್ಕೆ ಮುಂಚಿನ ಹೋಮವನ್ನು ನಿಂದಿಸಿದರೆ ಅದಕ್ಕೆ ನಿಂದೆಯಲ್ಲೂ ತಾತ್ಪರ್ಯವಿಲ್ಲ. ಉದಯಾನಂತರ ಹೋಮಮಾಡಬೇಕು–ಎಂಬುದರಲ್ಲಿ ತಾತ್ಪರ್ಯ.

---

* ವೇದಗಳಲ್ಲಿ ಬರುವ ಚಾಟೂಕ್ತಿಗಳು : ಅಪಾಮ ಸೋಮಮಮೃತಾ ಅಭೂಮ । ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಂ ಭವತಿ । ಯತ್ರ ನೋಷ್ಣಂ ನ ಶೀತಂ ಸ್ಯಾನ್ನಗ್ಲಾನಿರ್ವಾಪ್ಯರಾತಯಃ । ಸೋಮವೆಂಬ ಅಮೃತವನ್ನು ಕುಡಿದು ಮರಣವಿಲ್ಲದಂತಾಗೋಣ. ಚಾತುರ್ಮಾಸ್ಯವನ್ನು ಮಾಡಿದವನಿಗೆ ನಾಶರಹಿತವಾದ ಸುಕೃತವುಂಟು. ಸ್ವರ್ಗದಲ್ಲಿ ಬಿಸಿಲಿಲ್ಲ, ಚಳಿಯಿಲ್ಲ, ಆಯಾಸವಿಲ್ಲ, ಹಗೆಗಳೂ ಇಲ್ಲ.

(ಭಾಗವತದೀಪಿಕಾ)

ಸ್ತ್ರಿಯಮುದ್ವಹೇತ್ । ಋತಾವುಪೇಯಾತ್ । ಹುತಶೇಷಮಶ್ನೀಯಾತ್ । ಸೌತ್ರಾಮಣ್ಯಾಂ ಸುರಾಗ್ರಹಾನ್ ಗೃಹ್ಣಾತಿ । ಪ್ರತಿಗ್ರಹಾದಿನಾ ಧನಮಾರ್ಜಯೇತ್ ॥ ನ ಸುರಾಂ ಪಿಬೇತ್ । ಸ್ತ್ರೀಯನ್ನು ಮದುವೆಮಾಡಿಕೊಳ್ಳಬೇಕು. ಋತುಕಾಲದಲ್ಲಿ ಸ್ತ್ರೀಯನ್ನು ಸೇರಬೇಕು. ಹೋಮಾವಶಿಷ್ಟವಾದ ಮಾಂಸವನ್ನು ತಿನ್ನಬೇಕು.

**ರಜಸಾ ಘೋರಸಙ್ಕಲ್ಪಾಃ ಕಾಮುಕಾ ಅಹಿಮನ್ಯವಃ ।**
**ದಾಮ್ಭಿಕಾ ಮಾನಿನಃ ಪಾಪಾ ವಿಹಸನ್ತ್ಯಚ್ಯುತಪ್ರಿಯಾನ್ ॥೭॥**

ರಜೋಗುಣದ ಆಧಿಕ್ಯದಿಂದಾಗಿ ಅವರು ಬಹು ಘೋರವಾದ, ಭಯಂಕರವಾದ ಸಂಕಲ್ಪಗಳನ್ನು ಮಾಡುತ್ತಿರುತ್ತಾರೆ. ಅತಿಕಾಮಿಗಳಾಗಿರುತ್ತಾರೆ. ಅವರ ಕಾಮನೆಗಳಿಗೆ ಅಂತ್ಯವೆಂಬುದೇ ಇರುವುದಿಲ್ಲ. ಒಂದು ಸಂಕಲ್ಪದ ಕಾಮನೆಯು ಪೂರ್ಣವಾಯಿತೆಂದರೆ ಮತ್ತೊಂದು ಕಾಮನೆಯ ಪೂರಣಕ್ಕಾಗಿ ಸಂಕಲ್ಪಮಾಡುತ್ತಾರೆ. ಸರ್ಪದಂತೆ ಕಡುಗೋಪಿಗಳಾಗಿರುತ್ತಾರೆ. ದಾಂಭಿಕರೂ, ಮಾನಿಷ್ಠರೂ, ಪಾಪಿಷ್ಠರೂ ಆಗಿರುತ್ತಾರೆ. ಹರಿಭಕ್ತರನ್ನು ನೋಡಿದರೆ ಹಾಸ್ಯಮಾಡುತ್ತಾರೆ.

**ವದನ್ತಿ ತೇಽನ್ಯೋನ್ಯಮುಪಾಸಿತಸ್ತ್ರಿಯೋ**
**ಗೃಹೇಷು ಮೈಥುನ್ಯಪರೇಷು ಚಾಶಿಷಃ ।**
**ಯಜನ್ತ್ಯಸೃಷ್ಟಾನ್ನ ವಿಧಾನದಕ್ಷಿಣಂ**
**ವೃತ್ತ್ಯೈ ೃ ಪರಂ ಘ್ನನ್ತಿ ಪಶೂನತದ್ವಿದಃ ॥೮॥**

ದಾಂಭಿಕರಾದ ಆ ಜನರು ಗುರುಜನರ ಸೇವೆಯನ್ನಾಗಲೀ ವೃದ್ಧರ ಸೇವೆಯನ್ನಾಗಲೀ ಮಾಡದೆ ಪರಸ್ಪರವಾಗಿ ಸ್ತ್ರೀಯರ ಸೇವೆಯನ್ನೇ ಅನವರತವೂ ಮಾಡುತ್ತಿರುತ್ತಾರೆ. ಮೈಥುನಪ್ರಧಾನವಾದ ಗೃಹಸ್ಥಾಶ್ರಮವೇ ಶ್ರೇಯಸ್ಕರವಾದುದೆಂದು ಹೇಳುತ್ತಾರೆ. ಪ್ರಾಣಿಹಿಂಸೆಯಿಂದ ಪಾಪವುಂಟಾಗುವುದೆಂಬುದನ್ನು ಅರಿಯದ ಈ ಜನರು ಕೇವಲ ತಮ್ಮ

---

ಸೌತ್ರಾಮಣೀಯಾಗದಲ್ಲಿ ಸುರಾಗ್ರಹಣವನ್ನು ಮಾಡಬೇಕು. ಪ್ರತಿಗ್ರಹಾದಿಗಳಿಂದ ಧನವನ್ನು ಅರ್ಜಿಸಬೇಕು. ಮದ್ಯವನ್ನು ಕುಡಿಯಕೂಡದು. (ವೀರರಾಘವೀಯ)

ಶ್ರೀಕೃಷ್ಣನು ಗೀತೆಯಲ್ಲಿ :

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯ ವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥

ಕಾಮಾತ್ಮನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯ ಗತಿಂ ಪ್ರತಿ ॥೪೩॥

ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥

-(ಭ.ಗೀ. ಅಧ್ಯಾಯ ೨)

ಜೀವಿಕೆಗಾಗಿ ಬ್ರಾಹ್ಮಣಭೋಜನವಾಗಲೀ ಋತ್ವಿಗ್ದಕ್ಷಿಣೆಯಾಗಲೀ ಇಲ್ಲದ ಯಜ್ಞಗಳನ್ನು ಮಾಡಿ ಪಶುಗಳನ್ನು ಹಿಂಸಿಸುತ್ತಾರೆ.

**ಶ್ರಿಯಾ ವಿಭೂತ್ಯಾಭಿಜನೇನ ವಿದ್ಯಯಾ**
**ತ್ಯಾಗೇನ ರೂಪೇಣ ಬಲೇನ ಕರ್ಮಣಾ ।**
**ಜಾತಸ್ಮಯೇನಾನ್ಧಧಿಯಃ ಸಹೇಶ್ವರಾನ್**
**ಸತೋಽವಮನ್ಯನ್ತಿ ಹರಿಪ್ರಿಯಾನ್ಖಲಾಃ ॥೯॥**

ಧನಮದದಿಂದಲೂ, ಅಧಿಕಾರಮದದಿಂದಲೂ, ಉಚ್ಚಕುಲದಲ್ಲಿ ಹುಟ್ಟಿರುವ ಮದದಿಂದಲೂ, ವಿದ್ಯಾಮದದಿಂದಲೂ, ಔದಾರ್ಯಮದ ದಿಂದಲೂ, ರೂಪದ ಮದದಿಂದಲೂ, ಬಲಮದದಿಂದಲೂ, ದಾಂಭಿಕವಾದ ಕರ್ಮಗಳನ್ನು ಮಾಡಿದ ಮದದಿಂದಲೂ, ಕುರುಡುಬುದ್ಧಿಯುಳ್ಳವರಾಗಿ ಪರಮನೀಚರಾಗಿ ಶ್ರೀಹರಿಯನ್ನೂ ಹರಿದಾಸರನ್ನೂ ಅವಹೇಳನಮಾಡುತ್ತಾರೆ.

**ಸರ್ವೇಷು ಶಶ್ವತ್ತನುಭೃತ್ಸ್ವವಸ್ಥಿತಂ**
**ಯಥಾ ಖಮಾತ್ಮಾನಮಭೀಷ್ಟಮೀಶ್ವರಮ್ ।**
**ವೇದೋಪಗೀತಂ ಚ ನ ಶೃಣ್ವತೇಽಬುಧಾ**
**ಮನೋರಥಾನಾಂ ಪ್ರವದನ್ತಿ ವಾರ್ತಯಾ ॥೧೦॥**

ಸಮಸ್ತ ಪ್ರಾಣಿಗಳಲ್ಲಿಯೂ ನಿತ್ಯ-ನಿರಂತರವೂ ಆಕಾಶದಂತೆ ಆತ್ಮ ರೂಪದಿಂದಲೂ ಅಂತರ್ಯಾಮಿಯ ರೂಪದಿಂದಲೂ ಪರಮಾತ್ಮನಿರುವನೆಂಬ ವೇದಪ್ರತಿಪಾದ್ಯವಾದ ವಿಷಯವನ್ನು ಈ ದಾಂಭಿಕರು ಕೇಳುವುದೂ

---

ವೇದಗಳ ತೋರಿಕೆಯ ಅರ್ಥಗಳನ್ನು ವಾದಿಸುವುದರಲ್ಲಿಯೇ ನಿರತರಾಗಿ ಅವುಗಳನ್ನು ಬಿಟ್ಟರೆ ಮತ್ತೇನೂ ಇಲ್ಲವೆಂದೇ ವಾದಿಸುವ ಅವಿವೇಕಿಗಳು ಇದ್ದಾರೆ. ಅವರು ಕಾಮಸ್ವಭಾವವುಳ್ಳವರು. ಸ್ವರ್ಗದಲ್ಲಿಯೇ ತತ್ಪರರಾದವರು. ಜನ್ಮಕರ್ಮಗಳನ್ನು ಫಲವನ್ನಾಗಿ ಕೊಡುವ ಮಾತುಗಳನ್ನಾಡುತ್ತಾರೆ. ಭೋಗ ಮತ್ತು ಐಶ್ವರ್ಯಪ್ರಾಪ್ತಿಗಳಿಗೆ ಸಾಧನವಾದ ಕ್ರಿಯಾಕಲಾಪವಿಶೇಷಗಳಿಂದ ತುಂಬಿರುವ ಮಾತುಗಳನ್ನಾಡುತ್ತಾರೆ. ಅವರ ಮಾತು ಕೇವಲ ಹೂವಿನಂತೆ ಕೋಮಲವಾಗಿರುತ್ತವೆ. ಕೇಳುವುದಕ್ಕೆ ರಮಣೀಯವಾಗಿರುತ್ತವೆ. ಭೋಗ ಮತ್ತು ಐಶ್ವರ್ಯಗಳಲ್ಲಿ ಆಸಕ್ತಿಯುಳ್ಳವರಾಗಿ ಅದರಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳ ಅವರ ಬುದ್ಧಿಯು ನಿಶ್ಚಯಾತ್ಮಿಕವಾಗಿ ಸಮಾಧಿಯಲ್ಲಿ ನೆಲೆಗೊಳ್ಳುವುದಿಲ್ಲ.

ಇಲ್ಲ. ಇದಕ್ಕೆ ಬದಲಾಗಿ ಭೋಗವೈಭವಾದಿ ಮನೋರಥಗಳ ಪ್ರಸಂಗಗಳನ್ನೇ ಕುರಿತು ಮಾತನಾಡುತ್ತಾ ಕಾಲಕಳೆಯುತ್ತಾರೆ.

**ಲೋಕೇ ವ್ಯವಾಯಾಮಿಷಮದ್ಯಸೇವಾ-**
**ನಿತ್ಯಾಸ್ತು ಜನ್ತೋರ್ನ ಹಿ ತತ್ರ ಚೋದನಾ ।**
**ವ್ಯವಸ್ಥಿತಿಸ್ತೇಷು ವಿವಾಹಯಜ್ಞ-**
**ಸುರಾಗ್ರಹೈರಾಸು ನಿವೃತ್ತಿರಿಷ್ಟಾ ॥೧೧॥**

ಲೋಕದಲ್ಲಿ ಹೆಣ್ಣಿನೊಡನೆ ಸಮಾಗಮಮಾಡಬೇಕೆನ್ನುವ, ಮದ್ಯ-ಮಾಂಸಗಳನ್ನು ಸೇವಿಸಬೇಕೆನ್ನುವ ಆಸೆಯು ಸಮಸ್ತ ಪ್ರಾಣಿಗಳಿಗೂ ಸ್ವಾಭಾವಿಕವಾಗಿಯೇ ನಿತ್ಯವಾಗಿರುತ್ತದೆ. ಇದಕ್ಕೆ ಯಾರೊಬ್ಬರ ಪ್ರೇರಣೆಯೂ ಬೇಕಾಗಿಲ್ಲ. ಇದನ್ನು ಶಾಸ್ತ್ರವು ವಿಧಿಸಬೇಕಾಗಿಲ್ಲ. ಆದರೂ ವಿವಾಹಿತಳಾದ ಸ್ತ್ರೀಯೊಡನೆ ಋತುಸಮಯದಲ್ಲಿ ಮಾತ್ರವೇ ಸಮಾಗಮ ಮಾಡಬೇಕು ; ಯಜ್ಞಶಿಷ್ಟರಾದ ಮಾಂಸವನ್ನು ಮಾತ್ರವೇ ಭುಂಜಿಸಬೇಕು. ಸೌತ್ರಾಮಣೀ ಯಾಗದಲ್ಲಿ ಮಾತ್ರ ಪ್ರಸಾದರೂಪದಲ್ಲಿ ಸ್ವಲ್ಪ ಸುರಾಸೇವನೆಯನ್ನು ಮಾಡಬಹುದು. ಮುಂತಾಗಿ ವೇದವು ಏಕೆ ವಿಧಿಸಿದೆಯೆಂದರೆ : ಪರಸ್ತ್ರೀಗಮನ ಮಾಡಬಾರದು ; ಸ್ವೇಚ್ಛೆಯಿಂದ ಮಾಂಸ-ಮದ್ಯಗಳನ್ನು ಸೇವಿಸಬಾರದು– ಎಂದು ಈ ಕುತ್ಸಿತಕರ್ಮಗಳನ್ನು ನಿಷೇಧಿಸುವುದಕ್ಕಾಗಿಯೇ ಹೊರತು ಅವುಗಳಲ್ಲಿ ಪ್ರವೃತ್ತಿಯನ್ನು ಪ್ರಚೋದಿಸುವುದಕ್ಕಾಗಿ ಈ ವಿಧಿನಿಯಮಗಳನ್ನು ವೇದವು ಹೇಳಿಲ್ಲ. ಧರ್ಮವಿರುದ್ಧವಾದ ಮೈಥುನ-ಮದ್ಯ-ಮಾಂಸಗಳ ನಿಷೇಧವೇ ವೇದಧರ್ಮಕ್ಕೆ ಇಷ್ಟವಾಗಿದೆ. ಆದರೆ ಇವುಗಳನ್ನು ಇಂತಹ ವೇದೋಕ್ತಿಗಳಿಂದ ವೇದದಲ್ಲಿಯೂ ಮದ್ಯ-ಮಾಂಸ-ಮೈಥುನಾದಿಗಳಿಗೆ ಪ್ರೇರಣೆಯಿರುವುದೆಂದು ಭಾವಿಸಬಾರದು.

**ಧನಂ ಚ ಧರ್ಮೈಕಫಲಂ ಯತೋ ವೈ**
**ಜ್ಞಾನಂ ಸವಿಜ್ಞಾನಮನುಪ್ರಶಾನ್ತಿ ।**
**ಗೃಹೇಷು ಯುಞ್ಜನ್ತಿ ಕಲೇವರಸ್ಯ**
**ಮೃತ್ಯುಂ ನ ಪಶ್ಯನ್ತಿ ದುರನ್ತವೀರ್ಯಮ್ ॥೧೨॥**

ಧನಕ್ಕೆ ಏಕಮಾತ್ರ ಫಲ ಧರ್ಮವಾಗಿದೆ. ಸಂಗ್ರಹಿಸಿದ ಧನವನ್ನು ಧರ್ಮಕ್ಕಾಗಿಯೇ ವಿನಿಯೋಗಿಸಬೇಕು. ಧರ್ಮದಿಂದಲೇ ಪರತತ್ತ್ವದ

ಜ್ಞಾನವುಂಟಾಗುತ್ತದೆ. ಅನಂತರ ತತ್ತ್ವಜ್ಞಾನದ ಅನುಭವವುಂಟಾಗುತ್ತದೆ. ಆತ್ಮಸಾಕ್ಷಾತ್ಕಾರದ ಮೂಲಕವಾಗಿ ಪರಮಶಾಂತಿಯು ಲಭಿಸುತ್ತದೆ. ಇಂತಹ ಪರಮೋತ್ಕೃಷ್ಟವಾದ ಧರ್ಮವನ್ನು ಪ್ರಚುರಗೊಳಿಸಲು ಸಂಗ್ರಹಿಸಿದ ಧನವನ್ನು ವಿನಿಯೋಗಿಸಬೇಕು. ಆದರೆ ಈಗ ಕಷ್ಟಾರ್ಜಿತವಾದ ಆ ಧನವನ್ನು ಕೇವಲ ಗೃಹಕೃತ್ಯಕ್ಕಾಗಿಯೂ, ಶರೀರದ ಪೋಷಣೆಗಾಗಿಯೂ, ಕಾಮೋಪಭೋಗ ಗಳಿಗಾಗಿಯೂ ವಿನಿಯೋಗಿಸುತ್ತಾರೆ. ಆದರೆ ಈ ಶರೀರವು ಎಂದಾದರೊಂದು ದಿನ ದುರಂತವೀರ್ಯನಾದ ಮೃತ್ಯುವಿಗೆ ತುತ್ತಾಗುವುದೆಂಬುದನ್ನು ಯಾರೂ ಪರಿಗಣಿಸುತ್ತಿಲ್ಲ.

**ಯದ್ಘ್ರಾಣಭಕ್ಷೋ ವಿಹಿತಃ ಸುರಾಯಾ-**
**ಸ್ತಥಾ ಪಶೋರಾಲಭನಂ ನ ಹಿಂಸಾ ।**
**ಏವಂ ವ್ಯವಾಯಃ ಪ್ರಜಯಾ ನ ರತ್ಯಾ**
**ಇಮಂ ವಿಶುದ್ಧಂ ನ ವಿದುಃ ಸ್ವಧರ್ಮಮ್ ॥೧೩॥**

ವಿದ್ವಾಂಸರೆಂದು ಭಾವಿಸಿಕೊಂಡಿರುವ ಕರ್ಮಪಾಷಂಡಿಗಳು ವೇದ ವಾಕ್ಯಗಳ ನಿಜವಾದ ಅರ್ಥವನ್ನು ತಿಳಿದವರಾಗಿಲ್ಲ. ವೇದವಾಕ್ಯಗಳಿಗೆ ಅಪಾರ್ಥಮಾಡುತ್ತಾರೆ. ಸೌತ್ರಾಮಣೀಯಾಗದಲ್ಲಿ ಸುರೆಯನ್ನು ಆಘ್ರಾಣಿಸ ಬೇಕೆಂದು ಹೇಳಿದೆ. ಪಾನಮಾಡಬೇಕೆಂದು ಹೇಳಿಲ್ಲ. ಅಂತೆಯೇ ಪಶುವನ್ನು ಸ್ಪರ್ಶಿಸಬೇಕೆಂದು ಹೇಳಿದೆ. ಹಿಂಸಿಸಬೇಕೆಂದು ಹೇಳಿಲ್ಲ. ಧರ್ಮಪತ್ನಿಯೊಡನೆ ಸಮಾಗಮವನ್ನು ಧರ್ಮಪ್ರಜೆಗಳ ಪ್ರಾಪ್ತಿಗಾಗಿ ಹೇಳಿದೆ. ಕಾಮತೃಪ್ತಿಗಾಗಿ ಅಲ್ಲ. ಇಂತಹ ವಿಶುದ್ಧವಾದ ಧರ್ಮವನ್ನು ಅವರು ತಿಳಿದವರಾಗಿಲ್ಲ.

**ಯೇ ತ್ವನೇವಂವಿದೋಽಸನ್ತಃ ಸ್ತಬ್ಧಾಃ ಸದಭಿಮಾನಿನಃ ।**
**ಪಶೂನ್ದ್ರುಹ್ಯನ್ತಿ ವಿಸ್ರಬ್ಧಾಃ ಪ್ರೇತ್ಯ ಖಾದನ್ತಿ ತೇ ಚ ತಾನ್ ॥೧೪॥**

ವಿಶುದ್ಧವಾದ ಈ ಸನಾತನಧರ್ಮವನ್ನು ತಿಳಿಯದೇ ಇರತಕ್ಕವರು, ಅಹಂಕಾರಿಗಳೂ, ದುಷ್ಟರೂ ಆಗಿದ್ದರೂ ತಾವು ಸತ್ಪುರುಷರೆಂದು ಭಾವಿಸಿ ಕೊಂಡು ಯಾವ ವಿಧವಾದ ಶಂಕೆಯೂ ಇಲ್ಲದೆ, ಪಶುಗಳಿಗೆ ಅವುಗಳನ್ನು ಕೊಲ್ಲುವುದರ ಮೂಲಕ ದ್ರೋಹವೆಸಗುತ್ತಾರೆ. ಇದರ ಫಲವೇನೆಂದರೆ

ಪರಲೋಕದಲ್ಲಿ ಆ ಪಶುಗಳೇ ತಮ್ಮ ಹಂತಕರಾಗಿದ್ದ ಅವರನ್ನು ತಿಂದುಹಾಕಿ ಬಿಡುತ್ತವೆ.*

**ದ್ವಿಷನ್ತಃ ಪರಕಾಯೇಷು ಸ್ವಾತ್ಮಾನಂ ಹರಿಮೀಶ್ವರಮ್ ।**
**ಮೃತಕೇ ಸಾನುಬನ್ಧೇऽಸ್ಮಿನ್ಬದ್ಧಸ್ನೇಹಾಃ ಪತನ್ತ್ಯಧಃ ॥೧೫॥**

ತಮ್ಮ ಹೃದಯದಲ್ಲಿರುವ ಶ್ರೀಹರಿಯೇ ಇತರರ ಹೃದಯಕಮಲ ಗಳಲ್ಲೂ ಇದ್ದಾನೆಂಬುದನ್ನು ಅರಿಯದೆ ಇತರರನ್ನು ದ್ವೇಷಿಸುವ ಮೂಲಕವಾಗಿ ಶ್ರೀಹರಿಯನ್ನೇ ದ್ವೇಷಿಸುತ್ತಾ ಮರಣಧರ್ಮವಿರುವ ಈ ಶರೀರದಲ್ಲಿಯೂ ಶರೀರಕ್ಕೆ ಸಂಬಂಧಿಸಿದವರಲ್ಲಿಯೂ ಸ್ನೇಹಬೆಳೆಸಿಕೊಳ್ಳುವವರು ಪತಿತರಾಗುತ್ತಾರೆ.

**ಯೇ ಕೈವಲ್ಯಮಸಂಪ್ರಾಪ್ತಾ ಯೇ ಚಾತೀತಾಶ್ಚ ಮೂಢತಾಮ್ ।**
**ತ್ರೈವರ್ಗಿಕಾ ಹ್ಯಕ್ಷಣಿಕಾ ಆತ್ಮಾನಂ ಘಾತಯನ್ತಿ ತೇ ॥೧೬॥**

ಯಾರು ಆತ್ಮಜ್ಞಾನವನ್ನು ಸಂಪಾದಿಸಿ ಮೋಕ್ಷವನ್ನು ಪಡೆದಿಲ್ಲವೋ ಮತ್ತು ಯಾರು ಅತ್ಯಂತ ಮೂಢರೂ ಅಲ್ಲವೋ ಅಂತಹ ಇಬ್ಬಂದಿಗಳಾದ, ಧರ್ಮಾರ್ಥ-ಕಾಮಗಳಲ್ಲಿಯೇ ನಿರತರಾದ, ಕ್ಷಣವಾದರೂ ಶಾಂತಿಸುಖ ವಿಲ್ಲದಿರುವ ಮನುಷ್ಯರು ಆತ್ಮಘಾತಕರಾಗುತ್ತಾರೆ.[1]

**ಏತ ಆತ್ಮಹನೋऽಶಾನ್ತಾ ಅಜ್ಞಾನೇ ಜ್ಞಾನಮಾನಿನಃ ।**
**ಸೀದನ್ತ್ಯಕೃತಕೃತ್ಯಾ ವೈ ಕಾಲಧ್ವಸ್ತಮನೋರಥಾಃ ॥೧೭॥**

---

* ಮಾಂಸ ಶಬ್ದಕ್ಕೆ ಅರ್ಥ :
ಮಾಂ ಸಭಕ್ಷಯತಾಮುತ್ರ ಯಸ್ಯಮಾಂಸಮಿಹಾದ್ಮ್ಯಹಮ್ ।
ಏತನ್ಮಾಂಸಸ್ಯ ಮಾಂಸತ್ವಂ ಪ್ರವದನ್ತಿ ಮನೀಷಿಣಃ ॥

ನಾನು ಈ ಲೋಕದಲ್ಲಿ ಯಾವುದರ ಮಾಂಸವನ್ನು ತಿನ್ನುವೆನೋ ಅದು ಪರ ಲೋಕದಲ್ಲಿ ನನ್ನನ್ನು ತಿನ್ನುವುದು–ಎಂದು ಮಾಂಸಶಬ್ದಕ್ಕೆ ಪಂಡಿತರು ಅರ್ಥವನ್ನು ಹೇಳುತ್ತಾರೆ. ಮಾಂ = ನನ್ನನ್ನು ಸಃ = ಅದು ತಿನ್ನುವುದು–ಮಾಂಸ.

1 ಧರ್ಮಾರ್ಥ-ಕಾಮಗಳೆಂಬ ತ್ರಿವರ್ಗಗಳನ್ನೂ ದಾಟಿ ಮೋಕ್ಷಮಾರ್ಗವನ್ನು ಹಿಡಿದ ಮನುಷ್ಯರು ಸಂಸಾರಬಂಧನದಿಂದ ಪಾರಾಗುತ್ತಾರೆ. ಅತ್ಯಂತ ಮೂಢರಾ

ಅಜ್ಞಾನವನ್ನೇ ಜ್ಞಾನವೆಂದು ಭಾವಿಸುವ ಆತ್ಮಘಾತಕರಾದ ಇವರು ಯಾವಾಗಲೂ ಅಶಾಂತರಾಗಿಯೇ ಇರುತ್ತಾರೆ. ಅವರು ಮಾಡುವ ಕರ್ಮಗಳು ಎಂದಿಗೂ ಮುಗಿಯುವುದೇ ಇಲ್ಲ. ಕಾಲಪುರುಷನು ಯಾವಾಗಲೂ ಇವರ ಮನೋರಥಗಳನ್ನು ಭಗ್ನಗೊಳಿಸುತ್ತಿರುತ್ತಾನೆ. ಯಾವುದರಲ್ಲಿಯೂ ಕೃತಾರ್ಥರಾಗದ ಇವರು ಕಾಲಾನುಕ್ರಮವಾಗಿ ವಿನಾಶಹೊಂದುತ್ತಾರೆ.

**ಹಿತ್ವಾತ್ಯಾಯಾಸರಚಿತಾ ಗೃಹಾಪತ್ಯಸುಹೃಚ್ಛ್ರಿಯಃ ।**
**ತಮೋ ವಿಶನ್ತ್ಯನಿಚ್ಛನ್ತೋ ವಾಸುದೇವಪರಾಙ್ಮುಖಾಃ ॥೧೮॥**

ಮಹಾರಾಜ! ಸರ್ವಾಂತರ್ಯಾಮಿಯಾದ ಶ್ರೀಕೃಷ್ಣಪರಮಾತ್ಮನಿಂದ ಯಾರು ವಿಮುಖರಾಗುವರೋ ಅಂತಹ ಪಾಪಿಗಳು ತಾವು ಅತ್ಯಂತ ಶ್ರಮದಿಂದ ಸಂಪಾದಿಸಿದ ಮನೆ-ಮಕ್ಕಳು-ಸುಹೃದರು-ಸಂಪತ್ತು ಈ ಎಲ್ಲವನ್ನೂ ಇಷ್ಟವಿಲ್ಲದಿದ್ದರೂ ತೊರೆದುಹೋಗುತ್ತಾರೆ. ಭಗವಂತನನ್ನು ಭಜಿಸದ ವಿಷಯಾಸಕ್ತರಾದ ಮನುಷ್ಯರಿಗೆ ಲಭಿಸುವ ಗತಿಯೂ ಇದೇ ಆಗಿದೆ."

---

ದವರು ತತ್ತ್ವಜ್ಞಾನಿಗಳ ಮಾರ್ಗದರ್ಶನದಿಂದ ಪಾರಾಗುತ್ತಾರೆ. ಮೂಢರೂ ಅಲ್ಲದೇ ಜ್ಞಾನಿಗಳೂ ಆಗದೇ ಇರುವವರು ದೇಹಾಭಿಮಾನಿಗಳಾಗಿ ಜನನ-ಮರಣಗಳ ಚಕ್ರಕ್ಕೆ ಸಿಕ್ಕಿ ಆತ್ಮಘಾತಕರಾಗುತ್ತಾರೆ. ತ್ರಿವರ್ಗದಲ್ಲಿ ಬರುವ ಧರ್ಮಕ್ಕೆ ಆಶ್ರಮೋಕ್ತವಾದ ಧರ್ಮ = ವರ್ಣಾಶ್ರಮಧರ್ಮ–ಎಂದರ್ಥ. ಮೋಕ್ಷಧರ್ಮವು ಬೇರೆ :

ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂ ಗತಃ ।
ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯನ್ತರಿತೋ ಜನಃ ॥

ಲೋಕದಲ್ಲಿ ಅತ್ಯಂತ ಮೂಢನಾದವನೂ, ಬುದ್ಧಿಗಿಂತಲೂ ಆಚೆಯದನ್ನು (ಆತ್ಮ ತತ್ತ್ವವನ್ನು) ತಿಳಿದವನೂ ಸುಖವಾಗಿರುತ್ತಾರೆ. ಈ ಮಧ್ಯದವರು ತಾಪತ್ರಯಗಳಿಗೆ ಸಿಕ್ಕಿ ನರಳುತ್ತಿರುತ್ತಾರೆ. (ಸಿದ್ಧಾಂತದೀಪಿಕಾ)

ಅಸುರ್ಯಾ ನಾಮ ತೇ ಲೋಕಾ ಅನ್ಧೇನ ತಮಸಾ ವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛನ್ತಿ ಯೇ ಕೇ ಚಾತ್ಮಹನೋ ಜನಾಃ ॥

ಯಾರು ಅವಿದ್ಯಾದೋಷದಿಂದ ಆತ್ಮನನ್ನು ತಿರಸ್ಕರಿಸುವರೋ ಅಂತಹ ಆತ್ಮಘಾತಕರು ಮೃತರಾದ ಬಳಿಕ ಅಂದತಮಸ್ಸಿನ ಲೋಕಗಳಿಗೆ ಹೋಗುವರು.

ಆತ್ಮಹನಃ ಎಂಬುದಕ್ಕೆ ಆತ್ಮಜ್ಞಾನವಿಲ್ಲದವರೆಂದೂ, ದೇಹಹತ್ಯೆ ಮಾಡಿಕೊಂಡವ ರೆಂದೂ ಅರ್ಥವಾಗುತ್ತದೆ. ಆದರೆ ಇಲ್ಲಿ ಆತ್ಮಜ್ಞಾನವಿಲ್ಲದವರು–ಎಂದೇ ಅರ್ಥ.

(ಈಶಾವಾಸ್ಯ )

ನಿಮಿರಾಜನು ಪುನಃ ಪ್ರಶ್ನಿಸುತ್ತಾನೆ :

**ಕಸ್ಮಿನ್ಕಾಲೇ ಸ ಭಗವಾನ್ ಕಿಂವರ್ಣಃ ಕೀದೃಶೋ ನೃಭಿಃ ।**
**ನಾಮ್ನಾ ವಾ ಕೇನ ವಿಧಿನಾ ಪೂಜ್ಯತೇ ತದಿಹೋಚ್ಯತಾಮ್ ॥೧೯॥**

"ಯೋಗೀಶ್ವರರೇ! ಭಗವಂತನು ಯಾವ ಸಮಯದಲ್ಲಿ ಯಾವ ವರ್ಣದ, ಯಾವ ಆಕಾರವನ್ನು ಹೊಂದಿರುತ್ತಾನೆ? ಮನುಷ್ಯರು ಯಾವ ಶುಭನಾಮಗಳಿಂದ ಯಾವ ವಿಧಿಯನ್ನು ಅನುಸರಿಸಿ ಅವನ ಉಪಾಸನೆಯನ್ನು ಮಾಡುತ್ತಾರೆ? ಈ ವಿಷಯವನ್ನು ಹೇಳುವ ಕೃಪೆ ಮಾಡಿರಿ."

ಯೋಗೀಶ್ವರರಲ್ಲಿ ಒಂಭತ್ತನೆಯವರಾದ ಕರಭಾಜನರು ರಾಜನ ಪ್ರಶ್ನೆಗೆ ಉತ್ತರಿಸುತ್ತಾರೆ :

**ಕೃತಂ ತ್ರೇತಾ ದ್ವಾಪರಂ ಚ ಕಲಿರಿತ್ಯೇಷು ಕೇಶವಃ ।**
**ನಾನಾವರ್ಣಾಭಿಧಾಕಾರೋ ನಾನೈವ ವಿಧಿನೇಜ್ಯತೇ ॥೨೦॥**

"ಮಹಾರಾಜ! ಕೃತ-ತ್ರೇತಾ-ದ್ವಾಪರ-ಕಲಿಗಳೆಂಬ ನಾಲ್ಕು ಯುಗಗಳಲ್ಲಿ ಕೇಶವನು ನಾನಾವಿಧವಾದ ವರ್ಣಗಳನ್ನೂ ನಾಮಧೇಯಗಳನ್ನೂ ಆಕೃತಿಗಳನ್ನೂ ಹೊಂದಿರುತ್ತಾನೆ. ಅಂತೆಯೇ ಅವನು ನಾನಾಪ್ರಕಾರವಾದ ವಿಧಿ-ನಿಯಮಗಳಿಂದ ಪೂಜಿಸಲ್ಪಡುತ್ತಾನೆ. ಕೃತಯುಗದಲ್ಲಿ ಕೇಶವನು ಶುಕ್ಲವರ್ಣನಾಗಿರುತ್ತಾನೆ. ಚತುರ್ಭುಜನಾಗಿರುತ್ತಾನೆ. ಕೃಷ್ಣಮೃಗದ ಚರ್ಮವನ್ನೂ, ಯಜ್ಞೋಪವೀತವನ್ನೂ, ಅಕ್ಷಮಾಲೆಯನ್ನೂ, ದಂಡ-ಕಮಂಡಲುಗಳನ್ನೂ ಧರಿಸಿರುತ್ತಾನೆ.

ಈ ಯುಗದಲ್ಲಿ ಮನುಷ್ಯರು ಪರಮಶಾಂತರಾಗಿರುತ್ತಾರೆ. ಪರಸ್ಪರವಾಗಿ ವೈರರಹಿತರಾಗಿರುತ್ತಾರೆ. ಎಲ್ಲರಿಗೂ ಹಿತೈಷಿಗಳೂ ಸಮದರ್ಶಿಗಳೂ ಆಗಿರುತ್ತಾರೆ. ಅವರು ಇಂದ್ರಿಯಗಳನ್ನು ಮತ್ತು ಮನಸ್ಸನ್ನು ವಶದಲ್ಲಿಟ್ಟುಕೊಂಡು ಶಮ-ದಮಸಂಪನ್ನರಾಗಿ ಧ್ಯಾನರೂಪವಾದ ತಪಸ್ಸಿನ ಮೂಲಕವಾಗಿ ಪರಮಾತ್ಮನನ್ನು ಆರಾಧಿಸುತ್ತಾರೆ. ಕೃತಯುಗದ ಮನುಷ್ಯರು ಭಗವಂತನನ್ನು ಹಂಸ, ಸುಪರ್ಣ, ವೈಕುಂಠ, ಧರ್ಮ, ಯೋಗೇಶ್ವರ, ಅಮಲ, ಈಶ್ವರ, ಪುರುಷ, ಅವ್ಯಕ್ತ, ಪರಮಾತ್ಮಾ–ಇವೇ ಮುಂತಾದ ಶುಭನಾಮಗಳ ಮೂಲಕವಾಗಿ ಕೀರ್ತಿಸುತ್ತಾರೆ.

ತ್ರೇತಾಯುಗದಲ್ಲಿ ಭಗವಂತನ ಬಣ್ಣವು ಕೆಂಪು. ಆತನು ಚತುರ್ಭುಜನಾಗಿರುತ್ತಾನೆ. ಸೊಂಟದಲ್ಲಿ ಮೂರೆಳೆ ಉಡಿದಾರವನ್ನು ಧರಿಸಿರುತ್ತಾನೆ. ಹೊಂಬಣ್ಣದ ಕೂದಲು. ವೇದಪ್ರತಿಪಾದಿತವಾದ ಯಜ್ಞಪುರುಷನ ರೂಪವನ್ನು ಧರಿಸಿ ಕೈಗಳಲ್ಲಿ ಸ್ರುಕ್-ಸ್ರುವವೇ ಮೊದಲಾದ ಯಜ್ಞಪಾತ್ರೆಗಳನ್ನು ಹಿಡಿದಿರುತ್ತಾನೆ. ಆ ಯುಗದಲ್ಲಿ ಮನುಷ್ಯರು ತಮ್ಮ ವರ್ಣಾಶ್ರಮ ಧರ್ಮಗಳಲ್ಲಿ ಅತ್ಯಂತನಿಷ್ಠಾವಂತರಾಗಿರುತ್ತಾರೆ. ಧರ್ಮಿಷ್ಠರೂ, ಬ್ರಹ್ಮಚಾರಿಗಳೂ ಆದ ಅವರು ಋಗ್ಯಜುಸ್ಸಾಮಗಳೆಂಬ ಮೂರು ವೇದಗಳಿಂದ ಸರ್ವದೇವಸ್ವರೂಪನಾದ ದೇವಾಧಿದೇವನಾದ ಶ್ರೀಹರಿಯನ್ನು ಆರಾಧಿಸುತ್ತಾರೆ. ಆ ಯುಗದಲ್ಲಿ ಪರಮಾತ್ಮನನ್ನು ವಿಷ್ಣು, ಯಜ್ಞ, ಪೃಶ್ನಿಗರ್ಭ, ಸರ್ವದೇವ, ಉರುಕ್ರಮ, ವೃಷಾಕಪಿ, ಜಯಂತ, ಉರುಗಾಯ–ಇವೇ ಮುಂತಾದ ಶುಭನಾಮಗಳಿಂದ ಕೀರ್ತನೆ ಮಾಡುತ್ತಾರೆ.

ದ್ವಾಪರಯುಗದಲ್ಲಿ ಭಗವಂತನು ಶ್ಯಾಮಲವರ್ಣದವನಾಗಿರುತ್ತಾನೆ. ಪೀತಾಂಬರವನ್ನು ಉಟ್ಟಿರುತ್ತಾನೆ. ತನ್ನದೇ ಆಯುಧಗಳಾದ ಶಾರ್ಙ್ಗ ಧನುಸ್ಸನ್ನೂ, ಸುದರ್ಶನಚಕ್ರವನ್ನೂ ಕೌಮೋದಕೀಗದೆಯನ್ನೂ, ನಂದಕವೆಂಬ ಕತ್ತಿಯನ್ನೂ ಧರಿಸಿರುತ್ತಾನೆ. ಶ್ರೀವತ್ಸವೇ ಮುಂತಾದ ಚಿಹ್ನೆಗಳಿಂದಲೂ ಕೌಸ್ತುಭವೇ ಮೊದಲಾದ ಮಣಿಗಳಿಂದಲೂ ಕೂಡಿದವನಾಗಿರುತ್ತಾನೆ. ಆ ಯುಗದಲ್ಲಿ ಜಿಜ್ಞಾಸುಗಳಾದ ಮನುಷ್ಯರು ರಾಜಯೋಗ್ಯವಾದ ಛತ್ರ-ಚಾಮರಗಳಿಂದ ಯುಕ್ತನಾದ ಆ ಮಹಾಪುರುಷನನ್ನು ವೈದಿಕ ಮತ್ತು ತಾಂತ್ರಿಕಪೂಜಾಕ್ರಮಗಳಿಂದ ಆರಾಧಿಸುತ್ತಾರೆ ಮತ್ತು ಈ ಪ್ರಕಾರವಾಗಿ ಅವನನ್ನು ಸ್ತುತಿಸುತ್ತಾರೆ :

**ನಮಸ್ತೇ ವಾಸುದೇವಾಯ ನಮಃ ಸಙ್ಕರ್ಷಣಾಯ ಚ ।**
**ಪ್ರದ್ಯುಮ್ನಾಯಾನಿರುದ್ಧಾಯ ತುಭ್ಯಂ ಭಗವತೇ ನಮಃ ॥೨೯॥**

**ನಾರಾಯಣಾಯ ಋಷಯೇ ಪುರುಷಾಯ ಮಹಾತ್ಮನೇ ।**
**ವಿಶ್ವೇಶ್ವರಾಯ ವಿಶ್ವಾಯ ಸರ್ವಭೂತಾತ್ಮನೇ ನಮಃ ॥೩೦॥**

ವಾಸುದೇವನಾದ ನಿನಗೆ ನಮಸ್ಕರಿಸುತ್ತೇನೆ. ಸಂಕರ್ಷಣನಿಗೆ ನಮಸ್ಕರಿಸುತ್ತೇನೆ. ಪ್ರದ್ಯುಮ್ನ ಮತ್ತು ಅನಿರುದ್ಧರ ರೂಪದಲ್ಲಿರುವ

ಭಗವಂತನಾದ ನಿನಗೆ ನಮಸ್ಕರಿಸುತ್ತೇನೆ. ನಾರಾಯಣಋಷಿಗೆ, ಮಹಾತ್ಮನಾದ ನರನಿಗೆ, ವಿಶ್ವೇಶ್ವರನಿಗೆ, ಸರ್ವಭೂತಾತ್ಮನಾದ ವಿಶ್ವನಿಗೆ ನಮಸ್ಕರಿಸುತ್ತೇನೆ."

ಮಹಾರಾಜ! ಈ ಪ್ರಕಾರವಾಗಿ ದ್ವಾಪರಯುಗದಲ್ಲಿ ಜನರು ಜಗದೀಶ್ವರನಾದ ಭಗವಂತನನ್ನು ಸ್ತುತಿಸುತ್ತಾರೆ.

ಈಗ ನಾನು, ಕಲಿಯುಗದಲ್ಲಿ ಯಾವ ರೀತಿಯಲ್ಲಿ ನಾನಾಪ್ರಕಾರವಾದ ತಂತ್ರಗಳ ವಿಧಿ-ವಿಧಾನಗಳಿಂದ ಪರಮಾತ್ಮನನ್ನು ಆರಾಧಿಸುತ್ತಾರೆಂಬುದನ್ನು ಹೇಳುತ್ತೇನೆ. ಅದನ್ನು ಗಮನಿಸು.

ಕಲಿಯುಗದಲ್ಲಿ ಭಗವಂತನ ಬಣ್ಣವು ಕಪ್ಪು. ಆದರೂ ಶುದ್ಧವಾದ ಕಾಂತಿಯಿಂದ ಬೆಳಗುತ್ತಿರುತ್ತಾನೆ. ಕೈ-ಕಾಲುಗಳೇ ಮೊದಲಾದ ಅಂಗಗಳಿಂದಲೂ ಕೌಸ್ತುಭಮಣಿಯೇ ಮೊದಲಾದ ಉಪಾಂಗಗಳಿಂದಲೂ, ಸುದರ್ಶನವೇ ಮೊದಲಾದ ಅಸ್ತ್ರಗಳಿಂದಲೂ, ಸನಕ-ಸನಂದನಾದಿ ಪಾರ್ಷದರಿಂದಲೂ ಕೂಡಿರುವ ಶ್ರೀಕೃಷ್ಣನನ್ನು ನಾಮಸಂಕೀರ್ತನಪ್ರಧಾನವಾದ ಪೂಜೆಗಳಿಂದ ಮೇಧಾವಂತರು ಆರಾಧಿಸುತ್ತಾರೆ.

ಧ್ಯೇಯಂ ಸದಾ ಪರಿಭವಘ್ನ ಮಭೀಷ್ಟದೋಹಂ
ತೀರ್ಥಾಸ್ಪದಂ ಶಿವವಿರಿಞ್ಚಿನುತಂ ಶರಣ್ಯಮ್ ।
ಭೃತ್ಯಾರ್ತಿಹಂ ಪ್ರಣತಪಾಲಭವಾಬ್ಧಿಪೋತಂ
ವನ್ದೇ ಮಹಾಪುರುಷ ತೇ ಚರಣಾರವಿನ್ದಮ್ ॥೩೩॥

"ಪ್ರಭುವೇ! ನೀನು ಶರಣಾಗತರಕ್ಷಕನು. ನಿನ್ನ ಪಾವನವಾದ ಚರಣಾರವಿಂದಗಳು ಸದಾ-ಸರ್ವದಾ ಧ್ಯಾನಮಾಡಲು ಯೋಗ್ಯವಾಗಿವೆ. ಅವುಗಳು ಯಾವುದೇ ವಿಧವಾದ ಸೋಲನ್ನೂ ಭಗ್ನಗೊಳಿಸುತ್ತವೆ. ಭಕ್ತರ ಪರಾಭವವನ್ನು ಅವು ಸಹಿಸುವುದಿಲ್ಲ. ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವುದರಲ್ಲಿ ಕಾಮಧೇನುವಿನಂತಿರುತ್ತವೆ. ನಿನ್ನ ದಿವ್ಯಚರಣಾರವಿಂದಗಳು ತೀರ್ಥಗಳನ್ನು ಶುದ್ಧೀಕರಿಸಿ ಅವುಗಳಿಗೆ ತೀರ್ಥತ್ವವನ್ನು ಅನುಗ್ರಹಿಸುವ ಪರಮತೀರ್ಥಗಳಾಗಿವೆ. ಶಿವ-ಬ್ರಹ್ಮರೇ ಮೊದಲಾದ ಸಮಸ್ತ ದೇವತೆಗಳೂ ಅದಕ್ಕೆ ನಮಸ್ಕರಿಸುತ್ತಾರೆ. ಶರಣಾಗತರಾದವರಿಗೆ ಆ ದಿವ್ಯ

ಪಾದಾರವಿಂದಗಳು ಪರಮಾಶ್ರಯವಾಗಿವೆ. ಆರ್ತರಾದ ಭೃತ್ಯರ ಸಮಸ್ತ ಪೀಡೆಗಳನ್ನೂ ಪರಿಹರಿಸುತ್ತವೆ. ಭಕ್ತರನ್ನು ಸಂಸಾರವೆಂಬ ಸಾಗರದಿಂದ ಪಾರುಮಾಡಲು ದಿವ್ಯಚರಣಕಮಲಗಳು ಹಡಗಿನಂತಿವೆ. ಮಹಾಪುರುಷನೇ! ಭಗವಂತ! ನಾನು ನಿನ್ನ ಅಂತಹ ದಿವ್ಯಚರಣಾರವಿಂದಕ್ಕೆ ನಮ ಸ್ಕರಿಸುತ್ತೇನೆ.

**ತ್ಯಕ್ತ್ವಾ ಸುದುಸ್ತ್ಯಜಸುರೇಪ್ಸಿತರಾಜ್ಯಲಕ್ಷ್ಮೀಂ**
**ಧರ್ಮಿಷ್ಠ ಆರ್ಯವಚಸಾ ಯದಗಾದರಣ್ಯಮ್ ।**
**ಮಾಯಾಮೃಗಂ ದಯಿತಯೇಪ್ಸಿತಮನ್ವಧಾವ-**
**ದ್ವನ್ದೇ ಮಹಾಪುರುಷ ತೇ ಚರಣಾರವಿನ್ದಮ್ ॥೩೪॥**

ಧರ್ಮಿಷ್ಠನೇ! ನಿನ್ನ ಚರಣಕಮಲಗಳ ಮಹಿಮೆಯನ್ನು ಏನೆಂದು ಹೇಳಲಿ! ರಾಮಾವತಾರದಲ್ಲಿ ತಂದೆಯಾದ ದಶರಥನ ಮಾತಿನಂತೆ ದೇವತೆ ಗಳಿಂದಲೂ ವಾಂಛನೀಯವಾದ, ಸಾಮಾನ್ಯರಿಂದ ಪರಿತ್ಯಜಿಸಲು ಕಷ್ಟಸಾಧ್ಯ ವಾದ ರಾಜ್ಯಲಕ್ಷ್ಮಿಯನ್ನೂ ತ್ಯಜಿಸಿ ಯಾವ ಕೋಮಲವಾದ ಚರಣಾರ ವಿಂದಗಳಿಂದ ಅರಣ್ಯವನ್ನು ಸೇರಿದೆಯೋ ಮತ್ತು ಪ್ರೇಯಸಿಯಾದ ಸೀತಾ ದೇವಿಯ ಬಯಕೆಯಂತೆ ಚಿನ್ನದ ಜಿಂಕೆಯನ್ನು ಕರೆತರಲು ಯಾವ ದಿವ್ಯ ಚರಣಾರವಿಂದಗಳು ಮಾಯಾಮೃಗವನ್ನು ಬೆನ್ನಟ್ಟಿಹೋದುವೋ ಅಂತಹ ನಿನ್ನ ಪಾದಕಮಲಗಳನ್ನು ನಮಿಸುತ್ತೇನೆ, ಪರಮಪುರುಷ!"

ಮಹಾರಾಜ! ಈ ಪ್ರಕಾರವಾಗಿ ಆಯಾಯ ಯುಗಗಳಲ್ಲಿರುವ ಜನರು ಆಯಾ ಯುಗಗಳಿಗೆ ಅನುರೂಪವಾದ ಭಗವಂತನ ನಾಮರೂಪಗಳ ಮೂಲಕವಾಗಿ ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರು ಷಾರ್ಥಗಳಿಗೂ ಏಕಮಾತ್ರಸ್ವಾಮಿಯಾದ ಭಗವಂತನನ್ನು ಆರಾಧಿಸುತ್ತಾರೆ. ಕಲಿಯುಗದ ಗುಣಗಳನ್ನರಿತ ಸಾರಗ್ರಾಹಿಗಳಾದ ಆರ್ಯರು ಕಲಿಯುಗದಲ್ಲಿ ನಾಮಸಂಕೀರ್ತನಮಾತ್ರದಿಂದಲೇ ಸಕಲಇಷ್ಟಾರ್ಥಗಳೂ ಲಭ್ಯವಾಗುವ ಕಾರಣದಿಂದ ಈ ಯುಗವನ್ನು ಪ್ರಶಂಸಿಸುತ್ತಾರೆ.* ಸಂಸಾರದಲ್ಲಿ ಬಿದ್ದು

---

* ಧ್ಯಾಯನ್ ಕೃತೇ ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಙ್ಕೀರ್ತ್ಯ ಕೇಶವಮ್ ॥

ಒದ್ದಾಡುತ್ತಿರುವ ದೇಹಾಭಿಮಾನಿಗಳಾದ ಜನರಿಗೆ ಈ ಯುಗದಲ್ಲಿ ನಾಮ ಸಂಕೀರ್ತನಕ್ಕಿಂತಲೂ ಮಿಗಿಲಾದ ಲಾಭವೇ ಇಲ್ಲ. ದಿವ್ಯನಾಮಸಂಕೀರ್ತನೆ ಯಿಂದ ಮನುಷ್ಯನು ಪರಮಶಾಂತಿಯನ್ನು ಹೊಂದುತ್ತಾನೆ. ಅವನಿಗೆ ಸಂಸಾರಬಂಧನವೂ ಕಳಚಿಹೋಗುತ್ತದೆ.

**ಕೃತಾದಿಷು ಪ್ರಜಾ ರಾಜನ್ ಕಲಾವಿಚ್ಛನ್ತಿಸಮ್ಭವಮ್ ।**
**ಕಲೌ ಖಲು ಭವಿಷ್ಯನ್ತಿ ನಾರಾಯಣಪರಾಯಣಾಃ ॥೩೮॥**

ಮಹಾರಾಜ! ಕೃತ-ತ್ರೇತಾ-ದ್ವಾಪರ ಯುಗಗಳ ಜನರು ಕಲಿಯುಗದಲ್ಲಿ ಹುಟ್ಟಬೇಕೆಂದು ಅಪೇಕ್ಷಿಸುತ್ತಾರೆ. ಏಕೆಂದರೆ ಕಲಿಯುಗದಲ್ಲಿ ನಾರಾಯಣನನ್ನೇ ಆಶ್ರಯಿಸಿರುವ ಹಲವಾರು ಭಕ್ತರು ಹುಟ್ಟುತ್ತಾರೆ.

ವಿದೇಹಮಹಾರಾಜ! ತಾಮ್ರಪರ್ಣೀ, ಕೃತಮಾಲಾ, ಪಯಸ್ವಿನೀ, ಪರಮಪವಿತ್ರವಾದ ಕಾವೇರೀ, ಪಶ್ಚಿಮವಾಹಿನಿಯಾದ ಮಹಾನದೀ–ಇವೇ ಮುಂತಾದ ಪುಣ್ಯನದಿಗಳು ಹುಟ್ಟಿಹರಿಯುವ ದ್ರವಿಡದೇಶದಲ್ಲಿ ಅಧಿಕ ಸಂಖ್ಯೆಯಲ್ಲಿ ಭಕ್ತರು ಹುಟ್ಟುತ್ತಾರೆ. ಈ ಪುಣ್ಯನದಿಗಳ ಶುದ್ಧವಾದ ನೀರನ್ನು ಯಾರು ಪಾನಮಾಡುವರೋ ಅವರೆಲ್ಲರೂ ಶುದ್ಧವಾದ ಅಂತಃಕರಣ ವುಳ್ಳವರಾಗಿ ಭಗವಂತನಾದ ವಾಸುದೇವನ ಭಕ್ತರಾಗುತ್ತಾರೆ.

ಮಹಾರಾಜ! ಯಾವನು 'ಈ ಕಾರ್ಯವು ಇನ್ನೂ ಉಳಿದಿದೆ. ಇದನ್ನು ಅವಶ್ಯವಾಗಿ ಮಾಡಬೇಕು'–ಮುಂತಾದ ಕರ್ಮವಾಸನೆಗಳನ್ನು ಅಥವಾ ಭೇದಬುದ್ಧಿಯನ್ನು ತೊರೆದು ಸರ್ವಾತ್ಮಭಾವದಿಂದ ಶರಣಾಗತವತ್ಸಲನಾದ ಭಗವಾನ್ ಮುಕುಂದನನ್ನು ಶರಣುಹೊಂದುವನೋ ಅಂತಹವನು ದೇವ-ಋಷಿ-ಪಿತೃ-ಪ್ರಾಣಿಗಳ, ಕುಟುಂಬಿಜನರ, ಅತಿಥಿಗಳ ಋಣದಿಂದ ಮುಕ್ತನಾಗುತ್ತಾನೆ. ಆತನು ಪರಮಾತ್ಮನನ್ನುಳಿದು ಬೇರೆ ಯಾರಿಗೂ ಅಧೀನನೂ ಆಗಿರುವುದಿಲ್ಲ ; ಸೇವಕನೂ ಆಗಿರುವುದಿಲ್ಲ. ಯಾವನು

---

ಕೃತಯುಗದಲ್ಲಿ ಧ್ಯಾನಯೋಗದಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರ ಯುಗದಲ್ಲಿ ಪೂಜಾದಿಗಳಿಂದ ಯಾವ ಫಲವನ್ನು ಪಡೆಯುವರೋ ಅದೇ ಫಲವನ್ನು ಕಲಿಯುಗದಲ್ಲಿ ಕೇಶವನ ನಾಮಸಂಕೀರ್ತನಮಾತ್ರದಿಂದಲೇ ಪಡೆಯುವರು.

(ಭಾವಾರ್ಥದೀಪಿಕಾ)

ದೇಹವೇ ಮೊದಲಾದ ಇತರ ವಸ್ತುಗಳಲ್ಲಿ ಪ್ರೀತಿಯನ್ನು ತೊರೆದು, ವಾಸುದೇವನೇ ಸರ್ವಸ್ವವು ಎಂಬ ಅನನ್ಯಭಾವದಿಂದ ಶ್ರೀಹರಿಯ ಪಾದಮೂಲವನ್ನು ಭಜಿಸುವನೋ–ಅಂತಹ ಪ್ರೇಮೀಭಕ್ತನ ಹೃದಯದಲ್ಲಿ ಪರೇಶನಾದ ಶ್ರೀಹರಿಯು ನೆಲೆಸಿ ತನ್ನ ಭಕ್ತನು ಒಂದು ವೇಳೆ ಯಾವುದಾದರೂ ನಿಷಿದ್ಧ ಕರ್ಮಗಳನ್ನು ಮಾಡಿದರೂ ಆ ದೋಷವನ್ನು ಪರಿಹರಿಸಿ ಭಕ್ತನನ್ನು ಅನುಗ್ರಹಿಸುತ್ತಾನೆ."

ಹೀಗೆ ವಿದೇಹರಾಜನಿಗೂ ನವಯೋಗೇಶ್ವರರಿಗೂ ನಡೆದ ಸಂಭಾಷಣೆಯನ್ನು ನಾರದರು–ವಸುದೇವನಿಗೆ ಹೇಳಿ ತಮ್ಮ ಮಾತನ್ನು ಮುಂದುವರಿಸುತ್ತಾರೆ.

"ವಸುದೇವ! ಮಿಥಿಲಾನರೇಶನಾದ ನಿಮಿರಾಜನು ಒಂಭತ್ತು ಮಂದಿ ಯೋಗೀಶ್ವರರಿಂದ ಭಾಗವತಧರ್ಮವನ್ನು ಕೇಳಿ ಆನಂದತುಂದಿಲನಾದನು. ಅವನು ತನ್ನ ಋತ್ವಿಜರೊಡನೆಯೂ ಆಚಾರ್ಯರೊಡನೆಯೂ ಕೂಡಿಕೊಂಡು ಋಷಭಪುತ್ರರಾದ ಯೋಗೀಶ್ವರರನ್ನು ಯಥಾವಿಧಿಯಾಗಿ ಸತ್ಕರಿಸಿದನು. ಬಳಿಕ ಎಲ್ಲರೂ ನೋಡುತ್ತಿದ್ದಂತೆಯೇ ಯೋಗೀಶ್ವರರು ಅಂತರ್ಧಾನ ಹೊಂದಿದರು. ವಿದೇಹರಾಜನಾದ ನಿಮಿಯು ಯೋಗೀಶ್ವರರಿಂದ ಕೇಳಿದ ಭಾಗವತಧರ್ಮಗಳನ್ನು ಆಚರಿಸುತ್ತಾ ಕಾಲಾನಂತರದಲ್ಲಿ ಪರಮಪದವನ್ನೈದಿದನು.

ಮಹಾಭಾಗ್ಯಶಾಲಿಯಾದ ವಸುದೇವನೇ! ನನ್ನಿಂದ ಕೇಳಿರುವ ಭಾಗವತಧರ್ಮಗಳನ್ನು ನೀನು ಶ್ರದ್ಧೆಯಿಂದ ಆಚರಿಸಿದೆಯಾದರೆ ಅಂತ್ಯದಲ್ಲಿ ಆಸಕ್ತಿಗಳೆಲ್ಲವನ್ನೂ ತೊರೆದು ನಿಸ್ಸಂಗನಾಗಿ ಪರಮಾತ್ಮನ ಪರಮಪದವನ್ನು ಸೇರುವೆ.

ವಸುದೇವ! ಸರ್ವಶಕ್ತನಾದ ಭಗವಂತನು ನಿಮಗೆ ಮಗನ ರೂಪದಲ್ಲಿ ಅವತರಿಸಿದ್ದಾನೆ. ಆದುದರಿಂದ ನಿನ್ನ ಮತ್ತು ದೇವಕೀದೇವಿಯ ಯಶಸ್ಸು ಭೂಮಂಡಲದಲ್ಲಿ ತುಂಬಿಹೋಗಿದೆ. ಜಗದಾನಂದನಾದ ಶ್ರೀಕೃಷ್ಣನ ದರ್ಶನ, ಆಲಿಂಗನ, ಅವನೊಡನೆ ಮಾತನಾಡುವುದು, ಅವನನ್ನು ಮಲಗಿಸುವುದು, ಪೀಠದ ಮೇಲೆ ಕುಳ್ಳಿರಿಸುವುದು, ಊಟ ಮಾಡಿಸುವುದು–ಇತ್ಯಾದಿ ಕ್ರಿಯೆ

ಗಳಿಂದ ಪುತ್ರಸ್ನೇಹವನ್ನು ಪ್ರಕಟಿಸುತ್ತಿದ್ದ ನಿಮ್ಮ ಹೃದಯವು ಪವಿತ್ರವಾಗಿಬಿಟ್ಟಿದೆ.

**ವೈರೇಣ ಯಂ ನೃಪತಯಃ ಶಿಶುಪಾಲಪೌಂಡ್ರ-**
**ಶಾಲ್ವಾದಯೋ ಗತಿವಿಲಾಸವಿಲೋಕನಾದ್ಯೈಃ ।**
**ಧ್ಯಾಯನ್ತ ಆಕೃತಧಿಯಃ ಶಯನಾಸನಾದೌ**
**ತತ್ಸಾಮ್ಯಮಾಪುರನುರಕ್ತಧಿಯಾಂ ಪುನಃ ಕಿಮ್ ॥೪೮॥**

ವಸುದೇವ! ಶಿಶುಪಾಲ, ಪೌಂಡ್ರಕವಾಸುದೇವ, ಶಾಲ್ವ–ಇವರೇ ಮುಂತಾದ ರಾಜರು ವೈರಭಾವದಿಂದ ಶ್ರೀಕೃಷ್ಣನ ನಡಿಗೆ-ಬೆಡಗು-ನೋಟ ಮುಂತಾದುವುಗಳನ್ನು ಅಡಿಗಡಿಗೂ ಸ್ಮರಿಸಿಕೊಳ್ಳುತ್ತಿದ್ದರು. ಮಲಗಿದಾಗ, ಎದ್ದಾಗ, ಕುಳಿತಾಗ, ಶ್ರೀಕೃಷ್ಣನ ಸ್ವಾಭಾವಿಕವಾದ ರೂಪವನ್ನು ಶತ್ರುವೆಂಬ ಭಾವನೆಯಿಂದ ಸ್ಮರಿಸಿಕೊಳ್ಳುತ್ತಿದ್ದರು. ಹೀಗೆ ಸ್ಮರಿಸಿದರೂ ಅವರ ಚಿತ್ತ ವೃತ್ತಿಯು ಕೃಷ್ಣಾಕಾರವಾಗಿ ಹೋಯಿತು. ಎಲ್ಲೆಡೆಯಲ್ಲೂ ಅವರು ಕೃಷ್ಣನನ್ನೇ ಕಾಣುವಂತಾಯಿತು. ಇದರಿಂದ ಅವರು ಶ್ರೀಕೃಷ್ಣನ ಕಡುವೈರಿಗಳಾದರೂ ಸಾಮ್ಯಮುಕ್ತಿಗೆ ಅಧಿಕಾರಿಗಳಾದರು. ಹೀಗಿರುವಾಗ ಪ್ರೇಮಭಾವದಿಂದ ಮತ್ತು ಅನುರಾಗದಿಂದ ಶ್ರೀಕೃಷ್ಣನನ್ನು ಚಿಂತಿಸುವವರ ವಿಷಯವಾಗಿ ಹೇಳುವುದೇನಿದೆ? ಅವರು ಶ್ರೀಕೃಷ್ಣನ ಪಾದಾರವಿಂದಗಳನ್ನು ಸೇರುವರೆಂಬುದರಲ್ಲಿ ಸಂದೇಹವೇ ಇಲ್ಲ.

ವಸುದೇವ! ಸರ್ವಾತ್ಮನಾದ, ಸರ್ವೇಶ್ವರನಾದ, ಕಾರಣಾತೀತನಾದ, ಅವಿನಾಶಿಯಾದ, ಲೀಲಾಮಾನುಷವಿಗ್ರಹವಾಗಿ ಪ್ರಕಟವಾಗಿರುವ, ತನ್ನ ಈಶ್ವರೀಶಕ್ತಿಯನ್ನು ನಿಗೂಢವಾಗಿ ಇಟ್ಟುಕೊಂಡಿರುವ ಶ್ರೀಕೃಷ್ಣನಲ್ಲಿ ಪುತ್ರನೆಂಬ ಭಾವನೆಯನ್ನು ಇಟ್ಟುಕೊಳ್ಳಬೇಡ. ಆತನು ಸಾಕ್ಷಾತ್ ಭಗವಂತನು. ಪೃಥ್ವಿಗೆ ಭಾರಭೂತರಾದ ರಾಜವೇಷಧಾರಿಗಳಾದ ಅಸುರರ ವಿನಾಶಕ್ಕಾಗಿಯೂ, ಸತ್ಪುರುಷರನ್ನು ರಕ್ಷಿಸುವ ಸಲುವಾಗಿಯೂ, ಅರ್ಹರಾದವರಿಗೆ ಪರಮಶಾಂತಿಯನ್ನೂ ಮತ್ತು ಮುಕ್ತಿಯನ್ನೂ ದಯಪಾಲಿಸುವ ಸಲುವಾಗಿಯೂ ಅವತರಿಸಿರುವ ಶ್ರೀಕೃಷ್ಣನ ಸತ್ಕೀರ್ತಿಯು ಸರ್ವತ್ರವ್ಯಾಪಿಸುತ್ತದೆ.”

ಶ್ರೀಶುಕಮುನಿಗಳು ಹೇಳುತ್ತಾರೆ :

“ಪರೀಕ್ಷಿತಮಹಾರಾಜ! ನಾರದರು ಹೇಳಿದ ಈ ಮಾತನ್ನು ಕೇಳಿ ಪರಮಭಾಗ್ಯಶಾಲಿಯಾದ ವಸುದೇವನೂ, ಪರಮಭಾಗ್ಯವತಿಯಾದ ದೇವಕಿಯೂ ಅತ್ಯಂತ ವಿಸ್ಮಿತರಾದರು. ಭಗವಂತನನ್ನು ಪುತ್ರನೆಂದು ಭಾವಿಸಿದ್ದ ತಮ್ಮ ಅಜ್ಞಾನವನ್ನು ಒಡನೆಯೇ ದೂರೀಕರಿಸಿದರು.

**ಇತಿಹಾಸಮಿಮಂ ಪುಣ್ಯಂ ಧಾರಯೇದ್ಯಃ ಸಮಾಹಿತಃ ।**
**ಸ ವಿಧೂಯೇಹ ಶಮಲಂ ಬ್ರಹ್ಮಭೂಯಾಯ ಕಲ್ಪತೇ ॥೫೨॥**

ಪರೀಕ್ಷಿತಮಹಾರಾಜ! ಯಾವನು ಏಕಾಗ್ರಚಿತ್ತನಾಗಿ ಪರಮಪವಿತ್ರವಾದ ಈ ಇತಿಹಾಸವನ್ನು ಧರಿಸುವನೋ, ಮನನಮಾಡುವನೋ ಅವನು ತನ್ನ ಶೋಕ-ಮೋಹಗಳೆಲ್ಲವನ್ನೂ ನೀಗಿಕೊಂಡು ಬ್ರಹ್ಮಪದವನ್ನು ಸೇರುತ್ತಾನೆ.”

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದ ಏಕಾದಶಸ್ಕಂಧದಲ್ಲಿ ೫ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೬ನೆಯ ಅಧ್ಯಾಯ

## ದೇವತೆಗಳು ಶ್ರೀಕೃಷ್ಣನನ್ನು ತನ್ನ ಪರಮಪದಕ್ಕೆ ಹಿಂದಿರುಗಲು ಪ್ರಾರ್ಥಿಸಿದುದು : ಯಾದವರು ಪ್ರಭಾಸಕ್ಷೇತ್ರಕ್ಕೆ ಹೊರಡಲು ಸಿದ್ಧರಾಗುತ್ತಿರುವುದನ್ನು ಕಂಡು ಉದ್ಧವನು ಶ್ರೀಕೃಷ್ಣನ ಬಳಿಗೆ ಹೋದುದು

ಶ್ರೀಶುಕಮುನಿಗಳು ಹೇಳುತ್ತಾರೆ :

**ಅಥ ಬ್ರಹ್ಮಾಽತ್ಮಜೈರ್ದೇವೈಃ ಪ್ರಜೇಶೈರಾವೃತೋಽಭ್ಯಗಾತ್ ।**
**ಭವಶ್ಚ ಭೂತಭವ್ಯೇಶೋ ಯಯೌ ಭೂತಗಣೈರ್ವೃತಃ ॥೧॥**

ಪರೀಕ್ಷಿತಮಹಾರಾಜ! ಮಹರ್ಷಿಗಳಾದ ನಾರದರು ವಸುದೇವನಿಗೆ ಭಾಗವತಧರ್ಮವನ್ನು ಉಪದೇಶಿಸಿ ಹೊರಟುಹೋದನಂತರ ಬ್ರಹ್ಮನು ತನ್ನ ಮಕ್ಕಳಾದ ಸನಕಾದಿಗಳೊಡನೆಯೂ, ಪ್ರಜಾಪತಿಗಳೊಡ

ನೆಯೂ ದ್ವಾರಕಾಪಟ್ಟಣಕ್ಕೆ ಆಗಮಿಸಿದನು. ಅಂತೆಯೇ ಭೂತ-ಭವಿಷ್ಯತ್ತುಗಳಿಗೆ ಸ್ವಾಮಿಯಾದ ರುದ್ರನೂ ಕೂಡ ತನ್ನ ಭೂತಗಣಗಳಿಂದ ಸಮಾವೃತನಾಗಿ ದ್ವಾರಕೆಗೆ ಆಗಮಿಸಿದನು. ಮರುದ್ಗಣಗಳೊಡನೆ ದೇವರಾಜನಾದ ಇಂದ್ರನೂ ಆಗಮಿಸಿದನು. ಇಂದ್ರನನ್ನು ಹಿಂಬಾಲಿಸಿ ದ್ವಾದಶಾದಿತ್ಯರೂ, ಅಷ್ಟವಸುಗಳೂ, ಅಶ್ವಿನೀದೇವತೆಗಳೂ, ಋಭ್ವಂಗಿರಸರೂ, ಏಕಾದಶರುದ್ರರೂ, ವಿಶ್ವೇದೇವತೆಗಳೂ, ಸಾಧ್ಯದೇವತೆಗಳೂ, ಗಂಧರ್ವಾಪ್ಸರೆಯರೂ, ನಾಗರೂ, ಸಿದ್ಧ-ಚಾರಣ-ಗುಹ್ಯಕರೂ, ಋಷಿಗಳೂ, ಪಿತೃದೇವತೆಗಳೂ, ವಿದ್ಯಾಧರ-ಕಿನ್ನರರೂ ಶ್ರೀಕೃಷ್ಣನನ್ನು ಸಂದರ್ಶಿಸುವ ಸಲುವಾಗಿ ದ್ವಾರಕಾಪಟ್ಟಣಕ್ಕೆ ಆಗಮಿಸಿದರು. ಭಗವಂತನು ಯಾವ ಶ್ರೀವಿಗ್ರಹರೂಪವನ್ನು ಧರಿಸಿ ನರಲೋಕದ ಮಾನವರ ಮನಸ್ಸಿನಲ್ಲಿ ನಿತ್ಯನಿರಂತರವಾಗಿ ರಮಿಸುತ್ತಾ ಸಮಸ್ತರ ಪಾಪಗಳನ್ನೂ ಪರಿಹರಿಸತಕ್ಕವನೆಂಬ ಕೀರ್ತಿಯನ್ನು ಲೋಕದಲ್ಲಿ ನೆಲೆಗೊಳಿಸಿದನೋ ಅಂತಹ ಜಗದಾನಂದಕಂದನಾದ ಶ್ರೀಕೃಷ್ಣಮೂರ್ತಿಯನ್ನು ನೋಡಲು ಬ್ರಹ್ಮಾದಿಗಳು ಆಗಮಿಸಿದರು. ಸರ್ವಸಂಪತ್ತಿನಿಂದಲೂ ಸಮೃದ್ಧರಾಗಿ, ಲೋಕೋತ್ತರವಾದ ಪ್ರಕಾಶದಿಂದ ಬೆಳುಗುತ್ತಿದ್ದ ದ್ವಾರಕಾಪಟ್ಟಣದಲ್ಲಿ ಅದ್ಭುತದರ್ಶನನಾದ ಶ್ರೀಕೃಷ್ಣನನ್ನು ಎಷ್ಟುನೋಡಿದರೂ ತೃಪ್ತಿಹೊಂದದ ಕಣ್ಣುಗಳಿಂದ ಬ್ರಹ್ಮಾದಿಗಳು ನೋಡಿದರು. ಶ್ರೀಕೃಷ್ಣನ ದಿವ್ಯದರ್ಶನದಿಂದ ಆನಂದತುಂದಿಲರಾದ ಅವರು ಸ್ವರ್ಗದ ಉದ್ಯಾನವಾದ ನಂದನವನದಿಂದಲೂ ಚೈತ್ರರಥವನದಿಂದಲೂ ತರಲ್ಪಟ್ಟಿದ್ದ ದಿವ್ಯವಾದ ಪುಷ್ಪಮಾಲಿಕೆಗಳಿಂದ ಯದುಶ್ರೇಷ್ಠನಾದ ಶ್ರೀಕೃಷ್ಣನನ್ನು ಅಲಂಕರಿಸಿ ಚಿತ್ರ-ವಿಚಿತ್ರವಾದ ಪದಗಳಿಂದಲೂ ಅರ್ಥದಿಂದಲೂ ಯುಕ್ತವಾದ ಸವಿಮಾತುಗಳ ಮೂಲಕವಾಗಿ ಶ್ರೀಕೃಷ್ಣನನ್ನು ಸ್ತುತಿಸಿದರು :

ನತಾಃ ಸ್ಮ ತೇ ನಾಥ ಪದಾರವಿನ್ದಂ
ಬುದ್ಧೀನ್ದ್ರಿಯ ಪ್ರಾಣಮನೋವಚೋಭಿಃ ।
ಯಚ್ಚಿನ್ತ್ಯತೇಽನ್ತರ್ಹೃದಿ ಭಾವಯುಕ್ತೈ-
ರ್ಮುಮುಕ್ಷುಭಿಃ ಕರ್ಮಮಯೋರುಪಾಶಾತ್ ॥೭॥

“ಸ್ವಾಮಿಯೇ! ಕರ್ಮಗಳೆಂಬ ಮಹಾಪಾಶಗಳಿಂದ ಬಿಡಿಸಿಕೊಳ್ಳುವ

ಸಲುವಾಗಿ ಮೋಕ್ಷವನ್ನು ಬಯಸುವ ಜನಗಳು ಭಕ್ತಿಭಾವದಿಂದ ಯಾವ ನಿನ್ನ ದಿವ್ಯವಾದ ಪಾದಾರವಿಂದಗಳನ್ನು ತಮ್ಮ ಹೃದಯದಲ್ಲಿ ಚಿಂತಿಸುವರೋ ಅಂತಹ ನಿನ್ನ ಚರಣಕಮಲಗಳಿಗೆ ನಾವು ಬುದ್ಧಿ, ಇಂದ್ರಿಯ, ಪ್ರಾಣ, ಮನಸ್ಸು ಮತ್ತು ಮಾತು–ಇವುಗಳ ಮೂಲಕವಾಗಿ ನಮಸ್ಕರಿಸುತ್ತಿದ್ದೇವೆ.*

**ತ್ವಂ ಮಾಯಯಾ ತ್ರಿಗುಣಯಾಽತ್ಮನಿ ದುರ್ವಿಭಾವ್ಯಂ**
**ವ್ಯಕ್ತಂ ಸೃಜಸ್ಯವಸಿ ಲುಮ್ಪಸಿ ತದ್ಗುಣಸ್ಥಃ ।**
**ನೈತೈರ್ಭವಾನಜಿತ ಕರ್ಮಭಿರಜ್ಯತೇ ವೈ**
**ಯತ್ಸ್ವೇ ಸುಖೇಽವ್ಯವಹಿತೇಽಭಿರತೋಽನವದ್ಯಃ ॥೮॥**

ಎಲೈ ಅಜಿತನೇ! ನೀನು ಸತ್ತ್ವವೇ ಮೊದಲಾದ ಮೂರು ಗುಣಗಳಿಂದ ಕೂಡಿದ ಮಾಯೆಯಿಂದ ಭಾವಿಸಿಕೊಳ್ಳಲು ಕಷ್ಟಸಾಧ್ಯವಾದ ಮಹದಾದಿಪ್ರಪಂಚವನ್ನು ಸ್ಪಷ್ಟವಾಗಿ ನಿನ್ನಲ್ಲಿಯೇ ಸೃಷ್ಟಿಸುವೆ ; ಪಾಲಿಸುವೆ ; ಲಯಗೊಳಿಸುವೆ. ಇವೆಲ್ಲವನ್ನೂ ನೀನೇ ಮಾಡಿದರೂ ಈ ಕರ್ಮಗಳು ನಿನಗೆ ಅಂಟಿಕೊಳ್ಳುವುದಿಲ್ಲ. ಏಕೆಂದರೆ : ನೀನು ಈ ರಾಗ-ದ್ವೇಷಾದಿ ದೋಷಗಳಿಂದ ಸರ್ವಥಾ ಮುಕ್ತನಾಗಿರುವೆ. ಆವರಣರಹಿತವೂ ದೋಷ ರಹಿತವೂ ಆದ ಆತ್ಮಾನಂದದಲ್ಲಿ ಸದಾ ಮಗ್ನನಾಗಿರುವೆ.

---

* ಇಲ್ಲಿ ಸಾಷ್ಟಾಂಗಪ್ರಣಾಮವನ್ನು ಹೇಳಿದ್ದಾರೆ :

**ದೋರ್ಭ್ಯಾಂ ಪದ್ಭ್ಯಾಂ ಚ ಜಾನುಭ್ಯಾಮುರಸಾ ಶಿರಸಾ ದೃಶಾ ।**
**ಮನಸಾ ವಚಸಾ ಚೈವ ಪ್ರಣಾಮೋಽಷ್ಟಾಙ್ಗ ಈರಿತಃ ॥**

ಏಕಕಾಲದಲ್ಲಿ ಕೈಗಳಿಂದಲೂ, ಕಾಲುಗಳಿಂದಲೂ, ಮಂಡಿಗಳಿಂದಲೂ, ವಕ್ಷಃಸ್ಥಳದಿಂದಲೂ, ಶಿರಸ್ಸಿನಿಂದಲೂ, ಕಣ್ಣುಗಳಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಮಾಡುವ ನಮಸ್ಕಾರಕ್ಕೆ ಸಾಷ್ಟಾಂಗನಮಸ್ಕಾರವೆಂದು ಹೆಸರು.

ಇಲ್ಲಿ ಭಗವಂತನ ಪಾದಾರವಿಂದಗಳನ್ನು ಕುರಿತು ಮಾನಸಿಕವಾದ ಪ್ರಣಾಮ, ವಾಚಕ ಪ್ರಣಾಮ ಮತ್ತು ಕಾಯಕಪ್ರಣಾಮ–ಎಂಬ ಮುಬ್ಬಗೆಯ ಪ್ರಣಾಮಗಳು ಹೇಳಲ್ಪಟ್ಟಿವೆ. ಬುದ್ಧಿಶಬ್ದದಿಂದ ಮಾನಸಿಕ ನಮಸ್ಕಾರವೂ ವಚಃ–ಎಂಬ ಶಬ್ದದಿಂದ ವಾಚಿಕ ನಮಸ್ಕಾರವೂ ಮತ್ತು ಇಂದ್ರಿಯ, ಪ್ರಾಣ ಎಂಬ ಶಬ್ದಗಳಿಂದ ಕಾಯಕ ನಮಸ್ಕಾರವೂ ತಿಳಿಸಲ್ಪಟ್ಟಿದೆ. (ವೀರರಾಘವೀಯ)

**ಶುದ್ಧಿರ್ನೃಣಾಂ ನ ತು ತಥೇಡ್ಯ ದುರಾಶಯಾನಾಂ**
**ವಿದ್ಯಾಶ್ರುತಾಧ್ಯಯನದಾನತಪಃಕ್ರಿಯಾಭಿಃ।**
**ಸತ್ತ್ವಾತ್ಮನಾಮೃಷಭ ತೇ ಯಶಸಿ ಪ್ರವೃದ್ಧ-**
**ಸಚ್ಛ್ರದ್ಧಯಾ ಶ್ರವಣಸಂಭೃತಯಾ ಯಥಾ ಸ್ಯಾತ್ ॥**

ಸ್ತುತಿಸಲು ಯೋಗ್ಯನಾದವನೇ! ದೇವಶ್ರೇಷ್ಠನೇ! ಸಜ್ಜನರಿಗೆ ನಿನ್ನ ಲೀಲಾಪ್ರಸಂಗಗಳನ್ನು ಮತ್ತು ನಿನ್ನ ಲೋಕೋತ್ತರವಾದ ಯಶಸ್ಸನ್ನು ಗಾನಮಾಡುತ್ತಿದ್ದಂತೆ ನಿನ್ನಲ್ಲಿ ಅವರ ಶ್ರದ್ಧೆಯೂ ದಿನದಿನಕ್ಕೂ ಹೆಚ್ಚುತ್ತಿದ್ದು ಅವರ ಅಂತಃಕರಣದ ಶುದ್ಧಿಯಾಗುತ್ತದೆ. ಆದರೆ ರಾಗ-ದ್ವೇಷದಿಂದ ಕಲುಷಿತವಾದ ಚಿತ್ತವೃತ್ತಿಯುಳ್ಳ ದುರ್ಜನರಿಗೆ ನಿನ್ನ ಉಪಾಸನೆ, ವೇದಾಧ್ಯಯನ, ದಾನ, ತಪಸ್ಸು ಯಜ್ಞ-ಇವೇ ಮುಂತಾದ ಕರ್ಮಗಳನ್ನು ಯಥೇಚ್ಛವಾಗಿ ಮಾಡಿದರೂ ಚಿತ್ತಶುದ್ಧಿಯಾಗುವುದಿಲ್ಲ.

**ಸ್ಯಾನ್ನಸ್ತವಾಂಘ್ರಿರಶುಭಾಶಯಧೂಮಕೇತುಃ**
**ಕ್ಷೇಮಾಯ ಯೋ ಮುನಿಭಿರಾರ್ದ್ರಹೃದೋಹ್ಯಮಾನಃ ।**
**ಯಃ ಸಾತ್ವತೈಃ ಸಮವಿಭೂತಯ ಆತ್ಮವದ್ಭಿ-**
**ರ್ವ್ಯೂಹೇಽರ್ಚಿತಃ ಸವನಶಃ ಸ್ವರತಿಕ್ರಮಾಯ ॥೧೦॥**

**ಯಶ್ಚಿನ್ತ್ಯತೇ ಪ್ರಯತಪಾಣಿಭಿರಧ್ವರಾಗ್ನೌ**
**ತ್ರಯ್ಯಾ ನಿರುಕ್ತವಿಧಿನೇಶ ಹವಿರ್ಗೃಹೀತ್ವಾ ।**
**ಅಧ್ಯಾತ್ಮಯೋಗ ಉತ ಯೋಗಿಭಿರಾತ್ಮಮಾಯಾಂ**
**ಜಿಜ್ಞಾಸುಭಿಃ ಪರಮಭಾಗವತೈಃ ಪರೀಷ್ಟಃ ॥೧೧॥**

ಮನನಶೀಲರಾದ ಮಹಾಮುನಿಗಳು ಮೋಕ್ಷವನ್ನು ಪಡೆಯುವುದಕ್ಕಾಗಿ ಪ್ರೇಮದಿಂದ ಆರ್ದ್ರವಾದ ಹೃದಯದಲ್ಲಿ ಯಾವ ದಿವ್ಯಚರಣಾರವಿಂದಗಳನ್ನು ಧ್ಯಾನಿಸುವರೋ, ಪಾಂಚಪಾತ್ರವಿಧಿಯಲ್ಲಿ ಉಪಾಸನೆಮಾಡುವ ಭಕ್ತಜನರು ಭಗವಂತನ ಐಶ್ವರ್ಯಕ್ಕೆ ಸಮಾನವಾದ ಐಶ್ವರ್ಯವನ್ನು ಪಡೆಯುವ ಸಲುವಾಗಿ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧರ ವ್ಯೂಹದಲ್ಲಿ ಯಾವ ಪಾದುಕೆಗಳನ್ನಿಟ್ಟು ಅರ್ಚಿಸುವರೋ, ಜಿತೇಂದ್ರಿಯರಾದ ಧೀರಪುರುಷರು ಸ್ವರ್ಗವನ್ನೂ ಅತಿಕ್ರಮಿಸಿ ಭಗವಂತನ ದಿವ್ಯಧಾಮ

ವನ್ನು ಸೇರುವ ಸಲುವಾಗಿ ಮೂರುಕಾಲಗಳಲ್ಲಿಯೂ ಯಾವ ದಿವ್ಯಪಾದುಕೆಗಳನ್ನು ಪೂಜಿಸುವರೋ, ಯಜ್ಞಗಳಲ್ಲಿ ಋತ್ವಿಜರು ಪರಿಶುದ್ಧವಾದ ಕೈಗಳಿಂದ ಪುರೋಡಾಶಾದಿ ಹವಿಸ್ಸನ್ನು ತೆಗೆದುಕೊಂಡು ಮೂರು ವೇದಗಳ ಮಂತ್ರಗಳಿಂದಲೂ ನಿರುಕ್ತದ ವಿಧಾನವನ್ನು ಅನುಸರಿಸಿ ಆಹವನೀಯಾ ಗ್ನಿಯೇ ಮೊದಲಾದ ಅಗ್ನಿಗಳಲ್ಲಿ ಹೋಮಮಾಡುವಾಗ ಯಾವ ಪಾದಾರವಿಂದಗಳನ್ನು ಧ್ಯಾನಿಸುವರೋ, ಅಧ್ಯಾತ್ಮಯೋಗದ ಮೂಲಕವಾಗಿ ನಿನ್ನ ಮಾಯಾಶಕ್ತಿಯನ್ನು ತಿಳಿಯಲು ಅಪೇಕ್ಷಿಸುವ ಯೋಗಿಗಳು ಯಾವ ನಿನ್ನ ಪಾದುಕೆಗಳನ್ನು ಧ್ಯಾನಮಾಡುವರೋ, ಭಾಗವತಶ್ರೇಷ್ಠರಿಂದ ಯಾವ ನಿನ್ನ ಪಾದಕಮಲಗಳು ಸತತವಾಗಿ ಪೂಜಿಸಲ್ಪಡುವುವೋ–ಅಂತಹ ನಿನ್ನ ದಿವ್ಯವಾದ ಪಾದಕಮಲಗಳು ನಮ್ಮಲ್ಲಿರುವ ವಿಷಯವಾಸನೆಗಳಿಗೆ ಅಗ್ನಿಪ್ರಾಯವಾಗಲಿ. ವಿಷಯವಾಸನೆಗಳನ್ನು ಸುಟ್ಟುಹಾಕಲಿ.*

ಪರ್ಯುಷ್ಟಯಾ ತವ ವಿಭೋ ವನಮಾಲಯೇಯಂ
ಸಂಸ್ಪರ್ಧಿನೀ ಭಗವತೀ ಪ್ರತಿಪತ್ನಿಮಚ್ಛ್ರೀಃ ।
ಯಃ ಸುಪ್ರಣೀತಮಮುಯಾರ್ಹಣಮಾದದನ್ನೋ
ಭೂಯಾತ್ಸದಾಂಘ್ರಿರಶುಭಾಶಯಧೂಮಕೇತುಃ ॥೧೨॥

ಪ್ರಭುವೇ! ಈ ವನಮಾಲೆಯು ಕಂಠದಿಂದ ಆಪಾದಪರ್ಯಂತವಾಗಿ ಹರಡಿಕೊಂಡು ಶೋಭಿಸುತ್ತಿರುವುದರಿಂದ ಕೇವಲ ವಕ್ಷಃಸ್ಥಳದಲ್ಲಿ ನೆಲೆಸಿರುವ ಲಕ್ಷ್ಮೀದೇವಿಗೆ ಸವತಿಮಾತ್ಸರ್ಯವುಂಟಾಗಿದೆ. ವನಮಾಲೆಯು ತನ್ನೊಡನೆ ಸ್ಪರ್ಧಿಸಿ ಆಪಾದಪರ್ಯಂತವಾಗಿ ತನ್ನ ಪತಿಯನ್ನು ಆಕ್ರಮಿಸಿಬಿಟ್ಟಿರುವಳೆಂಬ ಸವತಿಮಾತ್ಸರ್ಯ ಲಕ್ಷ್ಮೀದೇವಿಗೆ ಉಂಟಾಗಿದೆ. ಆದರೂ ಕೂಡ ಲಕ್ಷ್ಮೀದೇವಿಯ ಅಸಹನೆಯನ್ನು ಲೆಕ್ಕಿಸದೆ ಭಕ್ತರಾದ ನಾವು ಅರ್ಪಿಸುವ ಆಪಾದಪರ್ಯಂತವಾಗಿ ಶೋಭಿಸುವ ಮಾಲೆಯನ್ನು ನೀನು

---

* ಆರು ವಿಧ ಭಕ್ತರ ವಿಷಯವನ್ನೂ ಇಲ್ಲಿ ಹೇಳಿದ್ದಾರೆ :
೧) ಮುಮುಕ್ಷುಗಳಾದ ಮುನಿಗಳು ೨) ಸಾಧಕಭಕ್ತರಾದ ಸಾತ್ವತರು
೩) ಏಕಾಂತಭಕ್ತರಾದ ಧೀರರು ೪) ಯಾಜ್ಞಿಕರಾದ ಕರ್ಮಠರು
೫) ಯೋಗಿಗಳು ೬) ಪರಮಭಾಗವತರು. ಲಕ್ಷ್ಮಿಯೂ ಇವರಲ್ಲಿ ಸೇರುತ್ತಾಳೆ.
(ದೀಪಿನೀ)

ಪರಿಗ್ರಹಿಸುವೆ. ಅಂತಹ ಮಾಲೆಯಿಂದ ಸಮಲಂಕೃತವಾದ ಚರಣ ಕಮಲವು ನಮ್ಮ ವಿಷಯವಾಸನೆಗಳನ್ನು ಭಸ್ಮಮಾಡುವ ಅಗ್ನಿಯಾಗಲಿ.*

**ಕೇತುಸ್ತ್ರಿವಿಕ್ರಮಯುತಸ್ತ್ರಿಪತತ್ಪತಾಕೋ**
**ಯಸ್ತೇ ಭಯಾಭಯಕರೋಽಸುರದೇವಚಮ್ವೋಃ ।**
**ಸ್ವರ್ಗಾಯ ಸಾಧುಷು ಖಲೇಷ್ವಿತರಾಯ ಭೂಮನ್**
**ಪಾದಃ ಪುನಾತು ಭಗವನ್ ಭಜತಾಮಘಂ ನಃ ॥೧೩॥**

ಪರಬ್ರಹ್ಮಸ್ವರೂಪನೇ! ವಾಮನಾವತಾರದಲ್ಲಿ ದೈತ್ಯನಾದ ಬಲಿಯು ದಾನಮಾಡಿದ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಅಳೆಯುವ ಸಲುವಾಗಿ ಮೊದಲನೆಯ ಹೆಜ್ಜೆಯಿಂದ ಭೂಮಂಡಲವನ್ನೇ ಆಕ್ರಮಿಸಿ ಎರಡನೆಯ ಹೆಜ್ಜೆಯಿಂದ ಅಳೆಯಲು ಕಾಲನ್ನೆತ್ತಲು ಯಾವ ಆ ದಿವ್ಯಪಾದವು ಸತ್ಯಲೋಕಕ್ಕೂ ಹೋಯಿತೋ–ಆ ಸಮಯದಲ್ಲಿ ನಿನ್ನ ಆ ದಿವ್ಯವಾದ ಪಾದವು ದೊಡ್ಡದಾದ ವಿಜಯಧ್ವಜದಂತೆ ಕಾಣುತ್ತಿದ್ದಿತು. ಬ್ರಹ್ಮನು ತನ್ನ ಲೋಕಕ್ಕೆ ಬಂದ ಆ ದಿವ್ಯಪಾದವನ್ನು ತೊಳೆದನಂತರ ಆ ಪವಿತ್ರವಾದ ಪಾದದ ತೀರ್ಥವು ಗಂಗೆಯೆಂಬ ಹೆಸರನ್ನು ಪಡೆದು ಹೊರಟ ಮೂರು ಪ್ರವಾಹಗಳು ನಿನ್ನ ಪಾದದ ಮೂರು ಪತಾಕೆಗಳಂತೆ ಕಾಣುತ್ತಿದ್ದುವು. ಇದನ್ನು ನೋಡಿ ಅಸುರಸೈನ್ಯವು ಭಯಗೊಂಡಿತು. ದೇವಸೈನ್ಯವು ನಿರ್ಭೀತವಾಯಿತು. ಅಂತಹ ನಿನ್ನ ಪಾದಕಮಲವು ಸಾಧು-ಸತ್ಪುರುಷರನ್ನು ನಿನ್ನ ಪರಮಧಾಮಕ್ಕೆ ಒಯ್ಯುವುದಕ್ಕೂ ದುಷ್ಟರನ್ನು ಅಧೋಗತಿಗೆ ದೂಡುವುದಕ್ಕೂ ಕಾರಣವಾಗಿದೆ. ಅಂತಹ ನಿನ್ನ ದಿವ್ಯಸುಂದರ-ಪವಿತ್ರ ಪಾದಾರವಿಂದವು ಪ್ರಾರ್ಥಿಸುತ್ತಿರುವ ನಮ್ಮ ಪಾಪಗಳನ್ನು ಕಳೆದು ನಮ್ಮನ್ನು ಅನವರತವಾಗಿ ರಕ್ಷಿಸಲಿ.[1]

---

* ಪರ್ಯುಷ್ಟ : ಪರಿ–ಪರಿತಃ = ಸುತ್ತಲೂ ಉಷ್ಟ=ಶೋಭಿಸುವ ದೇಹದಸುತ್ತಲೂ ಬೆಳಗುವ ವನಮಾಲೆ. ಪರ್ಯುಷ್ಟ ಎಂಬುದಕ್ಕೆ ಜೋಲಾಡುವ ವನಮಾಲೆಯೆಂದು ಒಬ್ಬ ವಿದ್ವಾಂಸರು ಅರ್ಥಮಾಡಿರುತ್ತಾರೆ. ಪರ್ಯುಷ್ಟ ಎಂಬುದಕ್ಕೆ ಪರ್ಯುಷಿತ = ಎಂದು ಅರ್ಥಮಾಡಿ ನಿರ್ಮಾಲ್ಯ–ಎಂಬ ಅರ್ಥವನ್ನೂ ಮತ್ತೊಬ್ಬ ವಿದ್ವಾಂಸರು ಮಾಡಿರುತ್ತಾರೆ.

1 ಭಗವಂತನಿಗೆ ಹಸ್ತವೇ ಮೊದಲಾದ ನಾನಾ ಅವಯವಗಳಿರುವಾಗ ಪಾದಗಳನ್ನೇ

**ನಸ್ಯೋತಗಾವ ಇವ ಯಸ್ಯ ವಶೇ ಭವನ್ತಿ**
**ಬ್ರಹ್ಮಾದಯಸ್ತನುಭೃತೋ ಮಿಥುರರ್ದ್ಯಮಾನಾಃ ।**
**ಕಾಲಸ್ಯ ತೇ ಪ್ರಕೃತಿಪೂರುಷಯೋಃ ಪರಸ್ಯ**
**ಶಂ ನಸ್ತನೋತು ಚರಣಃ ಪುರುಷೋತ್ತಮಸ್ಯ ॥೧೪॥**

ಸತ್ತ್ವ-ರಜಸ್ತಮೋಗುಣಗಳಾದ ಬ್ರಹ್ಮನೇ ಮೊದಲಾದ ಸಮಸ್ತ ಪ್ರಾಣಿಗಳೂ (ದೇವಾಸುರರೂ) ಪರಸ್ಪರವಾಗಿ ಪೀಡಿಸಲ್ಪಡುತ್ತಿದ್ದರೂ ಮೂಗುದಾರಗಳನ್ನು ಹಾಕಿದ ಹಸುಗಳಂತೆ ಅವರೆಲ್ಲರೂ ನಿನ್ನ ವಶವರ್ತಿಗಳಾಗಿಯೇ ಇರುತ್ತಾರೆ. ಅವರ ಜಯಾಪಜಯಗಳಿಗೂ ನೀನೇ ಕಾರಣನಾಗಿರುವೆ. ಪ್ರಕೃತಿ-ಪುರುಷರಿಗಿಂತಲೂ ಅಧಿಕವಾಗಿ ಕಾಲಸ್ವರೂಪನೂ ಪುರುಷೋತ್ತಮನೂ ಆಗಿರುವ ನಿನ್ನ ಚರಣಕಮಲವು ನಮಗೆ ಸೌಖ್ಯವನ್ನು ಉಂಟುಮಾಡಲಿ.

**ಅಸ್ಯಾಸಿ ಹೇತುರುದಯಸ್ಥಿತಿಸಂಯಮಾನಾ-**
**ಮವ್ಯಕ್ತಜೀವಮಹತಾಮಪಿ ಕಾಲಮಾಹುಃ ।**
**ಸೋಽಯಂ ತ್ರಿಣಾಭಿರಖಿಲಾಪಚಯೇ ಪ್ರವೃತ್ತಃ**
**ಕಾಲೋ ಗಭೀರರಯ ಉತ್ತಮಪೂರುಷಸ್ತ್ವಮ್ ॥೧೫॥**

ಪ್ರಭುವೇ! ವಿದ್ವಾಂಸರು ನಿನ್ನನ್ನು ಪ್ರಕೃತಿ-ಪುರುಷ ಮತ್ತು ಮಹತ್ತತ್ತ್ವಗಳನ್ನು ನಿಯಂತ್ರಿಸುವ ಕಾಲಸ್ವರೂಪನೆಂದು ಹೇಳುತ್ತಾರೆ. ನೀನು ಈ ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಪರಮಕಾರಣನಾಗಿರುವೆ. ಶೀತಕಾಲ, ಮಳೆಗಾಲ ಮತ್ತು ಬಿಸಿಲುಕಾಲಗಳೆಂಬ ಮುಬ್ಬಗೆಯಾದ ನಾಭಿಗಳನ್ನು ಹೊಂದಿರುವ, ಸಂವತ್ಸರದ ರೂಪದಲ್ಲಿ ಸಮಸ್ತಪ್ರಾಣಿಗಳನ್ನೂ ವಿನಾಶದ ಕಡೆಗೆ ತಳ್ಳುವ ಕಾಲನೂ ನೀನೇ ಆಗಿರುವೆ. ನಿನ್ನ ಗಮನವು ಬಾಧೆಯಿಲ್ಲದ್ದೂ, ಗಂಭೀರವೂ ಆಗಿರುತ್ತದೆ. ಉತ್ತಮಪುರುಷನಾದ

---

ಏತಕ್ಕೆ ವಿಶೇಷವಾಗಿ ಗೌರವಿಸಬೇಕು?–ಎಂದರೆ ಭಗವಂತನ ಅವಯವಗಳಲ್ಲಿ ಭಕ್ತರಿಗೆ ಪಾದವೇ ಭೋಗ್ಯತಮವಾದುದು–ಎಂಬುದನ್ನು ಇಲ್ಲಿ ಪ್ರತಿಪಾದಿಸಿವೆ.

(ವೀರರಾಘವೀಯ)

ಪರಮಾತ್ಮನು ನೀನೇ ಆಗಿರುವೆ. ಅಂತಹ ನಿನ್ನ ಚರಣಕಮಲಗಳು ನಮ್ಮನ್ನು ರಕ್ಷಿಸಲಿ.*

**ತ್ವತ್ತಃ ಪುಮಾನ್ಸಮಧಿಗಮ್ಯ ಯಯಾ ಸ್ವವೀರ್ಯಂ**
**ಧತ್ತೇ ಮಹಾನ್ತಮಿವ ಗರ್ಭಮಮೋಘವೀರ್ಯಃ ।**
**ಸೋಽಯಂ ತಯಾನುಗತ ಆತ್ಮನ ಅಣ್ಡಕೋಶಂ**
**ಹೈಮಂ ಸಸರ್ಜ ಬಹಿರಾವರಣೈರುಪೇತಮ್ ॥೧೬॥**

ಈ ಪುರುಷನು (ಈ ಹಿರಣ್ಯಗರ್ಭನು) ನಿನ್ನಿಂದ ಶಕ್ತಿಯನ್ನು ಪಡೆದು ಅಮೋಘವೀರ್ಯನಾಗಿ ಮಾಯೆಯೊಡನೆ ಸೇರಿಕೊಂಡು ಜಗತ್ತಿನ ಗರ್ಭದಂತಿರುವ ಮಹತ್ತತ್ತ್ವವನ್ನು ಧರಿಸುವನು. ಅನಂತರ ಅದೇ ಮಹತ್ತತ್ತ್ವವೇ ತ್ರಿಗುಣಾತ್ಮಕವಾದ ಮಾಯೆಯನ್ನು ಅನುಸರಿಸಿ ಪೃಥ್ವೀ, ಜಲ, ತೇಜಸ್ಸು, ವಾಯು, ಆಕಾಶ, ಅಹಂಕಾರ ಮತ್ತು ಮನಸ್ಸು ಇವುಗಳ ರೂಪವಾದ ಏಳು ಆವರಣಗಳಿಂದಕೂಡಿದ ಸುವರ್ಣಮಯವಾದ ಬ್ರಹ್ಮಾಂಡವನ್ನು ಸೃಷ್ಟಿಸಿತು.[1]

---

* ಉತ್ತಮಪುರುಷಃ ಪರಮಾತ್ಮಾ :
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥** (ಭ.ಗೀ. ೧೫-೧೭)

ಪರಮಾತ್ಮನೆಂದು ಕರೆಯಲ್ಪಡುವ ಉತ್ತಮಪುರುಷನು ಬೇರೆ ಇದ್ದಾನೆ. ಅವನು ಅವ್ಯಯನಾದ ಈಶ್ವರನು. ಲೋಕತ್ರಯವನ್ನು ಪ್ರವೇಶಿಸಿ ಧರಿಸಿಕೊಂಡಿದ್ದಾನೆ.

ಭಗವಂತನು ಪ್ರಕೃತಿ ಮತ್ತು ಪುರುಷ ಇಬ್ಬರಿಗಿಂತಲೂ ಉತ್ತಮನಾಗಿರುವುದರಿಂದ ಪುರುಷೋತ್ತಮ ಎಂದು ಎನಿಸುತ್ತಾನೆ–ಎಂಬ ಭಗವದ್ಗೀತೋಕ್ತಿ ಭಾವವು ಇಲ್ಲಿ ಸೂಚಿತವಾಗಿದೆ. ಉತ್ತಮಪುರುಷಸ್ತ್ವನ್ಯಃಪರಮಾತ್ಮೇತ್ಯುದಾಹೃತಃ ।

1 ಶ್ರೀಕೃಷ್ಣನು ಗೀತೆಯಲ್ಲಿ :
**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಮ್ಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ (೩-೧೪)**
**ಸರ್ವಯೋನಿಷು ಕೌನ್ತೇಯ ಮೂರ್ತಯಃ ಸಮ್ಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ (೪-೧೪)**

**ತತ್ತಸ್ಥುಷಶ್ಚ ಜಗತಶ್ಚ ಭವಾನಧೀಶೋ**
**ಯನ್ಮಾಯಯೋತ್ಥಗುಣವಿಕ್ರಿಯಯೋಪನೀತಾನ್ ।**
**ಅರ್ಥಾನ್ ಜುಷನ್ನಪಿ ಹೃಷೀಕಪತೇ ನ ಲಿಪ್ತೋ**
**ಯೇಽನ್ಯೇ ಸ್ವತಃ ಪರಿಹೃತಾದಪಿ ಬಿಭ್ಯತಿ ಸ್ಮ ॥೧೭॥**

ಆದುದರಿಂದ ಸ್ಥಾವರ-ಜಂಗಮವಾದ ಜಗತ್ತಿಗೆ ನೀನು ಒಡೆಯನು. ಇಂದ್ರಿಯವೃತ್ತಿಗಳಿಂದ ತೋರಿಸಲ್ಪಡುವ ಮಾಯಾಗುಣವಿಕಾರಗಳಾದ ಶಬ್ದಾದಿವಿಷಯಗಳನ್ನು ನೀನು ಉಪಭೋಗಿಸುತ್ತಿದ್ದರೂ ಅವು ನಿನಗೆ ಅಂಟುವುದಿಲ್ಲ. ನಿನ್ನನ್ನು ಬಿಟ್ಟು ಬೇರೆಯವರು ಇಂದ್ರಿಯಗಳು ಅಪೇಕ್ಷಿಸುವ ವಿಷಯಗಳನ್ನು ಪರಿತ್ಯಾಗಮಾಡಿದ್ದರೂ ಅವುಗಳು ಯಾವಾಗಲಾದರೂ ತಮಗೆ ಅಂಟಿಕೊಳ್ಳಬಹುದೆಂದು ಭಯಪಡುತ್ತಾರೆ.

**ಸ್ಮಾಯಾವಲೋಕಲವದರ್ಶಿತಭಾವಹಾರಿ-**
**ಭ್ರೂಮಣ್ಡಲಪ್ರಹಿತಸೌರತಮನ್ತ್ರಶೌಣ್ಡೈಃ ।**
**ಪತ್ನ್ಯಸ್ತು ಷೋಡಶಸಹಸ್ರಮನಙ್ಗಬಾಣೈ-**
**ರ್ಯಸ್ಯೇನ್ದ್ರಿಯಂ ವಿಮಥಿತುಂ ಕರಣೈರ್ನ ವಿಭ್ವ್ಯಃ ॥**

ಶ್ರೀಹರಿಯೇ! ಹದಿನಾರು ಸಾವಿರಕ್ಕಿಂತಲೂ ಅಧಿಕರಾದ ಸ್ತ್ರೀಯರು ನಿನ್ನ ಅಂತಃಪುರದಲ್ಲಿದ್ದಾರೆ. ಅವರೆಲ್ಲರೂ ತಮ್ಮ-ತಮ್ಮ ಕಿರುನಗೆ ಯಿಂದಲೂ, ಕುಡಿಗಣ್ಣಿನ ನೋಟದಿಂದ ಪ್ರಕಟವಾದ ಭಾವದಿಂದಲೂ,

---

ದೊಡ್ಡದಾಗಿರುವ ಬ್ರಹ್ಮವು (ಮಹಾಕ್ಷೇತ್ರವಾದ ಪ್ರಕೃತಿಯು) ನನ್ನ ಯೋನಿ ಯಾಗಿದೆ. ಅದರಲ್ಲಿ ನಾನು ಗರ್ಭವನ್ನು ಭರಿಸುತ್ತೇನೆ. ಎಲ್ಲ ಪ್ರಾಣಿಗಳ ಉತ್ಪತ್ತಿಯೂ ಅದರಿಂದ ಆಗುತ್ತದೆ. ಎಲ್ಲ ಯೋನಿಗಳಲ್ಲಿಯೂ ಯಾವ ಮೂರ್ತಿಗಳು ಉಂಟಾಗುತ್ತಿರುವುವೋ ಅವುಗಳಿಗೆ ಮಹತ್ತಾದ ಬ್ರಹ್ಮವು ಯೋನಿಯು. ನಾನು ಬೀಜವನ್ನು ಇಡುವ ತಂದೆ.

ಇಲ್ಲಿರುವ ಅವ್ಯಕ್ತ ಶಬ್ದವು ಪ್ರಕೃತಿಯನ್ನು ಮತ್ತು ಅದಕ್ಕೆ ಸಿಲುಕಿಕೊಂಡಿರುವ ಚೇತನವನ್ನು ತಿಳಿಸುತ್ತದೆ. ಪುರುಷಶಬ್ದವು ಮುಕ್ತಾತ್ಮವನ್ನೂ ಮತ್ತು ನಿತ್ಯಾತ್ಮವನ್ನೂ ಹೇಳುತ್ತದೆ. ಮಹತ್–ಎಂಬ ಶಬ್ದವು ಮಹತ್ತತ್ವದಿಂದ ಪ್ರಾರಂಭವಾದ ಪ್ರಕೃತಿಯ ಎಲ್ಲ ಕಾರ್ಯಗಳನ್ನೂ ತಿಳಿಸುತ್ತದೆ. ಪುರುಷೋತ್ತಮನು ಇವೆಲ್ಲವನ್ನೂ ಮೀರಿದವನು.
(ವೀರರಾಘವೀಯ)

ಮಂಡಲಾಕಾರವಾದ ಮತ್ತು ಮನೋಹರವಾದ ಹುಬ್ಬುಗಳಿಂದ ಪ್ರೇರಿತವಾದ ಪ್ರೌಢವಾದ ಸುರತಮಂತ್ರಗಳೆನಿಸಿದ ಸಮ್ಮೋಹಕವಾದ ಕಾಮಬಾಣಗಳಿಂದಲೂ ನಿನ್ನನ್ನು ಆಕರ್ಷಿಸಲು ಸದಾ ಪ್ರಯತ್ನಿಸುತ್ತಲೇ ಇರುತ್ತಾರೆ. ಆದರೆ ಅವರು ತಮ್ಮ ಸಂಪುಷ್ಟವಾದ ಕಾಮಬಾಣಗಳಿಂದ ನಿನ್ನ ಮನಸ್ಸನ್ನು ಸ್ವಲ್ಪವಾದರೂ ಅಸ್ಥಿರಗೊಳಿಸಲು ಸಮರ್ಥರಾಗುವುದಿಲ್ಲ.

ವಿಭ್ವಸ್ತವಾಮೃತಕಥೋದವಹಾಸ್ತ್ರಿಲೋಕ್ಯಾಃ
ಪಾದಾವನೇಜಸರಿತಃ ಶಮಲಾನಿ ಹನ್ತುಮ್ ।
ಆನುಶ್ರವಂ ಶ್ರುತಿಭಿರಂಘ್ರಿಜಮಙ್ಗಸಙ್ಗೈ-
ಸ್ತೀರ್ಥದ್ವಯಂ ಶುಚಿಷದಸ್ತ ಉಪಸ್ಪೃಶನ್ತಿ ॥೧೯॥

ವಾಸುದೇವ! ನೀನು ಮೂರುಲೋಕಗಳ ಪಾಪರಾಶಿಗಳನ್ನೂ ತೊಳೆದು ಹಾಕುವುದಕ್ಕಾಗಿ ಎರಡು ವಿಧವಾದ ನದಿಗಳನ್ನು ಹರಿಸುತ್ತಿರುವೆ. ಅದರಲ್ಲಿ ಒಂದು : ನಿನ್ನ ಅಮೃತಮಯವಾದ ಲೀಲೆಗಳಿಂದ ಸಮೃದ್ಧವಾಗಿರುವ ಕಥಾನದಿ. ಮತ್ತೊಂದು ನಿನ್ನ ಪಾದಪ್ರಕ್ಷಾಳನದಿಂದ ತುಂಬಿ ಹೊರ ಬಂದಿರುವ ಗಂಗಾನದಿ. ಶುಚಿಯಾದ ಆಚಾರವುಳ್ಳ ಸತ್ಪುರುಷರು ಕಿವಿಗಳ ಮೂಲಕವಾಗಿ ನಿನ್ನ ಲೀಲಾಕಥೆಗಳ ನದಿಯಲ್ಲಿಯೂ ಶರೀರದ ಮೂಲಕವಾಗಿ ಗಂಗಾನದಿಯಲ್ಲಿಯೂ ಸ್ನಾನಮಾಡುತ್ತಾ ಎರಡೂ ತೀರ್ಥಗಳ ಸೇವನೆಯಿಂದ ತಮ್ಮ ಸಮಸ್ತಪಾಪಗಳನ್ನೂ ಕಳೆದುಕೊಳ್ಳುತ್ತಾರೆ.”

ಶ್ರೀಶುಕಮಹಾಮುನಿಗಳು ಹೇಳುತ್ತಾರೆ :

ಪರೀಕ್ಷಿತಮಹಾರಾಜ! ದೇವತೆಗಳಿಂದಲೂ, ಶ್ರೀಶಂಕರನಿಂದಲೂ ಕೂಡಿದ ಬ್ರಹ್ಮನು, ಶ್ರೀಹರಿಯನ್ನು ಹೀಗೆ ಸ್ತೋತ್ರಮಾಡಿದನಂತರ ತನ್ನ ಸ್ವಧಾಮಕ್ಕೆ ಹಿಂದಿರುಗಲು ಸಿದ್ಧನಾಗಿ ಅಂತರಿಕ್ಷದಲ್ಲಿ ನಿಂತು ನಮಸ್ಕರಿಸುತ್ತಾ ಗೋವಿಂದನನ್ನು ಕುರಿತು ಹೇಳಿದನು :

“ಸರ್ವಾತ್ಮನಾದ ಪ್ರಭುವೇ! ಈ ಮೊದಲು ನಾವು ನಿನ್ನನ್ನು ಭೂಭಾರದ ಹರಣಕ್ಕಾಗಿ ಭೂಮಿಯಲ್ಲಿ ಅವತರಿಸುವಂತೆ ಕೇಳಿಕೊಂಡಿದ್ದೆವು. ಅದನ್ನು ನೀನು ನಮ್ಮ ಪ್ರಾರ್ಥನೆಗೆ ಅನುಸಾರವಾಗಿ ಯಥೋಚಿತವಾದ ರೀತಿಯಲ್ಲಿ ಸಂಪನ್ನಗೊಳಿಸಿರುವೆ. ಸತ್ಯಪರಾಯಣರಾಗಿರುವ ಸತ್ಪುರುಷರ

ಕಲ್ಯಾಣಾರ್ಥವಾಗಿ ಧರ್ಮವನ್ನು ಪುನಃ ನೆಲೆಗೊಳಿಸಿರುವೆ. ಸಮಸ್ತ ಲೋಕಗಳ ಪಾಪಗಳನ್ನೂ ಪರಿಹರಿಸುವ ನಿನ್ನ ಧವಳಕೀರ್ತಿಯನ್ನು ಎಲ್ಲ ದಿಕ್ಕುಗಳಲ್ಲಿಯೂ ಚೆಲ್ಲಿರುವೆ. ನಿನ್ನ ಈ ಸರ್ವೋತ್ತಮರೂಪವನ್ನು ಧರಿಸಿ ಯದುವಂಶದಲ್ಲಿ ಅವತರಿಸಿದೆ. ಜಗತ್ತಿನ ಹಿತಕ್ಕಾಗಿ ಉದಾರಪರಾಕ್ರಮವುಳ್ಳ ಕರ್ಮಗಳನ್ನು ಮಾಡಿರುವೆ. ಪ್ರಭುವೇ! ಕಲಿಯುಗದಲ್ಲಿ ಯಾವ ಸಾಧುಸ್ವಭಾವದ ಮನುಷ್ಯರು ನಿನ್ನ ಲೀಲಾಪ್ರಸಂಗಗಳನ್ನು ಕೇಳುವರೋ ಮತ್ತು ಕೀರ್ತಿಸುವರೋ ಅಂತಹವರು ಬಹಳ ಸುಲಭವಾಗಿ ಅಜ್ಞಾನಾಂಧ ಕಾರವನ್ನು ದಾಟಿಬಿಡುತ್ತಾರೆ.

ಪುರುಷೋತ್ತಮನೇ! ಸರ್ವಶಕ್ತನೇ! ಪ್ರಭುವೇ! ನೀನು ಯದು ವಂಶದಲ್ಲಿ ಅವತರಿಸಿ ಒಂದುನೂರ ಇಪ್ಪತ್ತು ವರ್ಷಗಳು ಕಳೆದುವು. ಸರ್ವಾಧಾರನೇ! ನೀನು ಇಲ್ಲಿಯೇ ಇದ್ದು ದೇವತೆಗಳಿಗೆ ಮಾಡಿಕೊಡ ಬೇಕಾಗಿರುವ ಕಾರ್ಯವು ಯಾವುದೂ ಉಳಿದಿಲ್ಲ. ನಮ್ಮ ಎಲ್ಲ ಕಾರ್ಯಗಳೂ ಸಂಪನ್ನವಾಗಿವೆ. ಬ್ರಾಹ್ಮಣರ ಶಾಪದ ಕಾರಣದಿಂದಾಗಿ ನಿನ್ನ ಈ ಕುಲವೂ ಒಂದು ರೀತಿಯಲ್ಲಿ ನಷ್ಟವಾಗಿ ಹೋಗಲಿದೆ. ಆದುದರಿಂದ ವೈಕುಂಠನಾಥನೇ! ನಿನಗೆ ಉಚಿತವೆನಿಸಿದರೆ ನಿನ್ನ ದಿವ್ಯಧಾಮಕ್ಕೆ ಹಿಂದಿರುಗುವವನಾಗು. ಅಲ್ಲಿ ನಿನ್ನ ಸೇವಕರಾದ ನಮ್ಮನ್ನೂ ಲೋಕ ಪಾಲಕರನ್ನೂ ಮತ್ತು ನಮ್ಮ ಲೋಕಗಳನ್ನೂ ಪಾಲಿಸಿ-ಪೋಷಿಸು."

ಭಗವಂತನು ಹೇಳುತ್ತಾನೆ :

"ದೇವತೆಗಳ ಸ್ವಾಮಿಯೇ! ಬ್ರಹ್ಮದೇವ! ನೀನು ಹೇಳಿದುದನ್ನು ನಾನು ಕೇಳಿದೆನು. ನಿಮ್ಮ ಕಾರ್ಯಗಳೆಲ್ಲವನ್ನೂ ಮಾಡಿಕೊಟ್ಟದ್ದಾಯಿತು. ಭೂಮಿಯ ಭಾರವನ್ನೂ ಇಳುಹಿದ್ದಾಯಿತು. ಆದರೆ ಇನ್ನೂ ಒಂದು ಕಾರ್ಯವು ಹಾಗೆಯೇ ಉಳಿದುಕೊಂಡಿದೆ. ಈ ನಮ್ಮ ಯದುವಂಶೀಯರು ಅವರಲ್ಲಿರುವ ಬಲ-ವಿಕ್ರಮಗಳಿಂದಲೂ, ವೀರ್ಯ-ಶೌರ್ಯಾದಿಗಳಿಂದಲೂ, ಧನಸಂಪತ್ತಿಯಿಂದಲೂ ಉನ್ಮತ್ತರಾಗಿಬಿಟ್ಟಿದ್ದಾರೆ. ಲೋಕವನ್ನೇ ನುಂಗಿಹಾಕ ಬೇಕೆಂದಿರುವ ಅವರ ಉದ್ಧಟತನವನ್ನು ನಾನು–ಕಡಲದಡವು ಕಡಲನ್ನು ತಡೆ ಹಿಡಿಯುವಂತೆ ತಡೆ ಹಿಡಿದು ನಿಲ್ಲಿಸಿದ್ದೇನೆ. ನಾನೇನಾದರೂ ಮದಾಂಧರೂ

ಸ್ವೇಚ್ಛಾಚಾರಿಗಳೂ ಆಗಿರುವ ಯದುವಂಶೀಯರನ್ನು ವಿನಾಶಗೊಳಿಸದೆ ಸ್ವಧಾಮವನ್ನು ಸೇರಿದೆನಾದರೆ ಇವರು ಸಮಸ್ತವಾದ ಲೋಕಮರ್ಯಾದೆಗಳನ್ನೂ ಉಲ್ಲಂಘಿಸಿ ಹದ್ದುಮೀರಿನಡೆಯುತ್ತಾ ಸಮಸ್ತಲೋಕಗಳನ್ನೂ ವಿನಾಶಗೊಳಿಸುತ್ತಾರೆ.

ಅನಘನೇ! ಬ್ರಹ್ಮದೇವ! ಬ್ರಾಹ್ಮಣರ ಶಾಪದಿಂದಾಗಿ ಈ ವಂಶ ದವರ ವಿನಾಶವು ಈಗಾಗಲೇ ಪ್ರಾರಂಭವಾಗಿಬಿಟ್ಟಿದೆ. ಈ ಕಾರ್ಯವು ಪೂರ್ಣಗೊಂಡನಂತರ ನಾನು ಸ್ವಧಾಮಕ್ಕೆ ಬರುತ್ತೇನೆ."*

ಶ್ರೀಶುಕಮುನಿಗಳು ಹೇಳುತ್ತಾರೆ :

ಪರೀಕ್ಷಿತಮಹಾರಾಜ! ಅಖಿಲಲೋಕಗಳಿಗೂ ಅಧಿಪತಿಯಾದ ಶ್ರೀಕೃಷ್ಣನು ಹೀಗೆ ಹೇಳಲು ಬ್ರಹ್ಮದೇವನು ಶ್ರೀಕೃಷ್ಣನಿಗೆ ಪುನಃ ಪ್ರಣಾಮಮಾಡಿ ದೇವತೆಗಳೊಡನೆ ತನ್ನ ಧಾಮವನ್ನು ಸೇರಿದನು.

ಬ್ರಹ್ಮಾದಿಗಳು ಹೊರಟುಹೋಗುತ್ತಲೇ ದ್ವಾರಕಾಪಟ್ಟಣದಲ್ಲಿ ದೊಡ್ಡ-ದೊಡ್ಡ ಉತ್ಪಾತಗಳೂ ಅಪಶಕುನಗಳೂ ಕಾಣಿಸಿಕೊಂಡುವು. ಇದನ್ನು ನೋಡಿ ಭಯಗೊಂಡ ಕೆಲವರು ಯದುವೃದ್ಧರು, ಶ್ರೀಕೃಷ್ಣನ ಬಳಿಗೆ ಬಂದು ತಮ್ಮ ಆತಂಕವನ್ನು ಹೇಳಿಕೊಂಡರು. ಅವರನ್ನು ಸಮಾ ಧಾನಗೊಳಿಸುತ್ತಾ ಶ್ರೀಕೃಷ್ಣನು ಹೇಳಿದನು :

"ಗುರುಜನರೇ! ನಿಮ್ಮ ಆತಂಕವು ಸಹಜವಾಗಿಯೇ ಇದೆ. ಇಂದು ದ್ವಾರಕಾಪಟ್ಟಣದ ಯಾವ ಕಡೆಯಲ್ಲೇ ನೋಡಿದರೂ ದೊಡ್ಡ ದೊಡ್ಡ ಉತ್ಪಾತಗಳೂ, ಅಪಶಕುನಗಳೂ ಕಾಣಿಸಿಕೊಳ್ಳುತ್ತಿವೆ. ತಪ್ಪಿಸಿಕೊಳ್ಳಲು

---

* ಇಲ್ಲಿ ಭಗವಂತನು ಯಾದವರು ನಾಶವಾದನಂತರ ಬ್ರಹ್ಮದೇವರ ಲೋಕಕ್ಕೆ ಹೋಗುವುದಾಗಿ ಹೇಳುತ್ತಾನೆ. ಹಾಗಾದರೆ ಅದಕ್ಕಿಂತಲೂ ಉನ್ನತವಾಗಿರುವ ಪರಮವೈಕುಂಠಕ್ಕೆ ಹೋಗುವುದಿಲ್ಲವೆ? ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಶ್ರೀಧರೀಯ ಮತ್ತು ವೀರರಾಘವೀಯ ವ್ಯಾಖ್ಯಾನಗಳಲ್ಲಿ ಹೀಗೆ ಸಮಾಧಾನ ಹೇಳಿದೆ. ವೈಕುಂಠಕ್ಕೆ ಹೋಗುತ್ತಾ ಬ್ರಹ್ಮದೇವರ ಸತ್ಯಲೋಕಕ್ಕೂ ಹೋಗುವೆನೆಂಬುದು ಶ್ರೀಕೃಷ್ಣನ ಆಶಯ.

ವೈಕುಣ್ಠಂ ಯಾಸ್ಯನ್ ತವ ಭವನಂ ಯಾಸ್ಯಾಮಿ ಇತ್ಯರ್ಥಃ ।

ಅಸಾಧ್ಯವಾದ ಶಾಪವನ್ನು ಬ್ರಾಹ್ಮಣರು ನಮ್ಮ ವಂಶಕ್ಕೆ ಕೊಟ್ಟಿರುವರೆಂಬ ವಿಷಯವೂ ನಿಮಗೆ ತಿಳಿದೇ ಇದೆ. ನಾವೇನಾದರೂ ನಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳುವ ಅಪೇಕ್ಷೆಯುಳ್ಳವರಾಗಿದ್ದರೆ ನಾವೀಗಲೇ ಸ್ವಲ್ಪವೂ ವಿಳಂಬಿಸದೆ ಇಲ್ಲಿಂದ ಹೊರಟುಹೋಗಬೇಕು. ದ್ವಾರಕೆಯಲ್ಲಿರುವುದು ಬೇಡ. ಇಂದೇ ನಾವು ಪರಮಪವಿತ್ರವಾದ ಪ್ರಭಾಸಕ್ಷೇತ್ರಕ್ಕೆ ಹೊರಟು ಹೋಗೋಣ. ಪ್ರಭಾಸಕ್ಷೇತ್ರಕ್ಕೆ ಹೋಗುವುದರಿಂದ ಬ್ರಾಹ್ಮಣರ ಶಾಪದಿಂದ ನಾವು ಬಿಡುಗಡೆ ಹೊಂದಲೂಬಹುದು. ಆ ಕ್ಷೇತ್ರದ ಮಹಿಮೆಯೇ ಹಾಗಿದೆ.

**ಯತ್ರ ಸ್ನಾತ್ವಾ ದಕ್ಷಶಾಪಾದ್ಗೃಹೀತೋ ಯಕ್ಷ್ಮಣೋಡುರಾಟ್ ।**
**ವಿಮುಕ್ತಃ ಕಿಲ್ಬಿಷಾತ್ಸದ್ಯೋ ಭೇಜೇ ಭೂಯಃ ಕಲೋದಯಮ್ ॥**

ದಕ್ಷಪ್ರಜಾಪತಿಯ ಶಾಪದಿಂದಾಗಿ ಚಂದ್ರನಿಗೆ ಕ್ಷಯರೋಗವು ಪ್ರಾಪ್ತ ವಾಗಿದ್ದಿತು. ಪರಮಪವಿತ್ರವಾದ ಪ್ರಭಾಸಕ್ಷೇತ್ರದಲ್ಲಿ ಸ್ನಾನಮಾಡಿದೊಡ ನೆಯೇ ಚಂದ್ರನು ಶಾಪದಿಂದ ಮುಕ್ತನಾಗಿ ಆ ರೋಗವನ್ನು ಕಳೆದುಕೊಂಡು ಹಿಂದಿನಂತೆಯೇ ತನ್ನ ಕಲೆಗಳೆಲ್ಲವನ್ನೂ ಪುನಃ ಪಡೆದುಕೊಂಡನು.

ನಾವೂ ಕೂಡ ಅಂತಹ ಪರಮಪವಿತ್ರವಾದ ಪ್ರಭಾಸಕ್ಷೇತ್ರಕ್ಕೆ ಹೋಗಿ, ಅಲ್ಲಿರುವ ಪವಿತ್ರತೀರ್ಥಗಳಲ್ಲಿ ಸ್ನಾನಮಾಡಿ, ದೇವ-ಪಿತೃಗಳಿಗೆ ತರ್ಪಣಾದಿಗಳನ್ನಿತ್ತು , ನಾನಾಗುಣಗಳಿಂದ ಕೂಡಿದ ಷಡ್ರಸೋಪೇತವಾದ ಅಡಿಗೆಯನ್ನು ಸಿದ್ಧಗೊಳಿಸಿ ಶ್ರೇಷ್ಠರಾದ ಬ್ರಾಹ್ಮಣರಿಗೆ ಭೋಜನ ಮಾಡಿಸೋಣ. ಅನಂತರ ನಾವು ಅವರಿಗೆ ಶ್ರದ್ಧಾಯುಕ್ತರಾಗಿ ಹೇರಳವಾದ ದಾನ-ದಕ್ಷಿಣೆಗಳನ್ನು ಕೊಡೋಣ. ಹಡಗಿನಮೂಲಕವಾಗಿ ಸಮುದ್ರವನ್ನು ದಾಟುವಂತೆ ಬ್ರಾಹ್ಮಣರನ್ನು ಭೂರಿ-ಭೋಜನಗಳಿಂದಲೂ, ದಾನ-ದಕ್ಷಿಣೆ ಗಳಿಂದಲೂ ಸತ್ಕರಿಸುವುದರ ಮೂಲಕವಾಗಿ ಇಂದು ನಮಗೆ ಒದಗಲಿರುವ ಮಹಾಸಂಕಟದಿಂದ ಪಾರಾಗೋಣ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಕುಲನಂದನನೇ! ಶ್ರೀಕೃಷ್ಣಭಗವಂತನು ಹೀಗೆ ಆಜ್ಞೆಮಾಡಿದೊಡ ನೆಯೇ ಯಾದವರೆಲ್ಲರೂ ಒಮ್ಮತದಿಂದ ಶ್ರೀಕೃಷ್ಣನ ಆಜ್ಞೆಯನ್ನು ಶಿರಸಾ

ವಹಿಸಿ, ಪ್ರಭಾಸಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿ ಪ್ರಯಾಣಕ್ಕಾಗಿ ತಮ್ಮ ತಮ್ಮ ರಥಗಳನ್ನು ಸಜ್ಜುಗೊಳಿಸತೊಡಗಿದರು.

ಪರೀಕ್ಷಿತ! ಉದ್ಧವನು ಶ್ರೀಕೃಷ್ಣನ ಭಕ್ತನೂ, ಸೇವಕನೂ ಆಗಿದ್ದನು. ಅವನು ಯಾವಾಗಲೂ ಶ್ರೀಕೃಷ್ಣನನ್ನು ಆಶ್ರಯಿಸಿಕೊಂಡೇ ಇರುತ್ತಿದ್ದನು. ಭಗವಂತನ ಆಜ್ಞೆಯಂತೆ ಯಾದವರು ಪ್ರಭಾಸಕ್ಷೇತ್ರಕ್ಕೆ ಪ್ರಯಾಣ ಮಾಡಲು ಸಿದ್ಧರಾಗುತ್ತಿರುವುದನ್ನು ನೋಡಿದನು. ಆ ಸಮಯದಲ್ಲಿ ದ್ವಾರಕೆಯಲ್ಲಿ ಘೋರವಾದ ಅರಿಷ್ಟಗಳು ಕಾಣಿಸಿಕೊಳ್ಳುತ್ತಿರುವುದೂ ಆತನ ಗಮನಕ್ಕೆ ಬಂದಿದ್ದಿತು. ಜಗತ್ತಿನ ಈಶ್ವರರೆಲ್ಲರಿಗೂ ಅಧೀಶ್ವರನಾದ ಶ್ರೀಕೃಷ್ಣನನ್ನು ಉದ್ಧವನು ಏಕಾಂತದಲ್ಲಿ ಸಂಧಿಸಿ ತನ್ನ ತಲೆಯಿಂದ ಭಗವಂತನ ಕಾಲುಗಳನ್ನು ಮುಟ್ಟಿ ನಮಸ್ಕರಿಸಿ ಕೈಮುಗಿದುಕೊಂಡು ಆತನಿಗೆ ಹೇಳಿದನು :

**ದೇವದೇವೇಶ ಯೋಗೇಶ ಪುಣ್ಯಶ್ರವಣಕೀರ್ತನ ।**
**ಸಂಹೃತ್ಯೈತತ್ಕುಲಂ ನೂನಂ ಲೋಕಂ ಸನ್ತ್ಯಕ್ಷ್ಯತೇ ಭವಾನ್ ।**
**ವಿಪ್ರಶಾಪಂ ಸಮರ್ಥೋಽಪಿ ಪ್ರತ್ಯಹನ್ನ ಯದೀಶ್ವರಃ ॥೪೨॥**

"ಯೋಗೇಶ್ವರನೇ! ದೇವಾಧಿದೇವತೆಗಳಿಗೂ ಅಧೀಶ್ವರನಾಗಿರತಕ್ಕವನೇ! ನಿನ್ನ ಲೀಲೆಗಳನ್ನು ಕೇಳುವವರನ್ನೂ-ಕೀರ್ತನಮಾಡುವವರನ್ನೂ ಪವಿತ್ರಗೊಳಿಸುವವನೇ! ಸರ್ವಶಕ್ತನಾದ ಪರಮೇಶ್ವರನೇ! ಬ್ರಾಹ್ಮಣರ ಶಾಪವನ್ನು ವಿಫಲಗೊಳಿಸಲು ಸಮರ್ಥನಾಗಿದ್ದರೂ ನೀನು ಹಾಗೆ ಮಾಡಲಿಲ್ಲ. ನಿಶ್ಚಯವಾಗಿಯೂ ನೀನು ಈ ಯಾದವಕುಲವನ್ನು ಸಂಹರಿಸಿಯೇ ಈ ಲೋಕವನ್ನು ಬಿಟ್ಟು ಹೋಗುವೆ.

**ನಾಹಂ ತವಾಂಘ್ರಿಕಮಲಂ ಕ್ಷಣಾರ್ಧಮಪಿ ಕೇಶವ ।**
**ತ್ಯಕ್ತುಂ ಸಮುತ್ಸಹೇ ನಾಥ ಸ್ವಧಾಮ ನಯ ಮಾಮಪಿ ॥೪೩॥**

ಕೇಶವನೇ! ಪ್ರಾಣನಾಥನೇ! ನಿನ್ನ ದಿವ್ಯವಾದ ಚರಣಕಮಲಗಳನ್ನು ನಾನು ಕ್ಷಣಮಾತ್ರವಾದರೂ ಬಿಟ್ಟಿರಲಾರೆನು. ಭಗವಂತ! ನನ್ನನ್ನೂ ನಿನ್ನ ಧಾಮಕ್ಕೆ ಕರೆದುಕೊಂಡು ಹೋಗಿಬಿಡು. ನಾನು ನಿನ್ನ ದಿವ್ಯಚರಣಕಮಲಗಳನ್ನು ಖಂಡಿತವಾಗಿಯೂ ಬಿಟ್ಟಿರಲಾರೆನು.

**ತವ ವಿಕ್ರೀಡಿತಂ ಕೃಷ್ಣ ನೃಣಾಂ ಪರಮಮಙ್ಗಲಮ್ ।**
**ಕರ್ಣಪೀಯೂಷಮಾಸ್ವಾದ್ಯ ತ್ಯಜತ್ಯನ್ಯಸ್ಪೃಹಾಂ ಜನಃ ॥೪೪॥**

ನಿನ್ನ ಒಂದೊಂದು ಲೀಲಾಪ್ರಸಂಗವೂ ಮನುಷ್ಯರಿಗೆ ಪರಮಮಂಗಳ ದಾಯಕವಾದುದು. ಕಿವಿಗಳಿಗೆ ಅಮೃತಪ್ರಾಯವಾಗಿರುತ್ತದೆ. ಅಮೃತ ಪ್ರಾಯವಾದ, ಕರ್ಣಾನಂದಕರವಾದ ನಿನ್ನ ಲೀಲಾಪ್ರಸಂಗಗಳನ್ನು ಒಮ್ಮೆ ಕೇಳಿದ ಜನರು ಬೇರೆಯಾವುದನ್ನೂ ಕೇಳಲು ಅಪೇಕ್ಷಿಸುವುದಿಲ್ಲ.

**ಶಯ್ಯಾಸನಾಟನಸ್ಥಾನಸ್ನಾನಕ್ರೀಡಾಶನಾದಿಷು ।**
**ಕಥಂ ತ್ವಾಂ ಪ್ರಿಯಮಾತ್ಮಾನಂ ವಯಂ ಭಕ್ತಾಸ್ತ್ಯಜೇಮಹಿ ॥೪೫॥**

ಪ್ರಭುವೇ! ನಾವಾದರೋ ಕುಳಿತಾಗ-ನಿಂತಾಗ, ಮಲಗಿದಾಗ-ಎಚ್ಚರ ಗೊಂಡಾಗ, ತಿರುಗಾಡುವಾಗ ನಿನ್ನ ಜೊತೆಯಲ್ಲೇ ಇರುತ್ತೇವೆ. ಸ್ನಾನವನ್ನೂ ಜೊತೆಯಲ್ಲೇ ಮಾಡುತ್ತೇವೆ. ಜೊತೆಗೂಡಿಯೇ ಆಟವಾಡುತ್ತೇವೆ. ಜೊತೆಯಲ್ಲಿಯೇ ಭೋಜನಮಾಡುತ್ತೇವೆ. ಹೆಚ್ಚೇನು ಹೇಳಲಿ? ನಿನಗೆ ತಿಳಿದಿರುವಂತೆಯೇ ನಾವು ಯಾವಾಗಲೂ ನಿನ್ನ ಜೊತೆಯಲ್ಲಿಯೇ ಇದ್ದು ಬಿಟ್ಟಿದ್ದೇವೆ. ನಿನ್ನನ್ನು ಬಿಟ್ಟು ಯಾವ ಕಾರ್ಯವನ್ನೂ ಮಾಡಿದ್ದೇ ಇಲ್ಲ. ನೀನು ನನ್ನನ್ನು ನಿನ್ನ ಧಾಮಕ್ಕೆ ಕರೆದುಕೊಂಡು ಹೋಗಲೇಬೇಕು.

**ತ್ವಯೋಪಭುಕ್ತಸ್ರಗ್ಗನ್ಧವಾಸೋಽಲಙ್ಕಾರಚರ್ಚಿತಾಃ ।**
**ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥೪೬॥**

ನೀನು ಧರಿಸಿದ ಮಾಲೆಯನ್ನು ನಾವು ಪ್ರಸಾದರೂಪವಾಗಿ ಧರಿಸು ತ್ತೇವೆ. ನೀನು ಬಳಿದುಕೊಂಡ ಗಂಧವನ್ನೇ ಪ್ರಸಾದರೂಪದಲ್ಲಿ ಪಡೆದು ಮೈಗೆ ಪೂಸಿಕೊಳ್ಳುತ್ತೇವೆ. ನೀನುಟ್ಟ ವಸ್ತ್ರಗಳನ್ನು ಪರಮಪ್ರಸಾದ ವೆಂದೂ ಶೇಷವಸ್ತ್ರವೆಂದೂ ಭಾವಿಸಿ ಉಟ್ಟುಕೊಳ್ಳುತ್ತೇವೆ. ನೀನು ಅಲಂಕಾರಮಾಡಿಕೊಳ್ಳುವಂತೆಯೇ ನಿನ್ನಿಂದ ಉಪಭುಕ್ತವಾದ ವಸ್ತುಗಳಿಂದ ನಾವೂ ಅಲಂಕಾರಮಾಡಿಕೊಳ್ಳುತ್ತೇವೆ. ನಿನ್ನ ದಾಸಾನುದಾಸರಾಗಿರುವ ನಾವು ನೀನು ತಿಂದುಳಿದುದನ್ನು ಮಹಾಪ್ರಸಾದವೆಂದು ಭಾವಿಸಿ ಅತ್ಯಂತ ಸಂತೋಷದಿಂದ ಭುಂಜಿಸುತ್ತೇವೆ. ಇಂತಹ ನಿನ್ನ ಸೇವೆಯಿಂದಾಗಿ ನಾವು

ಮಾಯೆಯನ್ನೂ ಗೆದ್ದಿದ್ದೇವೆ. ನಿನ್ನ ಮಾಯೆಗೆ ನಾವು ಭಯಪಡೆವು. ಆದರೆ ನಿನ್ನ ವಿಯೋಗಕ್ಕಾಗಿ ಭಯಪಡುತ್ತಿದ್ದೇವೆ.

**ವಾತರಶನಾ ಯ ಋಷಯಃ ಶ್ರಮಣಾ ಊರ್ಧ್ವಮನ್ಥಿನಃ ।**
**ಬ್ರಹ್ಮಾಖ್ಯಂ ಧಾಮ ತೇ ಯಾನ್ತಿ ಶಾನ್ತಾಃ ಸಂನ್ಯಾಸಿನೋಽಮಲಾಃ ॥**

ಮಾಯೆಯಿಂದ ಪಾರಾಗುವುದು ಅಷ್ಟು ಸುಲಭಸಾಧ್ಯವಾದ ವಿಷಯ ವಲ್ಲ. ದೊಡ್ಡ-ದೊಡ್ಡ ಋಷಿ-ಮುನಿಗಳೂ ದಿಗಂಬರರಾಗಿದ್ದುಕೊಂಡು ಆಜೀವಪರ್ಯಂತವಾಗಿ ನೈಷ್ಠಿಕಬ್ರಹ್ಮಚರ್ಯವನ್ನು ಪರಿಪಾಲಿಸುತ್ತಾ ಅಧ್ಯಾತ್ಮವಿದ್ಯೆಯ ಸಾಧನೆಗಾಗಿ ಬಹಳವಾಗಿ ಶ್ರಮಿಸುತ್ತಾರೆ. ಇಂತಹ ಕಠಿಣತರವಾದ ಸಾಧನೆಗಳಿಂದ ಆ ಸಂನ್ಯಾಸಿಗಳ ಹೃದಯವು ನಿರ್ಮಲ ವಾಗುತ್ತದೆ. ಅನಂತರ ಶಾಂತಾತ್ಮರಾದ ಆ ಸಂನ್ಯಾಸಿಗಳು ನಿನ್ನ ಬ್ರಹ್ಮ ನಾಮಕವಾದ ಪರಮಪದವನ್ನು ಸೇರುತ್ತಾರೆ.

**ವಯಂ ತ್ವಿಹ ಮಹಾಯೋಗಿನ್ಭ್ರಮನ್ತಃ ಕರ್ಮವರ್ತ್ಮಸು ।**
**ತ್ವದ್ವಾರ್ತಯಾ ತರಿಷ್ಯಾಮಸ್ತಾವಕೈರ್ದುಸ್ತರಂ ತಮಃ ॥೪೮॥**

ಓ ಮಹಾಯೋಗಿಯೇ! ಕರ್ಮಮಾರ್ಗದಲ್ಲಿ ಬಿದ್ದು ಒದ್ದಾಡುತ್ತಿರುವ ನಾವಾದರೋ ನಿನ್ನ ಪ್ರಿಯಭಕ್ತರೊಡನೆ ನಿನ್ನ ಲೀಲಾಪ್ರಸಂಗಗಳನ್ನು ಹೇಳುತ್ತಾ ನಿನ್ನ ನಾಮ ಸಂಕೀರ್ತನೆಮಾಡುತ್ತಾ ದುಸ್ತರವಾದ ತಮೋರೂಪವಾದ ಸಂಸಾರವನ್ನು ದಾಟಿಬಿಡುತ್ತೇವೆ.

**ಸ್ಮರನ್ತಃ ಕೀರ್ತಯನ್ತಸ್ತೇ ಕೃತಾನಿ ಗದಿತಾನಿ ಚ ।**
**ಗತ್ಯುತ್ಸ್ಮಿತೇಕ್ಷಣಕ್ಷ್ವೇಲಿ ಯನ್ನೃಲೋಕವಿಡಮ್ಬನಮ್ ॥೪೯॥**

ನೀನು ಮಾಡಿದ ಸಾಹಸಕಾರ್ಯಗಳು, ನೀನು ಹೇಳಿದ ಉಪದೇಶ ಗಳು–ಇವೆಲ್ಲವನ್ನೂ ಸ್ಮರಿಸುತ್ತಾ ನಿನ್ನ ಲೀಲಾಪ್ರಸಂಗಗಳನ್ನೇ ಬಾರಿ-ಬಾರಿಗೂ ಕೀರ್ತನಮಾಡುತ್ತಾ ಸಂಸಾರಸಾಗರವನ್ನು ದಾಟುತ್ತೇವೆ. ಇಷ್ಟು ಮಾತ್ರವಲ್ಲ ; ನಿನ್ನ ಸುಂದರವಾದ ನಡಿಗೆ, ಅಮೃತಪ್ರಾಯವಾದ ನುಡಿಗಳು, ಕಿರುನಗೆ, ಕುಡಿನೋಟ, ಆಟಪಾಟಗಳು–ಇವೇ ಮುಂತಾದ ಮನುಷ್ಯ ಲೋಕದ ನಟನೆಗಳನ್ನು ಸ್ಮರಿಸಿಕೊಳ್ಳುತ್ತಾ ನಿನ್ನಲ್ಲಿಯೇ ಮನಸ್ಸನ್ನು ಲೀನಗೊಳಿಸಿ ಮಾಯಾಮಯವಾದ ಈ ಸಂಸಾರವನ್ನು ದಾಟಿಬಿಡುತ್ತೇವೆ.

ಆದುದರಿಂದ ನಾವು ನಿನ್ನ ಮಾಯೆಗೆ ಭಯಪಡುವುದಿಲ್ಲ. ನಿನ್ನ ವಿರಹಕ್ಕೆ ಭಯಪಡುತ್ತಿದ್ದೇವೆ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಉದ್ಧವನು ಹೀಗೆ ವಿಜ್ಞಾಪಿಸಿಕೊಳ್ಳಲು ದೇವಕಿಯ ಮಗನಾದ ಭಗವಾನ್ ಶ್ರೀಕೃಷ್ಣನು ಏಕಾಂತದಲ್ಲಿದ್ದ ತನಗೆ ಅತ್ಯಂತ ಪ್ರಿಯಭೃತ್ಯನಾಗಿದ್ದ ಉದ್ಧವನಿಗೆ ಹೇಳಿದನು."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತದ
ಏಕಾದಶಸ್ಕಂಧದಲ್ಲಿ ೬ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೭ನೆಯ ಅಧ್ಯಾಯ

## ಅವಧೂತೋಪಾಖ್ಯಾನ : ಎಂಟು ಗುರುಗಳ ಕಥೆ

ಭಗವಂತನು ಹೇಳುತ್ತಾನೆ :

**ಯದಾತ್ಥ ಮಾಂ ಮಹಾಭಾಗ ತಚ್ಚಿಕೀರ್ಷಿತಮೇವ ಮೇ ।**
**ಬ್ರಹ್ಮಾ ಭವೋ ಲೋಕಪಾಲಾಃ ಸ್ವರ್ವಾಸಂ ಮೇಽಭಿಕಾಂಕ್ಷಿಣಃ ॥೧॥**

"ಭಾಗ್ಯಶಾಲಿಯಾದ ಉದ್ಧವನೇ! ನೀನು ನನ್ನೊಡನೆ ಏನನ್ನು ಹೇಳಿದೆಯೋ ಅದನ್ನೇ ನಾನು ಮಾಡಲು ಅಪೇಕ್ಷಿಸಿದ್ದೇನೆ. ಬ್ರಹ್ಮ, ಶಂಕರ, ಇಂದ್ರ–ಇವರೇ ಮೊದಲಾದ ಲೋಕಪಾಲಕರು ಕೂಡ ನಾನು ಭೂಲೋಕವನ್ನು ತ್ಯಜಿಸಿ ಸ್ವರ್ಗದಲ್ಲಿ ವಾಸಮಾಡಬೇಕೆಂದು ಅಪೇಕ್ಷಿಸುತ್ತಿದ್ದಾರೆ.

ಭೂಮಿಯಲ್ಲಿ ನಾನು ದೇವತೆಗಳ ಸಲುವಾಗಿ ಎಷ್ಟು ಕಾರ್ಯಗಳನ್ನು ಮಾಡಬೇಕಾಗಿದ್ದಿತೋ ಆ ಎಲ್ಲ ಕಾರ್ಯಗಳನ್ನೂ ಮಾಡಿ ಮುಗಿಸಿದ್ದೇನೆ. ಇದಕ್ಕಾಗಿಯೇ ನಾನು ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟು ನನ್ನ ಅಂಶ* ನೆನಿಸಿದ ಬಲಭದ್ರನೊಡನೆ ಅವತರಿಸಿದ್ದೆನು. ನಮ್ಮ ಕುಲವೂ ಈಗಾಗಲೇ ಬ್ರಾಹ್ಮಣಶಾಪದಿಂದ ದಗ್ಧವಾಗಿ ಹೋಗಿದ್ದು ಪರಸ್ಪರ ಕಲಹ

* ಅಂಶೇನ–ಎಂಬುದಕ್ಕೆ ನನ್ನ (ಪರಮಾತ್ಮನ) ಅಂಶದಿಂದ–ಎಂದೂ ಅರ್ಥ ಮಾಡಬಹುದಾಗಿದೆ.

ದಿಂದಲೇ ವಿನಾಶ ಹೊಂದುತ್ತದೆ. ಇಂದಿನಿಂದ ಏಳು ದಿವಸಕ್ಕೆ ಸರಿಯಾಗಿ ಸಮುದ್ರವು ಈ ದ್ವಾರಕಾಪಟ್ಟಣವನ್ನು ಮುಳುಗಿಸಿಬಿಡುತ್ತದೆ. ಸಾಧುವಾದ ಉದ್ಧವನೇ! ಈ ಲೋಕವನ್ನು ನಾನು ತೊರೆದುಬಿಟ್ಟೊಡನೆಯೇ ಕಲಿಯಿಂದಲೂ ಇದು ಆಕ್ರಮಿಸಲ್ಪಟ್ಟು ಮಂಗಳಹೀನವಾಗಿ ಹೋಗುತ್ತದೆ.

**ನ ವಸ್ತವ್ಯಂ ತ್ವಯೈವೇಹ ಮಯಾ ತ್ಯಕ್ತೇ ಮಹೀತಲೇ ।**
**ಜನೋಽಧರ್ಮರುಚಿರ್ಭದ್ರ ಭವಿಷ್ಯತಿ ಕಲೌ ಯುಗೇ ॥೫॥**

ಮಂಗಳಸ್ವರೂಪನೇ! ನಾನು ಈ ಜಗತ್ತನ್ನು ಪರಿತ್ಯಜಿಸಿ ಹೊರಟು ಹೋದನಂತರ ನೀನೂ ಇಲ್ಲಿರಬಾರದು. ಕಲಿಯುಗದಲ್ಲಿ ಜನರು ಅಧರ್ಮ ದಲ್ಲಿಯೇ ಹೆಚ್ಚು ಅಭಿರುಚಿಯುಳ್ಳವರಾಗಿರುತ್ತಾರೆ. ಅಂತಹ ಜನರ ಮಧ್ಯದಲ್ಲಿರಬಾರದು.

**ತ್ವಂ ತು ಸರ್ವಂ ಪರಿತ್ಯಜ್ಯ ಸ್ನೇಹಂ ಸ್ವಜನಬನ್ಧುಷು ।**
**ಮಯ್ಯಾವೇಶ್ಯ ಮನಃ ಸಮ್ಯಕ್ ಸಮದೃಗ್ವಿಚರಸ್ವ ಗಾಮ್ ॥೬॥**

ಉದ್ಧವ! ನೀನಾದರೋ ಮನೆ-ಮಠ-ಐಶ್ವರ್ಯ ಎಲ್ಲವನ್ನೂ ಪರಿತ್ಯಜಿಸಿ, ಸ್ವಜನರಲ್ಲಿಯೂ ಬಂಧುಗಳಲ್ಲಿಯೂ ಸ್ನೇಹವನ್ನು ತೊರೆದು, ನಿನ್ನ ಮನಸ್ಸನ್ನು ಸಂಪೂರ್ಣವಾಗಿ ನನ್ನಲ್ಲಿಯೇ ಇರಿಸಿ, ಚರಾಚರಪ್ರಾಣಿಗಳನ್ನು ಸಮದೃಷ್ಟಿಯಿಂದ ನೋಡುತ್ತಾ ಭೂಮಿಯಲ್ಲಿ ಸಂಚರಿಸುತ್ತಿರು.

**ಯದಿದಂ ಮನಸಾ ವಾಚಾ ಚಕ್ಷುರ್ಭ್ಯಾಂ ಶ್ರವಣಾದಿಭಿಃ ।**
**ನಶ್ವರಂ ಗೃಹ್ಯಮಾಣಂ ಚ ವಿದ್ಧಿ ಮಾಯಾಮನೋಮಯಮ್ ॥೭॥**

ವಯಸ್ಯ! ಮನಸ್ಸಿನಿಂದ ಯಾವುದು ಯೋಚಿಸಲ್ಪಡುವುದೋ, ಮಾತಿನಿಂದ ಯಾವುದು ಹೇಳಲ್ಪಡುವುದೋ, ಕಣ್ಣುಗಳಿಂದ ಯಾವುದು ನೋಡಲ್ಪಡುವುದೋ, ಕಿವಿಗಳಿಂದ ಯಾವುದು ಕೇಳಲ್ಪಡುವುದೋ, ಮೂಗಿನಿಂದ ಯಾವುದು ಮೂಸಲ್ಪಡುವುದೋ, ಚರ್ಮದಿಂದ ಯಾವುದು ಸ್ಪರ್ಶಿಸಲ್ಪಡುವುದೋ–ಇವೆಲ್ಲವೂ ಮಾಯೆಯ ಪ್ರಭಾವದಿಂದ ನಿಜವಾಗಿರು ವಂತೆ ಕಾಣುತ್ತವೆ. ಇವು ನಾಶವಾಗತಕ್ಕುವುಗಳು. ಸ್ವಪ್ನದಂತೆ ಮನಸ್ಸಿನ ವಿಲಾಸಗಳೇ ಆಗಿವೆ. ಇವೆಲ್ಲವನ್ನೂ ಮಾಯಾಮಾತ್ರ ಮತ್ತು ನಶ್ವರವೆಂದು ತಿಳಿದುಕೋ.

**ಪುಂಸೋಽಯುಕ್ತಸ್ಯ ನಾನಾರ್ಥೋ ಭ್ರಮಃ ಸ ಗುಣದೋಷಭಾಕ್ ।**
**ಕರ್ಮಾಕರ್ಮವಿಕರ್ಮೇತಿ ಗುಣದೋಷಧಿಯೋ ಭಿದಾ ॥೮॥**

ಸಮಾಹಿತವಾದ ಅಂತಃಕರಣವಿಲ್ಲದ ಮನುಷ್ಯನಿಗೆ ಭೇದಮಯವಾದ ಗುಣ-ದೋಷಗಳಿಂದ ಕೂಡಿದ ಭ್ರಮೆಯೇ ಉಂಟಾಗುತ್ತದೆ. ಗುಣ-ದೋಷಗಳೆಂಬ ಬುದ್ಧಿಯಿರುವವನಿಗೆ ಕರ್ಮ–ಕರ್ತವ್ಯಕರ್ಮ, ಅಕರ್ಮ–ಮಾಡಬಾರದ ಕರ್ಮ, ವಿಕರ್ಮ-ನಿಷಿದ್ಧವಾದ ಕರ್ಮ-ಎಂಬ ಭೇದಗಳು ಕಂಡುಬರುತ್ತವೆ.*

**ತಸ್ಮಾದ್ಯುಕ್ತೇನ್ದ್ರಿಯಗ್ರಾಮೋ ಯುಕ್ತಚಿತ್ತ ಇದಂ ಜಗತ್ ।**
**ಆತ್ಮನೀಕ್ಷಸ್ವ ವಿತತಮಾತ್ಮಾನಂ ಮಯ್ಯಧೀಶ್ವರೇ ॥೯॥**

ಆದುದರಿಂದ ಆತ್ಮವ್ಯತಿರಿಕ್ತವಾದ ಪ್ರಾಕೃತವಿಷಯಗಳಲ್ಲಿ ಸಂಬಂಧ ವನ್ನು ತ್ಯಜಿಸಿ ಆತ್ಮಾವಲೋಕವನ್ನು ಅಪೇಕ್ಷಿಸುವ ಇಂದ್ರಿಯಗಳುಳ್ಳವನಾಗಿ ಮತ್ತು ಮನಸ್ಸುಳ್ಳವನಾಗಿ ವಿಸ್ತೃತವಾದ ಈ ಜಗತ್ತನ್ನು ಆತ್ಮನಲ್ಲಿಯೂ ಆತ್ಮವನ್ನು ಅಧೀಶ್ವರನಾದ ನನ್ನಲ್ಲಿಯೂ ನೋಡು.[1]

---

* ಆಯುಕ್ತನ ವಿಷಯವನ್ನು ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ :

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।
ನ ಚಾಭಾಮಯತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ॥ (ಭ.ಗೀ. ೨.೬೬)

ಸಮಾಹಿತವಾದ ಅಂತಃಕರಣವಿಲ್ಲವವನಿಗೆ ಬುದ್ಧಿಯು ಶುದ್ಧವಾಗಿರುವುದಿಲ್ಲ. ವಿಧೇಯಾತ್ಮನಲ್ಲದವನಿಗೆ ಆತ್ಮಾನುಗುಣವಾದ ಭಾವನೆಯು ಇರುವುದಿಲ್ಲ. ಒಳ್ಳೆಯ ಭಾವನೆ ಇಲ್ಲದವನಿಗೆ ಶಾಂತಿಯಿರುವುದಿಲ್ಲ. ಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು?

ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ (ಭ.ಗೀ. ೪–೧೭)

ಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ನಿಷಿದ್ಧಕರ್ಮದ ವಿಷಯ ದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಅಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಕರ್ಮದ ಗತಿಯು ಗಹನವಾದುದು.

1 ಯುಕ್ತ ಶಬ್ದಕ್ಕೆ ನಿರೂಪಣೆಯನ್ನು ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಕೊಟ್ಟಿದ್ದಾನೆ :

ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಞ್ಚನಃ ॥ (ಭ.ಗೀ. ೬–೮)

ಜ್ಞಾನದಿಂದಲೂ, ವಿಜ್ಞಾನದಿಂದಲೂ ತೃಪ್ತಿಹೊಂದಿದ ಆತ್ಮವುಳ್ಳವನೂ,

**ಜ್ಞಾನವಿಜ್ಞಾನಸಂಯುಕ್ತ ಆತ್ಮಭೂತಃ ಶರೀರಿಣಾಮ್ ।**
**ಆತ್ಮಾನುಭವತುಷ್ಟಾತ್ಮಾ ನಾನ್ತರಾಯೈರ್ವಿಹನ್ಯಸೇ ॥೧೦॥**

ಶಾಸ್ತ್ರಜ್ಞಾನದಿಂದಲೂ, ಶಾಸ್ತ್ರಜ್ಞಾನದಿಂದ ಆದ ಆತ್ಮಾನುಭವದಿಂದಲೂ ಸಂಪನ್ನನಾಗಿ, ಆತ್ಮಾನುಭವದಿಂದ (ಆತ್ಮಸಾಕ್ಷಾತ್ಕಾರದಿಂದ) ಸಂತುಷ್ಟವಾದ ಆತ್ಮವುಳ್ಳವನಾಗಿ, ಸಮಸ್ತಪ್ರಾಣಿಗಳ ಶರೀರಗಳಲ್ಲಿಯೂ ಆತ್ಮಭೂತನಾಗಿರುತ್ತಾ ಇರುವ ನೀನು ಯಾವುದೇ ವಿಧವಾದ ವಿಘ್ನ ಗಳಿಂದಲೂ ಪೀಡಿತನಾಗುವುದಿಲ್ಲ.

**ದೋಷಬುದ್ಧ್ಯೋಭಯಾತೀತೋ ನಿಷೇಧಾನ್ನ ನಿವರ್ತತೇ ।**
**ಗುಣಬುದ್ಧ್ಯಾ ಚ ವಿಹಿತಂ ನ ಕರೋತಿ ಯಥಾರ್ಭಕಃ ॥೧೧॥**

ಗುಣ-ದೋಷಗಳೆಂಬ ಎರಡು ಗುಣಗಳಿಂದಲೂ ಅತೀತನಾದವನು ನಿಷಿದ್ಧಕರ್ಮಗಳನ್ನು ಮಾಡುವುದಿಲ್ಲ. ವಿಹಿತಕರ್ಮಗಳನ್ನು ಮಾಡುತ್ತಾನೆ. ಇದಕ್ಕೆ ಕಾರಣ ಗುಣ-ದೋಷಗಳ ಬುದ್ಧಿಯಲ್ಲ. ಹಸುಳೆಯಂತೆ ಸ್ವಾಭಾವಿಕ ವಾಗಿಯೇ ಈ ಕರ್ಮಗಳನ್ನು ಅವನು ಮಾಡುತ್ತಾನೆ. ಗುಣಾತೀತನು ನಿಷಿದ್ಧಕರ್ಮಗಳನ್ನು ಮಾಡದೇ ಇರುವುದರಿಂದ ದೋಷಬುದ್ಧಿಯ ಕಾರಣ ದಿಂದಾಗಿ ಆ ಕರ್ಮಗಳನ್ನು ಮಾಡಲಿಲ್ಲವೆಂದು ಭಾವಿಸಬಾರದು. ವಿಹಿತ ಕರ್ಮಗಳನ್ನು ಮಾಡಿದಾಗ ಗುಣಬುದ್ಧಿಯ ಕಾರಣದಿಂದಾಗಿ ಅವನು ಸತ್ಕರ್ಮಗಳನ್ನು ಮಾಡಿದನೆಂದೂ ಭಾವಿಸಬಾರದು. ಗುಣಾತೀತನಿಗೆ ಸ್ವಾಭಾವಿಕವಾಗಿಯೇ ನಿಷಿದ್ಧಕರ್ಮಗಳಲ್ಲಿ ಪ್ರವೃತ್ತಿಯಿರುವುದಿಲ್ಲ. ವಿಹಿತ ಕರ್ಮಗಳಲ್ಲಿ ಪ್ರವೃತ್ತಿಯಿರುತ್ತದೆ.

**ಸರ್ವಭೂತಸುಹೃಚ್ಛಾನ್ತೋ ಜ್ಞಾನವಿಜ್ಞಾನನಿಶ್ಚಯಃ ।**
**ಪಶ್ಯನ್ಮದಾತ್ಮಕಂ ವಿಶ್ವಂ ನ ವಿಪದ್ಯೇತ ವೈ ಪುನಃ ॥೧೨॥**

---

ಜಿತೇಂದ್ರಿಯನೂ, ಕೂಟಸ್ಥನೂ, ಮಣ್ಣು-ಕಲ್ಲು-ಚಿನ್ನ–ಇವುಗಳನ್ನು ಒಂದೇ ಸಮನಾಗಿ ಕಾಣುವವನೂ ಆದ ಯೋಗಿಯು ಯುಕ್ತನೆಂದು ಕರೆಯಲ್ಪಡುತ್ತಾನೆ. ಇದನ್ನು ಆಧರಿಸಿ ಇಲ್ಲಿ ಬಂದಿರುವ ಯುಕ್ತಶಬ್ದಕ್ಕೆ ಆತ್ಮವ್ಯತಿರಿಕ್ತವಾದ ಪ್ರಾಕೃತವಿಷಯ ಗಳಲ್ಲಿ ಸಂಬಂಧವನ್ನು ತ್ಯಜಿಸಿ ಆತ್ಮಾವಲೋಕವನ್ನು ಅಪೇಕ್ಷಿಸುವ ಇಂದ್ರಿಯಗಳು ಮತ್ತು ಮನಸ್ಸುಳ್ಳವನು–ಎಂದು ಅರ್ಥಮಾಡಲಾಗಿದೆ.

ಶಾಸ್ತ್ರಜ್ಞಾನದಿಂದಲೂ ಶಾಸ್ತ್ರಜ್ಞಾನದ ಅನುಭವದಿಂದಲೂ ನನ್ನ (ಪರಮಾತ್ಮನ) ವಿಷಯದಲ್ಲಿ ನಿಶ್ಚಿತವಾದ ಬುದ್ಧಿಯಿರುವ, ಸರ್ವಪ್ರಾಣಿಗಳಿಗೂ ಸುಹೃದನಾದ, ಶಾಂತಸ್ವಭಾವದವನಾದ ಸಾಧಕನು, ವಿಶ್ವವೆಲ್ಲವೂ ನನ್ನ ಸ್ವರೂಪವೇ ಎಂಬುದನ್ನು ಕಂಡುಕೊಂಡು ಪುನಃ ಸಂಸಾರವೆಂಬ ವಿಪತ್ತಿನಲ್ಲಿ ಸಿಕ್ಕಿಹಾಕಿಕೊಳ್ಳುವುದಿಲ್ಲ."

ಶ್ರೀಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿತಮಹಾರಾಜ! ಭಗವಂತನಿಂದ ಹೀಗೆ ಆದೇಶಿಸಲ್ಪಟ್ಟ ಮಹಾಭಾಗವತನಾದ ಉದ್ಧವನು ಆತ್ಮತತ್ತ್ವವನ್ನು ಸಮಗ್ರವಾಗಿ ತಿಳಿದುಕೊಳ್ಳಬೇಕೆನ್ನುವ ಅಭಿಲಾಷೆಯಿಂದ ಶ್ರೀಕೃಷ್ಣನಿಗೆ ಪುನಃ ನಮಸ್ಕರಿಸಿ ಪ್ರಾರ್ಥಿಸಿದನು :

**ಯೋಗೇಶ ಯೋಗವಿನ್ಯಾಸ ಯೋಗಾತ್ಮನ್ ಯೋಗಸಮ್ಭವ ।**
**ನಿಃಶ್ರೇಯಸಾಯ ಮೇ ಪ್ರೋಕ್ತಸ್ತ್ಯಾಗಃ ಸಂನ್ಯಾಸಲಕ್ಷಣಃ ॥೧೪॥**

**ತ್ಯಾಗೋಽಯಂ ದುಷ್ಕರೋ ಭೂಮನ್ಕಾಮಾನಾಂ ವಿಷಯಾತ್ಮಭಿಃ ।**
**ಸುತರಾಂ ತ್ವಯಿ ಸರ್ವಾತ್ಮನ್ನಭಕ್ತೈರಿತಿ ಮೇ ಮತಿಃ ॥೧೫॥**

ಯೋಗಿಗಳಿಗೆ ಈಶನಾದವನೇ! ಯೋಗಿಗಳಿಗೆ ಅರ್ಪಣೆಯ ಸ್ಥಾನದಲ್ಲಿರತಕ್ಕವನೇ! ಯೋಗಾತ್ಮನೇ! ಯೋಗದಿಂದಲೇ ಹುಟ್ಟಿದವನೇ! ಯೋಗಗಳಿಗೆ ಹುಟ್ಟುಸ್ಥಾನವಾಗಿರತಕ್ಕವನೇ! ನನ್ನ ಪರಮಕಲ್ಯಾಣಕ್ಕಾಗಿಯೇ ನೀನು ಸಂನ್ಯಾಸರೂಪವಾದ ತ್ಯಾಗದ ಉಪದೇಶವನ್ನು ಮಾಡಿರುವೆ. ಆದರೆ ವಿಷಯಸುಖಗಳಲ್ಲಿಯೇ ಯಾವಾಗಲೂ ಆಸಕ್ತವಾಗಿರುವ ಮನಸ್ಸುಳ್ಳವರಿಗೆ ಕಾಮೋಪಭೋಗಗಳನ್ನು ಪರಿತ್ಯಜಿಸುವುದು ಅತ್ಯಂತದುಷ್ಕರವೇ ಸರಿ. ಅದರಲ್ಲಿಯೂ ನಿನ್ನ ಭಕ್ತರಲ್ಲದವರಿಗಂತೂ ಕಾಮೋಪಭೋಗಗಳನ್ನು ಪರಿತ್ಯಜಿಸಲು ಸಾಧ್ಯವೇ ಇಲ್ಲವೆಂಬುದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ.

**ಸೋಽಹಂ ಮಮಾಹಮಿತಿ ಮೂಢಮತಿರ್ವಿಗಾಢ-**
**ಸ್ತ್ವನ್ಮಾಯಯಾ ವಿರಚಿತಾತ್ಮನಿ ಸಾನುಬನ್ಧೇ ।**

**ತತ್ತ್ವಾಞ್ಜಸಾ ನಿಗದಿತಂ ಭವತಾ ಯಥಾಹಂ**
**ಸಂಸಾಧಯಾಮಿ ಭಗವನ್ನನುಶಾಧಿ ಭೃತ್ಯಮ್ ॥೧೬॥**

ಪ್ರಭುವೇ! ನಿನ್ನ ಮಾಯೆಯಿಂದ ವಿರಚಿತವಾದ ಈ ನನ್ನ ಶರೀರದಲ್ಲಿ ಮತ್ತು ಬಂಧುಗಳಲ್ಲಿ ಮೂಢಮತಿಯಾದ ನಾನು 'ನಾನು-ನನ್ನದು'–ಎಂಬ ಅಹಂಕಾರ-ಮಮಕಾರಗಳನ್ನು ಹೊಂದಿ ಸಂಸಾರಸಾಗರದಲ್ಲಿ ಮುಳುಗಿಬಿಟ್ಟಿದ್ದೇನೆ. ಅಂತಹ ನಾನು ನಿನ್ನಿಂದ ಉಪದಿಷ್ಟನಾದ ಬ್ರಹ್ಮತತ್ತ್ವವನ್ನು ಸುಖದಿಂದ ಹೇಗೆ ಸಾಧಿಸಲಿ?–ಎಂಬುದನ್ನು ತಿಳಿಸಿಕೊಟ್ಟು ಭೃತ್ಯನಾದ ನನ್ನನ್ನು ಅನುಗ್ರಹಿಸು.

**ಸತ್ಯಸ್ಯ ತೇ ಸ್ವದೃಶ ಆತ್ಮನ ಆತ್ಮನೋಽನ್ಯಂ**
**ವಕ್ತಾರಮೀಶ ವಿಬುಧೇಷ್ವಪಿ ನಾನುಚಕ್ಷೇ ।**
**ಸರ್ವೇ ವಿಮೋಹಿತಧಿಯಸ್ತವ ಮಾಯಯೇಮೇ**
**ಬ್ರಹ್ಮಾದಯಸ್ತನುಭೃತೋ ಬಹಿರರ್ಥಭಾವಾಃ ॥೧೭॥**

ಪ್ರಭುವೇ! ನೀನು, ಭೂತ-ಭವಿಷ್ಯದ್ವರ್ತಮಾನ ಈ ಮೂರು ಕಾಲಗಳಿಂದಲೂ ಆಬಾಧಿತವಾದ ಸತ್ಯಸ್ವರೂಪನಾಗಿರುವೆ. ಸ್ವಯಂಪ್ರಕಾಶನಾದ ಆತ್ಮಸ್ವರೂಪನಾಗಿರುವೆ. ನನಗೆ ಆತ್ಮತತ್ತ್ವದ ಉಪದೇಶಮಾಡತಕ್ಕವರು ನಿನ್ನನ್ನು ಬಿಟ್ಟು ದೇವತೆಗಳಲ್ಲಿಕೂಡ ಯಾರೂ ಇಲ್ಲವೆಂದು ನಾನು ಭಾವಿಸುತ್ತೇನೆ. ಬ್ರಹ್ಮನೇ ಮೊದಲಾದ ದೇವತೆಗಳು ಕೂಡ ಶರೀರಾಭಿಮಾನಿಗಳಾಗಿರುವುದರಿಂದ ನಿನ್ನ ಮಾಯೆಗೆ ಸಿಕ್ಕಿ ವಿಮೋಹಿತರಾಗಿದ್ದಾರೆ. ಅವರ ಬುದ್ಧಿಯೂ ಮಾಯೆಗೆ ವಶವಾಗಿಬಿಟ್ಟಿದೆ. ಈ ಕಾರಣದಿಂದಲೇ ಅವರು ಇಂದ್ರಿಯಗಳಿಂದ ಅನುಭವಿಸಲ್ಪಡುವ ಬಾಹ್ಯವಸ್ತುಗಳನ್ನೇ ಸತ್ಯವೆಂದು ಭಾವಿಸುತ್ತಾರೆ.

**ತಸ್ಮಾದ್ಭವನ್ತಮನವದ್ಯಮನನ್ತಪಾರಂ**
**ಸರ್ವಜ್ಞಮೀಶ್ವರಮಕುಣ್ಠವಿಕುಣ್ಠಧಿಷ್ಣ್ಯಮ್ ।**
**ನಿರ್ವಿಣ್ಣಧೀರಹಮು ಹ ವೃಜಿನಾಭಿತಪ್ತೋ**
**ನಾರಾಯಣಂ ನರಸಖಂ ಶರಣಂ ಪ್ರಪದ್ಯೇ ॥೧೮॥**

ಆದುದರಿಂದ ಅಪಾರವಾದ ದುಃಖಗಳಿಂದ ಪರಿತಪಿಸುತ್ತಿರುವ,

ಖೇದಗೊಂಡ ಮನಸ್ಸಿನಿಂದ ಕೂಡಿರುವ ನಾನು ದೋಷರಹಿತನಾದ ದೇಶ-ಕಾಲಗಳಿಂದ ತಿಳಿಯಲಾಗದ, ಸರ್ವಜ್ಞನಾದ, ಸರ್ವಶಕ್ತನಾದ, ಅವಿನಾಶಿಯಾದ, ವೈಕುಂಠವಾಸಿಯಾದ, ನರನ ನಿತ್ಯಸಖನಾದ, ನಾರಾಯಣನಾದ ನಿನ್ನನ್ನು ಶರಣುಹೋಗಿದ್ದೇನೆ. ನೀನೇ ನನಗೆ ದಯಮಾಡಿ ಅಧ್ಯಾತ್ಮ ತತ್ತ್ವವನ್ನು ಸಮಗ್ರವಾಗಿ ಉಪದೇಶಿಸು."

ಭಗವಂತನು ಹೇಳುತ್ತಾನೆ :

**ಪ್ರಾಯೇಣ ಮನುಜಾ ಲೋಕೇ ಲೋಕತತ್ತ್ವವಿಚಕ್ಷಣಾಃ ।**
**ಸಮುದ್ಧರನ್ತಿ ಹ್ಯಾತ್ಮಾನಮಾತ್ಮನೈವಾಶುಭಾಶಯಾತ್ ॥೧೯॥**

"ಉದ್ಧವ! ಈ ಪ್ರಪಂಚದಲ್ಲಿ ಲೋಕತತ್ತ್ವದಲ್ಲಿ (ಲೋಕವು ಅನಿತ್ಯವೆಂಬ ಸಿದ್ಧಾಂತದಲ್ಲಿ) ವಿದ್ವಾಂಸರಾದವರು ತಾವೇ ತಮ್ಮ ಆತ್ಮವನ್ನು ಅಮಂಗಳಕರವಾದ ಸಂಸಾರಸಾಗರದಿಂದ ಉದ್ಧರಿಸಿಕೊಳ್ಳುತ್ತಾರೆ.

**ಆತ್ಮನೋ ಗುರುರಾತ್ಮೈವ ಪುರುಷಸ್ಯ ವಿಶೇಷತಃ ।**
**ಯತ್ಪ್ರತ್ಯಕ್ಷಾನುಮಾನಾಭ್ಯಾಂ ಶ್ರೇಯೋಽಸಾವನುವಿನ್ದತೇ ॥೨೦॥**

ಸಮಸ್ತಪ್ರಾಣಿಗಳಿಗೆ ಅದರಲ್ಲಿಯೂ ವಿಶೇಷವಾಗಿ ಮನುಷ್ಯನಿಗೆ ಅವನ ಆತ್ಮನೇ ಆತನ ಹಿತೋಪದೇಶಕನಾದ ಗುರುವಾಗಿರುತ್ತಾನೆ. ಮನುಷ್ಯನು ತನ್ನ ಪ್ರತ್ಯಕ್ಷಾನುಭವ ಮತ್ತು ಅನುಮಾನದ ಮೂಲಕವಾಗಿ ತನ್ನ ಹಿತಾಹಿತಗಳನ್ನು ನಿರ್ಣಯಿಸಿ ಶ್ರೇಯಸ್ಸನ್ನು ಪಡೆದುಕೊಳ್ಳುತ್ತಾನೆ.

**ಪುರುಷತ್ವೇ ಚ ಮಾಂ ಧೀರಾಃ ಸಾಙ್ಖ್ಯಯೋಗವಿಶಾರದಾಃ ।**
**ಆವಿಸ್ತರಾ ಪ್ರಪಶ್ಯನ್ತಿ ಸರ್ವಶಕ್ತ್ಯುಪಬೃಂಹಿತಮ್ ॥೨೧॥**

ಪುರುಷರಲ್ಲಿಯೂ ಸಾಂಖ್ಯಯೋಗವಿಶಾರದರಾದ ಧೀರರು ಸರ್ವಶಕ್ತಿ ವಿಶಿಷ್ಟನಾದ ನನ್ನನ್ನು ಪೂರ್ಣನಾಗಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ.*

---

* ಶ್ರುತಿ : ಪುರುಷತ್ವೇ ಆವಿಸ್ತರಮಾತ್ಮಾ ಸಹಿ ಪ್ರಜ್ಞಾನೇನ ಸಮ್ಪನ್ನತಮೋ ವಿಜ್ಞಾತಂ ವದತಿ । ವಿಜ್ಞಾತಂ ಪಶ್ಯತಿ । ವೇದಶ್ವಸ್ತನಂ ವೇದ ಲೋಕಾಲೋಕೌ ಮರ್ತ್ಯೇನಾಮೃತಮೀಪ್ಸತ್ಯೇವಂ ಸಮ್ಪನ್ನೋಽಥೇತರೇಷಾಂ ಪಶೂನಾಮಶನಾ ಪಿಪಾಸೇ ಏವಾಭಿವಿಜ್ಞಾನಮಿತಿ ।

ಆತ್ಮನು ಮನುಷ್ಯದೇಹದಲ್ಲಿ ಬಹಳವಾಗಿ ಪ್ರಕಟವಾಗುವನು. ಮನುಷ್ಯಶರೀರದ

**ಏಕದ್ವಿತ್ರಿಚತುಷ್ಪಾದೋ ಬಹುಪಾದಸ್ತಥಾಪದಃ ।**
**ಬಹ್ವ್ಯಃ ಸನ್ತಿ ಪುರಃ ಸೃಷ್ಟಾಸ್ತಾಸಾಂ ಮೇ ಪೌರುಷೀ ಪ್ರಿಯಾ ॥೨೨॥**

ನಾನು ಒಂದೇ ಒಂದು ಕಾಲಿರುವ ಪ್ರಾಣಿಗಳನ್ನೂ, ಎರಡು ಕಾಲಿನ ಪ್ರಾಣಿಗಳನ್ನೂ, ಮೂರು ಕಾಲಿನ ಪ್ರಾಣಿಗಳನ್ನೂ, ನಾಲ್ಕು ಕಾಲಿನ ಪ್ರಾಣಿಗಳನ್ನೂ, ನಾಲ್ಕಕ್ಕಿಂತಲೂ ಹೆಚ್ಚು ಪಾದಗಳಿರುವ ಪ್ರಾಣಿಗಳನ್ನೂ, ಕಾಲುಗಳೇ ಇಲ್ಲದ ಹಲವಾರು ಬಹುಸಂಖ್ಯಾತಪ್ರಾಣಿಗಳನ್ನೂ ಸೃಷ್ಟಿಸಿದ್ದೇನೆ. ಈ ಪ್ರಾಣಿಗಳಲ್ಲಿ ದ್ವಿಪಾದಿಗಳಾದ ಮನುಷ್ಯರೇ ನನಗೆ ಅತ್ಯಂತ ಪ್ರಿಯರಾದವರು.

**ಅತ್ರ ಮಾಂ ಮಾರ್ಗಯನ್ತ್ಯದ್ಧಾ ಯುಕ್ತಾ ಹೇತುಭಿರೀಶ್ವರಮ್ ।**
**ಗೃಹ್ಯಮಾಣೈರ್ಗುಣೈರ್ಲಿಙ್ಗೈರಗ್ರಾಹ್ಯಮನುಮಾನತಃ ॥೨೩॥**

ಆತ್ಮಾನ್ವೇಷಣದಲ್ಲಿ ತತ್ಪರರಾದ ವಿದ್ವಾಂಸರು ಕಾರಣಗಳಿಂದಲೂ ಗ್ರಹಿಸಲ್ಪಡಬಹುದಾದ ಗುಣಗಳಿಂದಲೂ, ಇಂದ್ರಿಯಗಳಿಂದ ಗ್ರಹಿಸಲ್ಪಡಲಾಗದಿರುವ? ಈಶ್ವರನಾದ ನನ್ನನ್ನು ಸರಿಯಾಗಿ ಅನುಮಾನ-ಪ್ರಮಾಣದಿಂದ ಹುಡುಕುತ್ತಾರೆ.*

ಉದ್ಧವ! ಈ ವಿಷಯದಲ್ಲಿ ಮಹಾತೇಜಸ್ವಿಯಾದ ಯದುವಿಗೂ ಮತ್ತು ಅವಧೂತನಿಗೂ ನಡೆದ ಪುರಾತನವಾದ ಸಂವಾದವನ್ನು ವಿದ್ವಾಂಸರು ಉದಾಹರಿಸುತ್ತಾರೆ. ಭಯವೆಂಬುದನ್ನೇ ಅರಿಯದೆ ಸರ್ವತ್ರ ಸಂಚರಿಸುತ್ತಿದ್ದ, ವಿದ್ವಾಂಸನಾದ, ಅವಧೂತನಾದ, ತರುಣನಾದ ಬ್ರಾಹ್ಮಣ ನನ್ನು ನೋಡಿ ಧರ್ಮವಿದನಾದ ಯದುವು ಪ್ರಶ್ನಿಸಿದನು :

---

ಲ್ಲಿರುವ ಆತ್ಮನು ಉತ್ತಮಜ್ಞಾನದಿಂದೊಡಗೂಡಿ ಅರ್ಥವತ್ತಾಗಿ ತಿಳಿದಿದ್ದನ್ನು ಹೇಳಬಲ್ಲನು. ನಶ್ವರಶರೀರದಿಂದ ಶಾಶ್ವತಮೋಕ್ಷವನ್ನು ಪಡೆಯಬಲ್ಲನು. ಪಶ್ವಾದಿಗಳಿಗೆ ಹಸಿವು-ಬಾಯಾರಿಕೆಗಳ ಜ್ಞಾನವೇ ಹೊರತು ಬೇರೆಯಿಲ್ಲ. ಆದುದರಿಂದ ಮನುಷ್ಯಶರೀರವು ಶ್ರೇಷ್ಠವು.

* ಜಡವಸ್ತುಗಳಿಗೆ ಪ್ರಕಾಶ ಉಂಟಾಗಲಾರದೆಂಬ ಅನುಪಪತ್ತಿಯ ಮೂಲಕವಾಗಿ ಬುದ್ಧಿಯೇ ಮುಂತಾದುವುಗಳಿಗೆ ಪ್ರಕಾಶಕನಾದ ಆತ್ಮನಿರುವನೆಂದು ಗುರುತಿಸಬಹುದಾದ ಅರ್ಥಾಪತ್ತಿ ಪ್ರಮಾಣದಿಂದಲೂ ಬುದ್ಧ್ಯಾದಿಗಳು ಕರ್ತೃವಾದ ಆತ್ಮನಿಗೆ ಸಾಧನಗಳು–ಎಂಬ ಅನುಮಾನ ಪ್ರಮಾಣದಿಂದಲೂ, ಬುದ್ಧೀಂದ್ರಿಯಾದಿ

**ಕುತೋ ಬುದ್ಧಿರಿಯಂ ಬ್ರಹ್ಮನ್ನಕರ್ತುಃ ಸುವಿಶಾರದಾ ।**
**ಯಾಮಾಸಾದ್ಯ ಭವಾನ್ಲೋಕಂ ವಿದ್ವಾಂಶ್ಚರತಿ ಬಾಲವತ್ ॥೨೬॥**

"ಬ್ರಾಹ್ಮಣ ಶ್ರೇಷ್ಠನೇ! ನೀನು ಯಾವ ಕರ್ಮವನ್ನೂ ಮಾಡುತ್ತಿಲ್ಲ. ಆದರೂ ನಿನಗೆ ನೈಪುಣ್ಯದ ಬುದ್ಧಿಯು ಹೇಗೆ ಬಂದಿತು? ಅಂತಹ ಶ್ರೇಷ್ಠವಾದ ಬುದ್ಧಿಯನ್ನು ಹೊಂದಿ ನೀನು ಪರಮವಿದ್ವಾಂಸನಾಗಿದ್ದರೂ ಬಾಲಕನಂತೆ ಪ್ರಪಂಚದಲ್ಲಿ ಅಲೆದಾಡುತ್ತಿರುವೆಯಲ್ಲಾ!

**ಪ್ರಾಯೋ ಧರ್ಮಾರ್ಥಕಾಮೇಷು ವಿವಿತ್ಸಾಯಾಂ ಚ ಮಾನವಾಃ ।**
**ಹೇತುನೈವ ಸಮೀಹನ್ತೇ ಆಯುಷೋ ಯಶಸಃ ಶ್ರಿಯಃ ॥೨೭॥**

ದ್ವಿಜಶ್ರೇಷ್ಠನೇ! ಪ್ರಾಯಶಃ ಮನುಷ್ಯರು ಆಯುಸ್ಸು, ಯಶಸ್ಸು, ಸೌಂದರ್ಯ-ಸಂಪತ್ತುಗಳನ್ನು ಪಡೆದುಕೊಳ್ಳುವ ಸಲುವಾಗಿ ಧರ್ಮಾರ್ಥ ಕಾಮಗಳಲ್ಲಿಯೂ, ತತ್ತ್ವಜಿಜ್ಞಾಸೆಯಲ್ಲಿಯೂ ತೊಡಗಿರುತ್ತಾರೆ. ನಿಷ್ಕಾರಣವಾಗಿ ಮನುಷ್ಯನಲ್ಲಿ ಯಾವುದೇ ಪ್ರವೃತ್ತಿಯಿರುವುದೂ ಕಂಡು ಬರುವುದಿಲ್ಲ.

**ತ್ವಂ ತು ಕಲ್ಪಃ ಕವಿರ್ದಕ್ಷಃ ಸುಭಗೋಽಮೃತಭಾಷಣಃ ।**
**ನ ಕರ್ತಾ ನೇಹಸೇ ಕಿಞ್ಚಿಜ್ಜಡೋನ್ಮತ್ತಪಿಶಾಚವತ್ ॥೨೮॥**

ನಾನು ನೋಡುತ್ತಿರುವಂತೆ ನೀನು ಕರ್ಮಮಾಡಲು ಸಮರ್ಥನಾಗಿ ರುವೆ, ವಿದ್ವಾಂಸನಾಗಿರುವೆ, ನಿಪುಣನಾಗಿರುವೆ, ಭಾಗ್ಯಶಾಲಿಯಾಗಿರುವೆ. ಅಮೃತಪ್ರಾಯವಾದ ಮಾತುಗಳನ್ನಾಡುವೆ. ನಿನ್ನ ಮಾತುಗಳನ್ನು ಕೇಳುತ್ತಲೇ ಇರಬೇಕೆನ್ನಿಸುತ್ತದೆ. ನಿನ್ನ ಮಾತುಗಳಲ್ಲಿ ಅಮೃತವು ತೊಟ್ಟಿಕ್ಕುತ್ತದೆ. ಇಂತಹ ಶ್ರೇಷ್ಠವಿದ್ವಾಂಸನಾದರೂ ನೀನು ಜಡನಂತೆ,

---

ಗಳಿಗೆ ಸತ್ತಾಸ್ಫೂರ್ತಿಪ್ರದನಾಗಿಯೂ, ಪ್ರೇರಕನಾಗಿಯೂ, ಅಹಂಕಾರಾದಿಗಳಿಗಿಂತ ವಿವಿಕ್ತನಾಗಿಯೂ ಇರುವ ನನ್ನನ್ನು ಈ ಮಾನವದೇಹದಲ್ಲಿ ಸಾಕ್ಷಾತ್ತಾಗಿ ಹುಡುಕು ವರು. ಇಂತು ಅನುಮಾನದಿಂದ ಹುಡುಕಿದ ಮಾತ್ರದಿಂದಲೇ ವೈಶೇಷಿಕಾದಿಗಳು ಹೇಳುವಂತೆ ಆತ್ಮನು ಅನುಮಾನೈಕಗಮ್ಯನೆಂದು ಸಿದ್ಧಾಂತಿಸಬಾರದು. ಶ್ರುತಿಯಲ್ಲಿ ಹೇಳಿರುವಂತೆ ದೇಹಾದಿ ವ್ಯತಿರಿಕ್ತವಾದ 'ತ್ವಂ' ಪದಾರ್ಥವನ್ನು ಈಶ್ವರಭೇದದಿಂದ ಸಂಸಾರಿಯಲ್ಲವೆಂದು ಶೋಧಿಸುವುದೇ ಅನುಮಾನದ ಪ್ರಯೋಜನವು. (ಮೋಟಗಾನಹಳ್ಳಿ ಸಂಸ್ಕರಣ)

ಹುಚ್ಚನಂತೆ ಅಥವಾ ಪಿಶಾಚದಂತೆ ಪ್ರಪಂಚದಲ್ಲಿ ಅಲೆದಾಡುತ್ತಿರುವೆ. ನೀನು ಯಾವ ಕೆಲಸವನ್ನೂ ಮಾಡುತ್ತಿಲ್ಲ. ಯಾವ ವಸ್ತುವನ್ನೂ ಅಪೇಕ್ಷಿಸುತ್ತಲೂ ಇಲ್ಲ.

**ಜನೇಷು ದಹ್ಯಮಾನೇಷು ಕಾಮಲೋಭದವಾಗ್ನಿನಾ ।**
**ನ ತಪ್ಯಸೇಽಗ್ನಿನಾ ಮುಕ್ತೋ ಗಙ್ಗಾಮ್ಭಃಸ್ಥ ಇವ ದ್ವಿಪಃ ॥೨೯॥**

ಜನಗಳು ಕಾಮ-ಲೋಭಗಳೆಂಬ ಕಾಡುಗಿಚ್ಚಿನಿಂದ ಸತತವಾಗಿ ಉರಿದುಹೋಗುತ್ತಿರಲಾಗಿ ನೀನು ಮಾತ್ರ ಯಾವುದೇ ವಿಧವಾದ ತಾಪದ ದಳ್ಳುರಿಗೂ ಸಿಲುಕಿಲ್ಲವೆಂದು ಭಾವಿಸಿದ್ದೇನೆ. ಕಾಡುಗಿಚ್ಚಿನಿಂದ ಬಿಡುಗಡೆ ಹೊಂದಿ ಗಂಗಾನದಿಯಲ್ಲಿ ಇಳಿದು ಸ್ವಸ್ಥವಾಗಿರುವ ಆನೆಯಂತೆ–ಕಾಮ-ಲೋಭಗಳೆಂಬ ಕಾಡುಗಿಚ್ಚಿನಿಂದ ಹೊರಬಂದಿರುವ ನೀನು ಯಾವುದೇ ತಾಪವೂ ಇಲ್ಲದೆ ಸ್ವಸ್ಥನಾಗಿರುವೆ.

**ತ್ವಂ ಹಿ ನಃ ಪೃಚ್ಛತಾಂ ಬ್ರಹ್ಮನ್ನಾತ್ಮನ್ಯಾನನ್ದಕಾರಣಮ್ ।**
**ಬ್ರೂಹಿ ಸ್ಪರ್ಶವಿಹೀನಸ್ಯ ಭವತಃ ಕೇವಲಾತ್ಮನಃ ॥೩೦॥**

ಬ್ರಾಹ್ಮಣೋತ್ತಮನೇ! ಹೆಂಡತಿ-ಮಕ್ಕಳು-ಬಂಧುಗಳು-ಮನೆ-ಮಠ ಇತ್ಯಾದಿ ಸಾಂಸಾರಿಕವಸ್ತುಗಳ ಸ್ಪರ್ಶವೇ ಇಲ್ಲದೆ, ಕೇವಲಾತ್ಮನಿಷ್ಠನಾಗಿ ಒಬ್ಬಂಟಿಗನಾಗಿ ಇರುವ ನಿನ್ನ ಮನಸ್ಸಿನಲ್ಲಿ ಉಂಟಾಗಿರುವ ಆನಂದಕ್ಕೆ ಕಾರಣವೇನೆಂಬುದನ್ನು ಪ್ರಶ್ನಿಸುತ್ತಿದ್ದೇವೆ. ನಮಗೆ ಉತ್ತರವನ್ನು ನೀಡುವ ಕೃಪೆಮಾಡು."

ಭಗವಂತನು ಹೇಳುತ್ತಾನೆ :

"ಉದ್ಧವ! ನಮ್ಮ ಪೂರ್ವಜನಾದ, ಭಾಗ್ಯಶಾಲಿಯಾದ ಯದು ಮಹಾರಾಜನ ಬುದ್ಧಿಯು ಶುದ್ಧವಾಗಿದ್ದಿತು. ಅವನು ಬ್ರಾಹ್ಮಣಭಕ್ತನೂ ಆಗಿದ್ದನು. ಅವಧೂತನಾಗಿ ಬಂದಿದ್ದ ದತ್ತಾತ್ರೇಯನನ್ನು ಯಥೋಚಿತವಾಗಿ ಸತ್ಕರಿಸಿ ಪ್ರಶ್ನೆಯನ್ನು ಕೇಳಿ ಅತ್ಯಂತ ವಿನಯಭಾವದಿಂದ ತಲೆಯನ್ನು ತಗ್ಗಿಸಿಕೊಂಡು ಕೈಜೋಡಿಸಿಕೊಂಡು ತನ್ನ ಮುಂದೆ ಕುಳಿತಿದ್ದ ಮಹಾರಾಜನಿಗೆ ದತ್ತಾತ್ರೇಯನು ಹೇಳಿದನು :*

* ಭಾಗವತದ ೨ನೆಯ ಸ್ಕಂಧದ ಲೀಲಾವತಾರದಲ್ಲಿ :

**ಅತ್ರೇರಪತ್ಯಮಭಿಕಾಂಕ್ಷತ ಆಹ ತುಷ್ಟೋ ದತ್ತೋ ಮಯಾಹಮಿತಿ ತದ್ಭಗವಾನ್**

**ಸನ್ತಿ ಮೇ ಗುರವೋ ರಾಜನ್ ಬಹವೋ ಬುದ್ಧ್ಯುಪಾಶ್ರಿತಾಃ ।**
**ಯತೋಬುದ್ಧಿಮುಪಾದಾಯ ಮುಕ್ತೋಽಟಾಮೀಹ ತಾನ್ಶೃಣು ॥**

"ಮಹಾರಾಜ! ನಾನು ನನ್ನ ಬುದ್ಧಿಯು ಮೂಲಕವಾಗಿ ಹಲವಾರು ಗುರುಜನರನ್ನು ಆಶ್ರಯಿಸಿದ್ದೇನೆ. ಅವರಿಂದ ಶಿಕ್ಷಣವನ್ನು ಪಡೆದು ಮುಕ್ತನಾಗಿ ಸ್ವೇಚ್ಛೆಯಿಂದ ಈ ಜಗತ್ತಿನಲ್ಲಿ ಸಂಚರಿಸುತ್ತಿದ್ದೇನೆ. ಆ ನನ್ನ ಗುರುಗಳ ಶುಭನಾಮಗಳನ್ನೂ ಅವರಿಂದ ನಾನು ಪಡೆದಿರುವ ಶಿಕ್ಷಣವನ್ನೂ ಹೇಳುವೆನು, ಕೇಳು :*

**ಪೃಥಿವೀ ವಾಯುರಾಕಾಶಮಾಪೋಽಗ್ನಿಶ್ಚನ್ದ್ರಮಾ ರವಿಃ ।**
**ಕಪೋತೋಽಜಗರಃ ಸಿನ್ಧುಃ ಪತಙ್ಗೋ ಮಧುಕೃದ್ಗಜಃ ॥೩೩॥**

**ಮಧುಹಾ ಹರಿಣೋ ಮೀನ ಪಿಙ್ಗಲಾ ಕುರರೋಽರ್ಭಕಃ ।**
**ಕುಮಾರೀ ಶರಕೃತ್ಸರ್ಪ ಊರ್ಣನಾಭಿಃ ಸುಪೇಶಕೃತ್ ॥೩೪॥**

**ಏತೇ ಮೇ ಗುರವೋ ರಾಜಂಶ್ಚತುರ್ವಿಂಶತಿರಾಶ್ರಿತಾಃ ।**
**ಶಿಕ್ಷಾ ವೃತ್ತಿಭಿರೇತೇಷಾಮನ್ವಶಿಕ್ಷಮಿಹಾತ್ಮನಃ ॥೩೫॥**

ಭೂಮಿ, ವಾಯು, ಆಕಾಶ, ನೀರು, ಅಗ್ನಿ, ಚಂದ್ರ, ಸೂರ್ಯ, ಪಾರಿವಾಳದ ಹಕ್ಕಿ, ಹೆಬ್ಬಾವು, ಸಮುದ್ರ, ಪತಂಗ, ದುಂಬಿ, ಆನೆ, ಜೇನು ಬಿಡಿಸುವವನು, ಜಿಂಕೆ, ಮೀನು, ಪಿಂಗಳಾ ಎಂಬ ವೇಶ್ಯೆ, ಕುರರಪಕ್ಷಿ, ಮಗು, ಕುಮಾರೀ, ಬಾಣವನ್ನು ತಯಾರಿಸುವವನು, ಸರ್ಪ, ಜೇಡರ ಹುಳು, ರೇಷ್ಮೆಹುಳು–ಇವರೇ ನನ್ನ ಇಪ್ಪತ್ತುನಾಲ್ಕು ಮಂದಿ ಗುರುಗಳು. ನಾನು

---

**ಸ ದತ್ತಃ । ಯತ್ಪಾದಪಙ್ಕಜಪರಾಗ ಪವಿತ್ರದೇಹಾ ಯೋಗರ್ಧಿಮಾ ಪುರುಭಯೀಂ ಯದುಹೈಹಯಾದ್ಯಾಃ ॥**

ಭಗವಂತನು ದತ್ತಾತ್ರೇಯಾವತಾರದಿಂದ ಯದು, ಕಾರ್ತವೀರ್ಯ ಮುಂತಾದವರನ್ನು ಉದ್ಧರಿಸಿದನೆಂದು ಹೇಳಿರುವುದರಿಂದ ಇಲ್ಲಿ ಹೇಳಿರುವ ಅವಧೂತನೇ ಆ ದತ್ತಾತ್ರೇಯನೆಂದೂ ಯದುವಿಗೆ ಉಪದೇಶಿಸುತ್ತಿದ್ದಾನೆಂದೂ ಭಾವಿಸಬಹುದಾಗಿದೆ.

* ಬುದ್ಧ್ಯುಪಾಶ್ರಿತಾಃ–ಇವರು ನೇರವಾಗಿ ಉಪದೇಶಮಾಡಿದ ಗುರುಗಳಲ್ಲ. ಬುದ್ಧಿಯಿಂದ ಸ್ವೀಕರಿಸಲ್ಪಟ್ಟ ಗುರುಗಳು. (ಶ್ರೀಧರೀಯ)

ಶಿಕ್ಷಣ ಪಡೆಯಲು ಯೋಗ್ಯವಾದ ಬುದ್ಧಿಯಿಂದ ಸ್ವೀಕರಿಸಲ್ಪಟ್ಟ ಗುರುಗಳು ; ಬುದ್ಧಿಶಿಕ್ಷಿತರಾದವರು. (ವೀರರಾಘವೀಯ)

ಈ ಇಪ್ಪತ್ತುನಾಲ್ಕು ಗುರುಗಳ ಆಶ್ರಯವನ್ನು ಪಡೆದಿರುತ್ತೇನೆ ಮತ್ತು ಅವರ ಆಚರಣೆಯಿಂದ ನನ್ನ ಬುದ್ಧಿಗೆ ಶಿಕ್ಷಣವನ್ನು ಕೊಟ್ಟಿರುತ್ತೇನೆ.

**ಯತೋ ಯದನುಶಿಕ್ಷಾಮಿ ಯಥಾ ವಾ ನಾಹುಷಾತ್ಮಜ ।**
**ತತ್ತಥಾ ಪುರುಷವ್ಯಾಘ್ರ ನಿಬೋಧ ಕಥಯಾಮಿ ತೇ ॥೩೬॥**

ಪುರುಷಶ್ರೇಷ್ಠನೇ! ಯಯಾತಿನಂದನನೇ! ಅವರಲ್ಲಿ ಯಾರಿಂದ ಯಾವ ಶಿಕ್ಷಣವನ್ನು ಯಾವ ರೀತಿಯಲ್ಲಿ ಪಡೆದೆನೆಂಬುದನ್ನು ವಿಸ್ತಾರವಾಗಿ ಹೇಳುವೆನು, ಗಮನಿಸಿ ಕೇಳು :

**ಭೂತೈರಾಕ್ರಮ್ಯಮಾಣೋಽಪಿ ಧೀರೋ ದೈವವಶಾನುಗೈಃ ।**
**ತದ್ವಿದ್ವಾನ್ನ ಚಲೇನ್ಮಾರ್ಗಾದನ್ವಶಿಕ್ಷಂ ಕ್ಷಿತೇರ್ವ್ರತಮ್ ॥೩೭॥**

ತನ್ನ ಮೇಲೆ ಕೋಟಿ-ಕೋಟಿ ಸಾಧುಪ್ರಾಣಿಗಳೂ ದುಷ್ಟಪ್ರಾಣಿಗಳೂ ಓಡಾಡುತ್ತಾ ತುಳಿದಾಡುತ್ತಿದ್ದರೂ 'ಅದು ದೈವದ ಕಟ್ಟಳೆಯಿಂದ ಆಗಿದೆ'– ಎಂದು ತಿಳಿದು ಕ್ಷಮಾನಿಧಿಯಾದ ಭೂದೇವಿಯು ಕಂಪಿಸದೇ ಇರುತ್ತಾಳೆ. ಹಾಗೆಯೇ ದೈವದ ನಿಯಮಕ್ಕೆ ಒಳಗಾಗಿ ಅಸಂಖ್ಯಪ್ರಾಣಿಗಳು ತನ್ನನ್ನು ಆಕ್ರಮಿಸಿದರೂ ತಾನು ಸತ್ಯನಿಯಮದಿಂದ ವಿಚಲಿತನಾಗಬಾರದೆಂಬ ಪಾಠ ವನ್ನು ಭೂದೇವಿಯಿಂದ ಕಲಿತೆನಪ್ಪಾ!

**ಶಶ್ವತ್ಪರಾರ್ಥಸರ್ವೇಹಃ ಪರಾರ್ಥೈಕಾನ್ತಸಮ್ಭವಃ ।**
**ಸಾಧುಃ ಶಿಕ್ಷೇತ ಭೂಭೃತ್ತೋ ನಗಶಿಷ್ಯಃ ಪರಾತ್ಮತಾಮ್ ॥೩೮॥**

ಮನುಷ್ಯನ ಸಮಸ್ತವಾದ ಆಸೆ-ಆಕಾಂಕ್ಷೆಗಳೂ ಬೇರೆಯವರ ಸಲು ವಾಗಿಯೇ ಇರಬೇಕು. ಬೇರೆಯವರಿಗೆ ಉಪಕಾರಮಾಡುವುದೇ ಜೀವನದ ಮುಖ್ಯಪ್ರಯೋಜನವೆಂದು ಭಾವಿಸಬೇಕು. ಈ ಶಿಕ್ಷಣವನ್ನು ಸಾಧುವಾದ ವನು ಪೃಥ್ವಿಯ ವಿಕಾರಗಳೇ ಆದ ಪರ್ವತದಿಂದಲೂ ಭೂಮಿಯಿಂದಲೂ ಕಲಿಯಬೇಕು. ಪರೋಪಕಾರಕ್ಕಾಗಿ ಪರ್ವತವು ಮಳೆ-ಗಾಳಿ-ಬಿಸಿಲುಗಳನ್ನು ಲೆಕ್ಕಿಸದೆ ಭೂಮಿಯನ್ನು ಧರಿಸಿರುತ್ತದೆ. ಜನರ ಜೀವನಕ್ಕೆ ಅತಿಮುಖ್ಯ ವಾದ ನೀರು ನದಿಯ ರೂಪದಲ್ಲಿ ಪರ್ವತದಿಂದಲೇ ಹುಟ್ಟಿ ಹರಿದು ಬರುತ್ತದೆ. ಅದು ಹಲವಾರು ವೃಕ್ಷಗಳಿಗೂ ಪಶು-ಪಕ್ಷಿ-ಪ್ರಾಣಿಗಳಿಗೂ ಆಶ್ರಯಸ್ಥಾನವಾಗಿದೆ. ಪರ್ವತದ ಸ್ವಂತಕ್ಕೆ ಇದರಲ್ಲಿ ಬೇಕಾಗಿರುವುದು

ಯಾವುದೂ ಇಲ್ಲ. ಅದರ ಹುಟ್ಟು ಕೇವಲ ಪರಪ್ರಯೋಜನಕ್ಕಾಗಿಯೇ ಅದರಂತೆ ವೃಕ್ಷವು ಕೂಡ ಪರೋಪಕಾರಕ್ಕಾಗಿಯೇ ಜನ್ಮ ತಾಳಿದೆ.

(ವೃಕ್ಷಗಳ ವಿಷಯದಲ್ಲಿ ಶ್ರೀಕೃಷ್ಣ ಭಗವಂತನೇ ಗೀತೆಯಲ್ಲಿ ಹೇಳಿರುವ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ :

**ಪಶ್ಯತೈತಾನ್ಮಹಾಭಾಗಾನ್ಪರಾರ್ಥೈಕಾನ್ತಜೀವಿಕಾನ್ ।**
**ವಾತ್ಯಾವರ್ಷಾತಪಹಿಮಾನ್ ಸಹನ್ತೋ ವಾರಯನ್ತಿ ನಃ ॥೩೨॥**

**ಅಹೋ ಏಷಾಂ ವರಂ ಜನ್ಮ ಸರ್ವಪ್ರಾಣ್ಯುಪಜೀವನಮ್ ।**
**ಸುಜನಸ್ಯೇವ ಯೇಷಾಂ ವೈ ವಿಮುಖಾ ಯಾನ್ತಿ ನಾರ್ಥಿನಃ ॥೩೩॥**

"ಇದೋ ನೋಡಿರಿ! ಈ ವೃಕ್ಷಗಳು ಎಷ್ಟು ಭಾಗ್ಯಶಾಲಿಗಳೆಂಬುದನ್ನು! ಇವುಗಳ ಜೀವನವು ಕೇವಲ ಇತರರ ಸೇವೆಗಾಗಿಯೇ ಮೀಸಲಾಗಿದೆ. ಇವು ತಮ್ಮ ಮೇಲೆ ಬೀಳುವ ಬಿಸಿಲನ್ನೂ, ಮಳೆಯನ್ನೂ, ಹಿಮವನ್ನೂ, ಗಾಳಿಯನ್ನೂ ಸಹಿಸಿಕೊಂಡು ನಮ್ಮನ್ನು ಬಿಸಿಲಿನಿಂದ ರಕ್ಷಿಸುತ್ತವೆ. ಈ ವೃಕ್ಷ ಗಳ ಜೀವನವು ಎಲ್ಲ ಪ್ರಾಣಿಗಳ ಜೀವನಕ್ಕಿಂತಲೂ ಶ್ರೇಷ್ಠವಾಗಿದೆಯೆಂದು ಭಾವಿಸುತ್ತೇನೆ. ಈ ವೃಕ್ಷಗಳ ಮೂಲಕವಾಗಿ ಸಮಸ್ತ ಪ್ರಾಣಿಗಳಿಗೂ ಯಾವುದಾದರೊಂದು ರೀತಿಯಲ್ಲಿ ಉಪಕಾರವಾಗುತ್ತಲೇ ಇರುತ್ತದೆ. ಸತ್ಪುರುಷರ ಮನೆಗೆ ಬಂದ ಯಾಚಕನು ಬರಿಗೈಲಿ ಹೋಗದಂತೆ ಈ ವೃಕ್ಷಗಳನ್ನು ಆಶ್ರಯಿಸಿಬಂದವನು ನಿರಾಶನಾಗದೆ ಯಾವುದಾದರೂ ಪ್ರಯೋಜನವನ್ನು ಪಡೆದುಕೊಂಡೇ ಹೋಗುತ್ತಾನೆ. ಈ ವೃಕ್ಷಗಳು ತಮ್ಮಲ್ಲಿರುವ ಎಲೆ, ಹೂವು, ಹಣ್ಣು, ನೆಳಲು, ಬೇರು, ನಾರು, ಮೇಣ, ಹಾಲು, ಸೌದೆ, ಮೊಳಕೆ, ಚಿಗುರುಗಳಿಂದ ಜನರ ಇಷ್ಟಾರ್ಥವನ್ನು ನೇರವೇರಿಸುತ್ತವೆ. ಆದುದರಿಂದ ಪರ್ವತ-ವೃಕ್ಷಗಳನ್ನು ಗುರುಗಳೆಂದು ಭಾವಿಸಿ ಪರೋಪಕಾರದ ಶಿಕ್ಷಣವನ್ನು ಅವುಗಳಿಂದ ಪಡೆದುಕೊಳ್ಳಬೇಕು.)"* (10-22)

---

* ಭೂಮಿಯು ಪರ್ವತ ವೃಕ್ಷಾದಿ ರೂಪವಾದುದು ಮತ್ತು ಸಮರೂಪವಾದುದು– ಎಂದು ಎರಡು ಭಾಗವಾಗಿದೆ. ಅವುಗಳಲ್ಲಿ : ಸಮರೂಪವಾಗಿರುವ ಭೂಮಿಯಿಂದ ಕ್ಷಮಾಗುಣವನ್ನು ಕಲಿತಿದ್ದೇವೆ. ಪರ್ವತ ವೃಕ್ಷರೂಪವಾಗಿರುವ ಭೂಮಿಗಳಲ್ಲಿ ಪರ್ವತದಿಂದ ಪರೋಪಕಾರಕ್ಕಾಗಿಯೇ ಇರುವಿಕೆಯನ್ನೂ ಮತ್ತು ವೃಕ್ಷಗಳಿಂದ ಪರಾಧೀನವಾಗಿ ಇರುವಿಕೆಯನ್ನೂ ಕಲಿತೆನು. ಭೂಮಿಯ ವ್ರತ–ಎಂದರೆ ಮಾರ್ಗ

**ಪ್ರಾಣವೃತ್ತ್ಯೈವ ಸನ್ತುಷ್ಯೇನ್ಮುನಿರ್ನೈವೇನ್ದ್ರಿಯಪ್ರಿಯೈಃ ।**
**ಜ್ಞಾನಂ ಯಥಾ ನ ನಶ್ಯೇತ ನಾವಕೀರ್ಯೇತ ವಾಙ್ಮನಃ ॥೩೯॥**

ಪ್ರಾಣವಾಯುವು ತನ್ನ ಉಳಿವಿಕೆಗೆ ಆಹಾರಮಾತ್ರವನ್ನು ಅಪೇಕ್ಷಿಸುತ್ತದೆ. ಅದರಿಂದಲೇ ಅದು ಸಂತುಷ್ಟವಾಗಿದೆ. ಇಂದ್ರಿಯಪ್ರಿಯಗಳಾದ ರಸಾದಿಗಳನ್ನು ಬಯಸುವುದಿಲ್ಲ. ಅದರಂತೆಯೇ ಸಾಧಕನು ತನ್ನ ಜ್ಞಾನವು ಕೆಡದಂತೆ, ಮನಸ್ಸು ಚಂಚಲವಾಗದಂತೆ, ಮಾತು ನಿಲ್ಲದಂತೆ ಎಷ್ಟು ಬೇಕೋ ಅಷ್ಟು ಮಾತ್ರ ಆಹಾರವನ್ನು ಸೇವಿಸಬೇಕೆಂಬುದನ್ನು ನಾನು ಪ್ರಾಣವಾಯುವಿನಿಂದ ಕಲಿತೆನು.

**ವಿಷಯೇಷ್ವಾವಿಶನ್ಯೋಗೀ ನಾನಾಧರ್ಮೇಷು ಸರ್ವತಃ ।**
**ಗುಣದೋಷವ್ಯಪೇತಾತ್ಮಾ ನ ವಿಷಜ್ಜೇತ ವಾಯುವತ್ ॥೪೦॥**

ಯೋಗಿಯಾದವನು ಶೀತೋಷ್ಣ, ಸುಖ-ದುಃಖ, ಮಾನಾಪಮಾನ, ಜಯಾಪಜಯ–ಇತ್ಯಾದಿ ನಾನಾವಿಧವಾದ ವಿಷಯಗಳನ್ನು ಅನುಭವಿಸಬೇಕಾಗಿ ಬಂದರೂ ಗುಣ-ದೋಷಗಳಿಂದ ರಹಿತವಾದ ಮನಸ್ಸುಳ್ಳವನಾಗಿ ಸಮದರ್ಶಿಯಾಗಿ ಯಾವುದಕ್ಕೂ ಅಂಟಿಕೊಳ್ಳದೆ ವಾಯುವಿನಂತೆ ಇದ್ದುಬಿಡಬೇಕು. ವಾಯುವು ಸರ್ವತ್ರ ಸಂಚರಿಸುತ್ತದೆ. ಸ್ಮಶಾನಭೂಮಿಯಲ್ಲೂ ಬೀಸುತ್ತದೆ. ಹೂವಿನ ತೋಟದಲ್ಲಿಯೂ ಬೀಸುತ್ತದೆ. ಸ್ಮಶಾನದಲ್ಲಿ ಬೀಸಿದ್ದರಿಂದ ವಾಯುವಿಗೆ ಮಾಲಿನ್ಯವು ಸ್ಥಿರವಾಗಿರುವುದಿಲ್ಲ. ಹೂವಿನ ತೋಟದಲ್ಲಿ ಬೀಸಿದ್ದರಿಂದ ಸುಗಂಧತ್ವವೂ ಶಾಶ್ವತವಾಗಿರುವುದಿಲ್ಲ. ಅದಕ್ಕೆ ಯಾವ ಗುಣ-ದೋಷಗಳೂ ಅಂಟುವುದಿಲ್ಲ. ಅದರಂತೆಯೇ ಜ್ಞಾನಿಯೂ ಗುಣಗಳಲ್ಲಿ ಹೊಕ್ಕರೂ ಗುಣ-ದೋಷಗಳಿಂದ ಮುಕ್ತನಾಗಿರಬೇಕೆಂಬುದನ್ನು ನಾನು ವಾಯುವಿನಿಂದ ಕಲಿತೆನು.

**ಪಾರ್ಥಿವೇಷ್ವಿಹ ದೇಹೇಷು ಪ್ರವಿಷ್ಟಸ್ತದ್ಗುಣಾಶ್ರಯಃ ।**
**ಗುಣೈರ್ನ ಯುಜ್ಯತೇ ಯೋಗೀ ಗನ್ಧೈರ್ವಾಯುರಿವಾತ್ಮದೃಕ್ ॥೪೧॥**

ಯೋಗಿಯಾದವನು, ಪಾರ್ಥಿವದೇಹದಲ್ಲಿ ಪ್ರವೇಶಿಸಿ ಆ ಪಾರ್ಥಿವ

---

ಎಲ್ಲವನ್ನೂ ಧರಿಸುವ ಮಾರ್ಗ. ಮನುಷ್ಯನ ಪಕ್ಷದಲ್ಲಿ ವ್ರತ (ಮಾರ್ಗ) ಎಂದರೆ ಜ್ಞಾನ–ಎಂದು ಅರ್ಥ. (ವೀರರಾಘವೀಯ)

ದೇಹದ ಗುಣಗಳನ್ನೇ ಆಶ್ರಯಿಸಿದ್ದರೂ ಗಂಧಗಳಿಗೆ ವಾಯುವು ಹೇಗೋ ಹಾಗೆ ದೇಹಸಂಬಂಧವಾದ ಗುಣಗಳಿಗೆ ಅಂಟಿಕೊಳ್ಳುವುದಿಲ್ಲ. ಗಂಧವು ವಾಯುವಿನ ಗುಣವಲ್ಲ. ಭೂಮಿಯ ಗುಣ. ಆದರೂ ನಾವು ಗಂಧವನ್ನು ಮೂಸುವುದು ವಾಯುವಿನ ಮೂಲಕವಾಗಿ. ವಾಯುವು ಸುಗಂಧವನ್ನು ಹೊತ್ತು ತಂದರೂ ಅದು ಸುಗಂಧದೊಡನೆ ಬೆರೆಯುವುದಿಲ್ಲ. ಸುಗಂಧದ ಹಿನ್ನಲೆಯಿಲ್ಲದಿದ್ದರೆ ವಾಯುವಿನಲ್ಲೂ ಸುಗಂಧವಿರುವುದಿಲ್ಲ. ಅಂತೆಯೇ ಯೋಗಿಯೂ. ಅವನಿರುವ ಪಾರ್ಥಿವಶರೀರವು ನಾನಾಪ್ರಕಾರವಾದ ಗುಣಗಳಿಂದ ಕೂಡಿರುತ್ತದೆ. ದೇಹಗುಣಗಳನ್ನು ಆಶ್ರಯಿಸುವುದು ಮನುಷ್ಯಮಾತ್ರದವನಿಗೆ ಸ್ವಾಭಾವಿಕ. ಆದರೆ ಆಶ್ರಯಿಸಿಯೇ ತೀರಬೇಕೆಂಬ ನಿಯಮವಿಲ್ಲ. ಯೋಗಿಯಾದವನು ಶರೀರಸಂಬಂಧವಾದ ಕಾಮೋಪಭೋಗಗಳನ್ನು ಅನುಭವಿಸದೆ ವಾಯುವಿನಂತೆ ನಿರ್ಲಿಪ್ತನಾಗಿರುತ್ತಾನೆ. ಗಂಧಯುಕ್ತವಾದ ವಾಯುವಿನಂತೆ ಶರೀರದಲ್ಲಿದ್ದುಕೊಂಡು ಲೌಕಿಕವಾಗಿ ವ್ಯವಹರಿಸಿದರೂ ಗಂಧರಹಿತವಾದ ವಾಯುವಿನಂತೆ ನಿರ್ಲಿಪ್ತನಾಗಿರುವನು. ಈ ಶಿಕ್ಷಣವನ್ನು ನಾನು ವಾಯುವಿನಿಂದ ಪಡೆದುಕೊಂಡಿರುತ್ತೇನೆ.

ಅನ್ತರ್ಹಿತಶ್ಚ ಸ್ಥಿರಜಙ್ಗಮೇಷು
ಬ್ರಹ್ಮಾತ್ಮಭಾವೇನ ಸಮನ್ವಯೇನ ।
ವ್ಯಾಪ್ತ್ಯಾವ್ಯವಚ್ಛೇದಮಸಙ್ಗಮಾತ್ಮನೋ
ಮುನಿರ್ನಭಸ್ತ್ವಂ ವಿತತಸ್ಯ ಭಾವಯೇತ್ ॥೪೨॥

ಆಕಾಶವು ಅತಿವಿಸ್ತಾರವಾಗಿದ್ದು ಎಲ್ಲೆಡೆಯಲ್ಲೂ ವ್ಯಾಪಿಸಿದ್ದರೂ ಅಖಂಡವಾಗಿರುತ್ತದೆ. ಯಾವುದಕ್ಕೂ ಅಂಟಿಕೊಳ್ಳುವುದಿಲ್ಲ. ಹಾಗೆಯೇ ತಾನು ಪರಬ್ರಹ್ಮಭಾವದಿಂದ ಸ್ಥಾವರ-ಜಂಗಮ ಪ್ರಾಣಿಗಳೆಲ್ಲದರ ಒಳಗೂ ಇದ್ದು ವ್ಯಾಪಕನಾಗಿದ್ದರೂ ಅಖಂಡನು ಮತ್ತು ಸಂಗರಹಿತನು–ಎಂದು ಮನನಶೀಲನಾದ ಮುನಿಯು ಭಾವಿಸಿಕೊಳ್ಳಬೇಕು. ಆಕಾಶದಿಂದ ಅಖಂಡತೆಯ ಮತ್ತು ನಿಸ್ಸಂಗತ್ವದ ಪಾಠವನ್ನು ಕಲಿತುಕೊಳ್ಳಬೇಕು.*

---

* ಬ್ರಹ್ಮಾತ್ಮಭಾವೇನ ಸಮನ್ವಯೇನ – ವೇದಾಂತವಾಕ್ಯಸಮನ್ವಯದಿಂದ ಸಿದ್ಧವಾದ ಬ್ರಹ್ಮಭಾವದಿಂದ ಸರ್ವವಸ್ತುಗಳೂ ಬ್ರಹ್ಮಾತ್ಮಕವಾಗಿವೆ–ಎಂಬ ಭಾವದಿಂದ. (ವೀರರಾಘವೀಯ)

**ತೇಜೋಽಬನ್ನಮಯೈರ್ಭಾವೈರ್ಮೇಘಾದ್ಯೈರ್ವಾಯುನೇರಿತೈಃ ।**
**ನ ಸ್ಪೃಶ್ಯತೇ ನಭಸ್ತದ್ವತ್ಕಾಲಸೃಷ್ಟೈರ್ಗುಣೈಃ ಪುಮಾನ್ ॥೪೩॥**

ವಾಯುವಿನಿಂದ ಪ್ರೇರಿತವಾದ ಮೇಘಗಳಿಂದ ಮಿಂಚು ಕಾಣಿಸಿಕೊಳ್ಳುತ್ತದೆ. ನೀರು ಸುರಿಯುತ್ತದೆ. ನೀರು ಸುರಿದು ಬೆಳೆಗಳಾಗುತ್ತವೆ. ಈ ಭಾವಗಳೆಲ್ಲವೂ ಆಕಾಶದಲ್ಲಿಯೇ ಉಂಟಾದರೂ ಈ ಕಾರ್ಯಗಳಿಗೂ ಆಕಾಶಕ್ಕೂ ಯಾವುದೇ ಸಂಬಂಧವೂ ಇರುವುದಿಲ್ಲ. ಈ ಕಾರ್ಯಗಳಿಂದ ಆಕಾಶದಲ್ಲಿ ಯಾವ ಪರಿಣಾಮವೂ ಉಂಟಾಗುವುದಿಲ್ಲ. ಅಂತೆಯೇ ಭೂತ ಭವಿಷ್ಯದ್ವರ್ತಮಾನಗಳೆಂಬ ಕಾಲಚಕ್ರದಲ್ಲಿ ಸಿಕ್ಕಿ ಸತ್ತ್ವಾದಿಗುಣಗಳಿಂದ ಆವರಿಸಲ್ಪಟ್ಟು ಹಲವಾರು ನಾಮರೂಪಗಳಿಂದ ಕೂಡಿರುವ ದೇಹಗಳಲ್ಲಿದ್ದರೂ ಆತ್ಮನಿಗೆ ವಾಸ್ತವವಾಗಿ ದೇಹದೊಡನೆ ಯಾವ ಸಂಬಂಧವೂ ಇಲ್ಲ. ಆಕಾಶಕ್ಕೂ ಮಳೆಗೂ ಸಂಬಂಧವಿಲ್ಲದಿದ್ದರೂ ಆಕಾಶದಿಂದ ಮಳೆ ಬೀಳುವುದೆಂದು ಭ್ರಮಿಸುವಂತೆ–ದೇಹಕ್ಕೂ ಆತ್ಮಕ್ಕೂ ಸಂಬಂಧವಿಲ್ಲದಿದ್ದರೂ ದೇಹಕ್ಕೆ ಬೇರೆ ಬೇರೆ ಹೆಸರುಗಳನ್ನು ಹೇಳಿ ಕರೆಯುವ ಭ್ರಮೆಯು ರೂಢಿಯಾಗಿಬಿಟ್ಟಿದೆ. ಆಕಾಶವೆಂಬ ಗುರುವಿನಿಂದ ದೇಹಕ್ಕೂ ಆತ್ಮನಿಗೂ ಸಂಬಂಧವಿಲ್ಲವೆಂಬುದನ್ನು ಅರಿಯಬೇಕು.

**ಸ್ವಚ್ಛಃ ಪ್ರಕೃತಿತಃ ಸ್ನಿಗ್ಧೋ ಮಾಧುರ್ಯಸ್ತೀರ್ಥಭೂರ್ನೃಣಾಮ್ ।**
**ಮುನಿಃ ಪುನಾತ್ಯಪಾಂ ಮಿತ್ರಮೀಕ್ಷೋಪಸ್ಪರ್ಶಕೀರ್ತನೈಃ ॥೪೪॥**

ಯಾವ ರೀತಿಯಲ್ಲಿ ನೀರು ಸ್ವಭಾವದಿಂದಲೇ ಸ್ವಚ್ಛವಾಗಿರುವುದೋ, ಸ್ನೇಹಪರವಾಗಿರುವುದೋ, ಮಧುರವಾಗಿರುವುದೋ, ಪ್ರಾಣಿಗಳನ್ನು ಪವಿತ್ರಗೊಳಿಸುವುದೋ, ಹಾಗೆಯೇ ಸತ್ಪುರುಷರೂ ಸ್ವಭಾವದಿಂದಲೇ ಶುದ್ಧರೂ, ಸ್ನೇಹಪರರೂ, ಮಧುರಭಾಷಿಗಳೂ, ಲೋಕಪಾವನರೂ ಆಗಿರುತ್ತಾರೆ. ಪುಣ್ಯತೀರ್ಥಗಳು ದರ್ಶನ, ಸ್ಪರ್ಶ, ನಾಮೋಚ್ಚಾರಣೆಗಳಿಂದ ಮನುಷ್ಯರನ್ನು ಪವಿತ್ರಗೊಳಿಸುವಂತೆ ಸತ್ಪುರುಷರು ಅನುಗ್ರಹ-ನೋಟಗಳಿಂದಲೂ, ಸ್ಪರ್ಶದಿಂದಲೂ, ನಾಮಸಂಕೀರ್ತನಗಳಿಂದಲೂ ಮನುಷ್ಯರನ್ನು ಪಾವನಗೊಳಿಸು

---

ತತ್ತ್ವಮಸಿ–ಎಂಬ ಶ್ರುತಿಯಂತೆ ಎಲ್ಲವೂ ಬ್ರಹ್ಮಸ್ವರೂಪವೆಂಬ ಭಾವನೆಯಿಂದ.

(ಶ್ರೀಧರೀಯ)

ತ್ತಾರೆ. ಹೀಗೆ ತೀರ್ಥದ ಗುಣವನ್ನು ಅನುಸರಿಸಿ ಮಾನವರು ಹೇಗಿರಬೇಕೆಂಬುದನ್ನು ನಾನು ತೀರ್ಥದಿಂದ ಕಲಿತೆನು.

**ತೇಜಸ್ವೀ ತಪಸಾ ದೀಪ್ತೋ ದುರ್ಧರ್ಷೋದರಭಾಜನಃ ।**
**ಸರ್ವಭಕ್ಷ್ಯೋಽಪಿ ಯುಕ್ತಾತ್ಮಾ ನಾದತ್ತೇ ಮಲಮಗ್ನಿವತ್ ॥೪೫॥**

ಅಗ್ನಿಯಿಂದ ನಾನು ಕಲಿತ ಪಾಠವಿದು. ಅಗ್ನಿಯು, ತೇಜಸ್ವಿಯೂ ಜ್ಯೋತಿರ್ಮಯನೂ ಆಗಿದ್ದಾನೆ. ಅವನು ಅಧೃಷ್ಯನು. ಅವನನ್ನು ಯಾರೂ ಎದುರಿಸಲಾರರು. ಅವನಲ್ಲಿ ಸಂಗ್ರಹಕ್ಕಾಗಲೀ, ಪರಿಗ್ರಹಕ್ಕಾಗಲೀ ಯಾವ ಪಾತ್ರೆಯೂ ಇಲ್ಲ. ಹೊಟ್ಟೆಯೇ ಅವನ ಸಂಗ್ರಹಪಾತ್ರೆಯಾಗಿದೆ. ಅವನು ಸರ್ವಭಕ್ಷಕನಾದರೂ ಅಭಕ್ಷ್ಯಭೋಜನದ ದೋಷವು ಅವನಿಗಿಲ್ಲ. ಹಾಗೆ ಅಗ್ನಿಯಂತೆಯೇ ಬ್ರಹ್ಮವಿದನು ತೇಜಸ್ವಿಯೂ ತಪಸ್ವಿಯೂ ಆಗಿರುತ್ತಾನೆ. ಸಂಗ್ರಹಕ್ಕೆ ಪರಾಙ್ಮುಖನಾಗಿರುತ್ತಾನೆ. ಸರ್ವಭಕ್ಷಕನಾದರೂ ಅಗ್ನಿಯಂತೆ ದುರಾಹಾರಭಕ್ಷಣದ ದೋಷಕ್ಕೆ ಭಾಗಿಯಾಗುವುದಿಲ್ಲ.*

---

* ಜ್ಞಾನಿಯು ಜ್ಞಾನಾತಿಶಯದಿಂದ ತೇಜಸ್ವಿಯಾಗಿರುತ್ತಾನೆ. ತಪಸ್ಸಿನಿಂದ ತೊಳ-ತೊಳಗಿ ಬೆಳಗುತ್ತಿರುತ್ತಾನೆ. ಅಕ್ಷೋಭ್ಯನಾಗಿರುತ್ತಾನೆ. ಅವನಿಗೆ ಹೊಟ್ಟೆಯೇ ಪಾತ್ರೆಯಾಗಿರುತ್ತದೆ. ಆತನು ಅಪರಿಗ್ರಹವ್ರತವನ್ನು ಆಚರಿಸುತ್ತಾನೆ. ಇತರರಿಂದ ಯಾವುದನ್ನೂ ಪರಿಗ್ರಹಿಸದೆ ಯಾದೃಚ್ಛಿಕವಾಗಿ ಬಂದಿದ್ದರಿಂದ ತೃಪ್ತಿಪಟ್ಟು ಕೊಳ್ಳುತ್ತಾನೆ. ಅಗ್ನಿಯು ಪರೇಚ್ಛೆಯಿಂದಲೇ ಹವಿಸ್ಸನ್ನು ಸ್ವೀಕರಿಸುತ್ತದೆ. ಹಾಗೆಯೇ ವೈರಾಗ್ಯಸಂಪನ್ನನಾದ ಜ್ಞಾನಿಯು ತಾನು ಯಾರನ್ನೂ ಯಾಚಿಸದೆ ಇತರರು ಸಮರ್ಪಿಸಿದ್ದನ್ನು ಮಾತ್ರ ಸ್ವೀಕರಿಸುತ್ತಾನೆ. (ಶ್ರೀಧರೀಯ)

ಜ್ಞಾನಿಯ ಪಕ್ಷದಲ್ಲಿ 'ಆತನು ಸರ್ವಭಕ್ಷನಾಗಿರುತ್ತಾನೆ'–ಎಂದರೆ ನಿಷಿದ್ಧವಾದ ಅನ್ನ-ಅನಿಷಿದ್ಧವಾದ ಅನ್ನ ಎಲ್ಲವನ್ನೂ ತಿಂದುಹಾಕಿಬಿಡುತ್ತಾನೆ–ಎಂದು ಅರ್ಥ ಮಾಡಬಾರದು. ರುಚಿ-ರುಚಿಯಾಗಿರುವ ಮೃಷ್ಟಾನ್ನ, ರಸವಿಲ್ಲದ ಕದನ್ನ ಎಂಬ ವಿಭಾಗವಿಲ್ಲದೆ ತಾನಾಗಿಯೇ ದೊರಕಿದ ಅನ್ನವನ್ನು ಶರೀರಧಾರಣೆಗಾಗಿ ಸ್ವೀಕರಿಸುತ್ತಾನೆ–ಎಂಬ ಅಭಿಪ್ರಾಯವನ್ನು ತೆಗೆದುಕೊಳ್ಳಬೇಕು. ಏಕೆಂದರೆ : ಆಪತ್ಕಾಲವಿಲ್ಲದೇ ಇರುವಾಗ ಜ್ಞಾನಿಯೂ ಕೂಡ ನಿಷಿದ್ಧವಾದ ಅನ್ನವನ್ನು ಸ್ವೀಕರಿಸಬಾರದು– ಎಂದು ಶ್ರುತಿಯೇ ಹೇಳುತ್ತದೆ. ಆಹಾರಶುದ್ಧೌ ಸತ್ತ್ವಶುದ್ಧಿಃ । ನಾವಿರತೋ ದುಶ್ಚರಿತಾತ್ ॥ (ವೀರರಾಘವೀಯ)

**ಕ್ವಚಿಚ್ಛನ್ನಃ ಕ್ವಚಿತ್ಸ್ಪಷ್ಟ ಉಪಾಸ್ಯಃ ಶ್ರೇಯ ಇಚ್ಛತಾಮ್ ।**
**ಭುಙ್ಕ್ತೇ ಸರ್ವತ್ರ ದಾತೃಣಾಂ ದಹನ್ಪ್ರಾಗುತ್ತರಾಶುಭಮ್ ॥೪೬॥**

ಅಗ್ನಿದೇವನು ಕೆಲವು ವೇಳೆ ಬೂದಿಮುಚ್ಚಿದ ಕೆಂಡವಾಗಿರುತ್ತಾನೆ. (ಕಟ್ಟಿಗೆಯಲ್ಲಿ ಅಡಗಿರುತ್ತಾನೆ.) ಕೆಲವು ವೇಳೆ ಪ್ರಕಟವಾಗಿರುತ್ತಾನೆ. ಆಗ ಶ್ರೇಯಸ್ಸನ್ನು ಬಯಸುವವರು ಆತನನ್ನು ಉಪಾಸನೆಮಾಡುತ್ತಾರೆ. ಉಪಾಸಕನು ಹೋಮಮಾಡಿದುದನ್ನು ಭಕ್ಷಿಸುತ್ತಾ ಅವನ ಹಿಂದಿನ ಮತ್ತು ಮುಂದಿನ ಅಶುಭಗಳನ್ನು ಅಗ್ನಿಯು ಸುಟ್ಟುಹಾಕುತ್ತಾನೆ. ಅಗ್ನಿಯಿಂದ ಈ ಪಾಠವನ್ನು ಸಾಧಕನು ಕಲಿಯಬೇಕು. ಸಾಧಕನು ಕೆಲವು ವೇಳೆ ನಿಗೂಢ ನಾಗಿರಬೇಕು. ಕೆಲವು ವೇಳೆ ಬಹಿರಂಗಕ್ಕೆ ಬಂದು ಶ್ರೇಯಃಕಾಮಿಗಳಾದ ಭಕ್ತರನ್ನು ಅನುಗ್ರಹಿಸಬೇಕು. ಅವರು ನೀಡುವ ಫಲಾದಿಗಳನ್ನು ಉಪ ಭುಂಜಿಸುತ್ತಾ, ಅವರ ಹಿಂದಿನ ಮತ್ತು ಮುಂದಿನ ಪಾಪಗಳನ್ನು ನಾಶ ಗೊಳಿಸಬೇಕು.*

**ಸ್ವಮಾಯಯಾ ಸೃಷ್ಟಮಿದಂ ಸದಸಲ್ಲಕ್ಷಣಂ ವಿಭುಃ ।**
**ಪ್ರವಿಷ್ಟ ಈಯತೇ ತತ್ತತ್ಸ್ವರೂಪೋಽಗ್ನಿರಿವೈಧಸಿ ॥೪೭॥**

ಸಾಧಕನು ಅಗ್ನಿಯ ಸ್ವರೂಪವನ್ನು ಮನಸ್ಸಿನಲ್ಲಿ ರೂಪಿಸಿಕೊಂಡು ಭಗವಂತನೂ ಹಾಗೆಯೇ ಇದ್ದಾನೆಂದು ತಿಳಿಯಬೇಕು. ಅಗ್ನಿದೇವನು ಸಮಿತ್ತಿನಲ್ಲೂ ಇದ್ದಾನೆ. ದೊಡ್ಡ-ದೊಡ್ಡ ದಿಮ್ಮಿಗಳಲ್ಲೂ ಇದ್ದಾನೆ. ಚಿಕ್ಕ-ಚಿಕ್ಕ ಕಟ್ಟಿಗೆಗಳಲ್ಲೂ ಇದ್ದಾನೆ. ಆದರೆ ಅದು ಅವನ ನಿಜಸ್ವರೂಪವಲ್ಲ. ಅಂತೆಯೇ ಭಗವಂತನು ತನ್ನ ಮಾಯೆಯಿಂದ ಸೃಷ್ಟಿಸಲ್ಪಟ್ಟಿರುವ ಎಂಭತ್ತುನಾಲ್ಕು ಲಕ್ಷಜೀವಜಂತುಗಳಲ್ಲಿಯೂ ಸ್ಥಾವರಗಳಲ್ಲಿಯೂ ಶರೀರದ ಆಯಾ ರೂಪವನ್ನೇ ಧರಿಸಿದ ಹಾಗೆ ದೇಹೋಪಾದಿಯಿಂದ ಕಂಡು ಬರು

---

* ಛನ್ನಃ–ಎಂಬ ಪದಕ್ಕೆ ಬೂದಿಯಿಂದ ಮುಚ್ಚಲ್ಪಟ್ಟು–ಎಂದು ಅಗ್ನಿ ಪಕ್ಷದಲ್ಲಿ ಅರ್ಥ. ತನ್ನ ಮಾಹಾತ್ಮ್ಯವನ್ನು ಪ್ರಕಟಪಡಿಸದೆ ಮರೆಸಿಕೊಂಡು–ಎಂದು ಜ್ಞಾನಿಯ ಪಕ್ಷದಲ್ಲಿ ಅರ್ಥ. ಹಾಗೆಯೇ ಹವಿಷಾ ಎಂಬುದಕ್ಕೆ ಅಗ್ನಿಯ ಪಕ್ಷದಲ್ಲಿ ತುಪ್ಪವೇ ಮುಂತಾದ ಹವಿಸ್ಸಿನಿಂದ ಎಂಬುದಾಗಿಯೂ, ಜ್ಞಾನಿಯ ಪಕ್ಷದಲ್ಲಿ ಯೋಗಾಭ್ಯಾಸವೇ ಮುಂತಾದುವುಗಳಿಂದ ಎಂಬುದಾಗಿಯೂ ಅರ್ಥಮಾಡಬೇಕು. (ವೀರರಾಘವೀಯ)

ತ್ತಾನೆ. ಆದರೆ ಅವನ ನಿಜಸ್ವರೂಪವು ಅದಲ್ಲ. ಅಗ್ನಿಗೆ ತೇಜಸ್ಸೇ ಸ್ವ-ಸ್ವರೂಪವಾಗಿರುವಂತೆ ಪರಮಾತ್ಮನಿಗೆ ಪರಬ್ರಹ್ಮತ್ವವೇ ಸ್ವ-ಸ್ವರೂಪ ವಾಗಿದೆ.

**ವಿಸರ್ಗಾದ್ಯಾಃ ಶ್ಮಶಾನಾನ್ತಾ ಭಾವಾ ದೇಹಸ್ಯ ನಾತ್ಮನಃ ।**
**ಕಲಾನಾಮಿವ ಚನ್ದ್ರಸ್ಯ ಕಾಲೇನಾವ್ಯಕ್ತವರ್ತ್ಮನಾ ॥೪೮॥**

ಚಂದ್ರನಿಂದಲೂ ನಾವು ಪಾಠವನ್ನು ಕಲಿಯಬಹುದಾಗಿದೆ. ಚಂದ್ರನಿಗೆ ಶುಕ್ಲಪಕ್ಷದಲ್ಲಿ ಕಲೆಯ ವೃದ್ಧಿಯೂ ಕೃಷ್ಣಪಕ್ಷದಲ್ಲಿ ಕಲೆಯ ನಾಶವೂ ಆಗುತ್ತದೆ. ಹೀಗಾಗುವುದು ಅವ್ಯಕ್ತವಾದ ಮಾರ್ಗವನ್ನು ಹಿಡಿದಿರುವ ಕಾಲನ ಪ್ರಭಾವದಿಂದಲೇ ಹೊರತು ಚಂದ್ರಮಂಡಲಕ್ಕೆ ವಾಸ್ತವವಾಗಿ ಕ್ಷಯವಾಗಲೀ ಅಕ್ಷಯವಾಗಲೀ ಉಂಟಾಗುವುದಿಲ್ಲ. ಅಂತೆಯೇ ಹುಟ್ಟಿನಿಂದ ಸಾಯುವವರೆಗೆ ಸಂಭವಿಸುವ ಅಸ್ತಿ, ಜಾಯತೇ, ವರ್ಧತೇ, ಪರಿಣಮತೇ, ಕ್ಷೀಯತೇ, ನಶ್ಯತಿ–(ಇರುವಿಕೆ, ಹುಟ್ಟುವಿಕೆ, ಬೆಳೆಯುವಿಕೆ, ಪರಿಣಾಮ ಹೊಂದುವಿಕೆ, ಕ್ಷೀಣಿಸುವಿಕೆ, ನಾಶಹೊಂದುವಿಕೆ) ಎಂಬ ಆರು ಭಾವವಿಕಾರಗಳು ದೇಹಕ್ಕೇ ಹೊರತು ಆತ್ಮನಿಗಲ್ಲ. ಚಂದ್ರನು ಪ್ರತ್ಯಕ್ಷವಾಗಿ ಲೋಕದ ಜನರಿಗೆ ಶುಕ್ಲಪಕ್ಷದಲ್ಲಿ ಕಲೆಗಳನ್ನು ಸಂಗ್ರಹಿಸಿಕೊಂಡಂತೆಯೂ ಕೃಷ್ಣಪಕ್ಷದಲ್ಲಿ ಕಲೆಗಳನ್ನು ಕಳೆದುಕೊಂಡಂತೆಯೂ ಕಾಣುವಂತೆ ದೇಹದೊಡನೆ ಆತ್ಮನೂ ನಾಶಹೊಂದುವಂತೆ ಪಾಮರರಿಗೆ ತೋರಿಬರುತ್ತದೆ. ಆದರೆ ದೇಹವು ಆತ್ಮವಲ್ಲ. ದೇಹನಾಶದಿಂದ ಆತ್ಮನಾಶವಾಗುವುದಿಲ್ಲ–ಎಂಬ ಸತ್ಯವು ಜ್ಞಾನಿಗಳಿಗೆ ಮಾತ್ರವೇ ತಿಳಿಯುತ್ತದೆ. ಚಂದ್ರಮಂಡಲವನ್ನು ಪರೀಕ್ಷಿಸುವ ವಿಜ್ಞಾನಿಗಳಿಗೆ ಚಂದ್ರನು ಕ್ಷೀಣಿಸುವುದೂ ಇಲ್ಲ ; ವೃದ್ಧಿಸುವುದೂ ಇಲ್ಲ–ಎಂಬ ವಿಷಯವೂ ತಿಳಿಯುತ್ತದೆ. ಹೀಗೆ ದೇಹವಿನಾಶವಾದರೂ ಆತ್ಮಕ್ಕೆ ನಾಶವಿಲ್ಲ–ಎಂಬ ಈ ತತ್ತ್ವವನ್ನು ಸಾಧಕನು ಚಂದ್ರನ ಈ ಉದಾಹರಣೆಯಿಂದ ತಿಳಿಯಬೇಕು.*

---

* ಜ್ಯೋತಿಶ್ಶಾಸ್ತ್ರದಲ್ಲಿ ಜಲಮಂಡಲಕ್ಕೆ ಚಂದ್ರನೆಂದೂ ತೇಜೋಮಂಡಲಕ್ಕೆ ಸೂರ್ಯನೆಂದೂ ಹೆಸರು. ಈ ಎರಡು ಮಂಡಲಗಳೂ ಒಂದೇ ನಕ್ಷತ್ರದಲ್ಲಿರುವಾಗ, ಸಮದೇಶದಲ್ಲಿರುವ ಸೂರ್ಯಮಂಡಲವು ಕಣ್ಣಿಗೆ ಅಡ್ಡವಾಗುವುದರಿಂದ ಚಂದ್ರನು ಕಾಣುವುದಿಲ್ಲ. ಅದೇ ಅಮಾವಾಸ್ಯೆಯು. ಅರುವತ್ತು ಘಳಿಗೆಗಳಾದ ಬಳಿಕ ಚಂದ್ರನು

**ಕಾಲೇನ ಹ್ಯೋಘವೇಗೇನ ಭೂತಾನಾಂ ಪ್ರಭವಾಪ್ಯಯೌ ।**
**ನಿತ್ಯಾವಪಿ ನ ದೃಶ್ಯೇತೇ ಆತ್ಮನೋಽಗ್ನೇರ್ಯಥಾರ್ಚಿಷಾಮ್ ॥೪೯॥**

ಅಗ್ನಿಯಿಂದ ನಾವು ಮತ್ತೊಂದು ಪಾಠವನ್ನು ಕಲಿಯುವುದಿದೆ. ಉತ್ಪತ್ತಿ-ವಿನಾಶಗಳು ಅಗ್ನಿಯ ಜ್ವಾಲೆಗಳಿಗೇ ಹೊರತು ಅಗ್ನಿಗಲ್ಲ. ಅಗ್ನಿಯ ಜ್ವಾಲೆಗಳು ಪ್ರತಿಕ್ಷಣದಲ್ಲಿಯೂ ಸಾವಿರಾರು ಸಂಖ್ಯೆಯಲ್ಲಿ ಹೊರಹೊಮ್ಮು ತ್ತಿರುತ್ತವೆ ; ವಿನಾಶಹೊಂದುತ್ತಿರುತ್ತವೆ. ಎಣ್ಣೆಯು ಮುಗಿಯುವುದರಿಂದ ಸಾವಿರಾರು ಮಿಣುಕುಗಳು ಅವ್ಯಾಹತವಾಗಿ ಹೊರಬಂದು ನಾಶಹೊಂದಿವೆ ಯೆಂಬುದನ್ನು ನಾವು ತಿಳಿಯಬಹುದಾಗಿದೆ. ಸೌದೆಯು ಬೂದಿಯಾಗ ಬೇಕಾದರೆ ಸೌದೆಯಿಂದ ಸಾವಿರಾರು ಜ್ವಾಲೆಗಳು ಹೊರಬಂದು ನಾಶವಾದ ನಂತರವೇ ಕಟ್ಟಿಗೆಯು ಬೂದಿಯಾಗುತ್ತದೆ. ಇಲ್ಲಿ ಜ್ವಾಲೆಗಳು ನಾಶವಾಗು ತ್ತವೆಯೇ ಹೊರತು ಅಗ್ನಿಯು ನಾಶವಾಗುವುದಿಲ್ಲ. ಒಂದುಕಟ್ಟಿಗೆಯು ಉರಿದುಹೋದರೆ ಮತ್ತೊಂದು ಕಟ್ಟಿಗೆಯಲ್ಲಿ ಅಗ್ನಿಯಿದ್ದೇ ಇರುತ್ತದೆ.

ಅದರಂತೆಯೇ ದೇಹದ ಉತ್ಪತ್ತಿ-ವಿನಾಶಗಳು ಸತತವಾಗಿ ನಡೆಯು ತ್ತಲೇ ಇರುತ್ತವೆ. ನದೀ ಪ್ರವಾಹದಂತೆ ಓಡುತ್ತಿರುವ ಕಾಲದಿಂದ ಜನನ-

---

ಬೇರೆ ನಕ್ಷತ್ರಕ್ಕೆ ಹೋಗುವನು. ಸೂರ್ಯನು ಬೇರೆ ನಕ್ಷತ್ರಕ್ಕೆ ಹೋಗಬೇಕಾದರೆ ಹದಿಮೂರು ದಿವಸಗಳಾಗಬೇಕು. ಆದುದರಿಂದ ಪಾಡ್ಯದ ಮೊದಲು ವಿಷಮ ವಾಗಿರುವ ಸೂರ್ಯಮಂಡಲದ ಹದಿನೈದನೆಯ ಭಾಗವು ಚಂದ್ರಮಂಡಲದಲ್ಲಿ ಪ್ರತಿ ಬಿಂಬಿಸುವುದು. ಇದಕ್ಕೆ ಕಲೆ—ಎಂದು ಹೆಸರು. ಹೀಗೆ ಹದಿನೈದನೆಯ ದಿನದಲ್ಲಿ ಹದಿಮೂರು ನಕ್ಷತ್ರಗಳ ಅಂತರವಿರುವುದು. ಇಪ್ಪತ್ತೇಳು ನಕ್ಷತ್ರಗಳುಳ್ಳ ರಾಶಿಚಕ್ರದ ಮಧ್ಯದಲ್ಲಿ ಯಾವಾಗ ಸೂರ್ಯ-ಚಂದ್ರರು ಇದಿರಾಗಿ ನಿಲ್ಲುವರೋ ಆಗ ಪರಿಪೂರ್ಣವಾದ ಸೂರ್ಯಪ್ರತಿಬಿಂಬವು ಭೂಮಿಯ ಛಾಯೆಯಿಂದ ಕೂಡಿ ಜಲ ಮಂಡಲದಲ್ಲಿ ಕಾಣುವುದು. ಅದು ಹುಣ್ಣಿಮೆಯು. ಆ ಹುಣ್ಣಿಮೆಯಲ್ಲಿ ಅಮಾವಾಸ್ಯಾ ಪ್ರತಿಬಿಂಬವು ಸೇರಿ ಚಂದ್ರನಿಗೆ ಹದಿನಾರು ಕಲೆಗಳೆಂದು ಹೇಳುವರು. ತರುವಾಯ ಮರಳಿ ಪಾಡ್ಯಮಿ ಮೊದಲಾಗುವುದು.

ಮಂಡಲಗಳು ವಿಷಮವಾಗುವುದರಿಂದ ಕಲೆಯು ಕುಂದುವುದು. ಇಲ್ಲಿ ವೃದ್ಧಿ- ಹ್ರಸ್ವಗಳು ಕಲೆಗಳಿಗೇ ಹೊರತು ಜಲಮಂಡಲಕ್ಕೆ (ಚಂದ್ರನಿಗೆ) ಅಲ್ಲ.

(ಭಾರತದೀಪಿಕಾ)

ಮರಣಗಳು ದೇಹಕ್ಕೆ ಆಗುತ್ತಿದ್ದರೂ ಆ ಹುಟ್ಟು-ಸಾವುಗಳು ಆತ್ಮನಿಗಲ್ಲ. ಜ್ವಾಲೆಗಳು ಹುಟ್ಟಿ ಹಾಳಾಗುವುವೇ ಹೊರತು ಅಗ್ನಿಯನಾಶವಾಗದು. ಕೌಮಾರ್ಯದ ನಾಶವಾದನಂತರವೇ ಯೌವನವು ಬರುತ್ತದೆ. ಆದರೆ ಕೌಮಾರ್ಯದ ವಿನಾಶವನ್ನು ಕಾಲದ ವೇಗದಿಂದಾಗಿ ನಾವು ಗ್ರಹಿಸುವುದಿಲ್ಲ. ಕೌಮಾರ್ಯ–ಯೌವನಾವಸ್ಥೆಗಳು ದೇಹಕ್ಕೇ ಹೊರತು ಆತ್ಮನಿಗಲ್ಲ. ಹೀಗೆ ಅಗ್ನಿಯಿಂದ ನಾವು ಈ ಅಧ್ಯಾತ್ಮತತ್ತ್ವವನ್ನು ತಿಳಿಯಬೇಕು.

**ಗುಣೈರ್ಗುಣಾನುಪಾದತ್ತೇ ಯಥಾಕಾಲಂ ವಿಮುಞ್ಚತಿ ।**
**ನ ತೇಷು ಯುಜ್ಯತೇ ಯೋಗೀ ಗೋಭಿರ್ಗಾ ಇವ ಗೋಪತಿಃ ॥೫೦॥**

ಸೂರ್ಯನಿಂದ ಕಲಿಯಬೇಕಾದ ಪಾಠವಿದು :

ಸೂರ್ಯದೇವನು ತನ್ನ ಕಿರಣಗಳಿಂದ ಸಮಯವರಿತು ನೀರನ್ನು ಸಂಗ್ರಹಿಸುತ್ತಾನೆ. ಪುನಃ ಮೋಡಗಳ ಮೂಲಕವಾಗಿ ತಾನು ಸಂಗ್ರಹಿಸಿದ್ದು ದನ್ನು ಪ್ರಜೆಗಳಿಗೆ ಪ್ರಯೋಜನವಾಗುವಂತೆ ಹೊರಹಾಕುತ್ತಾನೆ. ಸೂರ್ಯನು ನೀರನ್ನು ಸಂಗ್ರಹಿಸುವಾಗ ನೀರು ತನಗೆ ಬೇಕೆಂಬ ಆಸಕ್ತಿ ಯಿಂದ ಸಂಗ್ರಹಿಸುವುದಿಲ್ಲ. ವಿಸರ್ಜಿಸುವಾಗ ದುಃಖಿಸುವುದೂ ಇಲ್ಲ. ನಿರಾಸಕ್ತಿಯಿಂದ ಅವನು ಲೋಕೋಪಕಾರಕವಾದ ಈ ಕಾರ್ಯವನ್ನು ಮಾಡುತ್ತಿರುತ್ತಾನೆ. ಅಂತೆಯೇ ಯೋಗಿಯೂ ಕೂಡ ಇಂದ್ರಿಯಗಳ ಮೂಲಕವಾಗಿ ಐಶ್ವರ್ಯವೇ ಮೊದಲಾದುವನ್ನು ನಿರಾಸಕ್ತಿಯಿಂದ ಸಂಗ್ರಹಿಸಬಹುದು. ಸೂರ್ಯದೇವನು ನೀರನ್ನು ಹೊರಚೆಲ್ಲುವಂತೆಯೇ ಯೋಗಿಯೂ ಅನಾಸಕ್ತನಾಗಿ ಸಂಗ್ರಹಿಸಿದ ಐಶ್ವರ್ಯವನ್ನು ಸತ್ಪಾತ್ರ ನಲ್ಲಿ ದಾನಮಾಡಬೇಕು. ಅಥವಾ ಸತ್ಕಾರ್ಯಗಳಿಗೆ ವಿನಿಯೋಗಿಸಬೇಕು. ಹಾಗೆ ಕೊಡುವಾಗಲೂ ಅಹಂಭಾವವಿಲ್ಲದೆ ಕೊಡಬೇಕು. ಕೆರೆಯನೀರನು ಕೆರೆಗೆ ಚೆಲ್ಲಿದೆ–ತನ್ನದೇನೂ ಇಲ್ಲ–ಎಂಬ ಭಾವನೆಯಿಂದ ಐಶ್ವರ್ಯದ ತ್ಯಾಗಮಾಡಬೇಕು. ಇದು ಯೋಗಿಯಾದವನು ಸೂರ್ಯನಿಂದ ಕಲಿಯುವ ಪಾಠವಾಗಿದೆ.

**ಬುಧ್ಯತೇ ಸ್ವೇನ ಭೇದೇನ ವ್ಯಕ್ತಿಸ್ಥ ಇವ ತದ್ಗತಃ ।**
**ಲಕ್ಷ್ಯತೇ ಸ್ಥೂಲಮತಿಭಿರಾತ್ಮಾ ಚಾವಸ್ಥಿತೋऽರ್ಕವತ್ ॥೫೧॥**

ಸೂರ್ಯನಿಂದ ಕಲಿಯಬೇಕಾದ ಮತ್ತೊಂದು ಪಾಠ :

ಹಲವಾರು ಪಾತ್ರೆಗಳಲ್ಲಿ ನೀರು ತುಂಬಿಟ್ಟು ನೋಡಿದರೆ ಸೂರ್ಯನು ಪ್ರತಿಯೊಂದು ಪಾತ್ರೆಯಲ್ಲಿಯೂ ಪ್ರತಿಫಲಿಸಿ ನೂರಾರು-ಸಾವಿರಾರು ಸೂರ್ಯರಿರುವರೋ ಎಂಬಂತೆ ಭಾಸವಾಗುತ್ತದೆ. ಆದರೆ ಇರುವವನು ಒಬ್ಬನೇ ಸೂರ್ಯ. ಅಂತೆಯೇ ಕೋಟಿ-ಕೋಟಿ ಚರಾಚರವಸ್ತುಗಳಲ್ಲಿ ಆತ್ಮನು ಪ್ರಕಾಶಿಸುವುದರಿಂದ ಹಲವಾರು ಆತ್ಮಗಳಿರುವರೆಂದು ಸ್ಥೂಲಬುದ್ಧಿ ಯವರು ಭಾವಿಸುತ್ತಾರೆ. ಆತ್ಮನು ಸ್ವ-ಸ್ವರೂಪದಲ್ಲಿರುವಾಗ ಯಾವ ಭೇದ ವನ್ನೂ ಪಡೆಯುವುದಿಲ್ಲ. ದೇಹವೇ ಮೊದಲಾದ ಉಪಾಧಿಗಳಲ್ಲಿರುವಾಗ ಆತ್ಮನು ಪ್ರತ್ಯೇಕ-ಪ್ರತ್ಯೇಕನಾಗಿರುವಂತೆ–ಸ್ಥೂಲಬುದ್ಧಿಯವರಿಗೆ ಬೇರೆ- ಬೇರೆಯೆಂದು ಗೋಚರನಾಗುವನು. ಆತ್ಮನಿಗೆ ಭೇದವೆಂಬುದು ಉಪಾಧಿ ಯಿಂದಲೇ ಹೊರತು ಸಹಜವಲ್ಲ. ಸಾವಿರಾರು ಪಾತ್ರೆಗಳಲ್ಲಿರುವ ಸೂರ್ಯ ಬಿಂಬಗಳಂತೆ–ಈ ಭೇದಗಳು–ಎಂದು ಇದನ್ನು ನಾವು ತಿಳಿಯಬಹುದಾಗಿದೆ.

**ನಾತಿಸ್ನೇಹಃ ಪ್ರಸಙ್ಗೋ ವಾ ಕರ್ತವ್ಯಃ ಕ್ವಾಪಿ ಕೇನಚಿತ್ ।**
**ಕುರ್ವನ್ವಿನ್ದೇತ ಸನ್ತಾಪಂ ಕಪೋತ ಇವ ದೀನಧೀಃ ॥೫೨॥**

ಮಹಾರಾಜ! ಎಲ್ಲಿಯೇ ಆಗಲೀ, ಯಾರೊಡನೆಯೇ ಆಗಲೀ, ಅಧಿಕ ವಾದ ಸ್ನೇಹವನ್ನೂ ಮಾಡಬಾರದು. ಹೆಚ್ಚಿನ ಆಸಕ್ತಿಯನ್ನೂ ಇಟು ಕೊಳ್ಳಬಾರದು. ಹಾಗೇನಾದರೂ ಯಾವನೊಡನೆಯಾದರೂ ಅತಿಸ್ನೇಹ ಮಾಡಿದ್ದೇ ಆದರೆ, ದೀನವಾದ ಮನಸ್ಸಿನಿಂದ ಕೂಡಿದ ಪಾರಿವಾಳದಂತೆ ಸಂತಾಪಪಡುತ್ತಾನೆ. ಅತಿಸ್ನೇಹದಿಂದ ಕ್ಲೇಶಕ್ಕೊಳಗಾದ ಕಪೋತಪಕ್ಷಿಯ ಕಥೆಯನ್ನು ಹೇಳುವೆನು ; ಕೇಳು :

ಒಂದಾನೊಂದು ಕಾಡು. ಆ ಕಾಡಿನಲ್ಲಿ ದೊಡ್ಡದಾದೊಂದು ಆಲದ ಮರ. ಆ ಮರದಲ್ಲಿ ಪಾರಿವಾಳವೊಂದು ಗೂಡು ಕಟ್ಟಿಕೊಂಡು ತನ್ನ ಪತ್ನಿ ಯೊಡನೆ ಹಲವಾರು ವರ್ಷಗಳಿಂದ ವಾಸಮಾಡುತ್ತಿದ್ದಿತು. ಗೃಹಸ್ಥಧರ್ಮ ದಲ್ಲಿದ್ದ ಆ ಕಪೋತ ದಂಪತಿಗಳು ಪರಸ್ಪರವಾಗಿ ಗಾಢವಾದ ಪ್ರೀತಿಯುಳ್ಳವು ಗಳಾಗಿದ್ದುವು. ಎರಡು ಪಕ್ಷಿಗಳೂ ದೃಷ್ಟಿಯಿಂದ ದೃಷ್ಟಿಯನ್ನೂ ಅಂಗ ದಿಂದ ಅಂಗವನ್ನೂ, ಬುದ್ಧಿಯಿಂದ ಬುದ್ಧಿಯನ್ನೂ ಬಿಗಿದುಕೊಂಡಿರುವಂತೆ

ವ್ಯವಹರಿಸುತ್ತಿದ್ದುವು. ಪರಸ್ಪರವಾಗಿ ಒಂದು ಮತ್ತೊಂದನ್ನು ನೋಡುತ್ತಲೇ ಇರುತ್ತಿದ್ದುವು. ಜೊತೆಯಲ್ಲೇ ಇರುತ್ತಿದ್ದುವು. ಒಂದು ಮತ್ತೊಂದನ್ನು ಬಿಟ್ಟು ಕ್ಷಣಮಾತ್ರವಾದರೂ ಇರುತ್ತಿರಲಿಲ್ಲ. ಬುದ್ಧಿಯಲ್ಲೂ ಏಕಮುಖವಾಗಿ ಯೋಚಿಸುತ್ತಿದ್ದುವು. ಅವುಗಳ ದಾಂಪತ್ಯ ಜೀವನವು ಅಷ್ಟುಗಾಢವಾದ ಪ್ರೇಮದಿಂದ ಕೂಡಿದ್ದಿತು. ಆ ಕಪೋತ ದಂಪತಿಗಳು ಒಟ್ಟಿಗೆ ಮಲಗುತ್ತಿದ್ದುವು. ಕುಳಿತುಕೊಳ್ಳುತ್ತಿದ್ದುವು, ಜೊತೆಯಲ್ಲೇ ನಿಂತುಕೊಳ್ಳುತ್ತಿದ್ದುವು. ಜೊತೆಯಲ್ಲೇ ವ್ಯವಹರಿಸುತ್ತಿದ್ದುವು, ಜೊತೆ ಗೂಡಿ ಆಟವಾಡುತ್ತಿದ್ದುವು, ಜೊತೆಗೂಡಿಯೇ ಆಹಾರವನ್ನು ತಿನ್ನುತ್ತಿದ್ದುವು. ಹೀಗೆ ಎಲ್ಲ ಸಮಯದಲ್ಲೂ ಜೊತೆಗೂಡಿಯೇ ಇರುತ್ತಾ ಯಾವ ವಿಧವಾದ ಶಂಕೆಯೂ ಇಲ್ಲದೆ ಆ ಕಾಡಿನಲ್ಲಿ ಸಂಚರಿಸುತ್ತಿದ್ದುವು. ಸೇವೆಯಿಂದ ಪತಿಯನ್ನು ಸಂತೋಷಗೊಳಿಸುತ್ತಿದ್ದ ಹೆಣ್ಣುಪಾರಿವಾಳವು ಗಂಡನ ಪರಮಪ್ರೀತಿಗೆ ಪಾತ್ರವಾಗಿದ್ದಿತು. ಈ ಕಾರಣದಿಂದಲೇ ಹೆಣ್ಣುಕಪೋತವು ಏನನ್ನೇ ಕೇಳಿದರೂ ಅದನ್ನು ತರಲು ಎಷ್ಟೇ ಕಷ್ಟವಾದರೂ ಲೆಕ್ಕಿಸದೆ, ಇಂದ್ರಿಯಗಳನ್ನು ಜಯಿಸದೇ ಇದ್ದ ಆ ಗಂಡುಪಾರಿವಾಳವು ತಂದುಕೊಡುತ್ತಿದ್ದಿತು. ಹೀಗೆಯೇ ಇರುತ್ತಿರಲಾಗಿ ಕಾಲಾನುಗುಣವಾಗಿ ಕಪೋತಿಯು ಗರ್ಭವತಿಯಾಯಿತು. ಗೂಡಿನಲ್ಲಿಯೇ ಗಂಡನ ಸನ್ನಿಧಿಯಲ್ಲಿ ಕಪೋತಿಯು ಮೊಟ್ಟೆಗಳನ್ನಿಟ್ಟಿತು. ಸ್ವಲ್ಪದಿವಸಗಳಲ್ಲಿಯೇ ಭಗವಂತನ ಅಚಿಂತ್ಯವಾದ ಶಕ್ತಿಯಿಂದಾಗಿ ಮೊಟ್ಟೆಗಳೊಡೆದು ಅವುಗಳಿಂದ ಪುಟ್ಟ-ಪುಟ್ಟ ಕಾಲುಗಳಿಂದಲೂ ರೆಕ್ಕೆಗಳಿಂದಲೂ ಕೂಡಿದ್ದ ಮರಿಗಳು ಹೊರಬಂದುವು. ಅವುಗಳ ಒಂದೊಂದು ಅವಯವಗಳೂ ಸುಕೋಮಲವಾಗಿದ್ದುವು. ಪುತ್ರವಾತ್ಸಲ್ಯದಿಂದ ಕೂಡಿದ್ದ ಆ ಕಪೋತದಂಪತಿಗಳು ಅತ್ಯಂತಪ್ರೀತಿಯಿಂದ ಮಕ್ಕಳನ್ನು ಲಾಲಿಸಿ-ಪೋಷಿಸತೊಡಗಿದುವು. ಮರಿಗಳ ಕಲ-ಕಲನಿನಾದವನ್ನು ಕೇಳಿ ಆನಂದಿಸುತ್ತಿದ್ದುವು. ಮರಿಗಳ ಸುಕೋಮಲವಾದ ಶರೀರಗಳನ್ನು ಮುಟ್ಟಿ-ಮುಟ್ಟಿ ಸಂತೋಷಿಸುತ್ತಿದ್ದುವು. ಅವುಗಳು ಚಿಲಿ-ಪಿಲಿಗುಟ್ಟುವುದನ್ನು ಕೇಳಿ ಹಿರಿ-ಹಿಗ್ಗುತ್ತಿದ್ದುವು. ಅವುಗಳು ಮಾಡುತ್ತಿದ್ದ ಚೇಷ್ಟೆಯನ್ನು ಕಂಡು ಆನಂದದಿಂದ ಮೈಮರೆಯುತ್ತಿದ್ದುವು. ಅವು ಪುಟ್ಟ-ಪುಟ್ಟದಾಗಿ ತಮ್ಮ ಕಡೆಗೆ ಹಾರಿಕೊಂಡು ಬರುತ್ತಿರುವುದನ್ನು ಕಂಡು ಕಪೋತದಂಪತಿಗಳು ನಲಿ

ದಾಡುತ್ತಿದ್ದುವು. ಅಂತಹ ಮರಿಗಳನ್ನು ಎಷ್ಟು ನೋಡಿದರೂ ಅವುಗಳಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ಕಪೋತ-ಕಪೋತಿಗಳು ಅದೇ ಜೀವನದ ಸರ್ವಸ್ವ ವೆಂದು ಭಾವಿಸಿ ಆನಂದಸಾಗರದಲ್ಲಿ ಮುಳುಗಿಹೋದುವು. ವಿಷ್ಣುವಿನ ಮಾಯೆಯಿಂದಾಗಿ ಸ್ನೇಹಪಾಶದಿಂದ ನಿಬದ್ಧವಾಗಿದ್ದ, ಕಪೋತ-ಕಪೋತಿ ಗಳು ಪುತ್ರಸ್ನೇಹದಿಂದ ವಿಮೋಹಿತವಾಗಿ ವಿವೇಕವಿಲ್ಲದೆ ಮರಿಗಳನ್ನು ಲಾಲಿಸಿ-ಪೋಷಿಸುತ್ತಿದ್ದುವು. ಮಕ್ಕಳೂ ಬೆಳೆಯತೊಡಗಿದುವು. ಮಕ್ಕಳಿಗೂ ಸಾಕಾಗುವಂತೆ ಹೆಚ್ಚು ಕಾಳು-ಕಡ್ಡಿಗಳನ್ನು ತರಬೇಕಾಯಿತು. ಆಹಾರ ತರಲು ಪುಟ್ಟಹಕ್ಕಿಗಳನ್ನು ಕಳುಹಿಸುವುದಕ್ಕೆ ಇಷ್ಟವಾಗುತ್ತಿರಲಿಲ್ಲ. ಆದುದ ರಿಂದ ಕಪೋತಿಗಳು ಆಹಾರದ ಸಂಗ್ರಹಕ್ಕಾಗಿ ಬಹಳ ಹೊತ್ತು ಕಳೆಯ ಬೇಕಾಯಿತು. ಅಂತೆಯೇ ಒಮ್ಮೆ ಕಪೋತ-ಕಪೋತಿಗಳು ಆಹಾರವನ್ನು ತರಲು ಜೊತೆಯಲ್ಲೇ ಕಾಡಿಗೆ ಹೋದುವು. ಆಹಾರವನ್ನು ಹುಡುಕುತ್ತಾ ಬಹಳ ಹೊತ್ತಿನವರೆಗೆ ಕಾಡಿನಲ್ಲಿ ಸುತ್ತಾಡುತ್ತಿದ್ದುವು. ಇತ್ತಲಾಗಿ ಗೂಡಿ ನಲ್ಲಿದ್ದ ಮರಿಗಳು ಸ್ವೇಚ್ಛೆಯಿಂದ ಪುಟ್ಟ-ಪುಟ್ಟದಾಗಿ ಹಾರಾಡುತ್ತಾ ಬೇಡ ನೊಬ್ಬನ ಗುಡಿಸಿಲ ಬಳಿಗೆ ಹಾರಿಕೊಂಡು ಹೋದುವು. ಗುಡಿಸಿಲಿನಲ್ಲಿದ್ದ ಬೇಡರವನು ಮರಿಹಕ್ಕಿಗಳು ತನ್ನ ಗುಡಿಸಿಲ ಬಳಿಗೆ ಬಂದಿರುವುದನ್ನು ನೋಡಿ ಒಡನೆಯೇ ಬಲೆಯನ್ನು ಬೀಸಿದನು. ಎಲ್ಲ ಮರಿಗಳೂ ಬಲೆಯಲ್ಲಿ ಸಿಕ್ಕಿಹಾಕಿಕೊಂಡುವು. ಮರಿಗಳನ್ನು ಪೋಷಿಸುವುದರಲ್ಲಿ ಅತ್ಯಂತ ಉತ್ಸಾಹ ವುಳ್ಳವುಗಳಾಗಿದ್ದ ಕಪೋತದಂಪತಿಗಳು ಬಹಳ ಹೊತ್ತು ಕಾಡಿನಲ್ಲಿ ಸಂಚ ರಿಸುತ್ತಿದ್ದು ಬೇಕಾದಷ್ಟು ಕಾಳು-ಕಡ್ಡಿಗಳನ್ನು ಮರಿಗಳಿಗೂ ಸಂಗ್ರಹಿಸಿ ಕೊಂಡು ಗೂಡಿನ ಬಳಿಗೆ ಬಂದುವು. ಗೂಡಿನಲ್ಲಾಗಲೀ ಸಮೀಪದಲ್ಲಾಗಲೀ ಮರಿಗಳು ಕಾಣಿಸಲಿಲ್ಲ. ಕಪೋತಿಯು ಗಾಬರಿಯಿಂದ ಹಾರಾಡುತ್ತಾ ಸುತ್ತಲೂ ವೀಕ್ಷಿಸಿತು. ಬೇಡರವನ ಗುಡಿಸಿಲ ಬಳಿಯಲ್ಲಿ ತನ್ನ ಎಲ್ಲ ಮರಿ ಗಳೂ ಅವನ ಬಲೆಗೆ ಸಿಕ್ಕಿಹಾಕಿಕೊಂಡಿರುವುದನ್ನು ನೋಡಿತು. ಕಡುದುಃಖ ದಿಂದ ಗೋಳಾಡತೊಡಗಿತು. ಬಲೆಯಲ್ಲಿ ಬಿದ್ದಿದ್ದ ಮರಿಗಳು ತಾಯಿಯನ್ನು ನೋಡಿದೊಡನೆಯೇ ಕೂಗಿಕೊಳ್ಳಲು ಪ್ರಾರಂಭಿಸಿದುವು. ತಾಯಿಪಕ್ಷಿಗೆ ತನ್ನ ದುಃಖವನ್ನು ತಡೆದುಕೊಳ್ಳಲು ಸಾಧ್ಯವಾಗಲೇ ಇಲ್ಲ. ವಿಷ್ಣುವಿನ

ಮಾಯೆಯಿಂದ ಬುದ್ಧಿಗೆಟ್ಟಿದ್ದ ಕಪೋತಿಯು ಕೂಗಿಕೊಳ್ಳುತ್ತಲೇ ಮರಿಗಳ ಕಡೆಗೆ ಧಾವಿಸಿ ತಾನೂ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿತು.

ಮಕ್ಕಳನ್ನು ಹುಡುಕಿ ಕರೆತರಲುಹೋಗಿದ್ದ ಕಪೋತಿಯು ಬಹಳ ಹೊತ್ತಾದರೂ ಗೂಡಿಗೆ ಬಾರದಿದ್ದುದನ್ನು ಕಂಡು ಕಪೋತವು ಮಕ್ಕಳನ್ನೂ ಪತ್ನಿಯನ್ನೂ ಹುಡುಕಿ ಕರೆತರಲು ಗೂಡಿನಿಂದ ಹೊರಟಿತು. ಸ್ವಲ್ಪದೂರ ದಲ್ಲಿಯೇ ಬೇಡನ ಗುಡಿಸಿಲಿನ ಬಳಿಯಲ್ಲಿ ಪತ್ನಿಯೂ ಮತ್ತು ಮಕ್ಕಳೂ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವುದನ್ನು ಕಪೋತವು ನೋಡಿತು. ತನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯರಾಗಿದ್ದ ಮಕ್ಕಳೂ ಮತ್ತು ಆತ್ಮಸಮಳಾದ ಮಡದಿಯೂ ಹಾಗೆ ಬೇಡನ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವುದನ್ನು ನೋಡಿ ದೀನವೂ ಅತಿದುಃಖಿತವೂ ಆದ ಕಪೋತವು ಬಿಕ್ಕಿ-ಬಿಕ್ಕಿ ಅಳ ತೊಡಗಿತು.

**ಅಹೋ ಮೇ ಪಶ್ಯತಾಪಾಯಮಲ್ಪಪುಣ್ಯಸ್ಯ ದುರ್ಮತೇಃ ।**
**ಅತೃಪ್ತಸ್ಯಾಕೃತಾರ್ಥಸ್ಯ ಗೃಹಸ್ತ್ರೈವರ್ಗಿಕೋ ಹತಃ ॥೬೮॥**

“ಅಯ್ಯೋ! ಅಲ್ಪ ಪುಣ್ಯನೂ ದುರ್ಮತಿಯೂ ಆದ ನನಗೆ ಒದಗಿ ಬಂದಿರುವ ಘೋರವಾದ ಈ ವಿಪತ್ತನ್ನಾದರೂ ನೋಡಿರಿ! ನಾನಿನ್ನೂ ಕಾಮೋಪಭೋಗಜೀವನದಲ್ಲಿ ತೃಪ್ತಿಯನ್ನು ಹೊಂದಿಲ್ಲ. ನನ್ನ ಆಶೆ-ಆಕಾಂಕ್ಷೆಗಳನ್ನು ಪೂರ್ಣಗೊಳಿಸಿಕೊಂಡಿರಲಿಲ್ಲ. ಇವಕ್ಕೆ ಆಶ್ರಯಭೂತ ವಾಗಿದ್ದ, ಧರ್ಮಾರ್ಥ-ಕಾಮಗಳ ನೆಲೆಯಾಗಿದ್ದ, ನನ್ನ ಗೃಹಸ್ಥಾಶ್ರಮವೇ ಹಾಳಾಗಿಹೋಯಿತು. ನಾನಿದನ್ನು ಹೇಗೆ ತಾನೇ ಸಹಿಸಿಕೊಳ್ಳಲಿ?

**ಅನುರೂಪಾನುಕೂಲಾ ಚ ಯಸ್ಯ ಮೇ ಪತಿದೇವತಾ ।**
**ಶೂನ್ಯೇ ಗೃಹೇ ಮಾಂ ಸನ್ತ್ಯಜ್ಯ ಪುತ್ರೈಃ ಸ್ವರ್ಯಾತಿ ಸಾಧುಭಿಃ ॥೬೯॥**

ಪತಿಯೇ ಪರದೈವವೆಂದು ಭಾವಿಸಿದ್ದ ನನ್ನ ಭಾರ್ಯೆಯು ನನಗೆ ಅನುರೂಪಳೂ ಅನುಕೂಲಳೂ ಆಗಿದ್ದಳು. ಅಂತಹ ನನ್ನ ಪ್ರೇಯಸಿಯು ಶೂನ್ಯವಾಗಿ ಹೋಗಿರುವ ಗೂಡಿನಲ್ಲಿ ನನ್ನೊಬ್ಬನನ್ನೇ ಬಿಟ್ಟು ಸಾಧು ಸ್ವಭಾವದ ಮರಿಗಳೊಡನೆ ಸ್ವರ್ಗಕ್ಕೆ ಹೋಗುತ್ತಿದ್ದಾಳೆ. ಅಯ್ಯೋ! ನಾನು ಈ ಹೃದಯ ವಿದ್ರಾವಕವಾದ ದುಃಖವನ್ನು ಹೇಗೆ ಸಹಿಸಿಕೊಳ್ಳಲಿ?

**ಸೋಽಹಂ ಶೂನ್ಯೇ ಗೃಹೇ ದೀನೋ ಮೃತದಾರೋ ಮೃತಪ್ರಜಃ ।**
**ಜಿಜೀವಿಷೇ ಕಿಮರ್ಥಂ ವಾ ವಿಧುರೋ ದುಃಖಜೀವಿತಃ ॥೭೦॥**

ಅಂತಹ ಅಪಾರವಾದ ದುಃಖಸಾಗರದಲ್ಲಿ ಮುಳುಗಿ ಅತಿದೀನನಾಗಿರುವ ನಾನು ಪ್ರೇಯಸಿಯನ್ನೂ ಮಕ್ಕಳನ್ನೂ ಕಳೆದುಕೊಂಡು ಶೂನ್ಯಪ್ರಾಯವಾಗಿರುವ ಗೂಡಿನಲ್ಲಿ ಹೇಗೆ ತಾನೇ ಜೀವಿಸಿರಲಿ? ವಿಧುರನೂ ದುಃಖಜೀವಿಯೂ ಆಗಿರುವ ನಾನು ಯಾವ ಸೌಭಾಗ್ಯಕ್ಕಾಗಿ ಜೀವಿಸಿರಬೇಕು? ಅವರ ಜೊತೆಯಲ್ಲೇ ನಾನೂ ಹೊರಟು ಹೋಗುತ್ತೇನೆ" ಹೀಗೆ ಅವಿವೇಕಿ ಯಾದ ಆ ಕಪೋತವು ನಿರ್ಧರಿಸಿ–ಬಲೆಯಲ್ಲಿ ಸಿಕ್ಕಿಹಾಕಿಕೊಂಡು, ಸಾವಿನ ದವಡೆಗೆ ಸಿಲುಕಿ ಪತ್ನೀ-ಪುತ್ರರು ಒದ್ದಾಡುತ್ತಿರುವುದನ್ನು ನೋಡುತ್ತಿ ದ್ದರೂ–ತಾನೂ ಹೋಗಿ ಬೇಡನ ಆ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿತು.

ಬೇಡರವನಿಗೆ ಅದೃಷ್ಟವು ಕುಲಾಯಿಸಿತ್ತು. ವಿಶೇಷವಾದ ಪ್ರಯತ್ನವೇ ಇಲ್ಲದೆ, ಕ್ರೂರಿಯಾಗಿದ್ದ ಆ ಬೇಡನು ಗೃಹಸ್ಥಧರ್ಮದಲ್ಲಿದ್ದ ಕಪೋತವನ್ನೂ, ಕಪೋತಿಯನ್ನೂ, ಮರಿಹಕ್ಕಿಗಳನ್ನೂ ಬಲೆಯಿಂದ ಬಿಡಿಸಿಕೊಂಡು ಕೃತಕೃತ್ಯನಾಗಿ ಆನಂದದಿಂದ ಮನೆಗೆ ತೆರಳಿದನು.

**ಏವಂ ಕುಟುಂಬ್ಯಶಾನ್ತಾತ್ಮಾ ದ್ವನ್ದ್ವಾರಾಮಃ ಪತತ್ರಿವತ್ ।**
**ಪುಷ್ಣನ್ ಕುಟುಮ್ಬಂ ಕೃಪಣಃ ಸಾನುಬನ್ಧೋಽವಸೀದತಿ ॥೭೩॥**

ಯದುಮಹಾರಾಜ! ಹೀಗೆ, ಕಪೋತಪಕ್ಷಿಯಂತೆ ಸಂಸಾರವನ್ನೇ ಪರಮಾಶ್ರಯವನ್ನಾಗಿ ಭಾವಿಸಿ ಸುಖ-ದುಃಖಗಳೆಂಬ ದ್ವಂದ್ವಗಳಲ್ಲಿಯೇ ಮುಳುಗಿ-ಏಳುತ್ತಿರುವ, ಅಶಾಂತವಾದ ಮನಸ್ಸಿನಿಂದ ಕೂಡಿರುವ ಗೃಹಸ್ಥರು ಕಪೋತ ಪಕ್ಷಿಯಂತೆ ಕೇವಲ ಕುಟುಂಬರಕ್ಷಣೆಯಲ್ಲಿಯೇ ಆಸಕ್ತರಾಗಿರುತ್ತಾ ಮುಕ್ತಿಯ ಮಾರ್ಗವನ್ನು ಕಾಣದೆ ಪರಿವಾರಸಮೇತರಾಗಿ ಹಾಳಾಗಿ ಹೋಗುತ್ತಾರೆ.

**ಯಃ ಪ್ರಾಪ್ಯ ಮಾನುಷಂ ಲೋಕಂ ಮುಕ್ತಿದ್ವಾರಮಪಾವೃತಮ್ ।**
**ಗೃಹೇಷು ಖಗವತ್ ಸಕ್ತಸ್ತಮಾರೂಢಚ್ಯುತಂ ವಿದುಃ ॥೭೪॥**

ಯದುಶ್ರೇಷ್ಠನೇ! ಮಾನವಲೋಕವೇ ಅಥವಾ ಮನುಷ್ಯಜನ್ಮವೇ

ಮುಕ್ತಿಗೆ ತೆರೆದಿಟ್ಟ ಬಾಗಿಲಿನಂತಿದೆ. ಮನುಷ್ಯಜನ್ಮವು ದೊರಕಿರುವುದು ಮುಕ್ತಿಯನ್ನು ಸಾಧಿಸುವುದಕ್ಕಾಗಿಯೇ. ಅದಕ್ಕೆ ಮುಕ್ತಿಸಾಧನೆಯ ಹೊರತಾಗಿ ಬೇರೆ ಯಾವ ಪ್ರಯೋಜನವೂ ಇಲ್ಲ. ಅಂತಹ ಸರ್ವಶ್ರೇಷ್ಠವಾದ ಮನುಷ್ಯಜನ್ಮವನ್ನು ಪಡೆದನಂತರವೂ ಮನುಷ್ಯನು–ಕಥೆಯಲ್ಲಿ ಹೇಳಿದ ಕಪೋತಪಕ್ಷಿಯಂತೆ ಸಂಸಾರದಲ್ಲಿಯೇ ಆಸಕ್ತನಾಗಿದ್ದರೆ ಅಂತಹವನನ್ನು ಆರೂಢಚ್ಯುತ (ಮೇಲೇರಿ ಕೆಳಕ್ಕೆ ಬಿದ್ದವನು)–ಎಂದು ವಿದ್ವಾಂಸರು ತಿಳಿಯುತ್ತಾರೆ.

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ಏಕಾದಶಸ್ಕಂಧದ ೭ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೮ನೆಯ ಅಧ್ಯಾಯ

## ಅವಧೂತೋಪಾಖ್ಯಾನ

## ಹೆಬ್ಬಾವಿನಿಂದ ಪಿಂಗಳಾ ಎಂಬ ವೇಶ್ಯೆಯವರೆಗಿನ ಒಂಭತ್ತು ಗುರುಗಳಿಂದ ಕಲಿಯಬೇಕಾದ ಪಾಠಗಳು

ಅವಧೂತರಾದ ದತ್ತಾತ್ರೇಯರು ಹೇಳುತ್ತಾರೆ :

**ಸುಖಮೈನ್ದ್ರಿಯಕಂ ರಾಜನ್ ಸ್ವರ್ಗೇ ನರಕ ಏವ ಚ ।**
**ದೇಹಿನಾಂ ಯದ್ಯಥಾ ದುಃಖಂ ತಸ್ಮಾನ್ನೇಚ್ಛೇತ ತದ್ಬುಧಃ ॥೧॥**

"ಮಹಾರಾಜ! ಇಂದ್ರಿಯಗಳಿಂದ ದೊರೆಯುವ ಸುಖವು ದುಃಖದಂತೆಯೇ ಪ್ರಾಣಿಗಳಿಗೆ ಅವುಗಳ ಪ್ರಾರಬ್ಧಕರ್ಮಕ್ಕೆ ಅನುಸಾರವಾಗಿ ಸ್ವರ್ಗದಲ್ಲಾಗಲೀ, ನರಕದಲ್ಲಾಗಲೀ ಲಭಿಸಿಯೇ ಲಭಿಸುತ್ತದೆ. ಆದುದರಿಂದ ಅಂತಹ ನಶ್ವರವಾದ ಇಂದ್ರಿಯಸುಖವನ್ನು ವಿದ್ವಾಂಸನಾದ ಮನುಷ್ಯನು ಬಯಸಬಾರದು.

**ಗ್ರಾಸಂ ಸುಮೃಷ್ಟಂ ವಿರಸಂ ಮಹಾನ್ತಂ ಸ್ತೋಕಮೇವ ವಾ ।**
**ಯದೃಚ್ಛಯೈವಾಪತಿತಂ ಗ್ರಸೇದಾಜಗರೋಽಕ್ರಿಯಃ ॥೨॥**

ಆಹಾರಕ್ಕಾಗಿ ಯಾವುದೇ ಪ್ರಯತ್ನವನ್ನೂ ಮಾಡದೇ ಆಜಗರವ್ರತದಲ್ಲಿರತಕ್ಕವನು ಆಹಾರವು ರಸವತ್ತಾಗಿರಲೀ, ರಸಹೀನವಾಗಿರಲೀ ; ಹೆಚ್ಚಾಗಿರಲೀ, ಕಡಿಮೆಯಾಗಿರಲೀ, ಯಾವುದನ್ನೂ ವಿವೇಚಿಸದೆ ದೊರೆತುದನ್ನು ದೊರೆತಾಗ ತಿನ್ನುತ್ತಾ ಜೀವನನಿರ್ವಹಣೆಮಾಡಬೇಕು.*

**ಶಯೀತಾಹಾನಿ ಭೂರೀಣಿ ನಿರಾಹಾರೋಽನುಪಕ್ರಮಃ ।**
**ಯದಿ ನೋಪನಮೇದ್ಗ್ರಾಸೋ ಮಹಾಹಿರಿವ ದಿಷ್ಟಭುಕ್ ॥೩॥**

ಆಜಗರವ್ರತಿಯಾಗಿ ಕುಳಿತಾಗ ಆಹಾರವು ಸಿಕ್ಕದೆಯೇ ಇದ್ದರೆ ಪ್ರಾರಬ್ಧಕರ್ಮವೆಂದು ಭಾವಿಸಿ ಹೆಬ್ಬಾವಿನಂತೆ ಹಲವಾರು ದಿವಸಗಳವರೆಗೆ ಅದಕ್ಕಾಗಿ ಪ್ರಯತ್ನಿಸಹೋಗದೆ ನಿರಾಹಾರನಾಗಿಯೇ ಮಲಗಿರಬೇಕಾಗುವುದು.

**ಓಜಃಸಹೋಬಲಯುತಂ ಬಿಭ್ರದ್ದೇಹಮಕರ್ಮಕಮ್ ।**
**ಶಯಾನೋ ವೀತನಿದ್ರಶ್ಚ ನೇಹೇತೇನ್ದ್ರಿಯವಾನಪಿ ॥೪॥**

ಆಜಗರವ್ರತಿಯು ಮನೋಬಲ, ಇಂದ್ರಿಯಬಲ ಮತ್ತು ದೇಹಬಲಗಳಿಂದ ಸಂಪನ್ನನಾಗಿದ್ದರೂ ನಿಶ್ಚೇಷ್ಟನಾಗಿರಬೇಕು. ನಿದ್ರೆಯು ಬಾರದಿದ್ದರೂ ಮಲಗಿರಬೇಕು. ದೃಢವಾದ ಕರ್ಮೇಂದ್ರಿಯಗಳನ್ನು ಹೊಂದಿದ್ದರೂ ಯಾವ ಕರ್ಮವನ್ನೂ ಮಾಡಲಾಗದು. ಹೆಬ್ಬಾವು ಹೀಗೆಯೇ ತನ್ನ ಜೀವನವನ್ನು ಕಳೆಯುತ್ತದೆ. ಹೆಬ್ಬಾವಿನಿಂದ ನಾನು ಈ ವ್ರತದ ತತ್ತ್ವವನ್ನು ಅರಿತುಕೊಂಡೆನು.

---

* ಆಜಗರವ್ರತ : ಹೆಬ್ಬಾವಿನಂತೆ ಜೀವನವನ್ನು ನಿರ್ವಹಿಸುವುದು. ಹೆಬ್ಬಾವು ಕಾಡಿನ ಒಂದೆಡೆಯಲ್ಲಿ ಮಲಗಿರುತ್ತದೆ. ಅದು ಆಹಾರಕ್ಕಾಗಿ ಎಲ್ಲಿಯೂ ಅಲೆದಾಡಲು ಹೋಗುವುದಿಲ್ಲ. ಇದೇ ಸಮಯದಲ್ಲಿ ಆಹಾರವುಬೇಕೆಂಬ ಬಯಕೆಯು ಅದಕ್ಕಿಲ್ಲ. ಆಹಾರವು ತಾನೇ ತಾನಾಗಿ ಅದಕ್ಕೆ ಸಿಕ್ಕಬೇಕು. ಅದಕ್ಕೆ ಆಹಾರ ವಾಗಲೆಂದೇ ಪ್ರಾಣಿಗಳು ಅದರ ಬಳಿಗೆ ದೈವೇಚ್ಛೆಯಿಂದ ತಾನಾಗಿಯೇ ಬರಬೇಕು. ಹಾಗೆ ಬಂದಾಗ ಮಾತ್ರ ಹೆಬ್ಬಾವು ಹಾಗೆ ತಾನೇ ತಾನಾಗಿ ದೊರೆತ ಪ್ರಾಣಿಗಳನ್ನು ತಿಂದು ಜೀವನವನ್ನು ನಿರ್ವಹಿಸುತ್ತದೆ. ಇದನ್ನೇ ಅನುಸರಿಸಿ ವ್ರತವನ್ನು ಕೈಗೊಳ್ಳುವುದಕ್ಕೆ ಆಜಗರವ್ರತವೆಂದು ಹೆಸರು. ಕಷ್ಟಸಾಧ್ಯವಾದ ವ್ರತವಿದು. ಈ ವ್ರತಾಚರಣೆಗೆ ದೃಢವಾದ ಆತ್ಮವಿಶ್ವಾಸವಿರಬೇಕು.

**ಮುನಿಃ ಪ್ರಸನ್ನಗಮ್ಭೀರೋ ದುರ್ವಿಗಾಹ್ಯೋ ದುರತ್ಯಯಃ ।**
**ಅನನ್ತಪಾರೋ ಹ್ಯಕ್ಷೋಭ್ಯಃ ಸ್ತಿಮಿತೋದ ಇವಾರ್ಣವಃ ॥೫॥**

ಸಮುದ್ರದಿಂದ ಸಾಧಕನು ಕಲಿಯಬೇಕಾದ ಪಾಠವಿದು :

ಮುನಿಯಾದವನು ನಿಶ್ಚಲವಾದ ನೀರುಳ್ಳ ಸಮುದ್ರದಂತೆ ಪ್ರಸನ್ನತೆಯಿಂದಲೂ ಗಾಂಭೀರ್ಯದಿಂದಲೂ ಇರಬೇಕು. ಯಾರಿಗೂ ಆತನ ಮನಸ್ಸಿನ ಭಾವವು ತಿಳಿಯಬಾರದು. ಅವನನ್ನು ಅತಿಕ್ರಮಿಸಿ ಹೋಗಲು ಅಥವಾ ಅವನನ್ನು ಅನಾದರಣೆಮಾಡಲು ಯಾರಿಗೂ ಸಾಧ್ಯವಾಗಬಾರದು. ದುರ್ಜ್ಞೇಯನೂ ಅನತಿಕ್ರಮಣೀಯನೂ ಆಗಿರಬೇಕು. ಅನಂತವಾದ ಕಡಲಿನಂತೆ ಪಾರವುಳ್ಳವನೂ ವಿಕಾರವಿಲ್ಲದವನೂ ಆಗಿರಬೇಕು.

**ಸಮೃದ್ಧ ಕಾಮೋ ಹೀನೋ ವಾ ನಾರಾಯಣಪರೋ ಮುನಿಃ ।**
**ನೋತ್ಸರ್ಪೇತ ನ ಶುಷ್ಯೇತ ಸರಿದ್ಭಿರಿವ ಸಾಗರಃ ॥೬॥**

ನಾರಾಯಣನನ್ನೇ ಪರಮಾಶ್ರಯನನ್ನಾಗಿ ಪಡೆದುಕೊಂಡಿರುವ ಸಾಧಕನು ಸಿರಿವಂತನಾಗಿ ಇಷ್ಟಾರ್ಥಸಿದ್ಧಿಯು ತುಂಬಿ ತುಳುಕಾಡುತ್ತಿದ್ದರೆ ಆಗ ಹಿಗ್ಗಲೂಬಾರದು : ದರಿದ್ರನಾಗಿದ್ದರೆ ಕುಗ್ಗಲೂಬಾರದು. ಸಮುದ್ರದಂತಿರಬೇಕು. ವರ್ಷಾಕಾಲದಲ್ಲಿ ನದಿಗಳು ತುಂಬಿಹರಿದು ಸತತವಾಗಿ ತನ್ನನ್ನು ತುಂಬುತ್ತಿದ್ದರೂ ಸಮುದ್ರರಾಜನು ಎಲ್ಲೆ ಮೀರಿ ಮೇಲಕ್ಕೆ ಬಂದುಬಿಡುವುದಿಲ್ಲ. ಗ್ರೀಷ್ಮಋತುವಿನಲ್ಲಿ ನದಿಗಳು ಬತ್ತಿಹೋಗಿ ತನ್ನನ್ನು ತುಂಬಿಸಲಾಗದಿದ್ದರೂ ಬತ್ತಿಹೋಗುವುದಿಲ್ಲ. ಅದರಂತೆಯೇ ಸಾಧಕನು ಕುಗ್ಗಲೂಬಾರದು ಹಿಗ್ಗಲೂಬಾರದು. ಸಮಚಿತ್ತನಾಗಿರಬೇಕು.

**ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ ತದ್ಭಾವೈರಜಿತೇನ್ದ್ರಿಯಃ ।**
**ಪ್ರಲೋಭಿತಃ ಪತತ್ಯನ್ಧೇ ತಮಸ್ಯಗ್ನೌ ಪತಙ್ಗವತ್ ॥೭॥**

ಮಿಣುಕು ಹುಳುವಿನಿಂದ ಕಲಿಯಬೇಕಾದ ಪಾಠವಿದು :

ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳದೆ ಅವುಗಳಿಗೆ ದಾಸನಾಗಿರುವ ಮೂಢನು ದೇವಮಾಯೆಯಿಂದ ನಿರ್ಮಿಸಲ್ಪಟ್ಟಿರುವ ಸ್ತ್ರೀಯನ್ನು ನೋಡಿ ಅವಳ ಹಾವ-ಭಾವಗಳಿಂದ ಆಕರ್ಷಿತನಾಗಿ ಅವಳಲ್ಲಿಯೇ

ಅನುರಕ್ತನಾಗಿ, ಮುಕ್ತಿದಾಯಕವಾದ ಯಾವ ಕಾರ್ಯವನ್ನೂ ಮಾಡದೆ, ಕಟ್ಟಕಡೆಗೆ ಬೆಂಕಿಯಿಂದ ಆಕರ್ಷಿಸಲ್ಪಟ್ಟ ಮಿಣುಕುಹುಳುವು ತಾನಾಗಿಯೇ ಬೆಂಕಿಗೆ ಹೋಗಿಬೀಳುವಂತೆ ಅಂಧತಮಸ್ಸಿನಲ್ಲಿ ಬಿದ್ದುಬಿಡುತ್ತಾನೆ. ತನ್ನ ಶರೀರವು ನಾಶವಾಗಿ ಹೋಗುವುದೆಂಬುದನ್ನೂ ವಿವೇಚಿಸದೆ ದೀಪದ ಹುಳುವು ದೀಪವನ್ನು ಮುತ್ತಿಡಲು ಹೋಗಿ ಅವಸಾನ ಹೊಂದುತ್ತದೆಯಷ್ಟೇ.

**ಯೋಷಿದ್ಧಿರಣ್ಯಾಭರಣಾಮ್ಬರಾದಿ-**
**ದ್ರವ್ಯೇಷು ಮಾಯಾರಚಿತೇಷು ಮೂಢಃ ।**
**ಪ್ರಲೋಭಿತಾತ್ಮಾ ಹ್ಯುಪಭೋಗ ಬುದ್ಧ್ಯಾ**
**ಪತಙ್ಗವನ್ನಶ್ಯತಿ ನಷ್ಟದೃಷ್ಟಿಃ ॥೮॥**

ಮನುಷ್ಯನನ್ನು ವಿಮೋಹಗೊಳಿಸಲೆಂದೇ ವಿಷ್ಣುಮಾಯೆಯಿಂದ ರಚಿಸಲ್ಪಟ್ಟಿರುವ ಹೆಣ್ಣು, ಹೊನ್ನು-ಒಡವೆ-ವಸ್ತ್ರ–ಇವೇ ಮೊದಲಾದುವುಗಳಿಂದ ಅವುಗಳನ್ನು ಉಪಭೋಗಿಸುವ ಆಶಯದಿಂದ ಸೆಳೆಯಲ್ಪಟ್ಟವ ನಾಗಿ ಮೂಢನಾದವನು ವಿವೇಕವೆಂಬ ದೃಷ್ಟಿಯನ್ನು ಕಳೆದುಕೊಂಡು ದೀಪದಿಂದ ಆಕರ್ಷಿತವಾದ ಮಿಣುಕುಹುಳುವಿನಂತೆ ವಿನಾಶಹೊಂದು ತ್ತಾನೆ.

**ಸ್ತೋಕಂ ಸ್ತೋಕಂ ಗ್ರಸೇದ್ಗ್ರಾಸಂ ದೇಹೋ ವರ್ತೇತ ಯಾವತಾ ।**
**ಗೃಹಾನಹಿಂಸನ್ನಾತಿಷ್ಠೇದ್ವೃತ್ತಿಂ ಮಾಧುಕರೀಂ ಮುನಿಃ ॥೯॥**

ಶರೀರವು ಎಷ್ಟು ಆಹಾರವನ್ನು ತೆಗೆದುಕೊಳ್ಳುವುದರಿಂದ ಜೀವಂತವಾಗಿ ಉಳಿಯುತ್ತದೆಯೋ ಅಷ್ಟೇ ಆಹಾರವನ್ನು ಮುನಿಯಾದವನು ಸಂಗ್ರಹಿಸಬೇಕು. ಆಹಾರವನ್ನು ಸಂಗ್ರಹಿಸುವಾಗಲೂ ಮಾಧುಕರೀವೃತ್ತಿಯನ್ನು ಅನುಸರಿಸಬೇಕು. ಗೃಹಸ್ಥರಾದವರಿಗೆ ಸ್ವಲ್ಪವೂ ತೊಂದರೆಯಾಗದಂತೆ ಮುನಿಯಾದವನು ಶರೀರಧಾರಣೆಗೆ ಅನಿವಾರ್ಯವಾದಷ್ಟು ಆಹಾರವನ್ನು ಏಳು ಮನೆಗಳಿಂದ ಸಂಗ್ರಹಿಸಿ ತಂದು ಭುಂಜಿಸಬೇಕು. ಮಾಧೂಕರೀ ವೃತ್ತಿಯನ್ನು ಜೇನುಹುಳುವಿನಿಂದ ಕಲಿಯಬೇಕಾಗಿದೆ.*

---

* ಮಾಧೂಕರೀವೃತ್ತಿ: ಜೇನುಹುಳುವು ಪುಷ್ಪದಿಂದ ಪುಷ್ಪಕ್ಕೆ ಹಾರುತ್ತಾ ಪುಷ್ಪಕ್ಕೆ

**ಅಣುಭ್ಯಶ್ಚ ಮಹದ್ಭ್ಯಶ್ಚ ಶಾಸ್ತ್ರೇಭ್ಯಃ ಕುಶಲೋ ನರಃ ।**
**ಸರ್ವತಃ ಸಾರಮಾದದ್ಯಾತ್ ಪುಷ್ಪೇಭ್ಯ ಇವ ಷಟ್ಪದಃ ॥೧೦॥**

ನಾನಾಪ್ರಕಾರವಾದ ಚಿಕ್ಕ ಮತ್ತು ದೊಡ್ಡ ಪುಷ್ಪಗಳಿಂದಲೂ ದುಂಬಿಯು ಪುಷ್ಪರಸವನ್ನು ಸಂಗ್ರಹಿಸುವಂತೆ ಬುದ್ಧಿವಂತನಾದ ಮನುಷ್ಯನು ಸಣ್ಣದಾದ ಮತ್ತು ಮಹತ್ತಾದ ಶಾಸ್ತ್ರಗಳಿಂದಲೂ ಸಾರಭಾಗಗಳನ್ನು ಸಂಗ್ರಹಿಸಿಕೊಳ್ಳಬೇಕು.

**ಸಾಯನ್ತನಂ ಶ್ವಸ್ತನಂ ವಾ ನ ಸಙ್ಗೃಹ್ಣೀತ ಭಿಕ್ಷಿತಮ್ ।**
**ಪಾಣಿಪಾತ್ರೋದರಾಮತ್ರೋ ಮಕ್ಷಿಕೇವ ನ ಸಙ್ಗ್ರಹೀ ॥೧೧॥**

ಜೇನುಹುಳುವಿನಿಂದ ಕಲಿಯಬೇಕಾದ ಮತ್ತೊಂದು ಪಾಠ :

ಮುನಿಯಾದವನು ಸಾಯಂಕಾಲಕ್ಕೆಂದಾಗಲೀ, ನಾಳೆಗೆಂದಾಗಲೀ ಜೇನುಹುಳುವಿನಂತೆ ಅನ್ನವನ್ನು ಸಂಗ್ರಹಿಸಿ ಇಡಬಾರದು. ಯಾವ ಪಾತ್ರೆಯೂ ಕೂಡ ಅವನಲ್ಲಿರಬಾರದು. ಬೊಗಸೆಯೇ ಅನ್ನವನ್ನು ಸಂಗ್ರಹಿ ಸುವ ಪಾತ್ರೆಯಾಗಿರಬೇಕು. ಹೊಟ್ಟೆಯೇ ಕೂಡಿಡುವ ಕಣಜವಾಗಿರ ಬೇಕು. ಹೊಟ್ಟೆ ತುಂಬುವಷ್ಟು ಆಹಾರವನ್ನೇ ಮುನಿಯು ಸತ್ಪುರುಷರ ಮನೆಯಿಂದ ತರಬೇಕು.

**ಸಾಯನ್ತನಂ ಶ್ವಸ್ತನಂ ವಾ ನ ಸಙ್ಗೃಹ್ಣೀತ ಭಿಕ್ಷುಕಃ ।**
**ಮಕ್ಷಿಕಾ ಇವ ಸಙ್ಗೃಹ್ಣನ್ ಸಹ ತೇನ ವಿನಶ್ಯತಿ ॥೧೨॥**

ಸಾಯಂಕಾಲಕ್ಕೆಂದಾಗಲೀ, ನಾಳೆಗೆಂದಾಗಲೀ ಭಿಕ್ಷುವಾದವನು ಆಹಾರವನ್ನು ಸಂಗ್ರಹಿಸಿ ಇಡಬಾರದು. ಜೇನು ಹುಳುವು ಹಲವಾರು ಪುಷ್ಪ

---

ಸ್ವಲ್ಪವೂ ಘಾಸಿಯಾಗದಂತೆ ಒಂದೊಂದೇ ತೊಟ್ಟು ಹೂವಿನ ರಸವನ್ನು ಸಂಗ್ರಹಿಸಿಗೂಡನ್ನು ಕಟ್ಟಿ ಜೇನುತುಪ್ಪವನ್ನು ಸಿದ್ಧಗೊಳಿಸುತ್ತದೆ. ಸಾಧಕನೂ ಹಾಗೆಯೇ ಗೃಹಸ್ಥನಿಗೆ ತೊಂದರೆಯಾಗದಂತೆ ಒಂದು ಮನೆಯಿಂದ ಒಂದೊಂದೇ ತುತ್ತನ್ನು ಸಂಗ್ರಹಿಸಿ ಭುಂಜಿಸಬೇಕು. ಇದಕ್ಕೆ ಮಾಧೂಕರೀ ವೃತ್ತಿಯೆಂದು ಹೆಸರು. ಜೇನುಹುಳುಗಳಲ್ಲಿ ಎರಡು ಜಾತಿ. ಪುಷ್ಪಗಳಿಂದ ರಸವನ್ನು ಸಂಗ್ರಹಿಸಿ ಕೂಡಿಡುವುದು ಮಧುಕರ. ತಯಾರಿಸಿದ ಮಧುವನ್ನೇ ಕುಡಿದು ಜೀವಿಸುವುದು ಮಧುಮಕ್ಷಿಕಾ.

(ಭಾರತದೀಪಿಕಾ)

ಗಳಿಂದ ಪುಷ್ಪರಸವನ್ನು ಸಂಗ್ರಹಿಸಿ ಕೂಡಿಡುವಂತೆ ಭಿಕ್ಷುವು ಆಹಾರವನ್ನು ಸಂಗ್ರಹಿಸಿಡಲು ಪ್ರಾರಂಭಿಸಿದರೆ ಜೇನುಹುಳುವಿನಂತೆಯೇ ಆಹಾರ ಸಮೇತ ನಾಗಿ ಆತನು ಹಾಳಾಗುತ್ತಾನೆ. ಜೇನುಬಿಡಿಸುವವನು ಜೇನುಹುಳುಗಳನ್ನು ನಾಶಗೊಳಿಸಿಯೇ ಜೇನುತುಪ್ಪವನ್ನು ತೆಗೆದುಕೊಳ್ಳುತ್ತಾನೆ. ಆದುದರಿಂದ ಭಿಕ್ಷುವು ತನಗೆ ಆ ಒಪ್ಪತ್ತಿಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರವೇ ಸಂಗ್ರಹಿಸಬೇಕು.*

**ಪದಾಪಿ ಯುವತೀಂ ಭಿಕ್ಷುರ್ನ ಸ್ಪೃಶೇದ್ದಾರವೀಮಪಿ ।**
**ಸ್ಪೃಶನ್ಕರೀವ ಬಧ್ಯೇತ ಕರಿಣ್ಯಾ ಅಙ್ಗಸಙ್ಗತಃ ॥೧೩॥**

ಆನೆಯಿಂದ ಕಲಿಯಬೇಕಾದ ಪಾಠವಿದು :

ಮರದಿಂದ ಮಾಡಿದ ಹೆಣ್ಣುಗೊಂಬೆಯನ್ನು ಕೂಡ ಭಿಕ್ಷುವಾದವನು ಕಾಲಿನಿಂದಲೂ ಮುಟ್ಟಬಾರದು. ಹಾಗೇನಾದರೂ ಸ್ಪರ್ಶಿಸಲು ಹೋದರೆ ಮರದಿಂದ ಮಾಡಿದ ಹೆಣ್ಣಾನೆಯ ಅಂಗಸಂಗವನ್ನು ಬಯಸಿ ಹಳ್ಳದಲ್ಲಿ ಬೀಳುವ ಸಲಗದಂತೆ ಸಂನ್ಯಾಸಿಯು ಸಂಸಾರವೆಂಬ ಮಾಯಾಪಾಶದಿಂದ ಬಂಧಿಸಲ್ಪಡುತ್ತಾನೆ.[1]

---

* ದುಂಬಿಯು ಎರಡು ವಿಧ : ಪುಷ್ಪರಸವನ್ನು ಕುಡಿದು ಜೇನುಗೂಡನ್ನು ಕಟ್ಟದೇ ಇರುವುದು ಒಂದು ಜಾತಿ. ಪುಷ್ಪರಸವನ್ನು ಸಂಗ್ರಹಿಸಿ ಜೇನುಗೂಡನ್ನು ಕಟ್ಟುವ ಜಾತಿ ಇನ್ನೊಂದು. ಮೊದಲನೆಯದು ಕಮಲದಲ್ಲಿರುವ ಪುಷ್ಪರಸವನ್ನು ಹೀರಿಕೊಳ್ಳುತ್ತಾ ಮೈಮರೆಯುತ್ತದೆ. ಸಾಯಂಕಾಲವಾಗುತ್ತಲೇ ಕಮಲವು ಮುಚ್ಚಿಕೊಂಡು ದುಂಬಿಯು ವಿನಾಶಹೊಂದುತ್ತದೆ. ಎರಡನೆಯದು ಜೇನು ಗೂಡನ್ನು ಕಟ್ಟಲು ಹೋಗಿ ಜೇನು ಬಿಡಿಸುವವರ ಕೈಗೆ ಸಿಕ್ಕಿ ವಿನಾಶಹೊಂದುತ್ತದೆ. ಸಂಗ್ರಹಕ್ಕಾಗಿ ಅಥವಾ ಆಮೋದಕ್ಕಾಗಿ ಹೊರಟ ಎರಡೂ ಬಗೆಯ ಜೇನುಹುಳುಗಳೂ ವಿನಾಶಹೊಂದುತ್ತವೆ. ನೀತಿ; ಕೂಡಿಡಲೂ ಬಾರದು ; ಅಪೇಕ್ಷೆಗಿಂತ ಹೆಚ್ಚಾಗಿ ಸಂಗ್ರಹಿ ಸಲೂಬಾರದು.

---

1 ಕಾಡಾನೆಗಳನ್ನು ಹಿಡಿಯಲು ಮಾಡಿದ ಕಂದಕಕ್ಕೆ ಖೆಡ್ಡಾ ಎಂದು ಹೆಸರು. ಕಂದಕವನ್ನು ಆಳವಾಗಿ ತೆಗೆದು ಅದನ್ನು ಬಿದಿರು ಮೆಳೆಗಳಿಂದ ಮುಚ್ಚಿ ಅದರ ಮೇಲೆ ಹುಲ್ಲು ಬೆಳೆಸಿ ಹುಲ್ಲಿನ ನಡುನಡುವೆ ಮರದಿಂದ ಮಾಡಿದ ಹೆಣ್ಣಾನೆಗಳನ್ನು ನಿಲ್ಲಿಸಿರುತ್ತಾರೆ. ಅವುಗಳನ್ನು ದೂರದಿಂದ ನೋಡಿದ ಕಾಡಾನೆಗಳು ಮರದ ಆನೆ

**ನಾಧಿಗಚ್ಛೇತ್ ಸ್ತ್ರಿಯಂ ಪ್ರಾಜ್ಞಃ ಕರ್ಹಿಚಿನ್ಮೃತ್ಯುಮಾತ್ಮನಃ ।**
**ಬಲಾಧಿಕೈಃ ಸ ಹನ್ಯೇತ ಗಜೈರನ್ಯೈರ್ಗಜೋ ಯಥಾ ॥೧೪॥**

ಬುದ್ಧಿವಂತನಾದ ಸಂನ್ಯಾಸಿಯು ಹೆಂಗಸರ ಸಂಸರ್ಗವನ್ನೇ ಮಾಡ ಬಾರದು. ಯಾವಾಗಲಾದರೂ ಸ್ತ್ರೀಯು ಮೃತ್ಯುರೂಪಳಾಗಬಹುದೆಂಬುದನ್ನು ಸಂನ್ಯಾಸಿಯು ಮನಗಾಣಬೇಕು. ಹೆಣ್ಣಾನೆಗಾಗಿ ಎರಡು ಸಲಗಗಳು ಕದನವಾಡುತ್ತಾ ಅಧಿಕ ಬಲವಿರುವ ಸಲಗವು ಅಲ್ಪ ಬಲವಿರುವ ಸಲಗ ವನ್ನು ಕೆಲವೊಮ್ಮೆ ಕೊಂದೇ ಹಾಕುತ್ತದೆ. ಹೆಣ್ಣಾನೆಯು ಅಲ್ಪ ಬಲವಿರುವ ಸಲಗಕ್ಕೆ ಮೃತ್ಯುಪ್ರಾಯವಾಗುತ್ತದೆ. ಈ ಉದಾಹರಣೆಯನ್ನು ಮನನ ಮಾಡಿಕೊಂಡು ಪ್ರಾಜ್ಞನಾದವನು ಸ್ತ್ರೀಯರ ಸಂಸರ್ಗವನ್ನೇ ಮಾಡ ಬಾರದು.

**ನ ದೇಯಂ ನೋಪಭೋಗ್ಯಂ ಚ ಲುಬ್ಧೈರ್ಯದ್ದುಃಖಸಞ್ಚಿತಮ್ ।**
**ಭುಙ್ಕ್ತೇತದಪಿ ತಚ್ಚಾನ್ಯೋ ಮಧುಹೇವಾರ್ಥವಿನ್ಮಧು ॥೧೫॥**

ಜೇನುಗೂಡು ಬಿಡಿಸುವವನಿಂದ ಕಲಿಯುವ ಪಾಠ :

ಪ್ರಪಂಚದಲ್ಲಿ ಲೋಭಿಗಳು ಬಹಳ ಕಷ್ಟಪಟ್ಟು ಹಣವನ್ನು ಸಂಪಾದಿಸುತ್ತಾರೆ. ಹಾಗೆ ಸಂಪಾದಿಸಿದ ಧನವನ್ನು ಅವರು ಯಾರಿಗೂ ದಾನ ಮಾಡುವುದಿಲ್ಲ. ತಾವೂ ಉಪಭೋಗಿಸುವುದೂ ಇಲ್ಲ. ಹಲವಾರು ಪುಷ್ಪ ಗಳಿಂದ ಪುಷ್ಪರಸವನ್ನು ತಂದು ಕೂಡಿಟ್ಟು ಕಟ್ಟಿದ ಜೇನುಗೂಡನ್ನು ಜೇನು ಬಿಡಿಸುವವನು ಕ್ಷಣಮಾತ್ರದಲ್ಲಿ ಗೂಡನ್ನೂ ಹುಳುಗಳನ್ನೂ ಧ್ವಂಸಮಾಡಿ ತುಪ್ಪವನ್ನು ಅಪಹರಿಸಿಕೊಂಡು ಹೋಗುವಂತೆ ಲೋಭಿಗಳು ಕೂಡಿಟ್ಟುದನ್ನು ಬೇರೆಯವರು ಉಪಭೋಗಿಸುತ್ತಾರೆ.

**ಸುದುಃಖೋಪಾರ್ಜಿತೈರ್ವಿತ್ತೈರಾಶಾಸಾನಾಂ ಗೃಹಾಶಿಷಃ ।**
**ಮಧುಹೇವಾಗ್ರತೋ ಭುಙ್ಕ್ತೇ ಯತಿರ್ವೈ ಗೃಹಮೇಧಿನಾಮ್ ॥೧೬॥**

---

ಗಳನ್ನು ನಿಜವಾದ ಆನೆಗಳೆಂದೇ ಭ್ರಮಿಸಿ ಬಂದು ಹಳ್ಳಕ್ಕೆ ಬೀಳುತ್ತವೆ. ಅನಂತರ ಅದನ್ನು ಎಂಟು-ಹತ್ತು ದಿವಸಗಳವರೆಗೆ ಆಹಾರ ಕೊಡದೆ ಆಯಾಸಗೊಳಿಸಿ ಪಳಗಿದ ಆನೆಗಳ ಮೂಲಕವಾಗಿ ಹಿಡಿಯುತ್ತಾರೆ. ಈ ಕಾರಣದಿಂದಲೇ ಸಂನ್ಯಾಸಿಯು ಮರದಿಂದ ಮಾಡಿದ ಹೆಣ್ಣುಗೊಂಬೆಯನ್ನೂ ಕಾಲಿನಿಂದಲೂ ಕೂಡ ಮುಟ್ಟಬಾರದೆಂದು ಹೇಳಿದೆ.

ಜೇನುಹುಳುಗಳು ಬಹಳ ಕಷ್ಟಪಟ್ಟು ಸಂಗ್ರಹಿಸಿದ ಜೇನುತುಪ್ಪವನ್ನು ಜೇನುಗೂಡು ಬಿಡಿಸುವವನು ಹುಳುಗಳು ತಿನ್ನುವ ಮೊದಲೇ ತಿಂದು ಹಾಕಿಬಿಡುವಂತೆ ಗೃಹಸ್ಥರು ಬಹಳ ಕಷ್ಟಪಟ್ಟು ಹಣವನ್ನು ಸಂಪಾದಿಸಿದರೂ ಕುಟುಂಬಕ್ಕೆ ಸೌಖ್ಯವಾಗಲೆಂಬ ಆಶಯದಿಂದ ತಾವು ಸಿದ್ಧಪಡಿಸಿದ ಅನ್ನವನ್ನು ಮೊದಲು ಯತಿಗಳಿಗೆ ಭೋಜನಮಾಡಿಸಿ ಅನಂತರ ತಾವು ಊಟಮಾಡುತ್ತಾರೆ. ಗೃಹಸ್ಥರು ಕಷ್ಟಪಟ್ಟು ಸಂಪಾದಿಸಿದರೂ ಅದರ ಫಲಭೋಕ್ತೃಗಳು ಬೇರೆಯೇ ಆಗಿರುತ್ತಾರೆ. ಇದನ್ನು ನಾವು ಲೋಭಿಯಲ್ಲಿ, ಜೇನುಗೂಡಿನಲ್ಲಿ ಮತ್ತು ಸದ್ಗೃಹಸ್ಥನಲ್ಲೂ ಕಾಣಬಹುದಾಗಿದೆ.

**ಗ್ರಾಮ್ಯಗೀತಂ ನ ಶೃಣುಯಾದ್ಯತಿರ್ವನಚರಃ ಕ್ವಚಿತ್ ।**
**ಶಿಕ್ಷೇತ ಹರಿಣಾದ್ಬದ್ಧಾನ್ಮೃಗಯೋರ್ಗೀತಮೋಹಿತಾತ್ ॥೧೭॥**

ಯಾವುದೇ ಕಾರಣದಿಂದಲೂ ಯಾವಾಗಲೂ ಯತಿಯಾದವನು ಗ್ರಾಮ್ಯಗೀತಗಳನ್ನು (ಇಂದ್ರಿಯಗಳನ್ನು ಕೆರಳಿಸುವ ಕೆಟ್ಟ ಹಾಡುಗಳನ್ನು) ಕೇಳಲೇಬಾರದು. ಬೇಡನ ಗ್ರಾಮ್ಯಗೀತಗಳಿಂದ ಆಕರ್ಷಿತವಾಗಿ ಅವನು ಬೀಸಿದ್ದಬಲೆಗೆ ಸಿಕ್ಕಿಹಾಕಿಕೊಳ್ಳುವ ಜಿಂಕೆಯಿಂದ ಈ ಪಾಠವನ್ನು ಕಲಿಯಬೇಕು.

**ನೃತ್ಯವಾದಿತ್ರಗೀತಾನಿ ಜುಷನ್ಗ್ರಾಮ್ಯಾಣಿ ಯೋಷಿತಾಮ್ ।**
**ಆಸಾಂ ಕ್ರೀಡನಕೋ ವಶ್ಯ ಋಷ್ಯಶೃಙ್ಗೋ ಮೃಗೀಸುತಃ ॥೧೮॥**

ಹೆಣ್ಣುಜಿಂಕೆಯ ಮಗನಾದ ಋಷ್ಯಶೃಂಗನು ಹೆಂಗಸರು ಹಾಡುತ್ತಿದ್ದ ಗ್ರಾಮ್ಯಗೀತಗಳನ್ನು ಕೇಳಿ, ಅವರು ಮಾಡುತ್ತಿದ್ದ ಗ್ರಾಮ್ಯಕುಣಿತಗಳನ್ನು ನೋಡಿ ಆ ಸ್ತ್ರೀಯರಿಗೆ ವಶನಾಗಿ ಅವರ ಆಟದ ಗೊಂಬೆಯಾಗಿಬಿಟ್ಟನು.

**ಜಿಹ್ವಯಾತಿಪ್ರಮಾಥಿನ್ಯಾ ಜನೋ ರಸವಿಮೋಹಿತಃ ।**
**ಮೃತ್ಯುಮೃಚ್ಛತ್ಯಸದ್ಬುದ್ಧಿರ್ಮೀನಸ್ತು ಬಡಿಶೈರ್ಯಥಾ ॥೧೯॥**

ಮೀನಿನಿಂದ ಕಲಿಯಬೇಕಾದ ಪಾಠವಿದು :

ಗಾಳದ ತುದಿಯಲ್ಲಿರುವ ಹುಳುವಿಗೋ ಮಾಂಸದತುಂಡಿಗೋ ಆಶಿಸಿ ಮೀನು ಜಿಹ್ವಾಚಾಪಲ್ಯದಿಂದ ಆ ಮಾಂಸದ ತುಂಡನ್ನು ತಿನ್ನಲು ಹೋಗಿ ಗಾಳದಲ್ಲಿ ಸಿಕ್ಕಿಹಾಕಿಕೊಂಡು ಸಾಯುತ್ತದೆ. ಅಂತೆಯೇ ಷಡ್ರಸಗಳಿಂದ

ವಿಮೋಹಿತನಾದ ಮಾನವನು ಅತ್ಯಂತ ದುರ್ಜಯವಾದ ನಾಲಿಗೆಯ ಪ್ರಭಾವಕ್ಕೆ ಸಿಕ್ಕಿ ಮೃತ್ಯುವಶನಾಗುತ್ತಾನೆ.*

**ಇನ್ದ್ರಿಯಾಣಿ ಜಯನ್ತ್ಯಾಶು ನಿರಾಹಾರಾ ಮನೀಷಿಣಃ ।**
**ವರ್ಜಯಿತ್ವಾ ತು ರಸನಂ ತನ್ನಿರನ್ನಸ್ಯ ವರ್ಧತೇ ॥೨೦॥**

ಮನನಶೀಲರಾದ ವಿದ್ವಾಂಸರು ಉಪವಾಸವ್ರತದಿಂದ ನಾಲಿಗೆಯೊಂದನ್ನು ಬಿಟ್ಟು ಉಳಿದ ಇಂದ್ರಿಯಗಳನ್ನೇನೋ ಬಹಳ ಶೀಘ್ರವಾಗಿ ಜಯಿಸಬಲ್ಲರು. ಆದರೆ ಉಪವಾಸವಿದ್ದಷ್ಟೂ ನಾಲಿಗೆಯ ಚಾಪಲ್ಯವು ಹೆಚ್ಚಾಗುತ್ತದೆ. ಅದನ್ನು ಜಯಿಸುವುದಕ್ಕೆ ಸಾಧ್ಯವಾಗುವುದಿಲ್ಲ.[1]

**ತಾವಜ್ಜಿತೇನ್ದ್ರಿಯೋ ನ ಸ್ಯಾದ್ವಿಜಿತಾನ್ಯೇನ್ದ್ರಿಯಃ ಪುಮಾನ್ ।**
**ನ ಜಯೇದ್ರಸನಂ ಯಾವಜ್ಜಿತಂ ಸರ್ವಂ ಜಿತೇ ರಸೇ ॥೨೧॥**

ಮನುಷ್ಯನಿಂದ ಇತರ ಎಲ್ಲ ಇಂದ್ರಿಯಗಳೂ ಗೆಲ್ಲಲ್ಪಟ್ಟಿದ್ದರೂ ಯಾವತ್ತಿನವರೆಗೆ ಅವನು ಜಿಹ್ವೇಂದ್ರಿಯವನ್ನು ಗೆದ್ದಿರುವುದಿಲ್ಲವೋ ಅಂದಿನ

---

* ಜಿಹ್ವಾಚಾಪಲ್ಯವೆಂಬುದು ಬಿಡಿಸಲಾಗದ ರೋಗ. ಈ ರೋಗವು ಯಾರಿಗುಂಟು ಯಾರಿಗಿಲ್ಲ ; ಎಂದು ಹೇಳುವಂತೆಯೇ ಇಲ್ಲ. ವಿದ್ವಾಂಸರೆನಿಸಿಕೊಂಡವರು ಕೂಡ ಈ ರೋಗಕ್ಕೆ ತುತ್ತಾಗುತ್ತಾರೆ. ಮಧುಮೇಹರೋಗವಿರುವವರು ಸಿಹಿತಿಂಡಿಗಳನ್ನು ತಿನ್ನಬಾರದೆಂಬ ವಿಷಯವನ್ನು ತಿಳಿದಿದ್ದರೂ ಸಿಹಿತಿಂಡಿಯನ್ನು ತಿಂದು ಅದರ ಪರಿಹಾರಕ್ಕಾಗಿ ಚುಚ್ಚುಮದ್ದನ್ನು ಚುಚ್ಚಿಸಿಕೊಳ್ಳುತ್ತಾರೆ. ಇದಕ್ಕಾಗಿ ಮೀನಿನ ಉದಾಹರಣೆ ಬೇಕೇ ಇಲ್ಲ. ಮನುಷ್ಯನೇ ಇಂತಹ ಸ್ವಭಾವದವನಾಗಿರು ತ್ತಾನೆ. ಇಂದ್ರಿಯಗಳ ಚಾಪಲ್ಯವನ್ನೇ ತಡೆಯುವುದು ಕಷ್ಟ. ಅದರಲ್ಲಿಯೂ ಜಿಹ್ವಾಚಾಪಲ್ಯವನ್ನು ತಡೆಯುವುದು ಅತಿಕಷ್ಟ. ನಿಶ್ಚಯವಾಗಿಯೂ ಇದು ಮನಸ್ಸನ್ನೇ ಮಥಿಸಿಬಿಡುತ್ತದೆ.

1 ಶ್ರೀಕೃಷ್ಣನು ಗೀತೆಯಲ್ಲಿ :

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥** (ಭ.ಗೀ. ೨.೫೯)

ದೇಹಿಯು ನಿರಾಹಾರನಾದರೆ ವಿಷಯಗಳು ಹಿಂದಿರುಗುತ್ತವೆ. ಆದರೆ ರಸವು ಮಾತ್ರ ಹೋಗುವುದಿಲ್ಲ. ಪರವಸ್ತುವನ್ನು ಕಂಡುಕೊಂಡರೆ ಆ ರಸವೂ ಹೋಗಿ ಬಿಡುತ್ತದೆ.

ವರೆಗೂ ಅವನು ಜಿತೇಂದ್ರಿಯನೆನಿಸಿಕೊಳ್ಳುವುದಿಲ್ಲ. ನಾಲಿಗೆಯು ಜಯಿಸಲ್ಪಟ್ಟಿತೆಂದರೆ ಅವನು ಎಲ್ಲ ಇಂದ್ರಿಯಗಳನ್ನು ಗೆದ್ದಂತೆಯೇ ಸರಿ.

ಈಗ ಪಿಂಗಳೆಯೆಂಬ ವೇಶ್ಯೆಯಿಂದ ಕಲಿಯಬೇಕಾದ ಪಾಠವನ್ನು ಹೇಳುತ್ತೇನೆ. ಕೇಳು :

**ಪಿಙ್ಗಲಾ ನಾಮ ವೇಶ್ಯಾಽಸೀದ್ವಿದೇಹನಗರೇ ಪುರಾ ।**
**ತಸ್ಯಾ ಮೇ ಶಿಕ್ಷಿತಂ ಕಿಞ್ಚಿನ್ನಿಬೋಧ ನೃಪನನ್ದನ ॥೨೨॥**

ಯದುಮಹಾರಾಜ! ಹಿಂದೆ ವಿದೇಹನಗರದಲ್ಲಿ ಪಿಂಗಳೆಯೆಂಬ ವೇಶ್ಯೆಯೊಬ್ಬಳಿದ್ದಳು. ಅವಳಿಂದಲೂ ನಾನು ಸ್ವಲ್ಪ ಪಾಠವನ್ನು ಕಲಿತೆನು. ಆ ಪಾಠವನ್ನು ಹೇಳುವೆನು, ಏಕಾಗ್ರಚಿತ್ತನಾಗಿ ಕೇಳು :

ಮಹಾರಾಜ! ಪಿಂಗಳೆಯು ಸ್ವೇಚ್ಛಾಚಾರಿಣಿಯಾಗಿದ್ದಳು. ರೂಪವತಿಯೂ ಆಗಿದ್ದಳು. ಆ ವೇಶ್ಯೆಯು ಒಂದು ರಾತ್ರಿ ತನ್ನ ಶರೀರವನ್ನು ಚೆನ್ನಾಗಿ ಸಿಂಗರಿಸಿಕೊಂಡು ಧನಿಕನಾದ ಕಾಂತನನ್ನು ಸಂಕೇತಸ್ಥಾನಕ್ಕೆ ಕರೆದೊಯ್ಯಬೇಕೆಂಬ ಆಶಯದಿಂದ ಮನೆಯ ಹೊರಬಾಗಿಲಿನಲ್ಲಿ ನಿಂತಿದ್ದಳು. ಅವಳಿಗೆ ಪುರುಷರ ಮೇಲಿನ ವ್ಯಾಮೋಹಕ್ಕಿಂತಲೂ ಧನದ ಮೇಲಿನ ವ್ಯಾಮೋಹವು ಅಧಿಕವಾಗಿತ್ತು. ಮಾರ್ಗದಲ್ಲಿ ಬರುತ್ತಿದ್ದ ವಿಟಪುರುಷರನ್ನು ನೋಡಿ 'ಅವರು ಹಣವಂತರೇ? ತನಗೆ ಬೇಕಾದಷ್ಟು ಹಣವನ್ನು ಕೊಡುವರೇ? ಎಂದು ಯೋಚಿಸುತ್ತಿದ್ದಳು. ಸ್ವಾಭಾವಿಕವಾಗಿ ವಿಟಪುರುಷರು ಸಮಾಗಮಕ್ಕೆ ಹಣಕೊಡಲು ಬರುತ್ತಿದ್ದರಾದರೂ ಪಿಂಗಳೆಯು ಕೇಳಿದಷ್ಟು ಹಣವನ್ನು ಕೊಡಲು ಯಾರೂ ಸಿದ್ಧರಾಗಿರಲಿಲ್ಲ. ಬಂದವರೆಲ್ಲರೂ ಹೊರಟುಹೋದರೂ ಕೂಡ ಪಿಂಗಳೆಯು ನಿರಾಶಳಾಗಲಿಲ್ಲ. ತನ್ನ ಮನಸ್ಸು ತಣಿಯುವಂತೆ ಹಣವನ್ನು ಕೊಡುವ ವಿಟಪುರುಷರು ಬಂದಾರೆಂಬ ಆಸೆಯಿಂದ ಪುನಃ ಸಂಕೇತೋಪಜೀವಿನಿಯಾದ ಆ ವೇಶ್ಯೆಯು ಬಾಗಿಲಬಳಿ ನಿಂತಳು. ವಿಟಪುರುಷರು ಇವಳ ಸೌಂದರ್ಯಕ್ಕೆ ಮನಸೋತು ಬರುತ್ತಿದ್ದರಾದರೂ, ದುರಾಶೆಯಿಂದ ಅವಳು ಅಪೇಕ್ಷಿಸಿದಷ್ಟು ಹಣವನ್ನು ಕೊಡಲು ಒಪ್ಪುತ್ತಿರಲಿಲ್ಲ. ಬಂದವರೆಲ್ಲರೂ ಹೊರಟುಹೋಗುತ್ತಿದ್ದರು. ಬಾಗಿಲ ಬಳಿಗೂ ಮನೆಯೊಳಕ್ಕೂ ಸುತ್ತುವುದೇ ಪಿಂಗಳೆಗೆ ಒಂದು ಕೆಲಸವಾಗಿ

ಬಿಟ್ಟಿತು. ತನ್ನ ಸೌಂದರ್ಯದ ಮೇಲೆ ಹೆಚ್ಚು ಅಭಿಮಾನವಿದ್ದ ಆ ವೇಶ್ಯೆಗೆ ತನ್ನ ಮೌಲ್ಯವನ್ನು ಕಡಿಮೆಮಾಡಿಕೊಳ್ಳುವ ಇಚ್ಛೆ ಇರಲಿಲ್ಲ. ಅರ್ಧರಾತ್ರಿಯೂ ಕಳೆದುಹೋಯಿತು. ಇವಳು ಕೇಳಿದಷ್ಟು ಹಣವನ್ನು ಕೊಡುವ ರಸಿಕರು ಯಾರೂ ಬರಲಿಲ್ಲ. ಧನದಾಶೆಯಿಂದ ಕೂಡಿದ್ದ ಅವಳಿಗೆ ತಾನಪೇಕ್ಷಿಸಿದಷ್ಟು ಧನವು ಸಿಕ್ಕದ ಕಾರಣ ಮುಖವು ಬಾಡಿತು. ಆಕೆಯು ದೀನಮನಸ್ಕಳಾದಳು. ಅವಳಿಗೆ ಧನದ ಅತ್ಯಾಸೆಯೆಂಬ ಕಾರಣದಿಂದ ಸುಖ ಪ್ರದವಾದ ಪರಮವೈರಾಗ್ಯವುಂಟಾಯಿತು. ಮನನೊಂದಿದ್ದ ಆ ಪಿಂಗಳೆಯು ಆ ಸಮಯದಲ್ಲಿ ಹೇಳಿದ ಗೀತವನ್ನು ಯಥಾವತ್ತಾಗಿ ನನ್ನಿಂದ ಕೇಳು.

**ನಿರ್ವೇದ ಆಶಾಪಾಶಾನಾಂ ಪುರುಷಸ್ಯ ಯಥಾ ಹ್ಯಸಿಃ ॥೨೮॥**

**ನಹ್ಯಙ್ಗಾಜಾತನಿರ್ವೇದೋ ದೇಹಬನ್ಧಂ ಜಿಹಾಸತಿ ।**
**ಯಥಾ ವಿಜ್ಞಾನರಹಿತೋ ಮನುಜೋ ಮಮತಾಂ ನೃಪ ॥೨೯॥**

ವೈರಾಗ್ಯವೆಂಬುದು ಮನುಷ್ಯನ ಆಶಾಪಾಶಗಳಿಗೆ ಕುಠಾರಪ್ರಾಯ ವಾಗಿದೆ. ಅದು ಮನುಷ್ಯನ ಆಶೆಯೆಂಬ ಹಗ್ಗಗಳನ್ನು ಕತ್ತರಿಸಿಹಾಕುತ್ತದೆ. ವಿಶೇಷವಾದ ಜ್ಞಾನವಿಲ್ಲದ ಪುರುಷನು ಯಾವ ರೀತಿಯಲ್ಲಿ ನಾನು-ನನ್ನವರು–ಎಂಬುದನ್ನು ಬಿಡುವುದಿಲ್ಲವೋ ಅದೇ ರೀತಿಯಲ್ಲಿ ವೈರಾಗ್ಯವಿಲ್ಲ ದಿದ್ದಲ್ಲಿ ದೇಹಬಂಧನವನ್ನು ತೊರೆಯಲಾಗುವುದಿಲ್ಲ.

**ಅಹೋ ಮೇ ಮೋಹವಿತತಿಂ ಪಶ್ಯತಾವಿಜಿತಾತ್ಮನಃ ।**
**ಯಾ ಕಾನ್ತಾದಸತಃ ಕಾಮಂ ಕಾಮಯೇ ಯೇನ ಬಾಲಿಶಾ ॥೩೦॥**

ಮನಸ್ಸನ್ನು ಜಯಿಸದೇ ಇರತಕ್ಕ ನನ್ನ ಅಜ್ಞಾನದ ಪರಮಾವಧಿ ಯನ್ನಾದರೂ ನೋಡಿರಿ. ಅಸತ್ಪುರುಷನಿಂದ ವಿಷಯಸುಖವನ್ನು ಬಯಸುವ ನಾನು ಎಂತಹ ಮೂರ್ಖಳು!

**ಸನ್ತಂ ಸಮೀಪೇ ರಮಣಂ ರತಿಪ್ರದಂ**
**ವಿತ್ತಪ್ರದಂ ನಿತ್ಯಮಿಮಂ ವಿಹಾಯ**
**ಅಕಾಮದಂ ದುಃಖಭಯಾದಿಶೋಕ-**
**ಮೋಹಪ್ರದಂ ತುಚ್ಛಮಹಂ ಭಜೇಽಜ್ಞಾ ॥೩೧॥**

ಅತಿಸಮೀಪದಲ್ಲಿ ನನ್ನ ಹೃದಯಕಮಲದಲ್ಲಿಯೇ ಇರುವ, ಸಮಸ್ತರಿಗೂ ಪತಿಯಾದ, ರತಿಸುಖವನ್ನೀಯುವ, ಬೇಕಾದಷ್ಟು ಹಣವನ್ನು ದಯಪಾಲಿಸುವ, ನಿತ್ಯನಾದ ಈ ಹೃದಯೇಶ್ವರನನ್ನು ಬಿಟ್ಟು ಅಪೇಕ್ಷಿಸಿದುದನ್ನು ಕೊಡದಿರುವ, ದುಃಖ, ಭಯ, ರೋಗ, ಶೋಕ, ಮೋಹಪ್ರದನಾದ ತುಚ್ಛನಾದ ಮನುಷ್ಯನನ್ನು ನಾನು ಸೇವಿಸುತ್ತಿರುವೆನಲ್ಲಾ! ಎಂತಹ ಮೂಢೆಯು ನಾನು!

**ಅಹೋ ಮಯಾಽತ್ಮಾ ಪರಿತಾಪಿತೋ ವೃಥಾ**
**ಸಾಙ್ಕೇತ್ಯವೃತ್ತ್ಯಾತಿವಿಗರ್ಹ್ಯವಾರ್ತಯಾ ।**
**ಸ್ತ್ರೈಣಾನ್ನರಾದ್ಯಾರ್ಥತೃಷೋಽನುಶೋಚ್ಯಾತ್ ।**
**ಕ್ರೀತೇನ ವಿತ್ತಂ ರತಿಮಾತ್ಮನೇಚ್ಛತೀ ॥೩೨॥**

ಅತಿನಿಂದನೀಯವಾದ ಜೀವಿಕೆಯೆನಿಸಿರುವ ವೇಶ್ಯಾಜೀವನದಿಂದ ನನ್ನ ಶರೀರವನ್ನು ವ್ಯರ್ಥವಾಗಿ ಪರಿತಾಪಗೊಳಿಸಿದೆನು. ಸ್ತ್ರೀಲಂಪಟನಾದ, ಕಡುಲೋಭಿಯಾದ, ಶೋಚನೀಯನಾದ ಮತ್ತು ನೀಚನಾದ ಮನುಷ್ಯನಿಗೆ ನನ್ನ ಶರೀರವನ್ನು ಮಾರಿಕೊಂಡು ಅವನಿಂದ ಸುರತಸುಖವನ್ನೂ ಧನವನ್ನೂ ಬಯಸಿದೆನಲ್ಲವೇ? ಎಂತಹ ಪರಮನೀಚಳು ನಾನು!

**ಯದಸ್ಥಿಭಿರ್ನಿರ್ಮಿತವಂಶವಂಶ್ಯ-**
**ಸ್ಥೂಣಂ ತ್ವಚಾ ರೋಮನಖೈಃ ಪಿನದ್ಧಮ್ ।**
**ಕ್ಷರನ್ನವದ್ವಾರಮಗಾರಮೇತ-**
**ದ್ವಿಣ್ಮೂತ್ರಪೂರ್ಣಂ ಮದುಪೈತಿ ಕಾನ್ಯಾ ॥೩೩॥**

ಈ ಶರೀರವು ಮಲ-ಮೂತ್ರಗಳಿಂದ ತುಂಬಿದ, ಸದಾ ಸೋರುತ್ತಿರುವ ಒಂಭತ್ತು ಬಾಗಿಲುಗಳುಳ್ಳ ಒಂದು ಮನೆಯಾಗಿದೆ. ಇದರಲ್ಲಿ ಮೂಳೆಗಳು ಉದ್ದನೆಯ ಗಳುಗಳಾಗಿಯೂ, ತೊಲೆಗಳಾಗಿಯೂ ನಿಲ್ಲಿಸಲ್ಪಟ್ಟಿವೆ. ಇಂತಹ ಹೊಲಸು ಮನೆಯನ್ನು ಚರ್ಮ, ಉಗುರು, ರೋಮಗಳಿಂದ ಮುಚ್ಚಲಾಗಿದೆ. ಹಾಗೆ ಮುಚ್ಚಿರುವುದರಿಂದಲೇ ಅದರ ಹೊಲಸು ಹೊರಕ್ಕೆ ಕಾಣುತ್ತಿಲ್ಲ. ಶರೀರವಿರುವುದಂತೂ ಹೀಗೆಯೇ. ಇಂತಹ ಅಸ್ಥಿಪಂಜರಗಳಿಂದ ಕೂಡಿರುವ ಶರೀರವನ್ನು ನನ್ನನ್ನು ಬಿಟ್ಟು ಬೇರೆ ಯಾರು ತಾನೇ ನನ್ನದೆಂಬ ಅಭಿಮಾನವನ್ನಿಟ್ಟುಕೊಂಡು ಪ್ರೀತಿಸುತ್ತಾರೆ?

**ವಿದೇಹಾನಾಂ ಪುರೇ ಹ್ಯಸ್ಮಿನ್ನಹಮೇಕೈವ ಮೂಢಧೀಃ ।**
**ಯಾನ್ಯಮಿಚ್ಛನ್ತ್ಯಸತ್ಯಸ್ಮಾದಾತ್ಮದಾತ್ಕಾಮಮಚ್ಯುತಾತ್ ॥೩೪॥**

ವಿದೇಹರಾಜರ ಈ ಪಟ್ಟಣದಲ್ಲಿ ನಿಶ್ಚಯವಾಗಿಯೂ ನಾನೊಬ್ಬಳೇ ಅತಿಮೂರ್ಖಳಾಗಿ ಬಿಟ್ಟಿದ್ದೇನೆ. ದುಷ್ಟೆಯಾದ ನಾನು, ಭಕ್ತರಿಗೆ ತನ್ನನ್ನೇ ಕೊಟ್ಟುಕೊಳ್ಳುವ ಅಚ್ಯುತನಿಂದ ಬೇಕಾದುದನ್ನು ಪಡೆದುಕೊಳ್ಳಲು ಪ್ರಯತ್ನಿಸದೆ ಬೇರೆಯವರನ್ನು ಆಶ್ರಯಿಸುತ್ತಿರುವೆನಲ್ಲವೇ?

**ಸುಹೃತ್ಪ್ರೇಷ್ಠತಮೋ ನಾಥ ಆತ್ಮಾ ಚಾಯಂ ಶರೀರಿಣಾಮ್ ।**
**ತಂ ವಿಕ್ರೀಯಾತ್ಮನೈವಾಹಂ ರಮೇಽನೇನ ಯಥಾ ರಮಾ ॥೩೫॥**

ಭಗವಂತನಾದ ಅಚ್ಯುತನು ಸಕಲಪ್ರಾಣಿಗಳಿಗೂ ಸ್ನೇಹಿತನೂ, ಪ್ರಿಯತಮನೂ, ಒಡೆಯನೂ, ಆತ್ಮನೂ ಆಗಿರುತ್ತಾನೆ. ಈಗ ನಾನು ಆತ್ಮ ಸಮರ್ಪಣೆಯಿಂದ ಅವನನ್ನೇ ಕೊಂಡುಕೊಂಡು ಲಕ್ಷ್ಮೀದೇವಿಯಂತೆಯೇ ನಾನೂ ಅವನೊಡನೆ ರಮಿಸುತ್ತೇನೆ.

**ಕಿಯತ್ಪ್ರಿಯಂ ತೇ ವ್ಯಭಜನ್ ಕಾಮಾ ಯೇ ಕಾಮದಾ ನರಾಃ ।**
**ಆದ್ಯನ್ತವನ್ತೋ ಭಾರ್ಯಾಯಾ ದೇವಾ ವಾ ಕಾಲವಿದ್ರುತಾಃ ॥೩೬॥**

ಆದಿ ಮತ್ತು ಅಂತ್ಯಗಳಿರುವ, ನಶ್ವರಗಳಾದ ಕಾಮೋಪಭೋಗಗಳಾಗಲೀ, ಆ ಕಾಮೋಪಭೋಗಗಳನ್ನು ಒದಗಿಸಿಕೊಡುವ ಪುರುಷರಾಗಲೀ, ಕಾಲದಿಂದ ನಷ್ಟರಾಗಿ ಹೋಗುವ ದೇವತೆಗಳಾಗಲೀ, ತಮ್ಮ ಭಾರ್ಯೆಯರಿಗೆ ಎಷ್ಟು ಪ್ರಮಾಣದ ಸಂತೋಷವನ್ನು ತಾನೇ ಉಂಟುಮಾಡಿಯಾರು? ಪರಮಾತ್ಮನು ದಯಪಾಲಿಸುವ ಆತ್ಮಸುಖದ ಮುಂದೆ ಮನುಷ್ಯರು ಅಥವಾ ದೇವತೆಗಳು ತಮ್ಮ ಭಾರ್ಯೆಯರಿಗೆ ಕೊಡುವ ಸುಖವು ಅತಿತುಚ್ಛವಾದುದು.

**ನೂನಂ ಮೇ ಭಗವಾನ್ ಪ್ರೀತೋ ವಿಷ್ಣುಃ ಕೇನಾಪಿ ಕರ್ಮಣಾ ।**
**ನಿರ್ವೇದೋಽಯಂ ದುರಾಶಾಯಾ ಯನ್ಮೇ ಜಾತಃ ಸುಖಾವಹಃ ॥**

ನಿಶ್ಚಯವಾಗಿಯೂ ನಾನು ಮಾಡಿರುವ ಯಾವುದೋ ಅತ್ಯಲ್ಪವಾದ ಪುಣ್ಯಕರ್ಮದಿಂದ ಭಗವಾನ್ ವಿಷ್ಣುವು ನನ್ನಲ್ಲಿ ಸುಪ್ರೀತನಾಗಿದ್ದಾನೆ. ಏಕೆಂದರೆ: ಅತ್ಯಂತ ದುರಾಸೆಯಿಂದಿದ್ದ ನನಗೆ ಈಗ ಸುಖಕರವಾದ ಈ ವೈರಾಗ್ಯವುಂಟಾಗಿದೆಯಲ್ಲವೇ!

**ಮೈವಂ ಸ್ಯುರ್ಮನ್ದಭಾಗ್ಯಾಯಾಃ ಕ್ಲೇಶಾ ನಿರ್ವೇದಹೇತವಃ ।**
**ಯೇನಾನುಬನ್ಧಂ ನಿರ್ಹೃತ್ಯ ಪುರುಷಃ ಶಮಮೃಚ್ಛತಿ ॥೩೮॥**

ಭಗವಂತನು ನನ್ನ ವಿಷಯದಲ್ಲಿ ಸುಪ್ರೀತನಾಗಿರದಿದ್ದರೆ ಮಂದ ಭಾಗ್ಯಳಾದ ನನಗೆ ವೈರಾಗ್ಯಕ್ಕೆ ಕಾರಣವಾದ ಕ್ಲೇಶಗಳು ಉಂಟಾಗುತ್ತಲೇ ಇರಲಿಲ್ಲ. ದುರಾಸೆಯೇ ನನ್ನ ಮನಸ್ಸಿನಲ್ಲಿ ಮೂಡುತ್ತಿರಲಿಲ್ಲ. ವೈರಾಗ್ಯವು ಬಂದೊಡನೆಯೇ ಮನುಷ್ಯನು ಗೇಹ-ದೇಹಾದಿಗಳಮೇಲೆ ತನ್ನದೆಂಬ ಅಭಿಮಾನವನ್ನು ತೊರೆದು ಶಾಂತಿಯನ್ನು ಹೊಂದುತ್ತಾನೆ.

**ತೇನೋಪಕೃತಮಾದಾಯ ಶಿರಸಾ ಗ್ರಾಮ್ಯಸಙ್ಗತಾಃ ।**
**ತ್ಯಕ್ತ್ವಾದುರಾಶಾಃ ಶರಣಂ ವ್ರಜಾಮಿ ತಮಧೀಶ್ವರಮ್ ॥೩೯॥**

ಭಗವಂತನು ಮಂದಭಾಗ್ಯಳಾದ ನನಗೆ ಎಸಗಿರುವ ಉಪಕಾರವನ್ನು ಶಿರಸ್ಸಿನಿಂದ ಧರಿಸಿ ಗ್ರಾಮ್ಯಸುಖಕ್ಕೆ ಸಂಬಂಧಿಸಿದ ಜೀವನವನ್ನೂ ಮತ್ತು ದುರಾಸೆಯನ್ನೂ ಸಂಪೂರ್ಣವಾಗಿ ತ್ಯಜಿಸಿ ನಾನು ಅಧೀಶ್ವರನಾದ ಆ ವಿಷ್ಣು ಪರಮಾತ್ಮನನ್ನೇ ಶರಣುಹೊಂದುತ್ತೇನೆ.

**ಸನ್ತುಷ್ಟಾ ಶ್ರದ್ದಧತ್ಯೇತದ್ಯಥಾಲಾಭೇನ ಜೀವತೀ ।**
**ವಿಹರಾಮ್ಯ ಮುನೈವಾಹಮಾತ್ಮನಾ ರಮಣೇನ ವೈ ॥೪೦॥**

ಭಗವಂತನಲ್ಲಿಯೇ ಶ್ರದ್ಧೆಯಿಟ್ಟು ಯಾವ ಕಾಲದಲ್ಲಿ ಎಷ್ಟು ಸಿಗುವುದೋ ಅದರಿಂದಲೇ ತೃಪ್ತಳಾಗಿ ಜೀವನವನ್ನು ನಿರ್ವಹಿಸುತ್ತಾ ಪತಿ ಯಾದ, ಆತ್ಮರೂಪನಾದ, ಆತ್ಮದಲ್ಲಿಯೇ ನಿವಾಸಮಾಡಿಕೊಂಡಿರುವ ಪರಮಾತ್ಮ ನೊಡನೆ ಸದಾ ವಿಹರಿಸುವೆನು.

**ಸಂಸಾರಕೂಪೇ ಪತಿತಂ ವಿಷಯೈರ್ಮುಷಿತೇಕ್ಷಣಮ್ ।**
**ಗ್ರಸ್ತಂ ಕಾಲಾಹಿನಾಽತ್ಮಾನಂ ಕೋಽನ್ಯಸ್ತ್ರಾತುಮಧೀಶ್ವರಃ ॥೪೧॥**

ವಿಷಯಸುಖಗಳ ಅಭಿಲಾಷೆಯಿಂದ ಜ್ಞಾನದ ಕಣ್ಣುಗಳನ್ನು ಸಂಪೂರ್ಣವಾಗಿ ಕಳೆದುಕೊಂಡಿರುವ, ಕಗ್ಗತ್ತಲಿನ, ಸಂಸಾರವೆಂಬ ಹಾಳು ಬಾವಿಯಲ್ಲಿ ಬಿದ್ದು ಅಲ್ಲಿ ಕಾಲವೆಂಬ ಕಾಳಸರ್ಪದಿಂದ ನುಂಗಲ್ಪಡುತ್ತಿರುವ

ನನ್ನನ್ನು ರಕ್ಷಿಸಲು ದಯಾಮಯನಾದ ವಿಷ್ಣುವನ್ನು ಬಿಟ್ಟು ಬೇರೆ ಯಾವನು ತಾನೇ ಸಮರ್ಥನು?

**ಆತ್ಮೈವ ಹ್ಯಾತ್ಮನೋ ಗೋಪ್ತಾ ನಿರ್ವಿದ್ಯೇತ ಯದಾಖಿಲಾತ್ ।**
**ಅಪ್ರಮತ್ತ ಇದಂ ಪಶ್ಯೇದ್ಗ್ರಸ್ತಂ ಕಾಲಾಹಿನಾ ಜಗತ್ ॥೪೨॥**

ಹೀಗೆ ಎಲ್ಲದರಲ್ಲೂ ವೈರಾಗ್ಯವನ್ನು ಪಡೆದವನು ತನಗೆ ತಾನೇ ರಕ್ಷಕನಾಗುತ್ತಾನೆ. ಈ ಜಗತ್ತನ್ನು ಕಾಲವೆಂಬ ಸರ್ಪವು ನುಂಗಿಹಾಕುತ್ತಿದೆ ಯೆಂಬುದನ್ನು ಸಾವಧಾನತೆಯಿಂದ ಗಮನಿಸುತ್ತಿರಬೇಕು. ಹಾಗೆ ಮಾಡು ತ್ತಿದ್ದರೆ ತನ್ನ ವಿವೇಕಬುದ್ಧಿಯಿಂದ ಆತನು ಆತ್ಮರಕ್ಷಣೆ ಮಾಡಿಕೊಂಡವ ನಾಗುತ್ತಾನೆ."

ಅವಧೂತರು ಹೇಳುತ್ತಾರೆ :

"ಹೀಗೆ ಪಿಂಗಳೆಯೆಂಬ ಆ ವೇಶ್ಯೆಯು ಮನಸ್ಸಿನಲ್ಲಿ ನಿಶ್ಚಯಿಸಿ, ಅಧಿಕ ಹಣವನ್ನು ಕೊಡುವ ಕಾಂತನನ್ನು ಹುಡುಕಬೇಕೆನ್ನುವ ದುರಾಶೆಯನ್ನು ತೊರೆದು ಮನಶ್ಶಾಂತಿಯನ್ನು ಪಡೆದು ಹಾಸಿಗೆಯಲ್ಲಿ ಪವಡಿಸಿದಳು.

**ಆಶಾ ಹಿ ಪರಮಂ ದುಃಖಂ ನೈರಾಶ್ಯಂ ಪರಮಂ ಸುಖಮ್ ।**
**ಯಥಾ ಸಞ್ಛಿದ್ಯ ಕಾನ್ತಾಶಾಂ ಸುಖಂ ಸುಷ್ವಾಪ ಪಿಙ್ಗಲಾ ॥೪೪॥**

ಯದುಮಹಾರಾಜ! ಆಶೆಯೆಂಬುದು ಪರಮದುಃಖಕ್ಕೆ ಕಾರಣ ವಾಗುತ್ತದೆ. ನೈರಾಶ್ಯವು ಅಥವಾ ವೈರಾಗ್ಯವು ಪರಮಸುಖಕ್ಕೆ ಕಾರಣ ವಾಗುತ್ತದೆ. ಧನವಂತನಾದ ಕಾಂತನನ್ನು ಕೂಡಬೇಕೆಂಬ ಆಶೆಯನ್ನು ಪಿಂಗಳೆಯು ಕತ್ತರಿಸಿಹಾಕಿ ಸುಖವಾಗಿ ಸುಪ್ಪತ್ತಿಗೆಯಲ್ಲಿ ಮಲಗಿಕೊಂಡ ಳಲ್ಲವೇ?"

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಏಕಾದಶಸ್ಕಂಧದ ೮ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೯ನೆಯ ಅಧ್ಯಾಯ

## ಅವಧೂತೋಪಾಖ್ಯಾನ
## ಕುರರವೇ ಮುಂತಾದ ಏಳು ಗುರುಗಳ ಕಥೆ

ಅವಧೂತಬ್ರಾಹ್ಮಣರು ಹೇಳುತ್ತಾರೆ :

**ಪರಿಗ್ರಹೋ ಹಿ ದುಃಖಾಯ ಯದ್ಯತ್ಪ್ರಿಯತಮಂ ನೃಣಾಮ್ ।**
**ಅನನ್ತಂ ಸುಖಮಾಪ್ನೋತಿ ತದ್ವಿದ್ವಾನ್ ಯಸ್ತ್ವಕಿಞ್ಚನಃ ॥೧॥**

"ಮನುಷ್ಯನಿಗೆ ಅತಿಪ್ರಿಯವಾದ ವಸ್ತುಗಳನ್ನು ಪರಿಗ್ರಹಿಸುವುದು ದುಃಖಕ್ಕೆ ಕಾರಣವಾಗುತ್ತದೆ. ಎಲ್ಲವನ್ನೂ ತ್ಯಾಗಮಾಡಿ ಯಾವ ಸಂಬಂಧ-ಸಂಪತ್ತೂ ಇಲ್ಲದೇ ಇರುವ ವಿದ್ವಾಂಸನು ಅಪಾರವಾದ ಸುಖವನ್ನು ಹೊಂದುತ್ತಾನೆ.

**ಸಾಮಿಷಂ ಕುರರಂ ಜಘ್ನುರ್ಬಲಿನೋ ಯೇ ನಿರಾಮಿಷಾಃ ।**
**ತದಾಮಿಷಂ ಪರಿತ್ಯಜ್ಯ ಸ ಸುಖಂ ಸಮವಿನ್ದತ ॥೨॥**

ಮಾಂಸಾಹಾರವಿಲ್ಲದಿದ್ದ ಬಲಿಷ್ಠವಾದ ಪಕ್ಷಿಗಳು ಮಾಂಸದ ತುಂಡನ್ನು ಕೊಕ್ಕಿನಲ್ಲಿ ಕಚ್ಚಿಕೊಂಡಿದ್ದ ಕುರರ ಪಕ್ಷಿಯನ್ನು ನಾಲ್ಕುಕಡೆಗಳಿಂದಲೂ ಸುತ್ತಿಕೊಂಡು ತೊಂದರೆಪಡಿಸುತ್ತಿದ್ದುವು. ಅವುಗಳ ಉಪಟಳವನ್ನು ತಾಳಲಾರದೆ ಕುರರಪಕ್ಷಿಯು ಮಾಂಸದ ತುಂಡನ್ನು ಕೆಳಕ್ಕೆ ಹಾಕಿದೊಡನೆಯೇ ಆ ಆಕ್ರಮಣದಿಂದ ಬಿಡುಗಡೆಯನ್ನು ಹೊಂದಿ ಸುಖವನ್ನು ಪಡೆಯಿತು.

**ನ ಮೇ ಮಾನಾವಮಾನೌ ಸ್ತೋ ನ ಚಿನ್ತಾ ಗೇಹಪುತ್ರಿಣಾಮ್ ।**
**ಆತ್ಮಕ್ರೀಡ ಆತ್ಮರತಿರ್ವಿಚರಾಮೀಹ ಬಾಲವತ್ ॥೩॥**

ಯದುರಾಜ! ನನಗೆ ಮಾನಾಪಮಾನಗಳ ಪರಿವೆಯಿಲ್ಲ. ಮನೆ-ಮಕ್ಕಳ ಚಿಂತೆಯಿಲ್ಲ. ಆತ್ಮನನ್ನು ಪ್ರೀತಿಸುತ್ತಾ ಆತ್ಮನೊಡನೆಯೇ ಕ್ರೀಡಿಸುತ್ತಾ ಬಾಲಕನಂತೆ ನಿರಾತಂಕವಾಗಿ ತಿರುಗಾಡಿಕೊಂಡಿದ್ದೇನೆ.

**ದ್ವಾವೇವ ಚಿನ್ತಯಾ ಮುಕ್ತೌ ಪರಮಾನನ್ದ ಆಪ್ಲುತೌ ।**
**ಯೋ ವಿಮುಗ್ಧೋ ಜಡೋ ಬಾಲೋ ಯೋ ಗುಣೇಭ್ಯಃ ಪರಂ ಗತಃ ॥**

ಪ್ರಪಂಚದಲ್ಲಿ ಚಿಂತೆಯಿಂದ ಮುಕ್ತರಾಗಿ ಪರಮಾನಂದದಲ್ಲಿಯೇ ಮುಳುಗಿರತಕ್ಕವರು ಇಬ್ಬರು ಮಾತ್ರವೇ. ಮಾನಾಪಮಾನಗಳ ಅರಿವಿಲ್ಲದೆ ದೇಹಾದಿ ಪೋಷಣೆಗಳ ಪ್ರಯತ್ನವಿಲ್ಲದೇ ಇರತಕ್ಕ ಮುಗ್ಧನಾದ ಬಾಲಕನೊಬ್ಬ, ಮತ್ತು ತ್ರಿಗುಣಾತೀತನಾದ, ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಜ್ಞಾನಿಯೊಬ್ಬ–ಇವರಿಬ್ಬರ ಹೊರತಾಗಿ ಉಳಿದವರೆಲ್ಲರೂ ಸಂಸಾರದ ಚಿಂತೆಯಲ್ಲಿ ಮುಳುಗಿದವರೇ ಆಗಿರುತ್ತಾರೆ.

ಯದುಮಹಾರಾಜ! ಕುಮಾರಿಯೊಬ್ಬಳಿಂದ ಕಲಿತ ಪಾಠವನ್ನು ಈಗ ನಾನು ನಿನಗೆ ಹೇಳುತ್ತೇನೆ :

ಒಬ್ಬ ಗೃಹಸ್ಥನ ಮನೆಗೆ ಕನ್ಯಾರ್ಥವಾಗಿ ಕೆಲವರು ಗೃಹಸ್ಥರು ಆಗಮಿಸಿದರು. ಆ ಸಮಯದಲ್ಲಿ ಕನ್ಯೆಯ ಹೊರತಾಗಿ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಕನ್ಯಾರ್ಥವಾಗಿ ಬಂದಿದ್ದವರನ್ನು ಕನ್ಯೆಯೇ ಉಪಚರಿಸಬೇಕಾಯಿತು. ಅಕ್ಕಿ ಇಲ್ಲದಿದ್ದ ಕಾರಣ ಬತ್ತವನ್ನು ಕುಟ್ಟಿ ಅಕ್ಕಿಯನ್ನು ಸಿದ್ಧಗೊಳಿಸಬೇಕಾಗಿತ್ತು. ಅಂತೆಯೇ ಆ ಕನ್ಯೆಯು ಬಂದ ಕನ್ಯಾರ್ಥಿಗಳಿಗೆ ಭೋಜನವನ್ನು ಸಿದ್ಧಗೊಳಿಸುವ ಸಲುವಾಗಿ ಗುಟ್ಟಾಗಿ ಬತ್ತ ಕುಟ್ಟಲು ಪ್ರಾರಂಭಿಸಿದಳು. ಹಾಗೆ ಬತ್ತವನ್ನು ಕುಟ್ಟುತ್ತಿದ್ದಾಗ ಅವಳ ಕೈಲಿದ್ದ ಬಳೆಗಳು ಜಣ-ಜಣ ಎಂದು ಗಟ್ಟಿಯಾಗಿ ಶಬ್ದಮಾಡತೊಡಗಿದುವು. ತಾನು ಬತ್ತಕುಟ್ಟುತ್ತಿರುವ ವಿಚಾರ, ಬಂದಿರುವ ಕನ್ಯಾರ್ಥಿಗಳಿಗೆ ತಿಳಿಯಬಾರದೆಂಬುದು ಕನ್ಯೆಯ ಅಭಿಲಾಷೆಯಾಗಿದ್ದಿತು. ಶಂಖದ ಬಳೆಗಳ ಶಬ್ದವು ಕೇಳಿಸುತ್ತಲೇ ಇದ್ದಿತು. ಅತಿಥಿಗಳು ಬಂದಾಗ ಬತ್ತಕುಟ್ಟುವುದು ಸರಿಯಲ್ಲವೆಂದು ನಾಚಿಕೆಯಿಂದ ಆ ಚತುರೆಯಾದ ಕನ್ಯೆಯು ಒಂದೊಂದನ್ನಾಗಿ ಬಳೆಗಳನ್ನು ಒಡೆದುಹಾಕಲು ಪ್ರಾರಂಭಿಸಿದಳು. ಕೈಗಳಲ್ಲಿ ಎರಡೆರಡು ಬಳೆಗಳು ಉಳಿದುವು. ಆಗಲೂ ಶಬ್ದವಾಗುವುದು ನಿಲ್ಲಲಿಲ್ಲ. ಕಡೆಗೆ ಒಂದೊಂದೇ ಬಳೆಯನ್ನು ಕೈಯಲ್ಲಿ ಉಳಿಸಿಕೊಂಡು ಉಳಿದೊಂದನ್ನೂ ಒಡೆದುಹಾಕಿದಳು. ಒಂದು ಬಳೆಯು ಯಾವ ಶಬ್ದವನ್ನೂ ಮಾಡಲಿಲ್ಲ. ಲೋಕತತ್ತ್ವವನ್ನು ತಿಳಿಯುವ ಅಪೇಕ್ಷೆಯಿಂದ ಸಂಚರಿಸುತ್ತಿದ್ದ ನಾನು ಆ ಕುಮಾರಿಯ ವರ್ತನೆಯಿಂದ ಈ ಉಪದೇಶವನ್ನು ಪಡೆದುಕೊಂಡೆನು.

**ವಾಸೇ ಬಹೂನಾಂ ಕಲಹೋ ಭವೇದ್ವಾರ್ತಾ ದ್ವಯೋರಪಿ ।**
**ಏಕ ಏವ ಚರೇತ್ತಸ್ಮಾತ್ ಕುಮಾರ್ಯಾ ಇವ ಕಙ್ಕಣಃ ॥೧೦॥**

ಬಹಳ ಜನರೊಡಗೂಡಿ ವಾಸಮಾಡುವುದರಿಂದ ದಿನಂಪ್ರತಿ ಯಾವುದಾದರೊಂದು ಕಿತ್ತಾಟವು ಇದ್ದೇ ಇರುತ್ತದೆ. ಇಬ್ಬರೇ ಇದ್ದರೂ ವಿನೋದವಾದ ಅಥವಾ ನಿಷ್ಠುರವಾದ ಮಾತುಕತೆಗಳು ನಡೆಯುತ್ತಲೇ ಇರುತ್ತವೆ. ಕುಮಾರಿಯ ಬಳೆಯಂತೆ ಒಂಟಿಯಾಗಿದ್ದರೆ ಯಾವ ಗಲಾಟೆಯೂ ಇರುವುದಿಲ್ಲ. ಮಾತುಕತೆಗಳಿಗೂ ಅವಕಾಶವಿರುವುದಿಲ್ಲ. ಆದುದರಿಂದ ಏಕಾಕಿಯಾಗಿಯೇ ಸಂಚರಿಸಬೇಕು. ಏಕಾಕಿಯಾಗಿಯೇ ತಪಃಶ್ಚರಣೆ ಮಾಡಬೇಕು.

ಮಹಾರಾಜ! ಮುಂದೆ ನಾನು ವ್ಯಾಧನಿಂದ ಕಲಿತ ಪಾಠವನ್ನು ಹೇಳುವೆನು ಕೇಳು :

**ಮನ ಏಕತ್ರ ಸಂಯುಞ್ಜ್ಯಾಜ್ಜಿತಶ್ವಾಸೋ ಜಿತಾಸನಃ ।**
**ವೈರಾಗ್ಯಾಭ್ಯಾಸಯೋಗೇನ ಧ್ರಿಯಮಾಣಮತನ್ದ್ರಿತಃ ॥೧೧॥**

ಸಾಧಕನು ಯಾವಾಗಲೂ ಅಲಸನಾಗಿರದೆ ಜಾಗರೂಕನಾಗಿದ್ದುಕೊಂಡು ಆಸನವನ್ನು ಜಯಿಸಬೇಕು. ಯೋಗಾಸನಗಳ ಮೂಲಕವಾಗಿ ಆಸನಶುದ್ಧಿಯನ್ನು ಮಾಡಿಕೊಳ್ಳಬೇಕು. ಪ್ರಾಣಾಯಾಮದ ಮೂಲಕವಾಗಿ ಪ್ರಾಣವಾಯುವನ್ನು ಜಯಿಸಬೇಕು. ವೈರಾಗ್ಯದಿಂದಲೂ ಸತತವಾದ ಅಭ್ಯಾಸದಿಂದಲೂ ಮನಸ್ಸನ್ನು ಒಂದೆಡೆಯಲ್ಲಿ ನೆಲೆಗೊಳಿಸಬೇಕು.*

**ಯಸ್ಮಿನ್ ಮನೋ ಲಬ್ಧಪದಂ ಯದೇತ-**
**ಚ್ಛನೈಃ ಶನೈರ್ಮುಞ್ಚತಿ ಕರ್ಮರೇಣೂನ್ ।**
**ಸತ್ತ್ವೇನ ವೃದ್ಧೇನ ರಜಸ್ತಮಶ್ಚ**
**ವಿಧೂಯ ನಿರ್ವಾಣಮುಪೈತ್ಯನಿನ್ಧನಮ್ ॥೧೨॥**

ಚಂಚಲವಾದ ಈ ಮನಸ್ಸು ಯಾವನ ದಿವ್ಯಪಾದಾರವಿಂದಗಳಲ್ಲಿ ಸ್ಥಾನವನ್ನು ಪಡೆದುಕೊಂಡು ಮೆಲ್ಲ-ಮೆಲ್ಲನೆ ಕರ್ಮವಾಸನೆಗಳಿಂದ ದೂರ

---

* **ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ ।** (ಯೋಗಸೂತ್ರ)
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ।**
(ಅ.೬ ಶ್ಲೋಕ ೩೫ ಗೀತಾ)

ವಾಗುವುದೋ, ವೃದ್ಧಿಹೊಂದಿದ ಸತ್ತ್ವಗುಣದಿಂದ ರಜಸ್ತಮೋಗುಣಗಳನ್ನು ದೂರಕ್ಕೆ ತಳ್ಳುವುದೋ, ಆಗ ಕಟ್ಟಿಗೆಯ ಆಶ್ರಯವಿಲ್ಲದ ಅಗ್ನಿಯು ಶಾಂತವಾಗುವಂತೆ ಮನಸ್ಸು ಪರಮಶಾಂತಿಯನ್ನು ಹೊಂದಿಬಿಡುತ್ತದೆ.

**ತದೈವಮಾತ್ಮನ್ಯವರುದ್ಧಚಿತ್ತೋ**
**ನ ವೇದ ಕಿಞ್ಚಿದ್ಬಹಿರನ್ತರಂ ವಾ ।**
**ಯಥೇಷುಕಾರೋ ನೃಪತಿಂ ವ್ರಜನ್ತ-**
**ಮಿಷೌ ಗತಾತ್ಮಾ ನ ದದರ್ಶ ಪಾರ್ಶ್ವೇ ॥೧೩॥**

ಲಕ್ಷ್ಯಕ್ಕೆ ಗುರಿಯಿಟ್ಟು ಬಾಣವನ್ನು ಬಿಡುವುದರಲ್ಲಿ ಏಕದೃಷ್ಟಿಯಿರುವ ಬಿಲ್ಗಾರನು ಯಾವ ರೀತಿಯಲ್ಲಿ ಪಕ್ಕದಲ್ಲಿ ಭೇರೀ-ನಗಾರೀ-ಕಹಳೆ ಮುಂತಾದ ವಾದ್ಯಗಳ ಸಮೇತನಾಗಿ ಮೆರವಣಿಗೆಯಲ್ಲಿ ಹೋಗುವ ರಾಜನನ್ನು ಕಾಣುವುದಿಲ್ಲವೋ ಅದೇ ರೀತಿಯಲ್ಲಿ ಪರಮಾತ್ಮನಲ್ಲಿಯೇ ಏಕಾಗ್ರವಾದ ಚಿತ್ತವೃತ್ತಿಯುಳ್ಳ ಸಾಧಕನು ಹೊರಗಿನದನ್ನಾಗಲೀ, ಒಳಗಿನದನ್ನಾಗಲೀ ಕಾಣುವುದಿಲ್ಲ. ಏಕಾಗ್ರತೆಯಿಂದ ಪರಮಾತ್ಮನಲ್ಲಿಯೇ ಲೀನವಾದ ಮನಸ್ಸು ಆನಂದಸಾಗರದಲ್ಲಿ ಮುಳುಗಿರುತ್ತದೆ. ಬಿಲ್ಗಾರನ ಲಕ್ಷ್ಯದಂತೆ ಪರಮಾತ್ಮನಲ್ಲಿ ಮನಸ್ಸಿನ ಲಕ್ಷ್ಯವಿರಬೇಕೆಂಬುದನ್ನು ನಾನು ತಿಳಿದುಕೊಂಡೆ.*

**ಏಕಚಾರ್ಯನಿಕೇತಃ ಸ್ಯಾದಪ್ರಮತ್ತೋ ಗುಹಾಶಯಃ ।**
**ಅಲಕ್ಷ್ಯಮಾಣ ಆಚಾರೈರ್ಮುನಿರೇಕೋಽಲ್ಪಭಾಷಣಃ ॥೧೪॥**

---

* ಮಹಾಭಾರತದಲ್ಲಿ ಲಕ್ಷ್ಯಭೇದನದ ಸ್ವಾರಸ್ಯವಾದ ಕಥೆಯಿದೆ. ಆಚಾರ್ಯ ದ್ರೋಣರು ಶಿಷ್ಯರನ್ನು ಪರೀಕ್ಷಿಸುವ ಸಲುವಾಗಿ ಮರದ ಹಕ್ಕಿಯ ಲಕ್ಷ್ಯವೊಂದನ್ನು ಸಿದ್ಧಗೊಳಿಸಿ ತಮ್ಮ ಶಿಷ್ಯರೆಲ್ಲರನ್ನೂ ಒಬ್ಬೊಬ್ಬರನ್ನಾಗಿ ಕರೆದು ಲಕ್ಷ್ಯವನ್ನು ನೋಡುವಂತೆ ಹೇಳಿ ಯಾವುದನ್ನು ನೋಡುತ್ತಿರುವೆಯೆಂದು ಶಿಷ್ಯರನ್ನು ಪ್ರಶ್ನಿಸುತ್ತಾರೆ. ಶಿಷ್ಯರು ಇದಕ್ಕೆ ಉತ್ತರವಾಗಿ 'ಲಕ್ಷ್ಯವಾದ ಪಕ್ಷಿಯನ್ನೂ ನೋಡುತ್ತಿದ್ದೇನೆ. ಪಕ್ಕದಲ್ಲಿರುವ ನಿಮ್ಮನ್ನೂ ನೋಡುತ್ತಿದ್ದೇನೆ"–ಮುಂತಾಗಿ ಉತ್ತರಿಸುತ್ತಾರೆ. ಹೀಗೆ ಉತ್ತರಿಸಿದೊಡನೆ ನೀವು ಲಕ್ಷ್ಯವನ್ನು ಭೇದಿಸಲು ಸಾಧ್ಯವಿಲ್ಲವೆಂದು ಹೇಳಿ– ಅವರನ್ನು ಬದಿಗೆ ನಿಲ್ಲಿಸುತ್ತಾರೆ. ಕಡೆಗೆ ಅರ್ಜುನನನ್ನು ಪ್ರಶ್ನಿಸುತ್ತಾರೆ. ಅವನು ಹಕ್ಕಿಯ ಕುತ್ತಿಗೆಯನ್ನು ಮಾತ್ರವೇ ನೋಡುತ್ತಿದ್ದೇನೆಂದು ಹೇಳುತ್ತಾನೆ. ಇವ

ಮುನಿಯಾದವನು ಏಕಾಕಿಯಾಗಿ ಸಂಚರಿಸಬೇಕು. ಮನೆಯಿಲ್ಲದವನಾಗಿರಬೇಕು. ಜಾಗರೂಕನಾಗಿರಬೇಕು. ಗುಹೆಗಳಲ್ಲಿ ವಾಸಮಾಡಬೇಕು. ನಡೆ-ನುಡಿಗಳಿಂದ ತನ್ನ ಸ್ವಭಾವವೇನೆಂಬುದು ಇನ್ನೊಬ್ಬರಿಗೆ ತಿಳಿಯದಂತಿರಬೇಕು. ಮಿತಭಾಷಿಯಾಗಿರಬೇಕು.

**ಗೃಹಾರಮ್ಭೋಽತಿದುಃಖಾಯ ವಿಫಲಶ್ಚಾಧ್ರುವಾತ್ಮನಃ ।**
**ಸರ್ಪಃ ಪರಕೃತಂ ವೇಶ್ಮ ಪ್ರವಿಶ್ಯ ಸುಖಮೇಧತೇ ॥೧೫॥**

ಅಶಾಶ್ವತವಾದ ಈ ದೇಹದ ವಾಸಕ್ಕಾಗಿ ಮನೆಯನ್ನು ಕಟ್ಟಿಸಲು ಪ್ರಾರಂಭಿಸುವುದು ಅತಿದುಃಖಕ್ಕೆ ಕಾರಣವಾಗುತ್ತದೆ ಮತ್ತು ನಿಷ್ಫಲವೂ ಆಗುತ್ತದೆ. ವಾಸಿಸಲು ಮನೆಯು ಬೇಕೆನ್ನುವವರು ಗೆಜ್ಜಲಹುಳುಗಳಿಂದ ದೃಢವಾಗಿ ನಿರ್ಮಿಸಲ್ಪಟ್ಟ ಹುತ್ತಗಳಲ್ಲಿ ಹಾವು ಸೇರಿಕೊಳ್ಳುವಂತೆ–ಬೇರೆಯವರ ಮನೆಗಳಲ್ಲಿ ಸೇರಿಕೊಂಡು ಹಾವಿನಂತೆ ಸುಖವಾಗಿರಬಹುದು. ಇದು ಸರ್ಪದಿಂದ ಕಲಿಯಬೇಕಾದ ಪಾಠ.

ಮುಂದೆ ನಾನು ಜೇಡರ ಹುಳುವಿನಿಂದ ಕಲಿಯಬೇಕಾದ ಪಾಠವನ್ನು ಹೇಳುತ್ತೇನೆ :

**ಏಕೋ ನಾರಾಯಣೋ ದೇವಃ ಪೂರ್ವಸೃಷ್ಟಂ ಸ್ವಮಾಯಯಾ ।**
**ಸಂಹೃತ್ಯ ಕಾಲಕಲಯಾ ಕಲ್ಪಾನ್ತ ಇದಮೀಶ್ವರಃ ॥೧೬॥**

ಅದ್ವಿತೀಯನಾದ, ಸ್ವಪ್ರಕಾಶನಾದ ನಾರಾಯಣನು ತನ್ನ ಮಾಯೆಯಿಂದ ಹಿಂದೆ ಸೃಷ್ಟಿಸಲ್ಪಟ್ಟಿದ್ದ ಈ ಜಗತ್ತನ್ನು ಕಲ್ಪಾಂತರದಲ್ಲಿ ಕಾಲಶಕ್ತಿಯಿಂದ ಲಯಗೊಳಿಸಿದನು.

**ಏಕ ಏವಾದ್ವಿತೀಯೋಽಭೂದಾತ್ಮಾಧಾರೋಽಖಿಲಾಶ್ರಯಃ ।**
**ಕಾಲೇನಾತ್ಮಾನುಭಾವೇನ ಸಾಮ್ಯಂ ನೀತಾಸು ಶಕ್ತಿಷು ।**
**ಸತ್ತ್ವಾದಿಷ್ವಾದಿಪುರುಷಃಪ್ರಧಾನಪುರುಷೇಶ್ವರಃ ॥೧೭॥**

---

ನೊಬ್ಬನೇ ಲಕ್ಷ್ಯವನ್ನು ಭೇದಿಸುವನೆಂದು ಹೇಳಿ ದ್ರೋಣರು ಲಕ್ಷ್ಯವನ್ನು ಭೇದಿಸುವಂತೆ ಅರ್ಜುನನಿಗೆ ಆದೇಶನೀಡುತ್ತಾರೆ. ಕ್ಷಣಮಾತ್ರದಲ್ಲಿ ಲಕ್ಷ್ಯವು ಕೆಳಗೆ ಬೀಳುತ್ತದೆ. ಲಕ್ಷ್ಯದ ಮೇಲೆ ಗುರಿಯಿಡುವಂತೆ ಮನಸ್ಸು ಪರಮಾತ್ಮನಲ್ಲಿ ಏಕಾಗ್ರವಾಗಿರಬೇಕು. ಆಗಲೇ ಆತ್ಮಸಾಕ್ಷಾತ್ಕಾರವನ್ನು ಸಾಧಿಸಬಹುದು.

ಆತನ ಶಕ್ತಿರೂಪವಾದ ಕಾಲದಿಂದಲೇ ಸತ್ತ್ವರಜಸ್ತಮೋಗುಣಗಳು ಸಾಮ್ಯವನ್ನು ಪಡೆದುವು. ಪ್ರಧಾನವೆನಿಸಿಕೊಂಡುವು. ಗುಣಸಾಮ್ಯವೆಂಬ ಪ್ರಧಾನಕ್ಕೂ, ಪ್ರಧಾನವೇ ಉಪಾಧಿಯಾಗಿರುವ ಜೀವನಿಗೂ ಈಶ್ವರನಾಗಿ ಅಖಿಲಾಶ್ರಯನಾದ ಆದಿಪುರುಷನು ಪ್ರಳಯಕಾಲದಲ್ಲಿ ಏಕಮೇವಾ ದ್ವಿತೀಯನಾಗಿದ್ದನು. ಪ್ರಳಯಕಾಲದಲ್ಲಿ ಭಗವಂತನನ್ನುಳಿದು ಬೇರೆ ಯಾವುದೂ ಇರಲಿಲ್ಲ.

**ಪರಾವರಾಣಾಂ ಪರಮ ಆಸ್ತೇ ಕೈವಲ್ಯ ಸಂಜ್ಞಿತಃ ।**
**ಕೇವಲಾತ್ಮಾನುಭವಾನನ್ದಸನ್ದೋಹೋ ನಿರುಪಾಧಿಕಃ ॥೧೮॥**

ಏಕಮೇವಾದ್ವಿತೀಯನಾಗಿ ಬೆಳಗುತ್ತಿರುವಾಗ ವಿಷಯಗಳ ಸಂಪರ್ಕ ವಿಲ್ಲದೆಯೂ, ಸ್ವಪ್ರಕಾಶನಾಗಿಯೂ, ಆನಂದಘನನಾಗಿಯೂ, ಉಪಾಧಿ ರಹಿತನಾಗಿಯೂ, ಉತ್ತಮರಾದ ಬ್ರಹ್ಮಾದಿಗಳಿಗೂ ಮಧ್ಯಮರಾದ ಮುಕ್ತ ರಿಗೂ ಪ್ರಾಪ್ಯನಾಗಿಯೂ ಇದ್ದು ಕೈವಲ್ಯನೆನಿಸಿಕೊಳ್ಳುತ್ತಾನೆ.

**ಕೇವಲಾತ್ಮಾನುಭಾವೇನ ಸ್ವಮಾಯಾಂ ತ್ರಿಗುಣಾತ್ಮಿಕಾಮ್ ।**
**ಸಂಕ್ಷೋಭಯನ್ಸೃಜತ್ಯಾದೌ ತಯಾ ಸೂತ್ರಮರಿನ್ದಮ ॥೧೯॥**

ಶತ್ರುಗಳನ್ನು ದಮನ ಮಾಡುವವನೇ! ಯದುರಾಜ! ತನ್ನ ಪ್ರಭಾವರೂಪವಾದ ಕಾಲದಿಂದ ಸತ್ತ್ವಾದಿಗುಣರೂಪವಾದ ತನ್ನ ಮಾಯೆ ಯನ್ನು ಕಲಕುತ್ತಾ ಅದೇ ಮಾಯೆಯಿಂದ ಕ್ರಿಯಾಶಕ್ತಿಪ್ರಧಾನವಾದ ಮಹತ್ತತ್ತ್ವವನ್ನು ಸೃಷ್ಟಿಸುತ್ತಾನೆ.

**ತಾಮಾಹುಸ್ತ್ರಿಗುಣವ್ಯಕ್ತಿಂ ಸೃಜನ್ತೀಂ ವಿಶ್ವತೋಮುಖಮ್ ।**
**ಯಸ್ಮಿನ್ ಪ್ರೋತಮಿದಂ ವಿಶ್ವಂ ಯೇನ ಸಂಸರತೇ ಪುಮಾನ್ ॥೨೦॥**

ಯಾವುದರಿಂದ ಹುಟ್ಟಿದ ಶರೀರದಿಂದ ಮನುಷ್ಯನು ಸಂಸಾರದಲ್ಲಿ ಸಿಕ್ಕಿಹಾಕಿಕೊಳ್ಳುವನೋ, ಯಾವುದರಲ್ಲಿ ಈ ಜಗತ್ತೆಲ್ಲವೂ ಹಾಸು-ಹೊಕ್ಕಾಗಿ ಹೆಣೆಯಲ್ಪಟ್ಟಿರುವುದೋ, ಯಾವುದು ಸರ್ವತೋಮುಖವಾದ ಜಗತ್ತನ್ನು ಸೃಷ್ಟಿಸುವುದೋ ಅಂತಹ ಆ ಮಹತ್ತತ್ತ್ವವನ್ನು ಗುಣತ್ರಯಗಳ ಕಾರ್ಯವೆಂದು ಹೇಳುತ್ತಾರೆ.

ಜೇಡರಹುಳುವಿನ ಉದಾಹರಣೆಯಿಂದ ಪರಮಾತ್ಮನ ಈ ಸೃಷ್ಟಿ ಕಾರ್ಯವನ್ನು ಮನನಮಾಡಿಕೊಳ್ಳಬಹುದಾಗಿದೆ :

**ಯಥೋರ್ಣನಾಭಿರ್ಹೃದಯಾದೂರ್ಣಾಂ ಸನ್ತತ್ಯ ವಕ್ತ್ರತಃ ।**
**ತಯಾ ವಿಹೃತ್ಯ ಭೂಯಸ್ತಾಂ ಗ್ರಸತ್ಯೇವಂ ಮಹೇಶ್ವರಃ ॥೨೧॥**

ಯಾವ ರೀತಿಯಲ್ಲಿ ಜೇಡರಹುಳುವು ಹೃದಯದಿಂದ ಹೊರಬಂದ ನೂಲೆಳೆಯನ್ನು ಬಾಯಿಂದ ಹರಡಿ ಬಲೆಯನ್ನುಕಟ್ಟಿ ಆ ಬಲೆಯಲ್ಲಿಯೇ ತಾನು ಸ್ವೇಚ್ಛೆಯಿಂದ ವಿಹರಿಸುತ್ತಿದ್ದು ಕಡೆಗೆ ತಾನು ಕಟ್ಟಿದ ಬಲೆಯನ್ನೇ ಅನುಕ್ರಮವಾಗಿ ನುಂಗಿಹಾಕುವುದೋ ಅದೇ ರೀತಿಯಲ್ಲಿ ಪರಮಾತ್ಮನು ಮಹದಾದಿಗಳ ಮೂಲಕವಾಗಿ ಅನುಕ್ರಮವಾಗಿ ಜಗತ್ತನ್ನು ಸೃಷ್ಟಿಸಿ ಪುನಃ ಅದೇ ಕ್ರಮದಿಂದಲೇ ಜಗತ್ತನ್ನು ತನ್ನೊಳಗೆ ಲಯಗೊಳಿಸಿಕೊಳ್ಳುತ್ತಾನೆ.

ಮುಂದೆ ಕಣಜದ ಹುಳುವಿನಿಂದ ಕಲಿತ ಪಾಠವನ್ನು ಹೇಳುತ್ತೇನೆ :

**ಯತ್ರ ಯತ್ರ ಮನೋ ದೇಹೀ ಧಾರಯೇತ್ಸಕಲಂ ಧಿಯಾ ।**
**ಸ್ನೇಹಾದ್ವೇಷಾದ್ಭಯಾದ್ವಾಪಿ ಯಾತಿ ತತ್ತತ್ಸರೂಪತಾಮ್ ॥೨೨॥**

ಮನುಷ್ಯನು ಸ್ನೇಹದಿಂದಾಗಲೀ, ಭಯದಿಂದಾಗಲೀ, ದ್ವೇಷದಿಂದಾಗಲೀ ತನ್ನ ಸಂಪೂರ್ಣವಾದ ಮನಸ್ಸನ್ನು ಯಾವುದರಲ್ಲಿ ಕೇಂದ್ರೀಕರಿಸುವನೋ ಅವನು ಅದೇ ಆಗಿಬಿಡುತ್ತಾನೆ. ಅದೇ ಸ್ವರೂಪವನ್ನೇ ಹೊಂದಿ ಬಿಡುತ್ತಾನೆ.

**ಕೀಟಃ ಪೇಶಸ್ಕೃತಾಂ ಧ್ಯಾಯನ್ಕುಡ್ಯಾಂ ತೇನ ಪ್ರವೇಶಿತಃ ।**
**ಯಾತಿ ತತ್ಸಾತ್ಮತಾಂ ರಾಜನ್ ಪೂರ್ವರೂಪಮಸನ್ತ್ಯಜನ್ ॥೨೩॥**

ಕಣಜದ ಹುಳುವು ತನ್ನ ಆಹಾರವಾಗಲೆಂದು ಬೇರೊಂದು ಹುಳುವನ್ನು ತಂದು ತನ್ನ ಗೂಡಿನಲ್ಲಿ ಇಟ್ಟಾಗ ಆ ಕೀಟವು ಭಯದಿಂದ ಆ ಕಣಜವನ್ನು ಧ್ಯಾನಿಸುತ್ತಾ ಕಡೆಗೆ ಆ ಕಣಜದ ತಾದಾತ್ಮ್ಯವನ್ನೇ ಪಡೆದುಬಿಡುವುದು. ತನ್ನ ಹಿಂದಿನ ರೂಪವನ್ನು ಬಿಡದೆ ಅದೇ ದೇಹದಲ್ಲಿದ್ದರೂ ಆ ಕಣಜದ ತಾದಾತ್ಮ್ಯವನ್ನು ಪಡೆಯುವುದು.*

---

* ಭಗವದ್ಧ್ಯಾನ ಪರಾಯಣರಾದವರು ಭಗವಂತನ ಸಾರೂಪ್ಯವನ್ನು ಪಡೆಯುವುದರಲ್ಲಿ ಆಶ್ಚರ್ಯವೇನೂ ಇಲ್ಲ–ಎಂಬುದನ್ನು ಕಣಜದ ಹುಳುವಿನ ದೃಷ್ಟಾಂತದ

ಮಹಾರಾಜ! ಈ ಪ್ರಕಾರವಾಗಿ ನನ್ನ ಹಲವಾರು ಮಂದಿ ಗುರುಗಳಿಂದ ಬುದ್ಧಿಗೆ ಶಿಕ್ಷಣವನ್ನು ಕೊಡಿಸಿದ್ದೇನೆ. ಮುಂದೆ ನಾನು ನನ್ನ ದೇಹವೆಂಬ ಗುರುವಿನಿಂದಲೇ ಕಲಿತ ಪಾಠವನ್ನು ಹೇಳುತ್ತೇನೆ : ಅವಧರಿಸು.

**ದೇಹೋ ಗುರುರ್ಮಮ ವಿರಕ್ತಿವಿವೇಕಹೇತು-**
**ರ್ಬಿಭ್ರತ್ ಸ್ಮ ಸತ್ತ್ವನಿಧನಂ ಸತತಾರ್ತ್ಯುದರ್ಕಮ್ ।**
**ತತ್ತ್ವಾನ್ಯನೇನ ವಿಮೃಶಾಮಿ ಯಥಾ ತಥಾಪಿ ।**
**ಪಾರಕ್ಯಮಿತ್ಯವಸಿತೋ ವಿಚರಾಮ್ಯಸಙ್ಗಃ ॥೨೫॥**

ಮಹಾರಾಜ! ಈ ದೇಹವೂ ನನ್ನ ಗುರುವಾಗಿದೆ. ಈ ದೇಹವು ನನಗೆ ವಿವೇಕದ ಮತ್ತು ವೈರಾಗ್ಯದ ಶಿಕ್ಷಣವನ್ನು ಕೊಡುತ್ತದೆ. ಜೀವಿಸುವುದಕ್ಕಾಗಲೀ ಸಾಯುವುದಕ್ಕಾಗಲೀ ಈ ದೇಹದ ಜೊತೆಗೂಡಿಯೇ ಇರಬೇಕು. ಅಂತಿಮವಾಗಿ ಈ ದೇಹವು ದುಃಖಕ್ಕೆ ಕಾರಣವಾಗಿರುವುದರಿಂದ ವೈರಾಗ್ಯವನ್ನು ಬೋಧಿಸುತ್ತದೆ. ಈ ದೇಹದಿಂದ ತತ್ತ್ವಗಳನ್ನು ವಿಮರ್ಶಿಸಿ ತಿಳಿದುಕೊಳ್ಳಲು ಸಾಧ್ಯವಾಗುವುದರಿಂದ ವಿವೇಕದ ಶಿಕ್ಷಣವನ್ನು ಈ ದೇಹದಿಂದಲೇ ಪಡೆಯಬಹುದಾಗಿದೆ. ಆದರೂ ಕಡೆಯಲ್ಲಿ ಇದು

---

ಮೂಲಕ ಇಲ್ಲಿ ತಿಳಿಸಿದೆ. ಕೀಟವು ಕಣಜದ ನಿರಂತರಧ್ಯಾನದಿಂದ ಅದರ ತಾದಾತ್ಮ್ಯವನ್ನು-ಎಂದರೆ ಸಾರೂಪ್ಯವನ್ನು ಹೊಂದಿಬಿಡುತ್ತದೆ. ಸಾತ್ಮತಾಂ ಎಂಬುದರ ಬದಲಿಗೆ ಸಾಮ್ಯತಾಂ ಎಂಬ ಪಾಠಾಂತರವೂ ಉಂಟು. ಪೂರ್ವರೂಪವನ್ನು ಬಿಡದೆಯೇ ಕಣಜದ ತಾದಾತ್ಮ್ಯವನ್ನು ಹೊಂದುವುದು-ಎಂಬುದರ ಅಭಿಪ್ರಾಯವಾಗಿದೆ. ಕೀಟವು ಅದೇ ದೇಹದಲ್ಲಿರುವಾಗಲೇ ಅನ್ಯಸಾರೂಪ್ಯವನ್ನು ಹೊಂದುವಾಗ ದೇಹಾಂತರ ದಿಂದ ಸಾರೂಪ್ಯವನ್ನು ಹೊಂದುತ್ತವೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಯದಾ ತೇನೈವ ದೇಹೇನ ಅನ್ಯಸಾರೂಪ್ಯಂ ದೃಶ್ಯತೇ ತದಾ ಕಿಂ ವಕ್ತವ್ಯಂ ದೇಹಾನ್ತರೇಣ ಸಾರೂಪ್ಯಂ ಘಟತ ಇತಿ । (ಶ್ರೀಧರೀಯ)

ಈ ಶ್ಲೋಕದಲ್ಲಿ ತತ್ಸಮತಾಂ-ತತ್ಸಾಮ್ಯತಾಂ-ತತ್ಸಾತ್ಮತಾಂ-ಎಂಬ ಮೂರು ಪಾಠಗಳಿವೆ. ಆ ಧ್ಯೇಯವಸ್ತುವಿನ ಸಾಮ್ಯವನ್ನು-ಎಂದು ಅರ್ಥ. ಕೊನೆಯ ಪಾಠದಲ್ಲಿ ಆತ್ಮಶಬ್ದಕ್ಕೆ ದೇಹ-ಎಂದು ಅರ್ಥ. ಧ್ಯೇಯವಸ್ತುವಿಗೆ ಸಮಾನವಾದ ದೇಹವನ್ನು-ಎಂದು ಅಭಿಪ್ರಾಯ. ಕಣಜವನ್ನೇ ಧ್ಯಾನಿಸುತ್ತಿರುವ ಕೀಟವು ಕಣಜದ ಸಾಮ್ಯವನ್ನು ಅಥವಾ ಕಣಜದ ದೇಹಕ್ಕೆ ಸಮಾನವಾದ ದೇಹವನ್ನು

ಪರಾಧೀನವಾಗಿ ನಾಯಿ-ನರಿಗಳಿಗೆ ಸೇರಿಹೋಗುತ್ತದೆಯಾದುದರಿಂದ ಈ ದೇಹದ ಮೇಲಿನ ಅಭಿಮಾನವನ್ನು ತೊರೆದು ಸಂಚರಿಸುತ್ತಿದ್ದೇನೆ.

**ಜಾಯಾತ್ಮಜಾರ್ಥ ಪಶುಭೃತ್ಯಗೃಹಾಪ್ತವರ್ಗಾನ್**
**ಪುಷ್ಣಾತಿ ಯತ್ಪ್ರಿಯಚಿಕೀರ್ಷಯಾ ವಿತನ್ವನ್ ।**
**ಸ್ವಾನ್ತೇ ಸಕೃಚ್ಛ್ರಮವರುದ್ಧಧನಃ ಸ ದೇಹಃ**
**ಸೃಷ್ಟ್ವಾಸ್ಯ ಬೀಜಮವಸೀದತಿ ವೃಕ್ಷಧರ್ಮಾ ॥೨೬॥**

ಜನರು ಯಾವ ಶರೀರವನ್ನು ಪ್ರೀತಿಸಿ ಅದರ ಪೋಷಣೆಗಾಗಿ ಹೆಂಡತಿ-ಮಕ್ಕಳು-ಧನ-ಪಶುಗಳು-ಭೃತ್ಯರು-ಮನೆ-ಆಪ್ತವರ್ಗದವರು–ಇವರೆಲ್ಲ ರನ್ನೂ ಕೂಡಿಹಾಕಿಕೊಂಡು ಕಾಪಾಡುವರೋ, ಕಷ್ಟಪಟ್ಟು ಹಣವನ್ನು ಸಂಪಾದಿಸುವರೋ, ಅಂತಹ ಅತಿಪ್ರಿಯವಾದ ಶರೀರವು–ವೃಕ್ಷಾಂತರಕ್ಕೆ ಬೀಜವನ್ನಿಟ್ಟು ನಾಶ ಹೊಂದುವ ವೃಕ್ಷದಂತೆ–ದೇಹಾಂತರಕ್ಕೆ ಬೀಜ ಭೂತ ವಾದ ಕರ್ಮಫಲವನ್ನು ಗಳಿಸಿಟ್ಟು ನಾಶಹೊಂದುತ್ತದೆ.

**ಜಿಹ್ವೈಕತೋಽಮುಮಪಕರ್ಷತಿ ಕರ್ಹಿ ತರ್ಷಾ**
**ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।**

---

ಹೊಂದಿಬಿಡುವುದು. ಹಾಗೆ ಪರಮಾತ್ಮಧ್ಯಾನಪರಾಯಣನಾದ ಜೀವನು ನಿರಂಜನಃ **ಪರಮಂ ಸಾಮ್ಯಂ ಉಪೈತಿ**–ಎಂಬ ಶ್ರುತಿಯಂತೆ ಪರಮಾತ್ಮನ ಸಾಮ್ಯವನ್ನು ಅಥವಾ ಪರಮಾತ್ಮನ ಸಾರೂಪ್ಯವನ್ನು–ಎಂದರೆ : ಧ್ಯೇಯಾಕಾರದ ಸಾಮ್ಯ ಸಾರೂಪ್ಯ ವನ್ನು–ಎಂದರ್ಥ. ಪೂರ್ವರೂಪವನ್ನು ಬಿಡದೆಯೇ ಇನ್ನೊಂದರ ಸಾಮ್ಯರೂಪ ವನ್ನು ಪಡೆಯುತ್ತಾನೆ. ಹೀಗಿರುವಾಗ ಪೂರ್ವರೂಪವನ್ನು ಬಿಟ್ಟುಬಿಟ್ಟನಂತರದಲ್ಲಿ ಸಾಮ್ಯಸಾರೂಪವನ್ನು ಹೊಂದಿಯೇ ಹೊಂದುತ್ತಾನೆಂಬುದನ್ನು ಬೇರೆ ಹೇಳಬೇಕೆ? –ಎಂದು (ಕೈಮುತಿಕನ್ಯಾಯದಿಂದ) ತಿಳಿಸಿದೆ.
(ವೀರರಾಘವೀಯ)

'ಪುರುಷನು ದ್ವೇಷದಿಂದ ಧ್ಯಾನಿಸಿದರೆ ದ್ವೇಷೀಸ್ವರೂಪವನ್ನೂ ಸ್ನೇಹದಿಂದ ಧ್ಯಾನಿಸಿದರೆ ಸ್ನೇಹೀಸ್ವರೂಪವನ್ನೂ ಪಡೆಯುವನು'–ಎಂಬುದು ದಿಟವಾದರೆ ರಾಮಾದಿಗಳ ದ್ವೇಷದಿಂದ ರಾವಣಾದಿಗಳಿಗೆ ನಿರ್ದುಃಖಾನಂದ ಭಾಗವತ್ಸ್ವರೂಪದ ಪ್ರಾಪ್ತಿಯು ಹೇಗೆ ಸಾಧ್ಯ? ಎಂದರೆ ರಾವಣಾದಿಗಳ ದೇಹದಲ್ಲಿರುವ ದೈತ್ಯಜೀವ ರಿಗೆ ದುಃಖಪ್ರಾಪ್ತಿಯೂ, ಮುಕ್ತಿಯೋಗ್ಯರಾದ ಜಯ-ವಿಜಯರಿಗೆ ಭಗವತ್ಸ್ವರೂಪ ಪ್ರವೇಶದಿಂದ ಸುಖಪ್ರಾಪ್ತಿಯೂ ಆಯಿತೆಂದು ತಾತ್ಪರ್ಯ. (ವಿಜಯಧ್ವಜೀಯ)

**ಘ್ರಾಣೋಽನ್ಯ ತಶ್ಚಪಲದೃಕ್ ಕ್ವ ಚ ಕರ್ಮಶಕ್ತಿ-**
**ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನನ್ತಿ ॥೨೭॥**

ಮನುಷ್ಯನ ಮನಸ್ಸನ್ನು ನಾಲಿಗೆಯು ರುಚಿಯ ಕಡೆಗೂ, ಬಾಯಾರಿಕೆಯು ನೀರಿನಕಡೆಗೂ, ಶಿಶ್ನವು ಮೈಥುನದ ಕಡೆಗೂ, ಮೂಗು ಸುವಾಸನೆಯ ಕಡೆಗೂ, ಚರ್ಮವು ಸುಖಸ್ಪರ್ಶದ ಕಡೆಗೂ, ಹೊಟ್ಟೆಯು ಅನ್ನದ ಕಡೆಗೂ, ಕಿವಿಯು ಸುಶ್ರಾವ್ಯವಾದ ಶಬ್ದದ ಕಡೆಗೂ ಚಂಚಲದೃಷ್ಟಿಯು ಚೆಲುವಿನ ರೂಪದ ಕಡೆಗೂ—ಮನೆಯ ಯಜಮಾನನನ್ನು ಸವತಿಯರಾದ ಭಾರ್ಯೆಯರು ತಮ್ಮ-ತಮ್ಮ ಕಡೆಗೆ ಸೆಳೆದಾಡುವಂತೆ—ಸೆಳೆದಾಡುತ್ತಾ ಹರಿದು ಹಂಚಿಹಾಕಿಬಿಡುತ್ತವೆ.

**ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾಽತ್ಮಶಕ್ತ್ಯಾ**
**ವೃಕ್ಷಾನ್ಸರೀಸೃಪಪಶೂನ್ ಖಗದಂಶಮತ್ಸ್ಯಾನ್ ।**
**ತೈಸ್ತೈರತುಷ್ಟಹೃದಯಃ ಪುರುಷಂ ವಿಧಾಯ**
**ಬ್ರಹ್ಮಾವಲೋಕಧಿಷಣಂ ಮುದಮಾಪ ದೇವಃ ॥೨೮॥**

ಪರಮಾತ್ಮನು ಹುಟ್ಟು-ಸಾವುಗಳಿಲ್ಲದ ಆತ್ಮಶಕ್ತಿಯಿಂದ ಗಿಡ-ಮರ-ಬಳ್ಳಿಗಳನ್ನೂ, ಸರ್ಪಗಳನ್ನೂ, ಪಶು-ಪಕ್ಷಿಗಳನ್ನೂ, ನೊಣಗಳನ್ನೂ, ಮೀನುಗಳನ್ನೂ, ಇನ್ನೂ ಹಲವಾರು ವಿಧವಾದ ಶರೀರಗಳನ್ನೂ ಸೃಷ್ಟಿಸಿದನು. ಆದರೆ ಇದರಿಂದ ಅವನಿಗೆ ಸಂತೋಷವುಂಟಾಗಲಿಲ್ಲ. ಬಳಿಕ ಬ್ರಹ್ಮಸಾಕ್ಷಾತ್ಕಾರಕ್ಕೆ ಅನುಕೂಲವಾದ ಬುದ್ಧಿಯುಳ್ಳ ಮನುಷ್ಯನನ್ನು ಸೃಷ್ಟಿಸುತ್ತಲೇ ಆದಿದೇವನು ಆನಂದಭರಿತನಾಗಿಬಿಟ್ಟನು.

**ಲಬ್ಧ್ವಾ ಸುದುರ್ಲಭಮಿದಂ ಬಹುಸಮ್ಭವಾನ್ತೇ**
**ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।**
**ತೂರ್ಣಂ ಯತೇತ ನ ಪತೇದನುಮೃತ್ಯು ಯಾವ-**
**ನ್ನಿಃಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥**

ಧೀರನಾದವನು ಅನೇಕ ಜನ್ಮಗಳ ಕಡೆಯಲ್ಲಿ, ಅನಿತ್ಯವಾದರೂ ಪುರುಷಾರ್ಥವನ್ನು ಕೊಡುವ ಅತ್ಯಂತ ದುರ್ಲಭವಾದ ಈ ಮನುಷ್ಯಜನ್ಮವನ್ನು ಪಡೆದು ಮೃತ್ಯುಧರ್ಮವುಳ್ಳ ಈ ಶರೀರವು ಬಿದ್ದುಹೋಗುವುದ

ರೊಳಗಾಗಿಯೇ ಮೋಕ್ಷಪ್ರಾಪ್ತಿಗಾಗಿ ಪ್ರಯತ್ನಿಸಬೇಕು. ಮನುಷ್ಯಜನ್ಮವನ್ನು ಪಡೆದು ವಿಷಯೋಪಭೋಗಗಳಿಗಾಗಿ ಹಾತೊರೆಯಬಾರದು. ವಿಷಯೋಪ ಭೋಗಗಳು ಸಮಸ್ತಪ್ರಾಣಿಗಳಿಗೂ ಎಲ್ಲ ಜನ್ಮಗ್ರಳಲ್ಲಿಯೂ ಸಹಜವಾಗಿಯೇ ಲಭಿಸುತ್ತವೆ.

ಮಹಾರಾಜ! ಹೀಗೆ ನಾನು ವೈರಾಗ್ಯವನ್ನು ಪಡೆದು ವಿಶಿಷ್ಟವಾದ ಜ್ಞಾನವೆಂಬ ಬೆಳಕನ್ನು ಹೊಂದಿ ಆತ್ಮನಿಷ್ಠನಾಗಿ ಮುಕ್ತಸಂಗನಾಗಿ ಅಹಂಕಾರವಿಲ್ಲದವನಾಗಿ ಈ ಭೂಮಿಯಲ್ಲಿ ಸಂಚರಿಸುತ್ತಿರುವೆನು. ನನ್ನ ಅಭಿಪ್ರಾಯದಲ್ಲಿ ಒಬ್ಬನೇ ಗುರುವಿನಿಂದ ಪಡೆಯುವ ಜ್ಞಾನವು ಸುಸ್ಥಿರವೂ ಆಗಿರುವುದಿಲ್ಲ ; ಪುಷ್ಕಳವಿಚಾರವುಳ್ಳದ್ದೂ ಆಗಿರುವುದಿಲ್ಲ. ಋಷಿಗಳಿಂದ ಏಕಮೇವಾದ್ವಿತೀಯವಾದ ಈ ಪರಬ್ರಹ್ಮವಸ್ತುವು ಹಲವು ಬಗೆಯಾಗಿ ವರ್ಣಿಸಲ್ಪಡುತ್ತದೆ."

ಶ್ರೀಕೃಷ್ಣನು ಉದ್ಧವನಿಗೆ ಹೇಳುತ್ತಾನೆ :

"ಉದ್ಧವ! ಆಳವಾದ ಬುದ್ಧಿಯನ್ನುಹೊಂದಿದ್ದ ಆ ಅವಧೂತ ಬ್ರಾಹ್ಮಣನು ಯದುಮಹಾರಾಜನಿಗೆ ಹೀಗೆ ಉಪದೇಶಿಸಿದನು. ಅಧ್ಯಾತ್ಮದ ಉಪದೇಶವನ್ನು ಅವಧೂತಬ್ರಾಹ್ಮಣನಿಂದ ಕೇಳಿದನಂತರ ಯದುಮಹಾ ರಾಜನು ಆತನನ್ನು ಸತ್ಕರಿಸಿ ನಮಸ್ಕರಿಸಿದನು. ಅನಂತರ ದತ್ತಾತ್ರೇಯನು ಯದುರಾಜನ ಅನುಮತಿಯನ್ನು ಪಡೆದು ಇಚ್ಛಾನುಸಾರವಾಗಿ ತಾನು ಎಲ್ಲಿಂದ ಬಂದಿದ್ದನೋ ಅಲ್ಲಿಗೆ ತೆರಳಿದನು. ನಮ್ಮ ಪೂರ್ವಜನಾದ ಯದು ಮಹಾರಾಜನು ದತ್ತಾತ್ರೇಯನ ಈ ಉಪದೇಶವನ್ನು ಕೇಳಿ ಸಮಸ್ತವಾದ ಆಸಕ್ತಿಗಳಿಂದಲೂ ಮುಕ್ತನಾಗಿ ಸಮದರ್ಶಿಯಾದನು. ಅವನಂತೆಯೇ ನೀನೂ ಕೂಡ ಸಮಸ್ತವಾದ ಆಸಕ್ತಿಗಳನ್ನು ತೊರೆದು ಸಮದರ್ಶಿಯಾಗು.*

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದ ಏಕಾದಶಸ್ಕಂಧದಲ್ಲಿ ೯ನೆಯ ಅಧ್ಯಾಯವು ಮುಗಿಯಿತು.

---

* ಈ ಅವಧೂತೋಪಾಖ್ಯಾನದಲ್ಲಿ ಇಪ್ಪತ್ತೈದು ಮಂದಿ ಗುರುಗಳು ಹೇಳಲ್ಪಟ್ಟಿ ರುವರು. ಅವರಲ್ಲಿ ಕಪೋತ, ಮೀನು, ಜಿಂಕೆ, ಕುಮಾರಿ, ಗಜ, ಸರ್ಪ, ದೀಪದ ಹುಳು, ಕುರರಪಕ್ಷಿ–ಈ ಎಂಟೂ ಸಂಗವನ್ನು ಬಿಡಬೇಕೆಂಬುದರಲ್ಲಿ ಗುರುಗಳು.

# ಸಾರಹೀನವಾದ ಲೌಕಿಕ ಮತ್ತು ಪಾರಲೌಕಿಕವಾದ ಉಪಭೋಗಗಳ ವಿವರಣೆ

ಭಗವಂತನು ಹೇಳುತ್ತಾನೆ :

**ಮಯೋದಿತೇಷ್ವವಹಿತಃ ಸ್ವಧರ್ಮೇಷು ಮದಾಶ್ರಯಃ ।**
**ವರ್ಣಾಶ್ರಮಕುಲಾಚಾರಮಕಾಮಾತ್ಮಾ ಸಮಾಚರೇತ್ ॥೧॥**

"ಪ್ರಿಯಸಖನೇ! ಸಾಧಕನಾದವನು ನನ್ನನ್ನೇ ಸಂಪೂರ್ಣವಾಗಿ ಆಶ್ರಯಿಸಿ ನನ್ನಿಂದ ಉಪದಿಷ್ಟವಾದ ಧರ್ಮಗಳನ್ನು ಸಾವಧಾನತೆಯಿಂದ ಪರಿಪಾಲಿಸುತ್ತಿರಬೇಕು. ಎಲ್ಲಿಯವರೆಗೆ ಪರಸ್ಪರ ವಿರೋಧವುಂಟಾಗುವುದಿಲ್ಲವೋ ಅಲ್ಲಿಯವರೆಗೂ ನಿಷ್ಕಾಮಭಾವದಿಂದ ತನ್ನ ವರ್ಣಾಶ್ರಮ ಧರ್ಮಗಳನ್ನೂ ಕುಲಾಚಾರಗಳನ್ನೂ ಆಚರಿಸುತ್ತಿರಬೇಕು.

**ಅನ್ವೀಕ್ಷೇತ ವಿಶುದ್ಧಾತ್ಮಾ ದೇಹಿನಾಂ ವಿಷಯಾತ್ಮನಾಮ್ ।**
**ಗುಣೇಷು ತತ್ತ್ವಧ್ಯಾನೇನ ಸರ್ವಾರಮ್ಭವಿಪರ್ಯಯಮ್ ॥೨॥**

ಸಾಧಕನು ಸ್ವಧರ್ಮಾಚರಣೆಯಿಂದ ಶುದ್ಧವಾದ ಅಂತಃಕರಣವುಳ್ಳವನಾಗಿ ತನ್ನ ಮನಸ್ಸಿನಲ್ಲಿ ಇದನ್ನು ವಿಚಾರಮಾಡಬೇಕು. ಜಗತ್ತಿನಲ್ಲಿರುವ ವಿಷಯಾಭಿಲಾಷಿಗಳಾದ ಪ್ರಾಣಿಗಳು (ಮನುಷ್ಯರು) ಶಬ್ದ-ಸ್ಪರ್ಶ-ರೂಪವೇ ಮುಂತಾದ ವಿಷಯಗಳು ಸತ್ಯವೆಂದು ಭಾವಿಸಿ ಅವುಗಳನ್ನು ಪಡೆದುಕೊಳ್ಳಲು ಬಹಳವಾಗಿ ಪ್ರಯತ್ನಿಸುತ್ತಲೇ ಇರುತ್ತಾರೆ. ಅವರ ಆ ಪ್ರಯತ್ನದ ಉದ್ದೇಶ ಸುಖಾಭಿಲಾಷೆಯೇ ಆಗಿದೆ. ಆದರೆ ವಿಷಯಸುಖಗಳಿಗೆ ಮಾರು

---

ಕಪೋತದಿಂದ ಪತ್ನೀ-ಪುತ್ರಾದಿ ಸಂಗವನ್ನೂ, ಮೀನಿನಿಂದ ರಸಾಸಕ್ತಿಯನ್ನೂ, ಹುಲ್ಲೆಯಿಂದ ಶಬ್ದಾಸಕ್ತಿಯನ್ನೂ, ಕುಮಾರೀ ಕಂಕಣದಿಂದ ಸಜಾತೀಯ ಸಂಗವನ್ನೂ, ಗಜದಿಂದ ಸ್ಪರ್ಶಾಸಕ್ತಿಯನ್ನೂ, ಸರ್ಪದಿಂದ ಜನಸಂಗವನ್ನೂ, ದೀಪದ ಹುಳುವಿನಿಂದ ರೂಪಾಸಕ್ತಿಯನ್ನೂ, ಕುರರಪಕ್ಷಿಯಿಂದ ಪರಿಗ್ರಹವನ್ನೂ ಬಿಡಬೇಕೆಂಬುದನ್ನು ಕಲಿಯಬೇಕು. ಭ್ರಮರ, ಮಧುವನ್ನು ಕಿತ್ತು ತಿನ್ನುವವನು, ಪಿಂಗಳೆಯೆಂಬ ವೇಶ್ಯೆ–ಈ ಮೂವರೂ ಹೇಯೋಪಾದೇಯಗಳೆರಡರಲ್ಲೂ ಗುರುಗಳು. ಭ್ರಮರದಿಂದ ಮಾಧೂಕರ ವೃತ್ತಿಯನ್ನು ಕಲಿಯಬೇಕು ; ಸಂಗ್ರಹವನ್ನು

ಹೋಗಿ ಅವುಗಳನ್ನು ಪಡೆಯಲು ಸತತವಾಗಿ ಪ್ರಯತ್ನಿಸುವವರು ದುಃಖ ಭಾಗಿಗಳಾಗುವರೇ ಹೊರತು ಅವರಿಗೆ ಸುಖವೆಂದಿಗೂ ಲಭಿಸುವುದಿಲ್ಲ. ಅವರ ಪ್ರಯತ್ನಗಳೆಲ್ಲವೂ ನಿಷ್ಫಲಗಳೇ ಆಗುತ್ತವೆ.

**ಸುಪ್ತಸ್ಯ ವಿಷಯಾಲೋಕೋ ಧ್ಯಾಯತೋ ವಾ ಮನೋರಥಃ ।**
**ನಾನಾತ್ಮಕತ್ವಾದ್ವಿಫಲಸ್ತಥಾ ಭೇದಾತ್ಮಧೀರ್ಗುಣೈಃ ॥೩॥**

ಮಲಗಿದವನಿಗೆ ಕನಸ್ಸಿನಲ್ಲಾಗುವ ವಿಷಯಾನುಭವವೂ ಜಾಗ್ರತ್ತಿನಲ್ಲಾಗುವ ಕೇವಲ ಮನಃಕಲ್ಪಿತವಾದ ವಿಷಯಾನುಭವವೂ ವ್ಯರ್ಥವೇ ಸರಿ. ಏಕೆಂದರೆ ಕನಸ್ಸಿನಲ್ಲಾಗಲೀ ಮಾನಸಿಕಕಲ್ಪನೆಯಲ್ಲಾಗಲೀ ಯಾವ ವಸ್ತುವೂ ಇರುವುದಿಲ್ಲ. ಕನಸ್ಸಿನಲ್ಲಿ ಕಂಡ ಐಶ್ವರ್ಯವು ಸುಳ್ಳಾಗಿರುವಂತೆ ಮನೋಕಲ್ಪಿತವಾದ ವಿಷಯಗಳೂ ಸುಳ್ಳಾಗಿಯೇ ಇರುತ್ತವೆ. ಮನಸ್ಸಿನಲ್ಲಿ ಮಂಡಿಗೆಯನ್ನು ಕಲ್ಪಿಸಿಕೊಂಡು ತಿನ್ನುತ್ತೇವೆ. ಮಾನಸಿಕವಿಭ್ರಮದಿಂದ ಬಾಯಲ್ಲಿ ಮಂಡಿಗೆಯನ್ನು ನೆನೆಸಿಕೊಂಡಲ್ಲಿ ಬಾಯಲ್ಲಿ ನೀರೂರಲೂ ಬಹುದು. ಆದರೆ ಮನೋಕಲ್ಪಿತವಾದ ಮಂಡಿಗೆ ಮಿಥ್ಯೆಯೇ ಹೊರತು ಸತ್ಯವಲ್ಲ. ಅದರಂತೆಯೇ ಹೊರಗಡೆ ಅನೇಕವಸ್ತುಗಳಿವೆ ಎಂಬ ಭೇದಾತ್ಮಕ ಬುದ್ಧಿಯು ಇಂದ್ರಿಯಗಳಿಂದ ಬಂದಿದ್ದು ; ನಾನಾತ್ಮಕವಾದದ್ದು. ಒಂದೇ ವಿಷಯವನ್ನು ಕುರಿತು ಬಂದದ್ದಲ್ಲ. ಆದುದರಿಂದ ಇದು ಫಲರಹಿತವಾದ್ದೆಂದು ತಿಳಿಯಬೇಕು. ಕಣ್ಣಿದ್ದರೆ ರೂಪ ಎಂಬುದರ ಭಾವನೆಯುಂಟಾಗುತ್ತದೆ.

---

ಬಿಡಬೇಕು. ಜೇನನ್ನು ಕಿತ್ತು ತಿನ್ನುವವನಿಂದ ಪರರನ್ನು ಸಂಕಟಗೊಳಿಸಿ ಅವರು ಗಳಿಸಿದುದನ್ನು ಅಪಹರಿಸಬಾರದು. ಅಪ್ರಯತ್ನನಾಗಿಯೇ ಶರೀರಯಾತ್ರೆ ಸಾಗು ವುದು–ಎಂದು ಅರಿಯಬೇಕು. ಪಿಂಗಳೆಯಿಂದ ಧನದಾಸೆಯನ್ನು ಬಿಡಬೇಕು. ವೈರಾಗ್ಯವನ್ನು ಹೊಂದಬೇಕು–ಎಂಬುದನ್ನು ಕಲಿಯಬೇಕು. ಪೃಥ್ವೀ ಮೊದಲಾದ ಉಳಿದ ಗುರುಗಳಿಂದ ಕ್ಷಮೆ ಮುಂತಾದುವನ್ನು ಕಲಿಯಬೇಕು.

ಅವಧೂತೋಪಾಖ್ಯಾನವು ಮೂರು ಅಧ್ಯಾಯಗಳಲ್ಲಿ ಬಂದಿದೆ. ಏಳನೆಯ ಅಧ್ಯಾಯದಲ್ಲಿ ಎಂಟು ಮಂದಿ ಗುರುಗಳ ಪ್ರಸ್ತಾಪವಿದೆ. ಎಂಟನೆಯ ಅಧ್ಯಾಯದಲ್ಲಿ ಒಂಭತ್ತು ಮಂದಿ ಗುರುಗಳ ಪ್ರಸ್ತಾಪವಿದೆ. ಒಂಭತ್ತನೆಯ ಅಧ್ಯಾಯದಲ್ಲಿ ಶರೀರವೂ ಸೇರಿ ಎಂಟು ಮಂದಿ ಗುರುಗಳ ಪ್ರಸ್ತಾಪವಿದೆ.

(ಮೋಟಗಾನಹಳ್ಳಿ ಸಂಸ್ಕರಣ)

ನೇತ್ರೇಂದ್ರಿಯವೇ ಇಲ್ಲದಿದ್ದರೆ ರೂಪವೆಂಬುದೇ ಇಲ್ಲ. ಆದುದರಿಂದ ರೂಪವೆಂಬುದು ಇಂದ್ರಿಯದಿಂದ ಹುಟ್ಟಿ ಬಂದಿದ್ದು. ಆದುದರಿಂದ ಮಿಥ್ಯೆ–ನಾನಾವಿಧವಾದ ಭಾವನೆಗಳಿಂದ ನಾನಾಪ್ರಕಾರವಾದ ವಸ್ತುಗಳು ಹುಟ್ಟಿಕೊಳ್ಳುತ್ತವೆ. ಇಂದ್ರಿಯಗಳಿಗಾಗಲೀ, ಭಾವನೆಗಳಿಗಾಗಲೀ ಅತೀತವಾಗಿ ಉಳಿಯುವುದು ಬ್ರಹ್ಮವಸ್ತುವೊಂದೇ. ಆದುದರಿಂದ ಅದೊಂದು ಮಾತ್ರವೇ ಸತ್ಯ.*

**ನಿವೃತ್ತಂ ಕರ್ಮ ಸೇವೇತ ಪ್ರವೃತ್ತಂ ಮತ್ಪರಸ್ತ್ಯಜೇತ್ ।**
**ಜಿಜ್ಞಾಸಾಯಾಂ ಸಮ್ಪ್ರವೃತ್ತೋ ನಾದ್ರಿಯೇತ್ಕರ್ಮಚೋದ ನಾಮ್ ॥**

ನನ್ನಲ್ಲಿಯೇ ಆಸಕ್ತನಾದ ಸಾಧಕನು ಕರ್ಮಫಲದಲ್ಲಿ ಆಸಕ್ತಿಯಿಲ್ಲದವನಾಗಿ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡಬೇಕು. ಪ್ರವೃತ್ತಿಮಾರ್ಗಸಾಧಕವಾದ ಕಾಮ್ಯಕರ್ಮಗಳನ್ನು ಮಾಡಬಾರದು. ಆತ್ಮಜಿಜ್ಞಾಸೆಯಲ್ಲಿ ತೊಡಗಿ ಆತ್ಮಸಾಕ್ಷಾತ್ಕಾರವನ್ನು ಸಾಧಿಸಲು ಪ್ರಯತ್ನಿಸುತ್ತಿರುವವನು ಕರ್ಮಗಳ ಪ್ರೇರಣೆಯನ್ನು ಆದರಿಸಬೇಕಾಗಿಲ್ಲ.[1]

---

* ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನನ್ದನ ।
ಬಹುಶಾಖಾ ಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ (ಭ.ಗೀ.೨-೪೧)

ಶ್ರೇಯೋಮಾರ್ಗದಲ್ಲಿ ನಿಶ್ಚಯಾತ್ಮಿಕವಾದ ಬುದ್ಧಿಯೊಂದೇ ಸಾಧಕವೆಂದೂ ಹಲವು ಬಗೆಯಾದ ಬುದ್ಧಿಗಳು ಬಾಧಕಗಳೆಂದು ತಿಳಿ. (ಸಾರಾರ್ಥದರ್ಶಿನೀ)

1 ಮೋಕ್ಷಾರ್ಥೀ ನ ಪ್ರವರ್ತೇತ ತತ್ರ ಕಾಮ್ಯನಿಷಿದ್ಧಯೋಃ ।
ನಿತ್ಯನೈಮಿತ್ತಕೇ ಕುರ್ಯಾತ್ಪ್ರತ್ಯವಾಯಜಿಹಾಸಯಾ ॥

ಮೋಕ್ಷಾರ್ಥಿಯು ಕಾಮ್ಯನಿಷಿದ್ಧಗಳನ್ನು ತೊರೆದು ಪ್ರತ್ಯವಾಯ (ಪಾಪ) ಪರಿಹಾರಕ್ಕಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಬೇಕು. (ಭಾರತದೀಪಿಕಾ)

ಶ್ರೀಕೃಷ್ಣನು ಗೀತೆಯಲ್ಲಿ :
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥೫॥
ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥೬॥ ಅಧ್ಯಾಯ ೧೮
ಸಾಧಕರಿಗೆ ಯಜ್ಞ-ದಾನ-ತಪಃಕರ್ಮಗಳು ಪಾವನವಾಗಿರುತ್ತವೆ. ಇವು ಸಾಧಕರ

**ಯಮಾನಭೀಕ್ಷ್ಣಂ ಸೇವೇತ ನಿಯಮಾನ್ಮತ್ಪರಃ ಕ್ವಚಿತ್ ।**
**ಮದಭಿಜ್ಞಂ ಗುರುಂ ಶಾನ್ತಮುಪಾಸೀತ ಮದಾತ್ಮಕಮ್ ॥೫॥**

ಅಹಿಂಸೆಯೇ ಮೊದಲಾದ ಯಮಗಳನ್ನು ನಿರಂತರವಾಗಿ ಪರಿಪಾಲಿಸಬೇಕು. ಶೌಚವೇ ಮೊದಲಾದ ನಿಯಮಗಳನ್ನೂ ಆತ್ಮಜ್ಞಾನಕ್ಕೆ ವಿರೋಧವಿಲ್ಲದಂತೆ ಯಥಾಶಕ್ತಿಯಾಗಿ ಆಚರಿಸಬೇಕು. ನನ್ನ ಸ್ವರೂಪವನ್ನರಿತ ಶಾಂತನಾದ ಗುರುವನ್ನು ಪರಬ್ರಹ್ಮಸ್ವರೂಪನೆಂದೇ ಭಾವಿಸಿ ಸೇವಿಸಬೇಕು.

**ಅಮಾನ್ಯಮತ್ಸರೋ ದಕ್ಷೋ ನಿರ್ಮಮೋ ದೃಢಸೌಹೃದಃ ।**
**ಅಸತ್ವರೋಽರ್ಥಜಿಜ್ಞಾಸುರನಸೂಯುರಮೋಘವಾಕ್ ॥೬॥**

ಶಿಷ್ಯನಾದವನಿಗೆ ಯಾವುದೇ ವಿಧವಾದ ಅಭಿಮಾನವೂ ಇರಬಾರದು. ಸಹಪಾಠಿಗಳಲ್ಲಿ ಹೊಟ್ಟೇಕಿಚ್ಚಿರಬಾರದು. ಕಾರ್ಯಕುಶಲನಾಗಿರಬೇಕು. ಯಾವುದೇ ಕಾರ್ಯದಲ್ಲಿಯೂ ಆಲಸ್ಯವಿರಬಾರದು. ಯಾವುದರಲ್ಲಿಯೂ ಮಮಕಾರವಾಗಲೀ, ಮಮತೆಯಾಗಲೀ ಇರಬಾರದು. ಗುರುವಿನಲ್ಲಿ ದೃಢವಾದ ಅನುರಾಗವಿರಬೇಕು. ಯಾವಕಾರ್ಯವನ್ನೇ ಆದರೂ ಅವಸರದಿಂದ ಮಾಡಬಾರದು. ಸಾವಧಾನದಿಂದ ನ್ಯೂನಾತಿರೇಕಗಳಿಲ್ಲದಂತೆ ಮಾಡಬೇಕು. ಶಾಸ್ತ್ರಾರ್ಥವನ್ನು ತಿಳಿಯುವ ಅಭಿಲಾಷೆಯಿರಬೇಕು. ಒಬ್ಬನಲ್ಲಿರುವ ಗುಣದಲ್ಲಿ ದೋಷವೆಣಿಸಬಾರದು.ವ್ಯರ್ಥವಾದ ಮಾತುಗಳನ್ನಾಡಬಾರದು. ಇವಿಷ್ಟೂ ಶಿಷ್ಯನಲ್ಲಿರಬೇಕಾದ ಗುಣಗಳು.

---

ಚಿತ್ತವನ್ನು ಶುದ್ಧಿಮಾಡುತ್ತವೆ. ಆದರೆ ಈ ಕರ್ಮಗಳನ್ನು ಕೂಡ ಸಂಗವನ್ನೂ ಮತ್ತು ಫಲವನ್ನೂ ಬಿಟ್ಟು ಮಾಡತಕ್ಕದ್ದೆಂದು ನನ್ನ ನಿಶ್ಚಯವಾದ ಮತವು.

ಶರೀರ ಸಾಧನಾಪೇಕ್ಷಂ ನಿತ್ಯ ಯತ್ಕರ್ಮ ತದ್ಯಮಃ ।
ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾ ಪರಿಗ್ರಹಾಃ ಯಮಾಃ ॥

ಶರೀರಮಾತ್ರದಿಂದ ಯಾವಜ್ಜೀವವೂ ಮಾಡಬಹುದಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳು ಯಮಗಳು.

ಶೌಚಸನ್ತೋಷ ತಪಃ ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ ।

ಶೌಚ-ಸಂತೋಷ-ತಪಸ್ಸು-ಸ್ವಾಧ್ಯಾಯ–ಈಶ್ವರಪ್ರಾಣಿಧಾನ–ಇವು ಐದೂ ನಿಯಮಗಳು. (ಪಾ.ಯೋ.ಸೂ.೨-೩೨)

**ಜಾಯಾಪತ್ಯಗೃಹಕ್ಷೇತ್ರಸ್ವಜನದ್ರವಿಣಾದಿಷು ।**
**ಉದಾಸೀನಃ ಸಮಂ ಪಶ್ಯನ್ಸರ್ವೇಷ್ವರ್ಥಮಿವಾತ್ಮನಃ ॥೭॥**

ಎಲ್ಲ ಕಾಲಗಳಲ್ಲಿಯೂ ತನ್ನ ಧನದಂತೆಯೇ ಕಾಮ್ಯನಾಗಿರುವ, ಸರ್ವ ಸಮನಾಗಿರುವ ಪರಮಾತ್ಮನನ್ನು ಕಾಣುತ್ತಾ ಸಂಸಾರಬಂಧನಕ್ಕೆ ಕಾರಣ ಭೂತರಾದ ಮಡದಿ-ಮಕ್ಕಳು, ಮನೆ-ಮಠಗಳು, ಗದ್ದೆ-ತೋಟಗಳು ಬಂಧು-ಬಳಗ–ಇವರ ವಿಷಯದಲ್ಲಿ ಉದಾಸೀನನಾಗಿರಬೇಕು.

**ವಿಲಕ್ಷಣಃ ಸ್ಥೂಲಸೂಕ್ಷ್ಮಾದ್ದೇಹಾದಾತ್ಮೇಕ್ಷಿತಾ ಸ್ವದೃಕ್ ।**
**ಯಥಾಗ್ನಿರ್ದಾರುಣೋ ದಾಹ್ಯಾದ್ದಾಹಕೋಽನ್ಯಃ ಪ್ರಕಾಶಕಃ ॥೮॥**

ಉದ್ಧವ! ದಹಿಸಲ್ಪಡುವ ಕಟ್ಟಿಗೆಗಿಂತ ಅದನ್ನು ದಹಿಸುವ ಮತ್ತು ಪ್ರಕಾಶಗೊಳಿಸುವ ಅಗ್ನಿಯು ಬೇರೆಯದೇ ಆಗಿದೆ. ಅಂತೆಯೇ ಪಂಚ ಭೂತಗಳಿಂದ ಸೃಷ್ಟಿಯಾದ ಸ್ಥೂಲಶರೀರವೂ, ಮನಸ್ಸು-ಬುದ್ಧಿ–ಇವೇ ಮೊದಲಾದ ಹದಿನಾರು ತತ್ತ್ವಗಳಿಂದ ಕೂಡಿದ ಸೂಕ್ಷ್ಮಶರೀರವೂ, ಪ್ರತ್ಯಕ್ಷ ವಾಗಿ ಕಾಣುವ ಜಡಶರೀರಗಳಾಗಿವೆ. ಸ್ಥೂಲ-ಸೂಕ್ಷ್ಮ ಶರೀರಗಳನ್ನು ತಿಳಿಯ ಪಡಿಸುವ ಮತ್ತು ಪ್ರಕಾಶಗೊಳಿಸುವ ಆತ್ಮವು ಇವೆಲ್ಲಕ್ಕೂ ಸಾಕ್ಷಿಯೂ ಮತ್ತು ಸ್ವಯಂಪ್ರಕಾಶಕವೂ ಆಗಿದೆ. ಶರೀರವು ಅನಿತ್ಯವೂ ಅನೇಕವೂ ಮತ್ತು ಜಡವೂ ಆಗಿದೆ. ಆತ್ಮವು ನಿತ್ಯವೂ ಅದ್ವಿತೀಯಚೇತನವೂ ಆಗಿದೆ. ಹೀಗೆ ದೇಹದ ಅಪೇಕ್ಷೆಯಿಂದ ಆತ್ಮವು ಅತ್ಯಂತವಿಲಕ್ಷಣವಾಗಿದೆ. ಆದುದರಿಂದಲೇ ದೇಹದಿಂದ ಆತ್ಮವು ಭಿನ್ನವಾಗಿದೆ.

**ನಿರೋಧೋತ್ಪತ್ತ್ಯಣುಬೃಹನ್ನಾನಾತ್ವಂ ತತ್ಕೃತಾನ್ಗುಣಾನ್ ।**
**ಅನ್ತಃಪ್ರವಿಷ್ಟ ಆಧತ್ತ ಏವಂ ದೇಹಗುಣಾನ್ ಪರಃ ॥೯॥**

ಕಟ್ಟಿಗೆಯ ಒಳಹೊಕ್ಕು ಉರಿಯಲು ತೊಡಗಿದ ಅಗ್ನಿಯು ಕಟ್ಟಿಗೆಗೆ ಸಂಬಂಧಿಸಿದಂತೆ ನಾಶವನ್ನೂ ಹೊಂದುತ್ತದೆ. ಕಟ್ಟಿಗೆಯು ಭಸ್ಮವಾಗಿ ಹೋದ ನಂತರ ಆರಿಹೋಗುತ್ತದೆ. ಆರಿಹೋದಂತೆ ಕಾಣುವುದೇ ಹೊರತು ಅಗ್ನಿಯು ವಿನಾಶ ಹೊಂದುವುದಿಲ್ಲ. ಕಟ್ಟಿಗೆಯು ಭಸ್ಮವಾಗಿ ಹೋದಕಾರಣ ಅಗ್ನಿಯು ವಿನಾಶಹೊಂದಿರುವಂತೆ ಕಾಣುತ್ತವೆ. ಕಟ್ಟಿಗೆಗೆ ಅನುರೂಪವಾಗಿ ಅಗ್ನಿಯು ಮಹತ್ತಾಗಿಯೂ ಚಿಕ್ಕದಾಗಿಯೂ ನಾನಾಪ್ರಕಾರವಾಗಿಯೂ ಉರಿಯು

ತ್ತದೆ. ಕಟ್ಟಿಗೆಯು ಚಿಕ್ಕದು ಮತ್ತು ದೊಡ್ಡದು ಆಗಿ ಅದರ ಗುಣವನ್ನು ಹೊಂದಿರುವುದರಿಂದ ಅಗ್ನಿಯು ಚಿಕ್ಕದಾಗಿಯೂ ದೊಡ್ಡದಾಗಿಯೂ ಕಾಣು ವುದೇ ಹೊರತು ಅಗ್ನಿಗೆ ಚಿಕ್ಕದು ಅಥವಾ ದೊಡ್ಡದು–ಎಂಬ ಯಾವ ಸ್ವರೂಪವೂ ಇಲ್ಲ. ಅಂತೆಯೇ ಆತ್ಮನು ದೇಹವನ್ನು ಪ್ರವೇಶಿಸಿ ಅದು ಯಾವಾಗ ತನ್ನದೆಂದು ಭಾವಿಸಿಕೊಳ್ಳುವನೋ ಆಗ ದೇಹಕ್ಕಿರುವಂತೆ ಜಡತ್ವ-ಅನಿತ್ಯತ್ವ-ಸ್ಥೂಲತ್ವ-ಸೂಕ್ಷ್ಮತ್ವ–ಇತ್ಯಾದಿಗುಣಗಳು ತನಗೆ ಇಲ್ಲ ದವನಾಗಿದ್ದರೂ ದೇಹದೊಡನೆ ಸೇರಿರುವುದರಿಂದ ಈ ಗುಣಗಳೊಡನೆ ಸೇರಿರುವಂತೆ ಕಾಣುತ್ತಾನೆ.

**ಯೋಽಸೌ ಗುಣೈರ್ವಿರಚಿತೋ ದೇಹೋಽಯಂ ಪುರುಷಸ್ಯ ಹಿ ।**
**ಸಂಸಾರಸ್ತನ್ನಿಬನ್ಧೋಽಯಂ ಪುಂಸೋ ವಿದ್ಯಾಚ್ಛಿದಾತ್ಮನಃ ॥೧೦॥**

ಈಶ್ವರನಿಂದ ನಿಯಂತ್ರಿಸಲ್ಪಡುವ ಈ ಮಾಯೆಯ ಗುಣಗಳೇ, ಪುರುಷನ ಸ್ಥೂಲ-ಸೂಕ್ಷ್ಮಾತ್ಮಕವಾದ ದೇಹವನ್ನು ರಚಿಸುತ್ತವೆ. ಅಂತಹ ಶರೀರದಲ್ಲಿ ಕಾಲ-ಕರ್ಮಸಂಯೋಗದಿಂದ ಅನುಪ್ರವೇಶಮಾಡಿದ ಜೀವನು ಆ ದೇಹವನ್ನು ತನ್ನದೆಂದು ಭಾವಿಸಿಕೊಳ್ಳುತ್ತಾನೆ. ಅಜ್ಞಾನ ಮೂಲವಾದ ದೇಹಾತ್ಮಭಾವನೆಯಿಂದಾಗಿ ಜೀವನು ಜನನ-ಮರಣಗಳೆಂಬ ಸಂಸಾರ ಚಕ್ರ ದಲ್ಲಿ ಸಿಕ್ಕಿಕೊಳ್ಳುತ್ತಾನೆ. ಆತ್ಮವಿದ್ಯಾಜ್ಞಾನವೇ ಈ ಸಂಸಾರದ ನಾಶಕವಾಗುತ್ತದೆ.

**ತಸ್ಮಾಜ್ಜಿಜ್ಞಾಸಯಾಽತ್ಮಾನಮಾತ್ಮಸ್ಥಂ ಕೇವಲಂ ಪರಮ್ ।**
**ಸಙ್ಗಮ್ಯ ನಿರಸೇದೇತದ್ವಸ್ತುಬುದ್ಧಿಂ ಯಥಾಕ್ರಮಮ್ ॥೧೧॥**

ಪ್ರಿಯಸಖನೇ! ಉದ್ಧವ! ಈ ಜನ್ಮ-ಮೃತ್ಯುರೂಪವಾದ ಸಂಸಾರಕ್ಕೆ ಅಜ್ಞಾನವೇ ಮೂಲಕಾರಣವಾಗಿದೆ. ಬೇರೆ ಯಾವ ಕಾರಣವೂ ಇಲ್ಲ. ಆದುದರಿಂದ ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನಿಸಬೇಕು. 'ತನ್ನ ಆತ್ಮ ಸ್ವರೂಪವು ಪ್ರಕೃತಿ ಮತ್ತು ಪ್ರಾಕೃತಜಗತ್ತಿಗಿಂತಲೂ ಅತೀತವಾಗಿದೆ. ಸ್ವಸ್ವರೂಪದಲ್ಲಿಯೇ ನೆಲೆಗೊಂಡಿದೆ. ಇದಕ್ಕೆ ಯಾವುದರ ಆಧಾರವೂ ಇಲ್ಲ. ಇದು ಏಕಮೇವಾದ್ವಿತೀಯವಾಗಿದೆ'–ಎಂಬ ಜ್ಞಾನವನ್ನು ಜಿಜ್ಞಾಸೆಯಿಂದ ಪಡೆದುಕೊಂಡು ಸ್ಥೂಲ-ಸೂಕ್ಷ್ಮಶರೀರಗಳಲ್ಲಿರುವ ಸತ್ಯತ್ವಬುದ್ಧಿಯನ್ನು

ಅನುಕ್ರಮವಾಗಿ ತೊರೆಯಬೇಕು. ದೇಹೇಂದ್ರಿಯಾದಿಗಳಲ್ಲಿ ಆತ್ಮಬುದ್ಧಿಯನ್ನು ತೊಲಗಿಸಬೇಕು.

**ಆಚಾರ್ಯೋಽರಣಿರಾದ್ಯಃ ಸ್ಯಾದನ್ತೇವಾಸ್ಯುತ್ತರಾರಣಿಃ ।**
**ತತ್ಸನ್ಧಾನಂ ಪ್ರವಚನಂ ವಿದ್ಯಾಸನ್ಧಿಃ ಸುಖಾವಹಃ ॥೧೨॥**

ಯಜ್ಞದಲ್ಲಿ ಅರಣಿಗಳನ್ನು ಕಡೆದು ಯಜ್ಞೇಶ್ವರನನ್ನು ಉತ್ಪತ್ತಿ ಮಾಡುತ್ತಾರೆ. ಅರಣಿಗಳಲ್ಲಿ ಅಧರಾರಣಿ (ಕೆಳಗಿನದು) ಉತ್ತರಾರಣಿ (ಮೇಲಿನದು)–ಎಂಬ ಎರಡು ಅರಣಿಗಳಿರುತ್ತವೆ. ಅವುಗಳ ಮಧ್ಯದಲ್ಲಿ ಮಂಥನದಂಡ ಇರುತ್ತದೆ. ಅದರಿಂದ ಕಡೆದು ಅಗ್ನಿಯನ್ನು ಉತ್ಪತ್ತಿಮಾಡುತ್ತಾರೆ. ಈ ಪ್ರಕರಣದಲ್ಲಿ ವಿದ್ಯಾರೂಪವಾದ ಅಗ್ನಿಯನ್ನು ಉತ್ಪನ್ನಗೊಳಿಸಲು ಆಚಾರ್ಯನು ಅಧರಾರಣಿಯೂ ಶಿಷ್ಯನು ಉತ್ತರಾರಣಿಯೂ ಆಗಿರುತ್ತಾರೆ. ಉಪದೇಶವೆಂಬುದೇ ಕಡೆಗೋಲಾಗಿರುತ್ತದೆ. ಅದರಿಂದ ಪ್ರಜ್ವಲಿಸುವ ಜ್ಞಾನಾಗ್ನಿಯು ಹುಟ್ಟಿ ವಿಲಕ್ಷಣವಾದ, ಅಲೌಕಿಕವಾದ ಸುಖವನ್ನುಂಟುಮಾಡುತ್ತದೆ.*

**ವೈಶಾರದೀ ಸಾತಿವಿಶುದ್ಧಬುದ್ಧಿ-**
**ರ್ಧುನೋತಿ ಮಾಯಾಂ ಗುಣಸಮ್ಪ್ರಸೂತಾಮ್ ।**
**ಗುಣಾಂಶ್ಚ ಸನ್ದಹ್ಯ ಯದಾತ್ಮಮೇತತ್**
**ಸ್ವಯಂ ಚ ಶಾಮ್ಯತ್ಯಸಮಿದ್ಯಥಾಗ್ನಿಃ ॥೧೩॥**

ಉಪದೇಶವೆಂಬ ಕಡೆಗೋಲಿನ ಮೂಲಕವಾಗಿ ಬುದ್ಧಿವಂತನಾದ ಶಿಷ್ಯನು ಸದ್ಗುರುವಿನ ಮೂಲಕವಾಗಿ ಯಾವ ಜ್ಞಾನಾಗ್ನಿಯನ್ನು ಪಡೆಯುವನೋ ಆ ದಿವ್ಯಾಗ್ನಿಯು ಸತ್ತ್ವಾದಿಗುಣಗಳಿಂದ ಉಂಟಾದ ಅವಿದ್ಯೆಯನ್ನು ಸುಟ್ಟುಹಾಕುತ್ತದೆ. ಹೀಗೆ ಎಲ್ಲವೂ ಭಸ್ಮವಾಗಿ ಹೋದನಂತರ ಆತ್ಮನಿಂದ ಅತಿರಿಕ್ತವಾದ ವಸ್ತುವು ಬೇರೆ ಯಾವುದೂ ಇರುವುದಿಲ್ಲ. ಕಡೆಯಲ್ಲಿ

---

* ತೈತ್ತರೀಯ ಉಪನಿಷತ್ತಿನಲ್ಲಿ ಈ ಶ್ಲೋಕವು ಮಂತ್ರರೂಪವಾಗಿ ಬಂದಿದೆ. ಆಚಾರ್ಯಃ ಪೂರ್ವರೂಪಮ್ । ಅನ್ತೇವಾಸ್ಯುತ್ತರರೂಪಮ್ । ವಿದ್ಯಾಸನ್ಧಿಃ । ಪ್ರವಚನಗ್ಂ ಸನ್ಧಾನಮ್ । ಇತ್ಯಧಿವಿದ್ಯಮ್ ॥

ಜ್ಞಾನಾಗ್ನಿಯೂ ಕೂಡ ಸಮಿತ್ತು ಮುಗಿದನಂತರ ಅಗ್ನಿಯು ಶಾಂತವಾಗುವಂತೆ ತನ್ನ ವಾಸ್ತವಿಕವಾದ ಸ್ವರೂಪದಲ್ಲಿ ಶಾಂತವಾಗಿ ನೆಲೆಗೊಳ್ಳುತ್ತದೆ.*

**ಅಥೈಷಾಂ ಕರ್ಮಕರ್ತ್ಯಣಾಂ ಭೋಕ್ತ್ರ್ಯಣಾಂ ಸುಖದುಃಖಯೋಃ ।**
**ನಾನಾತ್ವಮಥ ನಿತ್ಯತ್ವಂ ಲೋಕಪಾಲಾಗಮಾತ್ಮನಾಮ್ ॥೧೪॥**

ಉದ್ಧವ! ಕರ್ಮಗಳನ್ನು ಮಾಡುವ ಮತ್ತು ಮಾಡಿದ ಕರ್ಮಗಳ ಫಲರೂಪವಾದ ಸುಖ-ದುಃಖಗಳನ್ನು ಅನುಭವಿಸುವ ಈ ಜೀವರಿಗೆ ನಾನಾತ್ವವಿರುವುದೆಂದು ನೀನು ಭಾವಿಸಿರುವೆಯಾ?

**ಮನ್ಯಸೇ ಸರ್ವಭಾವಾನಾಂ ಸಂಸ್ಥಾ ಹ್ಯೌತ್ಪತ್ತಿಕೀ ಯಥಾ ।**
**ತತ್ತದಾಕೃತಿಭೇದೇನ ಜಾಯತೇ ಭಿದ್ಯತೇ ಚ ಧೀಃ ॥೧೫॥**

ಉದ್ಧವ! ಸಮಸ್ತವಸ್ತುಗಳ ಸ್ಥಿತಿಯೂ ಪ್ರವಾಹದಂತೆ ನಿತ್ಯವು ಸ್ವಭಾವಸಿದ್ಧವಾದುದು–ಎಂದು ಭಾವಿಸಿರುವೆಯಾ? ಆಯಾವಸ್ತುಗಳ ಆಕಾರಭೇದವನ್ನನುಸರಿಸಿ ಬುದ್ಧಿಯು ಅಥವಾ ಜ್ಞಾನವು ಭಿನ್ನ-ಭಿನ್ನವಾಗಿ ಹುಟ್ಟುತ್ತದೆ–ಎಂದು ಭಾವಿಸಿರುವೆಯಾ?

(ಮಾಲೆ-ಚಂದನ-ಇವೇ ಮೊದಲಾದ ವಸ್ತುಗಳು ಸ್ವಾಭಾವಿಕವಾಗಿಯೇ ಹುಟ್ಟತಕ್ಕುವುಗಳು ; ಪ್ರವಾಹದಂತೆ ಇವೂ ನಿತ್ಯವಾದುವುಗಳು. ನದಿಯು ಯಾವ ರೀತಿಯಲ್ಲಿ ನಿತ್ಯವಾಗಿ ಹರಿಯುತ್ತಿರುತ್ತದೆಯೋ ಅಂತೆಯೇ ಸಕಲ ಪದಾರ್ಥಗಳೂ ಹುಟ್ಟಿ-ಸಾಯುತ್ತಿರುತ್ತವೆ. ಈ ಜನನ-ಮರಣಚಕ್ರವು ಸ್ವಾಭಾವಿಕವಾಗಿ ನಡೆಯುವುದೇ ಹೊರತು ಇವುಗಳನ್ನು ಸೃಷ್ಟಿಸುವ ಅಥವಾ ಲಯಗೊಳಿಸುವ ಬೇರೊಬ್ಬ ಈಶ್ವರನಿಲ್ಲ. ಆತ್ಮಸ್ವರೂಪಭೂತವೂ, ನಿತ್ಯವೂ ಅದ್ವಿತೀಯವೂ ಆದ ಜ್ಞಾನವೆಂಬುದೂ ಇಲ್ಲ. ಜ್ಞಾನವು ಘಟ-ಪಟಾದಿಗಳಿಂದ ಬೇರೆಯಾಗುವ ಕಾರಣ ಅನಿತ್ಯವು. ಆತ್ಮನು ಜ್ಞಾನ

---

* ಇಲ್ಲಿಯವರೆಗಿನ ಶ್ರೀಕೃಷ್ಣನ ಉಪದೇಶ : ಸ್ವಯಂಪ್ರಕಾಶನೂ, ಜ್ಞಾನಸ್ವರೂಪನೂ, ನಿತ್ಯನೂ ಆಗಿರತಕ್ಕವನು ಆತ್ಮನೊಬ್ಬನೇ. ಕರ್ತೃತ್ವ-ಭೋಕ್ತೃತ್ವಾದಿ ಕರ್ಮಗಳು ದೇಹಕ್ಕೆ ಕಾರಣಗಳಾಗಿವೆ. ಆತ್ಮನಿಂದ ಅತಿಂತಕ್ತವಾದ ಸಮಸ್ತವೂ ಅನಿತ್ಯವಾಗಿದೆ. ಆದುದರಿಂದ ಆತ್ಮಜ್ಞಾನವೊಂದಾದರೆ ಸಮಸ್ತವಿಪತ್ತುಗಳಿಂದಲೂ ಮುಕ್ತಿಯು ಸಿಕ್ಕುತ್ತದೆ.

ಪರಿಣಾಮವುಳ್ಳವನು. ನಿತ್ಯಜ್ಞಾನರೂಪನಲ್ಲ. ಜ್ಞಾನವು ಅನಿತ್ಯವಾಗುವುದರಿಂದ ಆತ್ಮನಿತ್ಯತ್ವಕ್ಕೆ ಬಾಧಕವಿಲ್ಲ. ಆದುದರಿಂದ ಮುಕ್ತಿಯಲ್ಲಿ ಇಂದ್ರಿಯಾದಿಗಳಿಂದ ಶೂನ್ಯವಾದ ಆತ್ಮನಿಗೆ ಪರಿಣಾಮವಿಲ್ಲದೇ ಇರುವುದರಿಂದ ಜಡತ್ವವು ಸಂಭವಿಸುವುದು. ಆದುದರಿಂದ ಅಂತಹ ಆತ್ಮನನ್ನು ಪಡೆಯುವುದು ಪುರುಷಾರ್ಥವೆನಿಸಲಾರದು. ಆದುದರಿಂದ ಪ್ರವೃತ್ತಿಮಾರ್ಗವೇ ಶ್ರೇಯಸ್ಕರ. ನಿವೃತ್ತಿಮಾರ್ಗವಲ್ಲ.)

**ಏವಮಪ್ಯಙ್ಗ ಸರ್ವೇಷಾಂ ದೇಹಿನಾಂ ದೇಹಯೋಗತಃ ।**
**ಕಾಲಾವಯವತಃ ಸನ್ತಿ ಭಾವಾ ಜನ್ಮಾದಯೋಽಸಕೃತ್ ॥೧೬॥**

ಪ್ರಿಯಗೆಳೆಯನೇ! ನೀನು ಭಾವಿಸಿರುವಂತೆಯಾದರೂ ಸಮಸ್ತ ದೇಹಧಾರೀಪ್ರಾಣಿಗಳಿಗೂ ಈ ಸ್ರಕ್ಚಂದನಾದಿಗಳ ಉಪಭೋಗವು ದೇಹವನ್ನು ಹೊಂದಿರುವ ಕಾರಣದಿಂದಲೂ ಸಂವತ್ಸರ-ಮಾಸ-ಋತು-ಪಕ್ಷ–ಎಂಬ ಕಾಲದ ಭೇದಗಳಿಂದಲೂ ಲಭ್ಯವಾಗುತ್ತದೆ. ಆದರೆ ಈ ಕಾಲಾವಯವಗಳ ಸಂಬಂಧದಿಂದ ದೇಹಗಳಿಗೆ ಹುಟ್ಟು-ಸಾವುಗಳು ನಿರಂತರವೂ ಆಗುತ್ತಲೇ ಇರುತ್ತವೆ. (ಮಾಲೆ-ಚಂದನ–ಇವೇ ಮುಂತಾದ ಭೋಗ್ಯವಸ್ತುಗಳು ಪ್ರವಾಹರೂಪದಿಂದ ನಿತ್ಯಗಳಾದರೂ ಪಾಂಚಭೌತಿಕವೆನಿಸಿ ಜರಾ-ಮರಣವೇ ಮೊದಲಾದ ಅನೇಕ ದೋಷಗಳಿಂದ ಕೂಡಿದ ಶರೀರಗಳನ್ನು ಪಡೆದ ಸಕಲಪ್ರಾಣಿಗಳಿಗೂ ಆ ಭೋಗ್ಯವಸ್ತುಗಳು ಕೆಲವುಕಾಲವಿರಬಲ್ಲುವೇ ಹೊರತು ಸ್ವಸ್ವರೂಪದಿಂದ ನಿತ್ಯವಸ್ತುಗಳಾಗಿ ಸರ್ವಕಾಲಗಳಲ್ಲಿಯೂ ಇರಲಾರವು. ಅಕಾಲದಲ್ಲಿ ತಪ್ಪಿಹೋಗುವುದರಿಂದ ಅನಿತ್ಯಗಳೆನಿಸಿ ಅತ್ಯಂತದುಃಖವನ್ನು ಉಂಟುಮಾಡುವುವು. ಆದುದರಿಂದ ಪ್ರವೃತ್ತಿಮಾರ್ಗದಿಂದ ಅನಿತ್ಯವಾದ ಸುಖವನ್ನು ಪಡೆಯುವುದಕ್ಕಿಂತಲೂ ನಿವೃತ್ತಿಮಾರ್ಗದ ಮೂಲಕವಾಗಿ ನಿತ್ಯನಿರಂತರಸುಖದಾಯಕವಾದ ಕೈವಲ್ಯವನ್ನು ಪಡೆಯುವುದೇ ಶ್ರೇಯಸ್ಕರ.)

**ಅತ್ರಾಪಿ ಕರ್ಮಣಾಂ ಕರ್ತುರಸ್ವಾತ ಚ ಲಕ್ಷ್ಯತೇ ।**
**ಭೋಕ್ತುಶ್ಚ ದುಃಖಸುಖಯೋಃ ಕೋ ನ್ವಥೋ ವಿವಶಂ ಭಜೇತ್ ॥**

ಇಲ್ಲಿಯೂ ಕರ್ಮಗಳನ್ನು ಮಾಡುವವನಿಗೆ ಅಸ್ವಾತಂತ್ರ್ಯವೇ ಎದ್ದು

ಕಾಣುತ್ತದೆ. ಸುಖ-ದುಃಖಗಳನ್ನು ಅನುಭವಿಸುವವನಿಗೂ ಅಸ್ವಾತಂತ್ರ್ಯವೇ ಸ್ಪಷ್ಟವಾಗಿ ಕಾಣುತ್ತದೆ. ಹೀಗೆ ಪರಾಧೀನನಾದ ಮನುಷ್ಯನಿಗೆ ಯಾವ ಪುರುಷಾರ್ಥವು ಲಭಿಸೀತು? (ಮೀಮಾಂಸಕರ ಮತದಂತೆ ಅನೇಕ ಜೀವರಿದ್ದಾರೆಂದು ಒಪ್ಪಿದರೂ ದೋಷವು ತಪ್ಪುವುದಿಲ್ಲ. ಲೋಕದಲ್ಲಿ ಜನರು ಮಾಡುವ ಕೆಲಸ-ಕಾರ್ಯಗಳು, ತಮ್ಮ ಇಚ್ಛೆಗೆ ಅನುಸಾರವಾಗಿ ಪೂರೈಸದೆ ತಲೆಕೆಳಗಾಗುವುದರಿಂದ ಕೆಲಸ ಮಾಡುವವರು, ಕರ್ತೃಗಳು ಸ್ವತಂತ್ರರಲ್ಲವೆಂದಾಯಿತು. ಕರ್ಮಫಲಗಳಾದ ಸುಖ-ದುಃಖಗಳಲ್ಲಿ ಇಷ್ಟವಾದ ಸುಖವು ಲಭಿಸದೆ ಅನಿಷ್ಟವಾದ ದುಃಖವೂ ಕೆಲವುವೇಳೆ ಪ್ರಾಪ್ತವಾಗುವುದರಿಂದ ಭೋಕ್ತೃಗಳೂ ಸ್ವತಂತ್ರರಲ್ಲ. ಹೀಗೆ ಪ್ರವೃತ್ತಿಮಾರ್ಗದಲ್ಲಿ ಜೀವರು ಪರಾಧೀನರಾಗಿಯೂ ಭೋಗ್ಯವಸ್ತುಗಳು ಜಡಗಳಾಗಿಯೂ ಇರುವುದರಿಂದ ಧರ್ಮಾರ್ಥ-ಕಾಮಗಳೆಂಬ ಪುರುಷಾರ್ಥಗಳಲ್ಲಿ ಜೀವನಿಗೆ ಯಾವ ಪುರುಷಾರ್ಥವೂ ಲಭಿಸುವುದಿಲ್ಲ.)

**ನ ದೇಹಿನಾಂ ಸುಖಂ ಕಿಞ್ಚಿದ್ವಿದ್ಯತೇ ವಿದುಷಾಮಪಿ ।**
**ತಥಾ ಚ ದುಃಖಂ ಮೂಢಾನಾಂ ವೃಥಾಹಙ್ಕರಣಂ ಪರಮ್ ॥೧೮॥**

(ಚೆನ್ನಾಗಿ ಕರ್ಮಗಳನ್ನು ಮಾಡಲು ತಿಳಿದವರು ಸುಖಿಗಳಾಗಿರುತ್ತಾರೆ. ಮಾಡಲು ತಿಳಿಯದವರು ದುಃಖಿಗಳಾಗುತ್ತಾರೆ–ಎಂಬುದೂ ಸರಿಯಲ್ಲ.) ದೊಡ್ಡ-ದೊಡ್ಡ ಕರ್ಮಕುಶಲರಾದ ವಿದ್ವಾಂಸರು ಕೂಡ ಕಿಂಚಿತ್ತಾದರೂ ಸುಖವನ್ನು ಅನುಭವಿಸದೆ ಕಷ್ಟದಲ್ಲಿ ತೊಳಲುತ್ತಿರುವುದನ್ನು ನಾವು ಕಾಣುತ್ತೇವೆ. ಅಂತೆಯೇ ಮೂಢರಾದವರು ಸ್ವಲ್ಪವಾದರೂ ದುಃಖಿಸದೇ ಇರುವುದನ್ನೂ ನಾವು ಕಾಣುತ್ತೇವೆ. ಆದುದರಿಂದ–'ಕರ್ಮಕುಶಲನಾದ ನಾನು ಸುಖಿಯು ; ಕರ್ಮಮಾಡಲರಿಯದವನು ದುಃಖಿಯು'–ಎಂಬ ಅಹಂಕಾರವು ವ್ಯರ್ಥವಾದುದು.

**ಯದಿ ಪ್ರಾಪ್ತಿಂ ವಿಘಾತಂ ಚ ಜಾನನ್ತಿ ಸುಖದುಃಖಯೋಃ ।**
**ತೇಽಪ್ಯದ್ಧಾ ನ ವಿದುರ್ಯೋಗಂ ಮೃತ್ಯುರ್ನ ಪ್ರಭವೇದ್ಯಥಾ ॥೧೯॥**

ಒಂದು ವೇಳೆ ಜೀವಿಗಳು ತಮ್ಮ ಬುದ್ಧಿಸಾಮರ್ಥ್ಯದಿಂದ ದುಃಖದ ನಾಶಕ್ಕೆ ಮತ್ತು ಸುಖದ ಪ್ರಾಪ್ತಿಗೆ ಉಪಾಯವನ್ನು ಕಂಡುಕೊಂಡಿದ್ದಾ

ರೆಂದು ಭಾವಿಸಿದರೂ ಮೃತ್ಯುವು ಯಾವಾಗ ಒದಗಿಬರುವುದೆಂಬುದನ್ನೂ ಅದರ ನಿವಾರಣೋಪಾಯವನ್ನೂ ಯಾವ ವಿದ್ವಾಂಸರೂ ಅರಿಯರು.

**ಕೋ ನ್ವರ್ಥಃ ಸುಖಯತ್ಯೇನಂ ಕಾಮೋ ವಾ ಮೃತ್ಯುರನ್ತಿಕೇ ।**
**ಆಘಾತಂ ನೀಯಮಾನಸ್ಯ ವಧ್ಯಸ್ಯೇವ ನ ತುಷ್ಟಿದಃ ॥೨೦॥**

ವಧ್ಯಸ್ಥಳಕ್ಕೆ ಒಯ್ಯಲ್ಪಡುತ್ತಿರುವ ಕೊಲೆಗಾರನಿಗೆ ಭೋಗ್ಯವಸ್ತುಗಳು ತುಷ್ಟಿಯನ್ನು ನೀಡುವುದಿಲ್ಲವಷ್ಟೇ. ಹಾಗೆಯೇ ಮೃತ್ಯುವು ಯಾವ ಸಮಯದಲ್ಲಾದರೂ ಸನ್ನಿಹಿತವಾಗಬಹುದೆಂದು ತಿಳಿದಿರುವ ವಿವೇಕಿಗೆ ಯಾವ ಪುರುಷಾರ್ಥಗಳೂ, ದಾನೋಪಭೋಗಗಳೂ ಸುಖವನ್ನು ನೀಡಲಾರವು.

**ಶ್ರುತಂ ಚ ದೃಷ್ಟವದ್ದುಷ್ಟಂ ಸ್ಪರ್ಧಾಸೂಯಾತ್ಯಯವ್ಯಯೈಃ ।**
**ಬಹ್ವನ್ತರಾಯಕಾಮತ್ವಾತ್ ಕೃಷಿವಚ್ಚಾಪಿ ನಿಷ್ಫಲಮ್ ॥೨೧॥**

ಪ್ರಿಯವಯಸ್ಯನೇ! ಲೌಕಿಕಸುಖದಂತೆಯೇ ಪಾರಲೌಕಿಕಸುಖವೂ ದೋಷಯುಕ್ತವಾದುದೇ. ಅಲ್ಲಿಯೂ ಪರಸ್ಪರ ಸ್ಪರ್ಧೆಯಿದೆ ; ಪರಸ್ಪರ ಅಸೂಯೆಯಿದೆ. ಅಲ್ಲಿಯೂ ಗುಣಗಳಲ್ಲಿ ದ್ವೇಷವೆಣಿಸುತ್ತಾರೆ. ದಿನ-ದಿನಕ್ಕೆ ಪುಣ್ಯವು ಕ್ಷಯಿಸಿದಂತೆ ಅಲ್ಲಿಯ ಸುಖವೂ ಕ್ಷಯಿಸುತ್ತ ಹೋಗುತ್ತದೆ. ಪುಣ್ಯವು ಕ್ಷಯಿಸಿದೊಡನೆಯೇ ಜೀವನ ಅಧಃಪತನವಾಗುತ್ತದೆ.

**ಅನ್ತರಾಯೈರವಿಹತೋ ಯದಿ ಧರ್ಮಃ ಸ್ವನುಷ್ಠಿತಃ ।**
**ತೇನಾಪಿ ನಿರ್ಜಿತಂ ಸ್ಥಾನಂ ಯಥಾ ಗಚ್ಛತಿ ತಚ್ಛೃಣು ॥೨೨॥**

ಪರಲೋಕಕ್ಕೆ ಸಾಧನವಾದ ಯಜ್ಞಗಳನ್ನು ಮಾಡುವುದೂ ಅಷ್ಟು ಸುಲಭವಲ್ಲ. ಅತಿವೃಷ್ಟಿ-ಅನಾವೃಷ್ಟಿ ಇವೇ ಮುಂತಾದ ದೋಷಗಳಿಂದ ಕೃಷಿಯು ನಿಷ್ಫಲವಾಗುವಂತೆ ಯಜಮಾನನ, ಋತ್ವಿಜರ, ಸಾಮಗ್ರಿಗಳ ದೋಷದಿಂದಾಗಿ ಯಜ್ಞವೂ ಹಾಳಾಗಬಹುದು. ಯಜ್ಞಕ್ಕೆ ವಿಘ್ನವುಂಟಾಗ ಬಹುದು. ಯಜ್ಞವು ನಿಷ್ಫಲವಾಗಿ ಪರಲೋಕವೂ ದೊರೆಯದೇ ಇರ ಬಹುದು.

ಒಂದುವೇಳೆ ವಿಘ್ನಗಳೆಲ್ಲವನ್ನೂ ಪರಿಹರಿಸಿಕೊಂಡು ಸಾಂಗವಾಗಿ ಯಜ್ಞವನ್ನು ಪೂರೈಸಿ ಸ್ವರ್ಗವನ್ನು ಜಯಿಸಿದರೂ, ಹಾಗೆ ಕಷ್ಟದಿಂದ

ಸಂಪಾದಿಸಿದ ಸ್ವರ್ಗಸುಖವೂ ಯಾವ ರೀತಿಯಲ್ಲಿರುವುದೆಂಬುದನ್ನು ಹೇಳುವೆನು, ಕೇಳು :

**ಇಷ್ಟ್ವೇಹ ದೇವತಾ ಯಜ್ಞೈಃ ಸ್ವರ್ಲೋಕಂ ಯಾತಿ ಯಾಜ್ಞಿಕಃ ।**
**ಭುಞ್ಜೀತ ದೇವವತ್ತತ್ರ ಭೋಗಾನ್ದಿವ್ಯಾನ್ ನಿಜಾರ್ಜಿತಾನ್ ॥೨೩॥**

ಯಾಜ್ಞಿಕನು ಯಜ್ಞ-ಯಾಗಾದಿಗಳಿಂದ ಇಂದ್ರಾದಿದೇವತೆಗಳನ್ನು ತೃಪ್ತಿಗೊಳಿಸಿ ಅವಸಾನಾನಂತರದಲ್ಲಿ ಸ್ವರ್ಗಕ್ಕೆ ಹೋಗುತ್ತಾನೆ. ಯಜ್ಞ ಮಾಡಿದುದರ ಮೂಲಕವಾಗಿ ತಾನೇ ಸಂಪಾದಿಸಿದ ವಿಶೇಷಪುಣ್ಯದ ಫಲ ವಾಗಿ ಆ ಯಾಜ್ಞಿಕನು ಸ್ವರ್ಗದಲ್ಲಿರುವ ದೇವತೆಗಳಂತೆಯೇ ದಿವ್ಯವಾದ ಭೋಗಗಳನ್ನು ಅನುಭವಿಸುತ್ತಾನೆ.

**ಸ್ವಪುಣ್ಯೋಪಚಿತೇ ಶುಭ್ರೇ ವಿಮಾನ ಉಪಗೀಯತೇ ।**
**ಗನ್ಧರ್ವೈರ್ವಿಹರನ್ ಮಧ್ಯೇ ದೇವೀನಾಂ ಹೃದ್ಯವೇಷಧೃಕ್ ॥೨೪॥**

ತನ್ನ ಪುಣ್ಯವಿಶೇಷದಿಂದ ಸಂಪಾದಿಸಿದ ದಿವ್ಯವಾದ ವಿಮಾನದಲ್ಲಿ ಆಹ್ಲಾದಕರವಾದ ವೇಷಭೂಷಣಗಳನ್ನು ಧರಿಸಿ ಅಪ್ಸರೆಯರ ಮಧ್ಯದಲ್ಲಿ ಕುಳಿತು ವಿಹರಿಸುತ್ತಾ ಗಂಧರ್ವರಿಂದ ಕೀರ್ತಿಸಲ್ಪಡುತ್ತಾನೆ. ಗಂಧರ್ವರು ಅವನ ಗುಣಗಾನಮಾಡುತ್ತಾರೆ.

**ಸ್ತ್ರೀಭಿಃ ಕಾಮಗಯಾನೇನ ಕಿಙ್ಕಿಣೀಜಾಲಮಾಲಿನಾ ।**
**ಕ್ರೀಡನ್ ನ ವೇದಾತ್ಮಪಾತಂ ಸುರಾಕ್ರೀಡೇಷು ನಿರ್ವೃತಃ ॥೨೫॥**

ಕಿರುಗೆಜ್ಜೆಗಳ ಮಾಲೆಗಳಿಂದ ಸಮಲಂಕೃತವಾದ, ಮನಬಂದಲ್ಲಿಗೆ ಪ್ರಯಾಣಮಾಡಲು ಸಮರ್ಥವಾದ ವಿಮಾನದಲ್ಲಿ ಸ್ತ್ರೀಯರಿಂದ ಪರಿವೃತ ನಾಗಿ ಕುಳಿತು ದೇವತೆಗಳ ಕ್ರೀಡಾವನವಾದ ನಂದನವನದಲ್ಲಿ ಪರಮಾನಂದ ದಿಂದ ವಿಹರಿಸುವ ಆ ಯಾಜ್ಞಿಕನಿಗೆ ಸ್ವಲ್ಪ ಕಾಲದಲ್ಲಿಯೇ ತಾನು ಕೆಳಗೆ ಬೀಳಲಿರುವೆನೆಂಬ ಅರಿವು ಸ್ವಲ್ಪವಾದರೂ ಇರುವುದಿಲ್ಲ.

**ತಾವತ್ಪ್ರಮೋದತೇ ಸ್ವರ್ಗೇ ಯಾವತ್ಪುಣ್ಯಂ ಸಮಾಪ್ಯತೇ ।**
**ಕ್ಷೀಣಪುಣ್ಯಃ ಪತತ್ಯರ್ವಾಗನಿಚ್ಛನ್ ಕಾಲಚಾಲಿತಃ ॥೨೬॥**

ಉದ್ಧವ! ಯಜ್ಞಕರ್ಮದಿಂದ ಅಥವಾ ಧರ್ಮಕಾರ್ಯಗಳಿಂದ

ಪ್ರಾಪ್ತವಾದ ಪುಣ್ಯವು ಮುಗಿಯುವವರೆಗೂ ಸ್ವರ್ಗಲೋಕದಲ್ಲಿ ಆನಂದ ತುಂದಿಲನಾಗಿದ್ದುಬಿಡುತ್ತಾನೆ. ಪುಣ್ಯವು ಮುಗಿದೊಡನೆಯೇ ಕಾಲನಿಂದ ಪ್ರೇರಿತನಾಗಿ ಇಚ್ಛೆಯಿಲ್ಲದಿದ್ದರೂ ತಲೆಕೆಳಗಾಗಿ ಭೂಮಿಗೆ ಬಿದ್ದುಹೋಗುತ್ತಾನೆ.

**ಯದ್ಯಧರ್ಮರತಃ ಸಙ್ಗಾದಸತಾಂ ವಾಜಿತೇನ್ದ್ರಿಯಃ ।**
**ಕಾಮಾತ್ಮಾ ಕೃಪಣೋ ಲುಬ್ಧಃ ಸ್ತ್ರೈಣೋ ಭೂತವಿಹಿಂಸಕಃ ॥೨೭॥**

**ಪಶೂನವಿಧಿನಾಽಲಭ್ಯ ಪ್ರೇತಭೂತಗಣಾನ್ಯಜನ್ ।**
**ನರಕಾನವಶೋ ಜನ್ತುರ್ಗತ್ವಾ ಯಾತ್ಯುಲ್ಬಣಂ ತಮಃ ॥೨೮॥**

ಯಜ್ಞ-ಯಾಗಾದಿ ಧರ್ಮಕಾರ್ಯಗಳನ್ನು ಮಾಡಿದವರ ಗತಿಯೂ ಅಧಃಪತನವೇ. ಇನ್ನು ಅಧರ್ಮಪ್ರವರ್ತಕರ ವಿಷಯದಲ್ಲಿ ಹೇಳುವುದೇನಿದೆ? ಇಂದ್ರಿಯಗಳ ದಾಸನಾಗಿ ದುಷ್ಟರ ಸಹವಾಸವನ್ನೇ ಮಾಡುತ್ತಾ ಅಧರ್ಮಕಾರ್ಯಗಳಲ್ಲಿಯೇ ನಿರತನಾಗಿರತಕ್ಕವನೂ, ಕಾಮಾಂಧನೂ, ಕೃಪಣನೂ, ಲೋಭಿಯೂ, ಸ್ತ್ರೀಲಂಪಟನೂ, ಪ್ರಾಣಿಹಿಂಸಕನೂ, ಪಶುಗಳನ್ನು ವಿಧಿ-ನಿಯಮಗಳಿಲ್ಲದೆ ಭೂತ-ಪ್ರೇತಗಳ ಪ್ರೀತಿಗಾಗಿ ಬಲಿಗೊಡುವವನೂ–ಅಸ್ವತಂತ್ರನಾಗಿ ಬೇರೇ ಗತಿಯೇ ಇಲ್ಲದೆ ಘೋರವಾದ ನರಕದಲ್ಲಿ ಬಿದ್ದು, ಸಾವಿರಾರು ವರ್ಷಗಳು ಅಸಹ್ಯವಾದ ಯಾತನೆಗಳನ್ನು ಅನುಭವಿಸುತ್ತಿದ್ದು, ಘೋರಪಾಪವು ಕ್ಷೀಣಿಸಿದನಂತರ ಅವನು ಭೂಮಿಗೆ ಬಿದ್ದು ಉಲ್ಬಣವಾದ ತಮೋಗುಣವುಳ್ಳ ಜಂತುವಾಗಿ ಹುಟ್ಟುತ್ತಾನೆ.

**ಕರ್ಮಾಣಿ ದುಃಖೋದರ್ಕಾಣಿ ಕುರ್ವನ್ದೇಹೇನ ತೈಃ ಪುನಃ ।**
**ದೇಹಮಾಭಜತೇ ತತ್ರ ಕಿಂ ಸುಖಂ ಮರ್ತ್ಯಧರ್ಮಿಣಃ ॥೨೯॥**

ಹಾಗೆ ಪಡೆದುಕೊಂಡ ದೇಹಗಳ ಮೂಲಕವಾಗಿಯೂ ಆ ಜೀವನು ದುಃಖಕರವಾದ ಪಾಪಕರ್ಮಗಳನ್ನೇ ಮಾಡುತ್ತಾ ಅವುಗಳ ಫಲವಾಗಿ ಮತ್ತೊಂದು ದುಷ್ಟಯೋನಿಯಲ್ಲಿ ಹುಟ್ಟುತ್ತಾನೆ. ಹೀಗೆ ಪ್ರವೃತ್ತಿಮಾರ್ಗದಲ್ಲಿರುವವನು ನೆಲೆಯನ್ನು ಕಾಣದೆ ಹುಟ್ಟು-ಸಾವುಗಳೆಂಬ ಚಕ್ರದಲ್ಲಿ ಸಿಕ್ಕಿ ಅನಂತಕಾಲದವರೆಗೂ ನರಳುತ್ತಲೇ ಇರುತ್ತಾನೆ. ಮರಣಧರ್ಮವಿರುವ ಪ್ರಾಣಿಗೆ ಯಾವ ಸುಖವಿದೆ?

**ಲೋಕಾನಾಂ ಲೋಕಪಾಲಾನಾಂ ಮದ್ಭಯಂ ಕಲ್ಪಜೀವಿನಾಮ್ ।**
**ಬ್ರಹ್ಮಣೋಽಪಿ ಭಯಂ ಮತ್ತೋ ದ್ವಿಪರಾರ್ಧಪರಾಯುಷಃ ॥೩೦॥**

ಕಲ್ಪಪರ್ಯಂತವಾಗಿ ಜೀವಿಸಿರುವ ಸ್ವರ್ಗಾದಿಲೋಕಗಳಿಗೂ, ಲೋಕ ಪಾಲಕರಿಗೂ ಕಾಲಸ್ವರೂಪನಾದ ನನ್ನಿಂದ ಭಯವಿದೆ. ಎರಡು ಪರಾರ್ಧಗಳ ಪರಮಾಯುಷ್ಯವಿರುವ ಬ್ರಹ್ಮನಿಗೂ ಕಾಲಪುರುಷನಾದ ನನ್ನಿಂದ ಭಯವಿದೆ. ಇವರೆಲ್ಲರೂ ಮೃತ್ಯುಧರ್ಮದವರೇ ಆಗಿದ್ದಾರೆ.

**ಗುಣಾಃ ಸೃಜನ್ತಿ ಕರ್ಮಾಣಿ ಗುಣೋಽನುಸೃಜತೇ ಗುಣಾನ್ ।**
**ಜೀವಸ್ತು ಗುಣಸಂಯುಕ್ತೋ ಭುಙ್ಕ್ತೇ ಕರ್ಮಫಲಾನ್ಯಸೌ ॥೩೧॥**

ಸತ್ತ್ವ-ರಜಸ್ಸು ಮತ್ತು ತಮಸ್ಸುಗಳೆಂಬ ಈ ಮೂರು ಗುಣಗಳು ಇಂದ್ರಿಯಗಳನ್ನು ಕರ್ಮಮಾಡಲು ಪ್ರೇರಿಸುತ್ತವೆ. ಪ್ರೇರಣೆಗೆ ಅನುಸಾರ ವಾಗಿ ಇಂದ್ರಿಯಗಳು ಗುಣಗಳಿಗೆ ಅನುರೂಪವಾಗಿ ಕರ್ಮಗಳನ್ನು ಮಾಡು ತ್ತವೆ. ಜೀವವು ಅಜ್ಞಾನವಶದಿಂದ ಸತ್ತ್ವವೇ ಮೊದಲಾದ ಗುಣಗಳನ್ನು ಮತ್ತು ಇಂದ್ರಿಯಗಳನ್ನು ತನ್ನದೆಂದೇ ಭಾವಿಸಿಕೊಳ್ಳುತ್ತದೆ. ಈ ಕಾರಣದಿಂದಾಗಿ ಗುಣಗಳಿಂದ ಪ್ರೇರಿತವಾದ ಇಂದ್ರಿಯಗಳುಮಾಡುವ ಕರ್ಮಗಳ ಫಲವನ್ನು ಅದು ಉಪಭೋಗಿಸುತ್ತದೆ.

**ಯಾವತ್ ಸ್ಯಾದ್ಗುಣವೈಷಮ್ಯಂ ತಾವನ್ನಾನಾತ್ವಮಾತ್ಮನಃ ।**
**ನಾನಾತ್ವಮಾತ್ಮನೋ ಯಾವತ್ಪಾರತನ್ತ್ರ್ಯಂ ತದೈವ ಹಿ ॥೩೨॥**

**ಯಾವದಸ್ಯಾಸ್ವತನ್ತ್ರ ತ್ವಂ ತಾವದೀಶ್ವರತೋ ಭಯಮ್ ।**
**ಯ ಏತತ್ಸಮುಪಾಸೀರಂಸ್ತೇ ಮುಹ್ಯನ್ತಿ ಶುಚಾರ್ಪಿತಾಃ ॥೩೩॥**

ಎಂದಿನವರೆಗೆ ಗುಣಗಳ ವೈಷಮ್ಯದಿಂದ ಉಂಟಾಗುವ ಅಹಂಕಾರ-ಮಮಕಾರಗಳು ಇರುತ್ತವೆಯೋ ಅಲ್ಲಿಯವರೆಗೂ ಜೀವನಿಗೆ ಏಕತ್ವದ ಭಾವನೆಯುಂಟಾಗುವುದಿಲ್ಲ. ನಾನಾತ್ವದ ಭಾವನೆಯೇ ಇರುತ್ತದೆ. ಆತ್ಮನಿಗೆ ನಾನಾತ್ವವು ಇರುವವರೆಗೆ ಜೀವನು ಕಾಲದ ಮತ್ತು ಕರ್ಮದ ಅಡಿ ಯಾಳಾಗಿರಬೇಕಾಗುತ್ತದೆ. ಎಲ್ಲಿಯವರೆಗೆ ಅಸ್ವಾತಂತ್ರ್ಯವಿರುತ್ತದೆಯೋ ಅಲ್ಲಿಯವರೆಗೂ ಈಶ್ವರನಿಂದ ಭಯವಿರುತ್ತದೆ. ಉದ್ಧವ! ಯಾರು ನಾನು-

ನನ್ನದು–ಎಂಬ ಭಾವನೆಯಿಂದ ಗ್ರಸ್ತರಾಗಿ ಆತ್ಮದ ಅನೇಕತ್ವವನ್ನು ಪ್ರತಿ ಪಾದಿಸುವರೋ ಅಂತಹವರು ಶೋಕ-ಮೋಹಗಳಿಗೆ ಪರವಶರಾಗುತ್ತಾರೆ.

**ಕಾಲ ಆತ್ಮಾಽಗಮೋ ಲೋಕಃ ಸ್ವಭಾವೋ ಧರ್ಮ ಏವ ಚ ।**
**ಇತಿ ಮಾಂ ಬಹುಧಾ ಪ್ರಾಹುರ್ಗುಣವ್ಯತಿಕರೇ ಸತಿ ॥೩೪॥**

ಸಾಮ್ಯಾವಸ್ಥಾರೂಪವಾದ ಅವ್ಯಕ್ತದಿಂದ ಗುಣವೈಷಮ್ಯರೂಪವಾದ ಸೃಷ್ಟಿಯುಂಟಾದಾಗ ನನ್ನನ್ನು ಕಾಲ, ಆತ್ಮಾ, ಶಾಸ್ತ್ರ, ಲೋಕ, ಸ್ವಭಾವ, ಧರ್ಮ–ಹೀಗೆ ಹಲವು ಬಗೆಯಾಗಿ ಕರೆಯುತ್ತಾರೆ."

ಶ್ರೀಕೃಷ್ಣನ ಈ ದಿವ್ಯೋಪದೇಶವನ್ನು ಕೇಳಿದನಂತರ ಉದ್ಧವನು ಹೇಳುತ್ತಾನೆ :

**ಗುಣೇಷು ವರ್ತಮಾನೋಽಪಿ ದೇಹಜೇಷ್ವನಪಾವೃತಃ ।**
**ಗುಣೈರ್ನ ಬದ್ಧ್ಯತೇ ದೇಹೀ ಬದ್ಧ್ಯತೇ ವಾ ಕಥಂ ವಿಭೋ ॥೩೫॥**

"ವಿಭುವೇ! ಜೀವನು ಸ್ಥೂಲ-ಸೂಕ್ಷ್ಮ ಶರೀರಗಳಲ್ಲುಂಟಾಗುವ ಕರ್ತೃತ್ವ-ಬೋಕ್ತೃತ್ವಾದಿ ಗುಣಗಳಲ್ಲಿ ಇರುವವನಾದರೂ ಆಕಾಶದಂತೆ ಅವುಗಳಿಂದ ಆವೃತನಾಗದೆ ಗುಣದ ಕಾರ್ಯಗಳಾದ ಕರ್ಮಗಳಿಂದಲೂ, ಸುಖಾದಿಗಳಿಂದಲೂ ಬಂಧಿಸಲ್ಪಡುವುದಿಲ್ಲ. ಹಾಗಾದರೆ ಬಂಧನಕ್ಕೆ ಹೇಗೆ ಒಳಗಾಗುತ್ತಾನೆ? (ಗುಣಗಳು ಅಳಿದ ಬಳಿಕ ಮುಕ್ತಿಯೋ? ಗುಣಗಳು ಇರುವಾಗಲೇ ಮುಕ್ತಿಯೋ? ಗುಣಗಳು ಇಲ್ಲದೇ ಹೋದಾಗ ಮುಕ್ತಿ–ಎಂದರೆ ಜ್ಞಾನಸಾಧ್ಯವೇ ಇಲ್ಲದುದರಿಂದ ಮುಕ್ತಿಯಾಗಲಾರದು. ಗುಣಗಳು ಇರುವಾಗಲೇ ಮುಕ್ತಿ ಎಂದರೆ ಗುಣಗಳು ಮಾಯಾಮಯವೆಂದು ಹೇಳಿರುವುದರಿಂದ ಗುಣಗಳಲ್ಲಿರುವುದೇ ಆತ್ಮನಿಗೆ ಸಂಭವಿಸುವುದಿಲ್ಲ. ಒಮ್ಮೆ ಪ್ರಾತೀತಿಕ ಗುಣಗಳು ಇರುವುವೆಂದೂ ಆ ಗುಣಗಳಲ್ಲಿಯೂ ಗುಣ ಕಾರ್ಯವಾದ ದೇಹದಿಂದುಂಟಾದ ಕರ್ಮಾದಿಗಳಲ್ಲಿಯೂ ಆತ್ಮನಿದ್ದ ಬಳಿಕ ಕರ್ತೃತ್ವ-ಬೋಕ್ತೃತ್ವ–ಇತ್ಯಾದಿ ಗುಣಗಳಿಂದ ಏಕೆ ಬದ್ಧನಾಗುವುದಿಲ್ಲ? ಆಕಾಶದಂತೆ ಅಸಂಗನಾದುದರಿಂದ ಬದ್ಧನಾಗುವುದಿಲ್ಲ–ಎಂದರೆ ಆತ್ಮನಿಗೆ ಬಂಧವೇ ಸಂಭವಿಸಕೂಡದು. ಹೀಗಿರುವಾಗ ಬದ್ಧನಾಗುವುದು ಹೇಗೆ?)

**ಕಥಂ ವರ್ತೇತ ವಿಹರೇತ್ಕೈರ್ವಾ ಜ್ಞಾಯೇತ ಲಕ್ಷಣೈಃ ।**
**ಕಿಂ ಭುಞ್ಜೀತೋತ ವಿಸೃಜೇಚ್ಛಯೀತಾಸೀತ ಯಾತಿ ವಾ ॥೩೬॥**

ಬದ್ಧನಾದ ಅಥವಾ ಮುಕ್ತನಾದ ಪುರುಷನು ಹೇಗೆ ವ್ಯವಹರಿಸು ತ್ತಾನೆ? ಹೇಗೆ ವಿಹರಿಸುತ್ತಾನೆ? ಯಾವ ಶುಭಲಕ್ಷಣಗಳಿಂದ ಅವನು ಗುರುತಿಸಲ್ಪಡುತ್ತಾನೆ? ಯಾವುದನ್ನು ಭುಂಜಿಸುತ್ತಾನೆ? ಯಾವುದನ್ನು ವಿಸರ್ಜಿಸುತ್ತಾನೆ? ಹೇಗೆ ಮಲಗುತ್ತಾನೆ? ಹೇಗೆ ಕುಳಿತುಕೊಳ್ಳುತ್ತಾನೆ? ಹೇಗೆ ಸಂಚರಿಸುತ್ತಾನೆ?

(ವಿಷಯೇಂದ್ರಿಯಾದಿ ಗುಣಗಳಿದ್ದರೂ ಅವುಗಳಲ್ಲಿ ಅಹಂಕಾರವನ್ನು ಇಡುವುದರಿಂದ (ನಾನು-ನನ್ನದು ಎಂದು ಭಾವಿಸುವುದರಿಂದ) ಜೀವನು ಬದ್ಧನಾಗುತ್ತಾನೆ. ಅಹಂಕಾರ-ಮಮಕಾರಗಳನ್ನು ಇಡದೇ ಇರುವುದರಿಂದ ಮುಕ್ತನಾಗುತ್ತಾನೆ–ಎನ್ನುವುದಾದರೆ ಅದನ್ನು ತಿಳಿಯುವುದು ಹೇಗೆ? ಬದ್ಧನಿಗಾಗಲೀ ಮುಕ್ತನಿಗಾಗಲೀ ವ್ಯವಹಾರ-ವಿಹಾರ-ಭೋಜನ-ಮೂತ್ರ ಪುರೀಷೋತ್ಸರ್ಜನ-ಶಯನ-ಆಸನ-ಗಮನಗಳೆಂಬ ಕರ್ಮಗಳು ಸಮಾನ ಗಳಾಗಿಯೇ ಕಾಣುವುವು. ಆ ಕರ್ಮಗಳನ್ನು ನಿರಭಿಮಾನದಿಂದ ಮಾಡಿ ದುವುಗಳೆಂದಾಗಲೀ ಸ್ವಾಭಿಮಾನದಿಂದ ಮಾಡಿದುವುಗಳೆಂದಾಗಲೀ ಯಾವ ಲಕ್ಷಣಗಳಿಂದ ತಿಳಿಯಬೇಕು? )

**ಏತದಚ್ಯುತ ಮೇ ಬ್ರೂಹಿ ಪ್ರಶ್ನಂ ಪ್ರಶ್ನವಿದಾಂ ವರ ।**
**ನಿತ್ಯಮುಕ್ತೋ ನಿತ್ಯಬದ್ಧ ಏಕ ಏವೇತಿ ಮೇ ಭ್ರಮಃ ॥೩೭॥**

ಅಚ್ಯುತನೇ! ಪ್ರಶ್ನೆಗಳ ರಹಸ್ಯವನ್ನು ತಿಳಿದವರಲ್ಲಿ ಶ್ರೇಷ್ಠನಾದವನೇ! ನನ್ನ ಪ್ರಶ್ನೆಗಳಿಗೆ ಉತ್ತರವನ್ನು ದಯಪಾಲಿಸು. ಒಬ್ಬನೇ ಆತ್ಮನು ಅನಾದಿಯಾದ ಗುಣಗಳ ಸಂಬಂಧದಿಂದ ನಿತ್ಯಬದ್ಧನಾಗುತ್ತಾನೆ. ಅಸಂಗ ನಾಗಿರುವುದರಿಂದ ನಿತ್ಯಮುಕ್ತನಂತೆಯೂ ಕಾಣುತ್ತಾನೆ. ಈ ವಿಷಯದಲ್ಲಿ ನಾನು ಭ್ರಮಿಸಿದ್ದೇನೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಏಕಾದಶಸ್ಕಂಧದ ೧೦ನೆಯ ಅಧ್ಯಾಯವು ಮುಗಿಯಿತು.

---

## ಬದ್ಧರು, ಮುಕ್ತರು ಮತ್ತು ಭಕ್ತರು-ಇವರ ಲಕ್ಷಣ

ಭಗವಂತನು ಹೇಳುತ್ತಾನೆ :

**ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ ।**
**ಗುಣಸ್ಯ ಮಾಯಾಮೂಲತ್ವಾನ್ನ ಮೇ ಮೋಕ್ಷೋ ನ ಬನ್ಧನಮ್ ॥**

"ಉದ್ಧವ! ಆತ್ಮನು ಬದ್ಧನು ಅಥವಾ ಮುಕ್ತನು ಎನ್ನುವುದು ನನ್ನ ಅಧೀನದಲ್ಲಿರುವ ಸತ್ತ್ವವೇ ಮೊದಲಾದ ಗುಣಗಳ ಉಪಾಧಿಯಿಂದ. ಸಹಜವಾಗಿ ಆತ್ಮನು ಬದ್ಧನಲ್ಲ. ಗುಣಗಳು ಮಾಯಾಮೂಲವಾದ ಕಾರಣ ಜೀವನಿಗೆ ಮೋಕ್ಷವಾಗಲೀ, ಬಂಧನವಾಗಲೀ ಇಲ್ಲ. ಇದು ನನ್ನ ನಿರ್ಣಯ. (ನಿತ್ಯಬದ್ಧನೂ ನಿತ್ಯಮುಕ್ತನೂ ಒಬ್ಬನೇ–ಎಂಬುದು ವಿರೋಧಾಭಾಸವಲ್ಲವೇ?–ಎಂಬ ಉದ್ಧವನ ಸಂಶಯಕ್ಕೆ ಶ್ರೀಕೃಷ್ಣನು ಉತ್ತರಿಸುತ್ತಾನೆ. ಬದ್ಧನು-ಮುಕ್ತನು–ಎಂಬ ಮಾತು ನನಗೆ ಅಧೀನವಾಗಿರುವ ಮಾಯಾಗುಣಗಳು ಉಪಾಧಿಯಿಂದಲೇ ಹೊರತು ವಾಸ್ತವವಲ್ಲ ; ವಿರೋಧವೂ ಅಲ್ಲ. ಇದೇ ನನ್ನ ಖಚಿತವಾದ ಅಭಿಪ್ರಾಯ. ಪಾತ್ರೆಯಲ್ಲಿ ಹಾಲು ಕಾಯಿಸುವಾಗ ಪಾತ್ರೆಯೆಂಬ ಉಪಾಧಿಗುಂಟಾದ ಅಗ್ನಿತಾಪದಿಂದ ಹಾಲು ಕಾಯುವುದು ಎಷ್ಟು ಸತ್ಯವೋ ಹಾಗೆಯೇ ಗುಣೋಪಾಧಿಗಳಿಂದುಂಟಾಗುವ ಗುಣಗಳೇ ಮಾಯಿಕಗಳಾಗಿರುವುದರಿಂದ ಅವುಗಳ ಪರಿಣಾಮದಿಂದುಂಟಾಗುವ ಬಂಧ-ಮೋಕ್ಷಗಳೂ ಸತ್ಯವಲ್ಲ. ಗುಣಗಳಿಗೆ ಅಧೀನರಾಗದೇ ಇದ್ದವರಿಗೆ ಬಂಧ-ಮೋಕ್ಷಗಳಿಲ್ಲ–ಈ ವಿಷಯದಲ್ಲಿ ಗುಣನಿಯಾಮಕನಾದರೂ ಗುಣಗಳಿಗೆ ಅಧೀನನಾಗದೇ ಇರುವ ನನಗೆ ಬಂಧ-ಮೋಕ್ಷಗಳಿಲ್ಲ ವೆಂಬುದೇ ನಿದರ್ಶನವು.)

**ಶೋಕಮೋಹೌ ಸುಖಂ ದುಃಖಂ ದೇಹಾಪತ್ತಿಶ್ಚ ಮಾಯಯಾ ।**
**ಸ್ವಪ್ನೋ ಯಥಾಽತ್ಮನಃ ಖ್ಯಾತಿಃ ಸಂಸೃತಿರ್ನ ತು ವಾಸ್ತವೀ ॥೨॥**

ಸ್ವಪ್ನದಲ್ಲಿ ಬುದ್ಧಿಯೇ ರೂಪಾಂತರಗೊಂಡು ನಿಮಿತ್ತವಿಲ್ಲದೆಯೇ ಸುಖ-ದುಃಖಾದಿ ರೂಪಗಳಲ್ಲಿ ಪರಿಣಮಿಸುವಂತೆ ಗುಣಗಳು ಮಾಯಾ

ಕಲ್ಪಿತವಾಗಿರುವುದರಿಂದ ಆ ಗುಣಗಳ ಸಂಬಂಧದಿಂದ ಉಂಟಾದ ಶೋಕ-ಮೋಹ-ಸುಖ-ದುಃಖ ಶರೀರಪ್ರಾಪ್ತಿ–ಇವುಗಳಿಂದ ಕೂಡಿದ ಸಂಸಾರ ಇವೆಲ್ಲವೂ ಮಿಥ್ಯಾಕಲ್ಪಿತಗಳೇ ; ವಾಸ್ತವವಲ್ಲ. (ಗುಣಗಳು ಮಾಯಾಮಯವಾದುವುಗಳು. ಗುಣಗಳಿಂದ ಕಲ್ಪಿತವಾದ ಮೋಹ-ಶೋಕಾದಿಗಳು, ಇವುಗಳಿಗೆ ಸಂಬಂಧಿಸಿದಂತೆ ಸಂಸಾರ ಎಲ್ಲವೂ ಮಾಯಾಮಯವೇ. ವಾಸ್ತವವಲ್ಲ. ಸ್ವಪ್ನದಲ್ಲಿ ಬುದ್ಧಿಯ ವಿಪರ್ಯಾಸದಿಂದ ಹಲವಾರು ಬಗೆಯ ಸ್ವರೂಪಗಳನ್ನು ಕಾಣುತ್ತೇವೆ. ಆದರೆ ಅವೆಲ್ಲವೂ ಮಿಥ್ಯೆ. ಅಂತೆಯೇ ಗುಣಕಲ್ಪಿತವಾದ ಸಂಸಾರವೂ ಮಿಥ್ಯೆ. ನಿಜವಾಗಿರುವಂತೆ ಭಾಸವಾಗುತ್ತದೆ.)

**ವಿದ್ಯಾವಿದ್ಯೇ ಮಮ ತನೂ ವಿದ್ಧ್ಯುದ್ಧವ ಶರೀರಿಣಾಮ್ ।**
**ಮೋಕ್ಷಬನ್ಧಕರೀ ಆದ್ಯೇ ಮಾಯಯಾ ಮೇ ವಿನಿರ್ಮಿತೇ ॥೩॥**

ಪ್ರಾಣಿಗಳಿಗೆ ಮೋಕ್ಷ-ಬಂಧನಗಳನ್ನು ಕಲ್ಪಿಸುವ ಅನಾದಿಗಳಾದ ನನ್ನ ಮಾಯೆಯಿಂದ ಸೃಷ್ಟಿಸಲ್ಪಟ್ಟ ವಿದ್ಯೆ ಮತ್ತು ಅವಿದ್ಯೆಗಳು (ಜ್ಞಾನಾಜ್ಞಾನಗಳು) ನನ್ನ ಶರೀರಗಳೆಂದು ತಿಳಿ. ಜ್ಞಾನಜ್ಞಾನಗಳೆರಡೂ ಪ್ರಾಣಿಗಳ ಮೋಕ್ಷ-ಬಂಧನಗಳಿಗಾಗಿ ನನ್ನಿಂದ ನಿರ್ಮಿಸಲ್ಪಟ್ಟ ಶಕ್ತಿಗಳು. ನಾನು ಎಲ್ಲಿಯವರೆಗೆ ಅಜ್ಞಾನವನ್ನುಂಟುಮಾಡಿರುವೆನೋ ಅಲ್ಲಿಯವರೆಗೂ ಜೀವನು ಬದ್ಧನಾಗಿರುತ್ತಾನೆ. ಯಾವಾಗ ತತ್ತ್ವಜ್ಞಾನವನ್ನುಂಟುಮಾಡು ವೆನೋ ಆಗ ಮೋಕ್ಷವು ಲಭಿಸುವುದು.*

**ಏಕಸ್ಯೈವ ಮಮಾಂಶಸ್ಯ ಜೀವಸ್ಯೈವ ಮಹಾಮತೇ ।**
**ಬನ್ಧೋಽಸ್ಯಾವಿದ್ಯಯಾನಾದಿರ್ವಿದ್ಯಯಾ ಚ ತಥೇತರಃ ॥೪॥**

ಮಹಾಬುದ್ಧಿಶಾಲಿಯಾದ ಉದ್ಧವನೇ! ಏಕಮೇವಾದ್ವಿತೀಯನಾಗಿರುವ ನನ್ನ ಅಂಶನಾಗಿರುವ ಈ ಜೀವನಿಗೆ ಮಾತ್ರವೇ ಅಜ್ಞಾನದಿಂದ ಅನಾದಿಯಾದ ಬಂಧನವೂ ತತ್ತ್ವಜ್ಞಾನದಿಂದ ಅನಾದಿಯಾದ ಮೋಕ್ಷವೂ ಲಭಿಸುತ್ತದೆ. (ಆತ್ಮಭೇದವಿಲ್ಲದುದರಿಂದ ನಿನಗೂ ಬಂಧನವುಂಟೇ ಎಂದು

---

* ಬನ್ಧನೋ ಭವಪಾಶೇನ ಭವಪಾಶಾಚ್ಚ ಮೋಚಕಃ ।
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ಸನಾತನಃ ॥

ಸಂಸಾರಪಾಶದಿಂದ ಕಟ್ಟುವವನೂ, ಈ ಪಾಶದಿಂದ ಬಿಡಿಸಿ ಮೋಕ್ಷವನ್ನು ದಯಪಾಲಿಸುವವನೂ ಸನಾತನನಾದ ವಿಷ್ಣುವೇ ಆಗಿದ್ದಾನೆ.

ಪ್ರಶ್ನಿಸುವೆಯಾದರೆ ಬಂಧನವೆಂಬುದು ನನ್ನ ಅಂಶಭೂತವಾದ ಜೀವನಿಗೇ ಹೊರತು ನನಗಿಲ್ಲ. ಆತ್ಮಭೇದವಿಲ್ಲದ ಬಳಿಕ ಜೀವನೆಂಬುವನು ಬೇರೆಲ್ಲಿರುವನು? ಜೀವನಿಲ್ಲದೆ ಬಂಧ-ಮೋಕ್ಷ, ಸುಖ-ದುಃಖ ಮುಂತಾದುವುಗಳ ವ್ಯವಸ್ಥೆಯಾದರೂ ಹೇಗೆ ಸಾಧ್ಯ? ಚಂದ್ರನು ಒಬ್ಬನೇ ಆದರೂ ಹಲವಾರು ನೀರಿನ ಪಾತ್ರೆಗಳ ಉಪಾಧಿಯಿಂದ ಬಿಂಬ-ಪ್ರತಿಬಿಂಬರೂಪವಾದ ಭೇದದ ಕಲ್ಪನೆಯಾಗುತ್ತದೆ. ನೀರಿನ ಪಾತ್ರೆಗಳಲ್ಲಿ ಉಂಟಾಗುವ ಪ್ರತಿಬಿಂಬದ ಕಂಪನಾದಿಗಳು ಚಂದ್ರನಿಗಿರುವುದಿಲ್ಲ. ಪ್ರತಿಬಿಂಬಗಳಲ್ಲಿಯೂ ಉಪಾಧಿ ಭೇದದಿಂದ ಒಂದು ಜಲಪಾತ್ರೆಯು ಒಡೆದುಹೋದಲ್ಲಿ ಅಲ್ಲಿದ್ದ ಪ್ರತಿಬಿಂಬಕ್ಕೆ ಮಾತ್ರ ಚಂದ್ರಬಿಂಬದಲ್ಲಿ ಐಕ್ಯವೇ ಹೊರತು ಇತರ ಪ್ರತಿಬಿಂಬಗಳಿಗೆ ಇಲ್ಲ. ಅದೇ ರೀತಿಯಲ್ಲಿ ಅವಿದ್ಯೆಯಲ್ಲಿ ಪ್ರತಿಬಿಂಬಿಸಿ ನನ್ನ ಅಂಶವೆನಿಸಿದ ಜೀವನಿಗೆ ಮಾತ್ರವೇ ಉಪಾಧಿಕೃತವಾದ ಬಂಧನವೆಂಬುದು ತಿಳಿ. ಅವಿದ್ಯೆಯಲ್ಲಿ ಪ್ರತಿಬಿಂಬಿತನಾದ ಜೀವನಿಗೂ ದೇಹವೇ ಮುಂತಾದ ಉಪಾಧಿಗಳಿರುವುದರಿಂದ ಅಜ್ಞಾನದಿಂದ ಬಂಧನವೂ ಜ್ಞಾನದಿಂದ ಮೋಕ್ಷವೂ ಸಿದ್ಧಿಸುತ್ತದೆ.)

**ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ ।**
**ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕಧರ್ಮಿಣಿ ॥೫॥**

ಉದ್ಧವ! ಏಕಧರ್ಮಿಯಾದ ಶರೀರದಲ್ಲಿ ಶೋಕ-ಆನಂದ ಇವೇ ಮುಂತಾದ ವಿರುದ್ಧಧರ್ಮಗಳಿಂದ ಕೂಡಿರುವ ಬದ್ಧನಾದ ಜೀವನ ಮತ್ತು ಮುಕ್ತನಾದ ಈಶ್ವರನ ವೈಲಕ್ಷಣ್ಯಗಳನ್ನು ಹೇಳುತ್ತೇನೆ.

(ಬಂಧ-ಮೋಕ್ಷಗಳ ವ್ಯವಸ್ಥೆಯನ್ನು ತಿಳಿಸಿಯಾಯಿತು. ಮುಂದೆ ನಿನ್ನ ಪ್ರಶ್ನೆಗೆ ಅನುಸಾರವಾಗಿ ಮುಕ್ತರ ಲಕ್ಷಣವೇನು? ಎಂಬುದಕ್ಕೆ ಉತ್ತರಿಸುತ್ತೇನೆ. ಬದ್ಧ-ಮುಕ್ತರಿಗಿರುವ ವೈಲಕ್ಷಣ್ಯವು ಎರಡು ಪ್ರಕಾರವಾದುದು. ಜೀವೇಶ್ವರರದ್ದು. ಪರಸ್ಪರವಾಗಿ ಜೀವ-ಜೀವರದ್ದು. ಅದರಲ್ಲಿ ಮೊದಲು ಜೀವೇಶ್ವರರ ಲಕ್ಷಣಗಳನ್ನು ನಿರೂಪಿಸುವೆನು. ಜೀವನು ಬದ್ಧನು. ದುಃಖಾದಿಗಳುಳ್ಳವನು. ಈಶ್ವರನು ನಿತ್ಯಮುಕ್ತನು, ಆನಂದಸ್ವರೂಪನು. ಹೀಗೆ ವಿರುದ್ಧಧರ್ಮಿಗಳಾದರೂ ಆ ಇಬ್ಬರೂ ಒಂದೇ ಶರೀರದಲ್ಲಿರುವವರು.)

**ಸುಪರ್ಣಾವೇತೌ ಸದೃಶೌ ಸಖಾಯೌ**
**ಯದೃಚ್ಛಯೈತೌ ಕೃತನೀಡೌ ಚ ವೃಕ್ಷೇ ।**
**ಏಕಸ್ತಯೋಃ ಖಾದತಿ ಪಿಪ್ಪಲಾನ್ನ-**
**ಮನ್ಯೋ ನಿರನ್ನೋऽಪಿ ಬಲೇನ ಭೂಯಾನ್ ॥೬॥**

ಸುಂದರವಾದ ರೆಕ್ಕೆಗಳನ್ನು ಹೊಂದಿರುವ, ಪರಸ್ಪರವಾಗಿ ಸದೃಶವಾಗಿ ಸ್ನೇಹಭಾವದಿಂದಿರುವ ಜೀವೇಶ್ವರರೆಂಬ ಈ ಎರಡು ಪಕ್ಷಿಗಳು ಮಾಯೆಯ ಕಾರಣದಿಂದ ದೇಹವೆಂಬ ಅಶ್ವತ್ಥವೃಕ್ಷದಲ್ಲಿ ಹೃದಯವೆಂಬ ಗೂಡನ್ನು ಕಟ್ಟಿ ಕೊಂಡು ಕುಳಿತಿವೆ. ಅವುಗಳಲ್ಲಿ ಜೀವವೆಂಬ ಪಕ್ಷಿಯು ಕರ್ಮಫಲರೂಪ ವಾದ ಅಶ್ವತ್ಥದ ಹಣ್ಣನ್ನು ತಿನ್ನುತ್ತಿದೆ. ಈಶ್ವರರೂಪದ ಮತ್ತೊಂದು ಪಕ್ಷಿಯು ಅನ್ನವಿಲ್ಲದಿದ್ದರೂ, ಜೀವಪಕ್ಷಿಯಂತೆ ಅಶ್ವತ್ಥದ ಹಣ್ಣನ್ನು ತಿನ್ನದೇ ಇದ್ದರೂ ಜ್ಞಾನಾದಿಗಳಿಂದ ಮಹಾಬಲಿಷ್ಠವಾಗಿದೆ.

(ಜೀವೇಶ್ವರರು ವೃಕ್ಷಕ್ಕಿಂತ ಭಿನ್ನಗಳಾದ ಪಕ್ಷಿಗಳಂತೆ ಶರೀರಕ್ಕೆ ಸಂಬಂಧವಿಲ್ಲದೇ ಇರತಕ್ಕವರು. ಚಿದ್ರೂಪರಾಗಿರುವುದರಿಂದ ಸದೃಶರು. ಒಬ್ಬರನ್ನೊಬ್ಬರು ಎಡೆ-ಬಿಡದೇ ಇರುವುದರಿಂದ ಮಿತ್ರರು. ಮಾಯೆಯಿಂದ ಶರೀರವೆಂಬ ಅಶ್ವತ್ಥವೃಕ್ಷದಲ್ಲಿ ಹೃದಯಕಮಲವೆಂಬ ಗೂಡನ್ನು ಕಲ್ಪಿಸಿಕೊಂಡಿರುವರು. ಅವುಗಳಲ್ಲೊಂದಾದ ಜೀವಪಕ್ಷಿಯು ಶರೀರದಿಂದ ಅನುಭವಿಸಬೇಕಾದ ಕರ್ಮಫಲಗಳನ್ನು ತಿನ್ನುತ್ತಿರುತ್ತದೆ. ಮತ್ತೊಂದು ಈಶ್ವರಪಕ್ಷಿಯು ಜೀವಪಕ್ಷಿಯಂತೆ ಕರ್ಮಫಲರೂಪವಾದ ಹಣ್ಣುಗಳನ್ನು ತಿನ್ನದೆ ಇದ್ದರೂ ಸಹಜವಾದ ಆನಂದದಿಂದ ತೃಪ್ತಿಯನ್ನು ಹೊಂದಿ ಜ್ಞಾನಾದಿಶಕ್ತಿಯಿಂದ ಅಧಿಕಬಲವುಳ್ಳದ್ದಾಗಿದೆ.)

**ಆತ್ಮಾನಮನ್ಯಂ ಚ ಸ ವೇದ ವಿದ್ವಾ-**
**ನಪಿಪ್ಪಲಾದೋ ನ ತು ಪಿಪ್ಪಲಾದಃ ।**

---

* ಹೋಲಿಕೆ :

ದ್ವಾಸುಪರ್ಣಾ ಸಾಯುಜಾ ಸಖಾಯೌ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರೇಕಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ ॥

(ಋಕ್ಸಂಹಿತೆ ಮತ್ತು ಮುಂಡಕೋಪನಿಷತ್ತು)

**ಯೋऽವಿದ್ಯಯಾ ಯುಕ್ಸ ತು ನಿತ್ಯಬದ್ಧೋ**
**ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ ॥೭॥**

ಆ ಎರಡು ಪಕ್ಷಿಗಳಲ್ಲಿ ಅಶ್ವತ್ಥದ ಫಲವನ್ನು ತಿನ್ನದಿರುವ ಈಶ್ವರ ಪಕ್ಷಿಯು ತಾನಾರೆಂಬುದನ್ನು ತಿಳಿದುಕೊಂಡಿದೆ. ತನ್ನ ಜೊತೆಯಲ್ಲಿ ಯಾರಿದ್ದಾರೆಂಬುದನ್ನೂ ತಿಳಿದುಕೊಂಡಿದೆ. ಅಶ್ವತ್ಥದ ಫಲವನ್ನು ಎಡ ಬಿಡದೇ ತಿನ್ನುತ್ತಿರುವ ಜೀವಪಕ್ಷಿಗೆ ತಾನಾರೆಂಬುದು ತಿಳಿಯದು. ತನ್ನ ಜೊತೆಯಲ್ಲೇ ಇರುವ ಈಶ್ವರಪಕ್ಷಿಯ ವಿಷಯವೂ ತಿಳಿಯದು. ಯಾವನು ಅವಿದ್ಯೆಯಿಂದ (ಅಜ್ಞಾನದಿಂದ) ಯುಕ್ತನಾಗಿರುವನೋ ಆತನು ನಿತ್ಯ ಬದ್ಧವಾದ ಜೀವಪಕ್ಷಿಯು. ಯಾವನು ವಿದ್ಯಾಮಯನಾಗಿರುವನೋ (ಜ್ಞಾನಿಯೋ) ಅವನೇ ನಿತ್ಯಮುಕ್ತನಾದ ಈಶ್ವರಪಕ್ಷಿಯು. ಈಶ್ವರಾ ಶ್ರಯದಿಂದಲೇ ಸ್ಥಿತಿ-ಗತಿಗಳನ್ನು ಪಡೆದಿರುವ ಮಾಯೆಯು ಎಂದಿಗೂ ಈಶ್ವರನನ್ನು ಮೋಹಗೊಳಿಸಲಾರದು.

**ದೇಹಸ್ಥೋऽಪಿ ನ ದೇಹಸ್ಥೋ ವಿದ್ವಾನ್ ಸ್ವಪ್ನಾದ್ಯಥೋತ್ಥಿತಃ ।**
**ದೇಹಸ್ಥೋऽಪಿ ದೇಹಸ್ಥಃ ಕುಮತಿಃ ಸ್ವಪ್ನದೃಗ್ಯಥಾ ॥೮॥**

ಜೀವರಲ್ಲಿಯೇ ಬದ್ಧ ಮತ್ತು ಮುಕ್ತರ ಲಕ್ಷಣವು ಹೀಗಿರುತ್ತದೆ. ಸ್ವಪ್ನದಿಂದ ಎಚ್ಚರಗೊಂಡವನು ಸ್ವಪ್ನದಲ್ಲಿಕಂಡ ತನ್ನ ಪ್ರತಿರೂಪದೊಡನೆ ಯಾವ ಸಂಬಂಧವನ್ನೂ ಹೇಗೆ ಇಟ್ಟುಕೊಳ್ಳುವುದಿಲ್ಲವೋ ಅದೇ ರೀತಿಯಲ್ಲಿ ಮುಕ್ತನಾದವನು ದೇಹದಲ್ಲಿದ್ದರೂ ತನ್ನ ದೇಹದ ಗುಣಗಳೊಡನೆ ಯಾವ ಸಂಬಂಧವನ್ನೂ ಇಟ್ಟುಕೊಂಡಿರುವುದಿಲ್ಲ. ದೇಹದ ಮೂಲಕವಾಗಿ ಪ್ರಾಪ್ತವಾಗುವ ಸುಖ-ದುಃಖಗಳನ್ನು ಸಮವಾಗಿ ಕಾಣುತ್ತಾನೆ.

ಹೇಗೆ ಸ್ವಪ್ನವನ್ನು ಕಾಣುತ್ತಿರುವ ಸಮಯದಲ್ಲಿ ಜೀವನು ಕಷ್ಟ-

---

ಈ ಎರಡು ಹಕ್ಕಿಗಳು ಜೀವೇಶ್ವರರೆಂಬುದು ಪ್ರಸಿದ್ಧವಾದ ಮತ್ತು ಸಹಜವಾದ ಅರ್ಥ. ಇವು ಆತ್ಮ ಮತ್ತು ಬುದ್ಧಿಗಳು ಅಥವಾ ಬುದ್ಧಿ ಮತ್ತು ಮನಸ್ಸುಗಳು ಅಥವಾ ಜ್ಞಾನಿ ಮತ್ತು ಅಜ್ಞಾನಿಗಳು–ಎಂದು ಬಗೆ-ಬಗೆಯಾಗಿ ವ್ಯಾಖ್ಯಾನಿಸುವುದುಂಟು. ಆದರೆ ಜೀವ ಮತ್ತು ಈಶ್ವರ–ಎಂಬುದೇ ಚೆನ್ನಾಗಿ ಹೊಂದಿಕೆಯಾಗುತ್ತದೆ. ಕರ್ಮಫಲರೂಪವಾದ ಅರಳಿಯ ಹಣ್ಣು ಕಹಿಯಾಗಿರುತ್ತದೆ. ಆದರೆ ಅದು ಸಿಹಿ–ಎಂಬ ಭ್ರಾಂತಿಯಿಂದ ಜೀವಪಕ್ಷಿಯು ಅದನ್ನು ತಿನ್ನುತ್ತದೆ.

ಸುಖಗಳನ್ನು ತಾನೇ ಅನುಭವಿಸುತ್ತಿರುವಂತೆ ಭಾವಿಸಿಕೊಳ್ಳುತ್ತಾನೆಯೋ ಅದೇ ರೀತಿಯಲ್ಲಿ ಅಜ್ಞಾನಿಯು ದೇಹವನ್ನು ಬಿಟ್ಟುಹೋಗಿದ್ದರೂ ತಾನು ಬಿಟ್ಟುಹೋಗಿರುವ ದೇಹವನ್ನೇ ತನ್ನದೆಂದು ಭಾವಿಸಿಕೊಳ್ಳುತ್ತಾನೆ. ಅವನ ದೇಹಾತ್ಮಬುದ್ಧಿಯು ಅಷ್ಟು ಬಲವತ್ತರವಾಗಿರುತ್ತದೆ. ಮುಕ್ತನಾದವನು ದೇಹವನ್ನು ತನ್ನ ಒಂದು ಕವಚದಂತೆ ಭಾವಿಸುತ್ತಾನೆ.*

**ಇನ್ದ್ರಿಯೈರಿನ್ದ್ರಿಯಾರ್ಥೇಷು ಗುಣೈರಪಿ ಗುಣೇಷು ಚ ।**
**ಗೃಹ್ಯಮಾಣೇಷ್ವಹಙ್ಕುರ್ಯಾನ್ನ ವಿದ್ವಾನ್ ಯಸ್ತ್ವವಿಕ್ರಿಯಃ ॥೯॥**

ವ್ಯವಹಾರದಲ್ಲಿ ಇಂದ್ರಿಯಗಳು ಶಬ್ದಸ್ಪರ್ಶಾದಿ ರೂಪಗಳನ್ನು ಗ್ರಹಿಸುತ್ತವೆ. ಇದು ಪ್ರಕೃತಿನಿಯಮವೇ ಆಗಿದೆ. ಆತ್ಮನು ಗುಣಗಳನ್ನು ಗ್ರಹಿಸುವುದಿಲ್ಲ. ಆದುದರಿಂದ ಯಾವನು ನಿರ್ವಿಕಾರವಾದ ಆತ್ಮಸ್ವರೂಪ ವನ್ನು ತಿಳಿದು ಮುಕ್ತನಾಗಿರುವನೋ ಅಂತಹವನು ಗುಣಗಳ ತ್ಯಾಗ ಮತ್ತು ಗ್ರಹಣ ಎರಡರಲ್ಲಿಯೂ ನಿರ್ವಿಕಾರನಾಗಿರುತ್ತಾನೆ. ಕರ್ತೃತ್ವ-ಭೋಕ್ತೃತ್ವಗಳ ಅಭಿಮಾನವನ್ನು ಹೊಂದುವುದಿಲ್ಲ.

**ದೈವಾಧೀನೇ ಶರೀರೇಽಸ್ಮಿನ್ ಗುಣಭಾವ್ಯೇನ ಕರ್ಮಣಾ ।**
**ವರ್ತಮಾನೋಽಬುಧಸ್ತತ್ರ ಕರ್ತಾಸ್ಮೀತಿ ನಿಬದ್ಧ್ಯತೇ ॥೧೦॥**

ಅಜ್ಞಾನಿಯಾದರೋ ಹಿಂದೆ ಮಾಡಿದ ಕರ್ಮಗಳಿಗೆ ಅಧೀನನಾದ ಈ ದೇಹದಲ್ಲಿರುತ್ತಾ ಇಂದ್ರಿಯಗಳಿಂದ ಮಾಡಲ್ಪಡುವ ಶುಭಾಶುಭಕರ್ಮ ಗಳನ್ನೂ ತಾನೇ ಮಾಡುತ್ತಿದ್ದೇನೆಂದು ಅಹಂಕಾರದಿಂದ ಭಾವಿಸಿಕೊಂಡು ಶರೀರಾದಿಗಳಲ್ಲಿ ಬದ್ಧನಾಗುತ್ತಾನೆ. ಬದ್ಧ-ಮುಕ್ತರಿಬ್ಬರೂ ಈ ದೇಹದಲ್ಲಿರು

---

* ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ॥ (ಭ.ಗೀ.೩-೨೮)

ಗುಣಕರ್ಮಗಳ ವಿಭಾಗವನ್ನರಿತ ಪಂಡಿತನು ಇಂದ್ರಿಯಾದಿಗಳು ವಿಷಯಗಳನ್ನು ಗ್ರಹಿಸುವುವೆಂದು ತಿಳಿದು ಅಸಂಗನಾಗಿರುವನು.

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ (ಭ.ಗೀ. ೩-೨೭)

ಅಹಂಕಾರದಿಂದ ಮೂಢನಾದ ಅಜ್ಞಾನಿಯು ಪ್ರಕೃತಿಯ ಗುಣಗಳಿಂದ ಮಾಡಲ್ಪಡುವ ಕರ್ಮಗಳನ್ನು 'ನಾನು ಮಾಡುವೆನು'–ಎಂದು ತಿಳಿಯುವನು.

ವುದು ನಿಜ. ಆದರೆ ಬದ್ಧನು ದೇಹದಮೇಲೆ ಅಭಿಮಾನವನ್ನು ಹೊಂದಿರುತ್ತಾನೆ. ಮುಕ್ತನು ದೇಹದ ಮೇಲಿನ ಅಭಿಮಾನವನ್ನು ತೊರೆದಿರುತ್ತಾನೆ.

**ಏವಂ ವಿರಕ್ತಃ ಶಯನೇ ಆಸನಾಟಮಜ್ಜನೇ ।**
**ದರ್ಶನಸ್ಪರ್ಶನಘ್ರಾಣಭೋಜನಶ್ರವಣಾದಿಷು ॥೧೧॥**

**ನ ತಥಾ ಬದ್ಧ್ಯತೇ ವಿದ್ವಾಂಸ್ತತ್ರ ತತ್ರಾದಯನ್ಗುಣಾನ್ ।**
**ಪ್ರಕೃತಿಸ್ಥೋಽಪ್ಯಸಂಸಕ್ತೋ ಯಥಾ ಖಂ ಸವಿತಾನಿಲಃ ॥೧೨॥**

ಹೀಗೆ ರಾಗಾದಿಗಳಿಂದ ವಿರಕ್ತನಾದ, ಮುಕ್ತನಾದ ವಿದ್ವಾಂಸನು ಶರೀರದಲ್ಲಿಯೇ ಇದ್ದರೂ, ಪ್ರಕೃತಿಸ್ಥವಾದ ಗುಣಗಳಿಂದ ಆವೃತನಾಗಿದ್ದರೂ–ವ್ಯಾಪಕವಾಗಿದ್ದರೂ ಯಾವುದಕ್ಕೂ ಅಂಟಿಕೊಳ್ಳದಿರುವ ಆಕಾಶದಂತೆಯೂ, ನೀರಿನಲ್ಲಿ ಪ್ರತಿಬಿಂಬಿಸಿದರೂ ನೀರಿನಿಂದ ನೆನೆಯದಿರುವ ಸೂರ್ಯನಂತೆಯೂ, ಸರ್ವವ್ಯಾಪಿಯಾದರೂ ಯಾವುದಕ್ಕೂ ಸೋಂಕದ ವಾಯುವಿನಂತೆಯೂ–ತಾನು ಅಸಂಗನಾಗಿ, ಆಯಾ ವಿಷಯಗಳನ್ನು ಆಯಾ ಇಂದ್ರಿಯಗಳು ಅನುಭವಿಸುವುದಕ್ಕೆ ಸಾಕ್ಷಿಯೆನಿಸಿ ತಾನು ಯಾವುದಕ್ಕೂ ಸಂಬಂಧಿಸದೆ ನಿರ್ಲಿಪ್ತನಾಗಿರುವನೇ ಹೊರತು ಅಜ್ಞಾನಿಯಂತೆ ಶಯನ, ಆಸನ, ಸಂಚಾರ, ಸ್ನಾನ, ದರ್ಶನ, ಮುಟ್ಟುವಿಕೆ, ಮೂಸುವಿಕೆ, ಊಟಮಾಡುವಿಕೆ ಮತ್ತು ಕೇಳುವಿಕೆ–ಎಂಬಿವೇ ಮುಂತಾದ ಕರ್ಮಗಳಲ್ಲಿ ಕಟ್ಟಿಬೀಳುವುದಿಲ್ಲ. ಈ ಕರ್ಮಗಳನ್ನು ಅವನು ಮಾಡಿದರೂ ತಾನು ಮಾಡುತ್ತಿರುವೆನೆಂಬ ಭಾವನೆಯಿಂದ ಮಾಡುವುದಿಲ್ಲ. ಇಂದ್ರಿಯಗಳು ವಿಷಯವನ್ನು ಗ್ರಹಿಸುವುವೆಂದೂ ಮುಕ್ತನಾದ ತನಗೆ ಯಾವುದರ ಸಂಬಂಧವೂ ಇಲ್ಲವೆಂದೂ ತಿಳಿದು ಯಾವುದರಲ್ಲಿಯೂ ಆಸಕ್ತಿಯನ್ನು ಹೊಂದುವುದಿಲ್ಲ.

**ವೈಶಾರದ್ಯೇಕ್ಷಯಾ ಸಙ್ಗಶಿತಯಾ ಛಿನ್ನಸಂಶಯಃ ।**
**ಪ್ರತಿಬುದ್ಧ ಇವ ಸ್ವಪ್ನಾನ್ನಾನಾತ್ವಾದ್ವಿನಿವರ್ತತೇ ॥೧೩॥**

ಅಸಂಗದಿಂದ ಚೂಪಾಗಿಮಾಡಲ್ಪಟ್ಟು, ನೈಪುಣ್ಯದಿಂದ ಕೂಡಿದ ಸೂಕ್ಷ್ಮಬುದ್ಧಿಯಿಂದ, ಸಮಸ್ತವಾದ ಸಂಶಯಗಳನ್ನೂ ಬಗೆಹರಿಸಿಕೊಂಡು ಸ್ವಪ್ನದಿಂದ ಎಚ್ಚೆತ್ತವನಂತೆ ದೇಹಾದಿ ವಿವಿಧಪ್ರಪಂಚದಿಂದ ಹಿಂದಿರುಗುತ್ತಾನೆ.

**ಯಸ್ಯ ಸ್ಯುರ್ವೀತಸಙ್ಕಲ್ಪಾಃ ಪ್ರಾಣೇನ್ದ್ರಿಯಮನೋಧಿಯಾಮ್ ।**
**ವೃತ್ತಯಃ ಸ ವಿನಿರ್ಮುಕ್ತೋ ದೇಹಸ್ಥೋಽಪಿ ಹಿ ತದ್ಗುಣೈಃ ॥೧೪॥**

ಯಾವನ ಮನಸ್ಸು-ಇಂದ್ರಿಯ-ಪ್ರಾಣ-ಬುದ್ಧಿ ಇವುಗಳ ವ್ಯವಹಾರವು 'ಇದನ್ನು ತಿನ್ನಬೇಕು ; ಇದನ್ನು ನೋಡಬೇಕು ; ಇದನ್ನು ಸಂಪಾದಿಸಬೇಕು'–ಎಂಬಿವೇ ಮುಂತಾದ ಸಂಕಲ್ಪಗಳಿಂದ ಬಿಡಲ್ಪಟ್ಟಿರುವುದೋ ಅಂತಹವನು ದೇಹಸ್ಥನಾಗಿದ್ದರೂ ದೇಹಸಂಬಂಧವಾದ ಗುಣಗಳಿಂದ ಮುಕ್ತನಾಗಿರುವನೆಂದೇ ತಿಳಿಯಬೇಕು.

**ಯಸ್ಯಾತ್ಮಾ ಹಿಂಸ್ಯತೇ ಹಿಂಸ್ರೈರ್ಯೇನ ಕಿಞ್ಚಿದ್ಯದೃಚ್ಛಯಾ ।**
**ಅರ್ಚ್ಯತೇ ವಾ ಕ್ವಚಿತ್ತತ್ರ ನ ವ್ಯತಿಕ್ರಿಯತೇ ಬುಧಃ ॥೧೫॥**

ಯಾವನು, ದುರ್ಜನರು ಹಿಂಸಿಸಿದರೆ ಕೋಪಗೊಳ್ಳುವುದಿಲ್ಲವೋ ಸಜ್ಜನರು ತಮ್ಮ ಇಷ್ಟಾನುಸಾರವಾಗಿ ಪೂಜಿಸಿ-ಗೌರವಿಸಿದರೆ ಆನಂದ ಪಡುವುದಿಲ್ಲವೋ, ನಿರ್ವಿಕಾರನಾಗಿರುವನೋ, ಅಂತಹವನೇ ಜ್ಞಾನಿಯು.

**ನ ಸ್ತುವೀತ ನ ನಿನ್ದೇತ ಕುರ್ವತಃ ಸಾಧ್ವಸಾಧು ವಾ ।**
**ವದತೋ ಗುಣದೋಷಾಭ್ಯಾಂ ವರ್ಜಿತಃ ಸಮದೃಙ್ಮುನಿಃ ॥೧೬॥**

ಯಾವನು ಎಲ್ಲರನ್ನೂ ಸಮನಾಗಿ ಕಾಣುವನೋ, ಗುಣದೋಷ ಗಳಿಂದ ವರ್ಜಿತನಾಗಿರುವನೋ, ಗುಣದೋಷಗಳೆಂಬ ಭೇದದೃಷ್ಟಿಯನ್ನು ಮೀರಿಹೋಗಿರುವನೋ, ಒಳ್ಳೆಯ ಕೆಲಸವನ್ನು ಮಾಡಿದವರನ್ನಾಗಲೀ ಒಳ್ಳೆಯ ಮಾತುಗಳನ್ನು ಆಡಿದವರನ್ನಾಗಲೀ ಹೊಗಳುವುದಿಲ್ಲವೋ, ಕೆಟ್ಟ ಕೆಲಸಗಳನ್ನು ಮಾಡಿದವರನ್ನಾಗಲೀ ಕೆಟ್ಟಮಾತುಗಳನ್ನು ಆಡಿದವರನ್ನಾಗಲೀ ನಿಂದಿಸುವುದಿಲ್ಲವೋ ಅಂತಹವನೇ ಮುಕ್ತನಾದ ಮುನಿಯು.

**ನ ಕುರ್ಯಾನ್ನ ವದೇತ್ಕಿಞ್ಚಿನ್ನ ಧ್ಯಾಯೇತ್ ಸಾಧ್ವಸಾಧು ವಾ ।**
**ಆತ್ಮಾರಾಮೋಽನಯಾ ವೃತ್ತ್ಯಾ ವಿಚರೇಜ್ಜಡವನ್ಮುನಿಃ ॥೧೭॥**

ಯಾವನು ಆತ್ಮಾರಾಮನಾಗಿ ಒಳ್ಳೆಯದಾಗಲೀ, ಕೆಟ್ಟದಾಗಲೀ ಲೌಕಿಕವಾದ ಕಾರ್ಯಗಳನ್ನು ಕೈಯಿಂದ ಮಾಡದೆ, ಬಾಯಿಂದ ಹೇಳದೆ, ಮನಸ್ಸಿನಿಂದ ಆಲೋಚಿಸದೆ, ತಾನು ದೇಹದಲ್ಲಿಲ್ಲವೆಂಬ ಭಾವನೆಯಿಂದ ಜಡನಂತೆ ಪ್ರಪಂಚದಲ್ಲಿ ಸಂಚಾರಮಾಡುವನೋ ಅವನೇ ಮುಕ್ತನು.*

---

* ಜ್ಞಾನಿಯು ಗುಣಾತೀತನು–ಎಂದರೆ ಅಹಂಕಾರ ರಾಗ-ದ್ವೇಷಾದಿಗಳಲ್ಲದವನು ; ಉಪಕಾರಾಪಕಾರಾದಿಗಳಲ್ಲಿ ಸಮಬುದ್ಧಿಯುಳ್ಳವನು ; ದರ್ಶನ-ಸ್ಪರ್ಶನವೇ

**ಶಬ್ದಬ್ರಹ್ಮಣಿ ನಿಷ್ಣಾತೋ ನ ನಿಷ್ಣಾಯಾತ್ಪರೇ ಯದಿ ।**
**ಶ್ರಮಸ್ತಸ್ಯ ಶ್ರಮಫಲೋ ಹ್ಯಧೇನುಮಿವ ರಕ್ಷತಃ ॥೧೮॥**

ಹಲವಾರು ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದರೂ ಪರಬ್ರಹ್ಮತತ್ತ್ವದಲ್ಲಿ ಸಂಪೂರ್ಣಜ್ಞಾನವಿಲ್ಲದಿದ್ದರೆ ಅವನ ಶ್ರಮವೆಲ್ಲವೂ ಗೊಡ್ಡು ಹಸುವನ್ನು ರಕ್ಷಿಸುವಂತೆ ಕೇವಲ ವ್ಯರ್ಥವೇ ಸರಿ.

**ಗಾಂ ದುಗ್ಧದೋಹಾಮಸತೀಂ ಚ ಭಾರ್ಯಾಂ**
**ದೇಹಂ ಪರಾಧೀನಮಸತ್ಪ್ರಜಾಂ ಚ ।**

---

ಮುಂತಾದ ಇಂದ್ರಿಯಕರ್ಮಗಳಲ್ಲಿ ಕರ್ತೃತ್ವಾಭಿಮಾನವಿಲ್ಲದವನು. ಚಿನ್ನದಲ್ಲಾಗಲೀ ಮಣ್ಣುಹೆಂಟೆಯಲ್ಲಾಗಲೀ ಇಷ್ಟಾನಿಷ್ಟಬುದ್ಧಿಯಿಲ್ಲದವನು. ಈ ಗುಣಗಳುಳ್ಳವನೆಂದೇ ಹೊರತು ಶಯನಾಶನಭೋಜನಾದಿಗಳನ್ನು ಬಿಟ್ಟವನೆಂದು ಅರ್ಥವಲ್ಲ.

(ವೀರರಾಘವೀಯ)

ಶ್ರೀಕೃಷ್ಣನು ಭಗವದ್ಗೀತೆಯ ೧೨ನೆಯ ಅಧ್ಯಾಯದ ೭ ಶ್ಲೋಕಗಳಲ್ಲಿ ಮುಕ್ತನಾರೆಂಬುದನ್ನು ವಿವರಿಸಿ ಹೇಳಿದ್ದಾನೆ. ಅದರ ಭಾಷಾಂತರವನ್ನು ಇಲ್ಲಿ ಕೊಡಲಾಗಿದೆ : ಯಾವನು ಎಲ್ಲ ಜೀವರುಗಳಲ್ಲಿ ಹಗೆತನವಿಲ್ಲದೇ ಇರುತ್ತಾನೆಯೋ, ಎಲ್ಲರಿಗೂ ಮಿತ್ರನಾಗಿರುವನೋ, ದಯಾಳುವೋ, ಅಹಂಕಾರವಿಲ್ಲದವನೋ, ಸುಖ-ದುಃಖಗಳನ್ನು ಸಮಾನವಾಗಿ ಕಾಣುವನೋ, ಸಹನೆಯುಳ್ಳವನೋ, ಸದಾ ಸಂತುಷ್ಟನೋ, ಆತ್ಮಸಂಯಮಿಯೋ, ದೃಢವಾದ ನಿಶ್ಚಯವುಳ್ಳವನೋ, ಮನಸ್ಸು-ಬುದ್ಧಿಗಳನ್ನು ನನಗೆ ಅರ್ಪಿಸಿಬಿಟ್ಟಿರುವನೋ ಅಂತಹವನು ಮುಕ್ತಭಕ್ತನು ; ನನಗೆ ಪ್ರಿಯನು. ಯಾರಿಂದಾಗಿ ಲೋಕಕ್ಕೆ ಕೆಡುಕಿಲ್ಲವೋ, ಯಾರಿಗೆ ಜನರಿಂದ ಯಾವ ಕೆಡುಕೂ ಉಂಟಾಗುವುದಿಲ್ಲವೋ, ಹರ್ಷ-ಕೋಪ-ಭಯ-ಉದ್ವೇಗಗಳಿಂದ ಯಾವನು ಬಿಡುಗಡೆ ಹೊಂದಿದ್ದಾನೋ ಅಂತಹ ಮುಕ್ತನಾದ ಭಕ್ತನು ನಮಗೆ ಪ್ರಿಯನು. ಯಾವನು ಯಾವುದರ ಅಪೇಕ್ಷೆಯೂ ಇಲ್ಲದವನೋ, ಪರಿಶುದ್ಧನೋ, ಸಮರ್ಥನೋ, ನಿಸ್ಪೃಹನೋ, ಚಿಂತೆಯಿಲ್ಲದವನೋ, ಕರ್ತೃತ್ವದ ಅಭಿಮಾನವಿಲ್ಲದವನೋ ಅಂತಹ ಮುಕ್ತಭಕ್ತನು ನನಗೆ ಪ್ರಿಯನು. ಯಾವನು ಒಳ್ಳೆಯದಾದಾಗ ಹಿಗ್ಗದೆ-ಕೆಟ್ಟುದಾದಾಗ ಕುಗ್ಗದೇ ಇರುವನೋ, ಬಯಸಿದ್ದು ಆಗದಿದ್ದಾಗ ದುಃಖಿಸುವುದಿಲ್ಲವೋ, ಬೇಕೆಂದು ಯಾವುದನ್ನೂ ಬಯಸುವುದಿಲ್ಲವೋ, ಶುಭಾಶುಭಗಳೆರಡನ್ನೂ ಪರಿತ್ಯಾಗ ಮಾಡುವನೋ ಅಂತಹ ಮುಕ್ತಭಕ್ತನೇ ನನಗೆ ಪರಮಪ್ರಿಯನು. ಯಾವನು ಶತ್ರುವನ್ನೂ ಮಿತ್ರನನ್ನೂ ಸಮದೃಷ್ಟಿಯಿಂದ ಕಾಣುವನೋ, ಮಾನಾಪಮಾನಗಳನ್ನೂ ಶೀತೋಷ್ಣಗಳನ್ನೂ ಸುಖ-ದುಃಖಗಳನ್ನೂ ಸಮದೃಷ್ಟಿಯಿಂದ ಎದುರಿಸುವನೋ,

**ವಿತ್ತಂ ತ್ವತೀರ್ಥೀಕೃತಮಙ್ಗ ವಾಚಂ**
**ಹೀನಾಂ ಮಯಾ ರಕ್ಷತಿ ದುಃಖದುಃಖೀ ॥೧೯॥**

ಹಾಲು ಕೊಡದಿರುವ ಹಸುವನ್ನೂ, ವ್ಯಭಿಚಾರಿಣಿಯಾದ ಹೆಂಡತಿಯನ್ನೂ, ಪರಾಧೀನವಾದ ಶರೀರವನ್ನೂ, ದುಷ್ಟಪುತ್ರನನ್ನೂ, ಸತ್ಪಾತ್ರನು ಸಿಕ್ಕಿದಾಗಲೂ ದಾನ ಕೊಡದಿರುವ ವಿತ್ತವನ್ನೂ ಯಾವನು ರಕ್ಷಿಸುವನೋ, ನನ್ನ ಗುಣಕೀರ್ತನವಿಲ್ಲದ ಮಾತನ್ನು ಯಾವನು ಆಡುವನೋ ಅಂತಹವನು ದುಃಖದಿಂದ ದುಃಖಕ್ಕೆ ಹೋಗುತ್ತಿರುತ್ತಾನೆ. ಅವನಿಗೆ ಸುಖವೆಂಬುದು ಸ್ವಪ್ನದಲ್ಲಿಯೂ ದುರ್ಲಭವೇ ಸರಿ.

**ಯಸ್ಯಾಂ ನ ಮೇ ಪಾವನಮಙ್ಗ ಕರ್ಮ**
**ಸ್ಥಿತ್ಯುದ್ಭವಪ್ರಾಣನಿರೋಧಮಸ್ಯ ।**
**ಲೀಲಾವತಾರೇಪ್ಸಿಜನ್ಮ ವಾ ಸ್ಯಾ-**
**ದ್ವನ್ಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ ॥೨೦॥**

ಉದ್ಧವ! ಯಾವ ಮಾತಿನಲ್ಲಿ, ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಹೇತುಭೂತವಾದ ಪರಮಪಾವನವಾದ ನನ್ನ ಚರಿತ್ರೆಯಾಗಲೀ ಲೀಲಾವತಾರಪ್ರಸಂಗಗಳಲ್ಲಿ ಹೇಳಿರುವ ರಾಮಾದಿಗಳ ದಿವ್ಯಚರಿತ್ರೆಯಾಗಲೀ ಇಲ್ಲವೋ ಅಂತಹ ನಿಷ್ಫಲವಾದ ಮಾತನ್ನು ಧೀರನಾದವನು ಧರಿಸಲೇ ಬಾರದು. (ಕೇಳಲೇ ಬಾರದು.)

**ಏವಂ ಜಿಜ್ಞಾಸಯಾಪೋಹ್ಯ ನಾನಾತ್ವಭ್ರಮಮಾತ್ಮನಿ ।**
**ಉಪಾರಮೇತ ವಿರಜಂ ಮನೋ ಮಯ್ಯರ್ಪ್ಯ ಸರ್ವಗೇ ॥೨೧॥**

ಹೀಗೆ ಜಿಜ್ಞಾಸೆಯಿಂದ ಆತ್ಮನಲ್ಲಿ ನಾನಾತ್ವದ ಭ್ರಾಂತಿಯನ್ನು ತೊರೆದು ವ್ಯಾಪಕನಾದ ನನ್ನಲ್ಲಿ ನಿರ್ಮಲವಾದ ಮನಸ್ಸನ್ನಿಟ್ಟು ಶಾಂತನಾಗಬೇಕು.*

---

ಸಂಗವರ್ಜಿತನೋ ಅಂತಹ ಮುಕ್ತಭಕ್ತನು ನನಗೆ ಅತಿಪ್ರಿಯನು. ಯಾವನು ನಿಂದಾಸ್ತುತಿಗಳಲ್ಲಿ ಸಮಭಾವದಿಂದಿರುವನೋ, ಮಿತಭಾಷಿಯೋ, ದೊರಕಿದುದರಲ್ಲಿ ತೃಪ್ತನಾಗಿರುವನೋ, ಮನೆ-ಮಠಗಳಿಲ್ಲದವನೋ, ಸ್ಥಿರಚಿತ್ತನೋ ಅಂತಹ ಮುಕ್ತಭಕ್ತನು ನನಗೆ ಪರಮಪ್ರಿಯನು.
(ಭ.ಗೀ. ಶ್ಲೋ. ೧೩-೧೯ ಅಧ್ಯಾಯ ೧೨)

* ಜೀವಾತ್ಮನಲ್ಲಿ ನಾನಾತ್ವಭ್ರಮೆಯನ್ನು ತೊರೆದು ಎಂದರೆ ಜೀವಾತ್ಮನು

**ಯದ್ಯನೀಶೋ ಧಾರಯಿತುಂ ಮನೋ ಬ್ರಹ್ಮಣಿ ನಿಶ್ಚಲಮ್ ।**
**ಮಯಿ ಸರ್ವಾಣಿ ಕರ್ಮಾಣಿ ನಿರಪೇಕ್ಷಃ ಸಮಾಚರ ॥೨೨॥**

ಪರಬ್ರಹ್ಮ ಸ್ವರೂಪನಾದ ನನ್ನಲ್ಲಿ ಏಕಾಗ್ರವಾದ ಮನಸ್ಸನ್ನಿಡಲು ಸಾಮರ್ಥ್ಯನಲ್ಲವಾದರೆ ಫಲಾಪೇಕ್ಷೆಯಿಲ್ಲದೆ ಸಮಸ್ತಕರ್ಮಗಳನ್ನೂ ಮಾಡು.*

**ಶ್ರದ್ಧಾಲುರ್ಮೇ ಕಥಾಃ ಶೃಣ್ವನ್ ಸುಭದ್ರಾ ಲೋಕಪಾವನೀಃ ।**
**ಗಾಯನ್ನನುಸ್ಮರನ್ಕರ್ಮ ಜನ್ಮ ಚಾಭಿನಯನ್ಮುಹುಃ ॥೨೩॥**

---

ಸ್ವರೂಪದಿಂದಲೇ ದೇವತೆ, ಮನುಷ್ಯ, ಪ್ರಾಣಿ–ಇತ್ಯಾದಿಯಾಗಿ ಬೇರೆ-ಬೇರೆಯಾಗಿದ್ದಾನೆ–ಎಂಬ ಭ್ರಮೆಯನ್ನು ಬಿಟ್ಟು. (ವೀರರಾಘವೀಯ)

ಆತ್ಮನಲ್ಲಿ ನಾನಾತ್ವ ಭ್ರಮೆಯನ್ನು ತೊರೆದು ಎಂದರೆ ಬೇರೆ-ಬೇರೆ ದೇಹದಲ್ಲಿ ಬೇರೆ-ಬೇರೆ ಆತ್ಮನು ಇದ್ದಾನೆ–ದೇಹವೇ ಮುಂತಾದ ಅಧ್ಯಾಸಗಳಿಂದ ಆತ್ಮನೂ ಬೇರೆ-ಬೇರೆ–ಎಂಬ ಭ್ರಮೆಯನ್ನು ತೊರೆದು–ಎಂದರ್ಥ. (ಶ್ರೀಧರೀಯ)

* ದಯಾಮಯನಾದ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಭಕ್ತನ ಉದ್ಧಾರಕ್ಕಾಗಿ ಇನ್ನೂ ಹೆಚ್ಚಿನ ಔದಾರ್ಯವನ್ನು ತೋರಿಸಿದ್ದಾನೆ.

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥೯॥**

ಧನಂಜಯ! ಒಂದು ವೇಳೆ ನಿನಗೆ ಮನಸ್ಸನ್ನು ಸ್ಥಿರವಾಗಿ ನನ್ನಲ್ಲಿಡಲು ಸಾಧ್ಯವಾಗದಿದ್ದರೆ ಅಭ್ಯಾಸವೆಂಬ ಯೋಗವನ್ನು ಮಾಡು. ಆ ಮೂಲಕ ನನ್ನನ್ನು ಪಡೆಯಲಿಚ್ಛಿಸಲು ಪ್ರಯತ್ನಿಸು.

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥೧೦॥**

ಅಭ್ಯಾಸಯೋಗವೂ ನಿನಗೆ ಸಾಧ್ಯವಾಗದೇ ಇದ್ದರೆ ನನಗಾಗಿ ಕರ್ಮಗಳನ್ನು ಮಾಡುವುದಕ್ಕೆ ಪ್ರಯತ್ನಮಾಡು. ನನ್ನ ಪ್ರೀತಿಗಾಗಿ ಕರ್ಮಗಳನ್ನು ಮಾಡುವುದಾದರೆ ನೀನು ಸಿದ್ಧಿಯನ್ನು ಪಡೆಯುವೆ.

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥೧೧॥**

ಅದೂ ನಿನ್ನಿಂದ ಆಗದಿದ್ದರೆ ನಿಗ್ರಹಿಸಿದ ಮನಸ್ಸಿನಿಂದ ಕೂಡಿದವನಾಗಿ ಯೋಗವನ್ನಾಶ್ರಯಿಸಿ ಸಮಸ್ತಕರ್ಮಫಲಗಳ ತ್ಯಾಗವನ್ನಾದರೂ ಮಾಡು. (ಭ.ಗೀ.ಅ. ೧೨)

**ಮದರ್ಥೇ ಧರ್ಮಕಾಮಾರ್ಥಾನಾಚರನ್ಮದಪಾಶ್ರಯಃ ।**
**ಲಭತೇ ನಿಶ್ಚಲಾಂ ಭಕ್ತಿಂ ಮಯ್ಯುದ್ಧವ ಸನಾತನೇ ॥೨೪॥**

ಲೋಕ ಕಲ್ಯಾಣಕರವಾದ ಮತ್ತು ಲೋಕಪಾವನಗಳಾದ ನನ್ನ ಕಥಾ ಪ್ರಸಂಗಗಳನ್ನು ಶ್ರದ್ಧೆಯಿಂದ ಕೇಳಬೇಕು. ನನ್ನ ಅವತಾರಪ್ರಸಂಗಗಳನ್ನೂ, ಲೀಲಾಪ್ರಸಂಗಗಳನ್ನೂ ಅನವರತವಾಗಿ ಗಾನಮಾಡುತ್ತಿರಬೇಕು. ಬಾರಿ-ಬಾರಿಗೂ ಸ್ಮರಿಸುತ್ತಿರಬೇಕು. ಕೆಲವು ಸಮಯಗಳಲ್ಲಿ ಅಂತಹ ಪ್ರಸಂಗ ಗಳನ್ನು ಅಭಿನಯದ ಮೂಲಕವಾಗಿಯೂ ಸ್ಮರಿಸಬೇಕು. ನನ್ನ ಆಶ್ರಯ ದಲ್ಲಿಯೇ ಇದ್ದುಕೊಂಡು ನನ್ನ ಸಲುವಾಗಿಯೇ ಧರ್ಮಾರ್ಥಕಾಮಗಳನ್ನು ಸೇವಿಸಬೇಕು. ಉದ್ಧವ! ಯಾರು ಹೀಗೆ ಮಾಡುವರೋ ಅಂತಹವರು ಸನಾತನನಾದ ನನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಹೊಂದುತ್ತಾರೆ.

**ಸತ್ಸಙ್ಗಲಬ್ಧಯಾ ಭಕ್ತ್ಯಾ ಮಯಿ ಮಾಂಸ ಉಪಾಸಿತಾ ।**
**ಸ ವೈ ಮೇ ದರ್ಶಿತಂ ಸದ್ಭಿರಞ್ಜಸಾ ವಿನ್ದತೇ ಪದಮ್ ॥೨೫॥**

ಪ್ರಿಯಸಖನೇ! ಸತ್ಸಂಗದಿಂದ ಭಕ್ತಿಯುಂಟಾಗುತ್ತದೆ. ಹಾಗೆ ಭಕ್ತಿಭಾವವನ್ನು ಹೊಂದಿದವನು ನನ್ನ ಭಕ್ತನಾಗಿ ನನ್ನನ್ನು ಉಪಾಸಿಸುತ್ತಾನೆ. ನನ್ನ ಉಪಾಸನೆಯಿಂದಾಗಿ ಅವನ ಅಂತಃಕರಣವು ಶುದ್ಧಿಯಾಗುತ್ತದೆ. ಅನಂತರ ಅವನು ಬಹಳ ಬೇಗ ಸತ್ಪುರುಷರಿಂದ ತೋರಿಸಿ ಕೊಡಲ್ಪಟ್ಟ ನನ್ನ ಪರಮಪದವನ್ನು ಸೇರುತ್ತಾನೆ."

ಉದ್ಧವನು ಹೇಳುತ್ತಾನೆ :

**ಸಾಧುಸ್ತವೋತ್ತಮಶ್ಲೋಕ ಮತಃ ಕೀದೃಗ್ವಿಧಃ ಪ್ರಭೋ ।**
**ಭಕ್ತಿಸ್ತ್ವಯ್ಯುಪಯುಜ್ಯೇತ ಕೀದೃಶೀ ಸದ್ಭಿರಾದೃತಾ ॥೨೬॥**

"ಭಗವಂತ! ದೊಡ್ಡ-ದೊಡ್ಡ ಸಂತರು ನಿನ್ನ ಕೀರ್ತಿಯನ್ನು ಗಾನ ಮಾಡುತ್ತಿರುತ್ತಾರೆ. ನಿನ್ನ ಅಭಿಪ್ರಾಯದಲ್ಲಿ ಸಾಧುಪುರುಷರ ಲಕ್ಷಣಗಳೇನು? ನಿನ್ನಲ್ಲಿ ಎಂತಹ ಭಕ್ತಿಯನ್ನು ಸತ್ಪುರುಷರು ಕೂಡ ಸಮಾದರಿಸುತ್ತಾರೆ?

**ಏತನ್ಮೇ ಪುರುಷಾಧ್ಯಕ್ಷ ಲೋಕಾಧ್ಯಕ್ಷ ಜಗತ್ಪ್ರಭೋ ।**
**ಪ್ರಣತಾಯಾನುರಕ್ತಾಯ ಪ್ರಪನ್ನಾಯ ಚ ಕಥ್ಯತಾಮ್ ॥೨೭॥**

ಬ್ರಹ್ಮನೇ ಮೊದಲಾದ ಶ್ರೇಷ್ಠರಾದ ದೇವತೆಗಳಿಗೂ, ಸತ್ಯಾದಿ ಲೋಕಗಳಿಗೂ ಅಧ್ಯಕ್ಷನಾಗಿರುವವನೇ! ಸಮಸ್ತಚರಾಚರಜಗತ್ತಿಗೂ ಸ್ವಾಮಿಯಾಗಿರುವವನೇ! ನಾನು ನಿನಗೆ ವಿನೀತನೂ, ಪ್ರೇಮಿಯೂ, ಶರಣಾಗತ ಭಕ್ತನೂ ಆಗಿದ್ದೇನೆ. ನೀನು ನನಗೆ ದಯಮಾಡಿ ಭಕ್ತಿಯ ಮತ್ತು ಭಕ್ತನ ರಹಸ್ಯಗಳನ್ನು ಹೇಳು.

**ತ್ವಂ ಬ್ರಹ್ಮ ಪರಮಂ ವ್ಯೋಮ ಪುರುಷಃ ಪ್ರಕೃತೇಃ ಪರಃ ।**
**ಅವತೀರ್ಣೋಽಸಿ ಭಗವನ್ ಸ್ವೇಚ್ಛೋಪಾತ್ತಪೃಥಗ್ವಪುಃ ॥೨೮॥**

ಭಗವಂತ! ನಾನು ನಿನ್ನನ್ನು ಪ್ರಕೃತಿಗಿಂತ ಆಚೇ ಇರುವ ಪುರುಷೋತ್ತಮನೆಂದೂ, ಚಿದಾಕಾಶಸ್ವರೂಪವಾದ ಬ್ರಹ್ಮವೆಂದೂ ತಿಳಿಯುತ್ತೇನೆ. ನಿನ್ನಿಂದ ಬೇರೆಯಾದುದು ಯಾವುದೂ ಇಲ್ಲ. ಆದರೂ ಕೂಡ ನಿನ್ನ ದಿವ್ಯಲೀಲೆಗಳನ್ನು ತೋರಿಸುವ ಸಲುವಾಗಿ ಸ್ವೇಚ್ಛೆಯಿಂದ ಪ್ರತ್ಯೇಕವಾದ ಈ ಶರೀರವನ್ನು ಧರಿಸಿ ಅವತರಿಸಿರುವೆ. ಆದುದರಿಂದ ಭಕ್ತಿಯ ಮತ್ತು ಭಕ್ತರ ರಹಸ್ಯವನ್ನು ಹೇಳಲು ನೀನೇ ಸಮರ್ಥನಾಗಿರುವೆ."

ಭಗವಂತನು ಹೇಳುತ್ತಾನೆ :

**ಕೃಪಾಲುರಕೃತದ್ರೋಹಸ್ತಿತಿಕ್ಷುಃ ಸರ್ವದೇಹಿನಾಮ್ ।**
**ಸತ್ಯಸಾರೋಽನವದ್ಯಾತ್ಮಾ ಸಮಃ ಸರ್ವೋಪಕಾರಕಃ ॥೨೯॥**

"ಪ್ರಿಯಉದ್ಧವನೇ! ನನ್ನ ಭಕ್ತನು ಪರಮದಯಾಳುವಾಗಿರುತ್ತಾನೆ. ಯಾವ ಪ್ರಾಣಿಗೇ ಆದರೂ ದ್ರೋಹವೆಸಗುವುದಿಲ್ಲ. ಅತಿಘೋರವಾದ ದುಃಖವನ್ನೂ ಪ್ರಸನ್ನತೆಯಿಂದಲೇ ಸಹಿಸಿಕೊಳ್ಳುತ್ತಾನೆ. ಸತ್ಯವೇ ಅವನ ಜೀವನದ ಸರ್ವಸ್ವವಾಗಿರುತ್ತದೆ. ಅವನ ಮನಸ್ಸಿನಲ್ಲಿ ಯಾವುದೇ ವಿಧವಾದ ಪಾಪದವಾಸನೆಯೂ ಇರುವುದಿಲ್ಲ. ಅವನು ಸರ್ವವನ್ನೂ ಸಮಾನವಾಗಿ ಕಾಣುತ್ತಾನೆ. ಪ್ರಾಣಿಮಾತ್ರಕ್ಕೇ ಉಪಕಾರಿಯಾಗಿರುತ್ತಾನೆ.

**ಕಾಮೈರಹತಧೀರ್ದಾನ್ತೋ ಮೃದುಃ ಶುಚಿರಕಿಞ್ಚನಃ ।**
**ಅನೀಹೋ ಮಿತಭುಕ್ ಶಾನ್ತಃ ಸ್ಥಿರೋ ಮಚ್ಛರಣೋ ಮುನಿಃ ॥೩೦॥**

ಅವನ ಬುದ್ಧಿಯು ಕಾಮನೆಗಳಿಂದ ಕಲುಷಿತವಾಗಿರುವುದಿಲ್ಲ. ಅವನು ಸಂಯಮಿಯೂ, ಮಧುರಸ್ವಭಾವದವನೂ, ಪವಿತ್ರನೂ ಆಗಿರುತ್ತಾನೆ.

ಸಂಗ್ರಹ-ಪರಿಗ್ರಹಗಳಿಂದ ದೂರವಿರುತ್ತಾನೆ. ಆಸೆಯನ್ನು ಸಂಪೂರ್ಣವಾಗಿ ತೊರೆದಿರುತ್ತಾನೆ. ಮಿತಾಹಾರಿಯಾಗಿರುತ್ತಾನೆ. ಶಾಂತನಾಗಿರುತ್ತಾನೆ. ಅವನ ಬುದ್ಧಿಯು ಸ್ಥಿರವಾಗಿರುತ್ತದೆ. ನನ್ನನ್ನೇ ಸದಾ ಆಶ್ರಯಿಸಿರುತ್ತಾನೆ. ಅಂತಹವನೇ ನನ್ನ ಭಕ್ತನು ಮತ್ತು ಮುನಿಯು.

**ಅಪ್ರಮತ್ತೋ ಗಭೀರಾತ್ಮಾ ಧೃತಿಮಾನ್ ಜಿತಷಡ್ಗುಣಃ ।**
**ಅಮಾನೀ ಮಾನದಃ ಕಲ್ಪೋ ಮೈತ್ರಃ ಕಾರುಣಿಕಃ ಕವಿಃ ॥೩೧॥**

ನನ್ನ ಭಕ್ತನು ಸಾವಧಾನತೆಯಿಂದಿರುತ್ತಾನೆ. ಗಂಭೀರವಾದ ಸ್ವಭಾವವುಳ್ಳವನಾಗಿರುತ್ತಾನೆ. ಧೈರ್ಯವಂತನಾಗಿರುತ್ತಾನೆ. ಹಸಿವು-ಬಾಯಾರಿಕೆಗಳನ್ನೂ, ಶೋಕ-ಮೋಹಗಳನ್ನೂ, ಜನ್ಮ-ಮೃತ್ಯುಗಳನ್ನೂ ವಶಪಡಿಸಿಕೊಂಡಿರುತ್ತಾನೆ. ಈ ಆರೂ ಅವನನ್ನು ಬಾಧೆಪಡಿಸುವುದಿಲ್ಲ. ಅವನು ಯಾರಿಂದಲೂ ಮರ್ಯಾದೆಯನ್ನು ನಿರೀಕ್ಷಿಸುವುದಿಲ್ಲ. ಆದರೆ ಎಲ್ಲರನ್ನೂ ಆತನು ಅತ್ಯಂತ ಮರ್ಯಾದೆಯಿಂದ ಕಾಣುತ್ತಾನೆ. ನನ್ನ ಸಂಬಂಧವಾದ ತತ್ತ್ವಗಳನ್ನು ಉಪದೇಶಿಸುವುದರಲ್ಲಿ ಸಮರ್ಥನಾಗಿರುತ್ತಾನೆ. ಎಲ್ಲರಿಗೂ ಮಿತ್ರನಾಗಿರುತ್ತಾನೆ. ಎಲ್ಲರೊಡನೆಯೂ ಸ್ನೇಹದಿಂದಿರುತ್ತಾನೆ. ಅವನ ಹೃದಯದಲ್ಲಿ ಕರುಣಾರಸವು ತುಂಬಿ ತುಳುಕುತ್ತಿರುತ್ತದೆ. ಅವನು ನನ್ನ ತತ್ತ್ವವನ್ನು ಯಥಾರ್ಥರೂಪದಿಂದ ತಿಳಿದ ವಿದ್ವಾಂಸನಾಗಿರುತ್ತಾನೆ.*

**ಆಜ್ಞಾಯೈವಂ ಗುಣಾನ್ದೋಷಾನ್ ಮಯಾದಿಷ್ಟಾನಪಿ ಸ್ವಕಾನ್ ।**
**ಧರ್ಮಾನ್ ಸನ್ತ್ಯಜ್ಯ ಯಃ ಸರ್ವಾನ್ ಮಾಂ ಭಜೇತ ಸ ಸತ್ತಮಃ ॥**

ಉದ್ಧವ! ನಾನು ವೇದಶಾಸ್ತ್ರಗಳ ಮೂಲಕವಾಗಿ ಮನುಷ್ಯರಿಗೆ ಧರ್ಮೋಪದೇಶಮಾಡಿದ್ದೇನೆ. ಅವುಗಳನ್ನು ಪಾಲಿಸುವುದರಿಂದ ಅಂತಃಕರಣಶುದ್ಧಿಯೇ ಮುಂತಾದ ಗುಣಗಳು ಲಭಿಸುತ್ತವೆ. ಅದನ್ನು ಉಲ್ಲಂಘಿಸುವುದರಿಂದ ನರಕಾದಿ ದುಃಖಗಳು ಪ್ರಾಪ್ತವಾಗುತ್ತವೆ. ಆದರೆ ವೇದೋಕ್ತವಾದ ಕರ್ಮಗಳ ಆಚರಣೆಯಿಂದ, ನನ್ನ ನಿರಂತರಸ್ಮರಣೆಯು ಸಾಧ್ಯವಾಗ

---

* ಜಿತಷಡ್ಗುಣಃ : ಹಸಿವು-ಬಾಯಾರಿಕೆ, ಶೋಕ-ಮೋಹ, ಮುಪ್ಪು-ಮರಣ–ಎಂಬ ಆರು ಗುಣ (ಊರ್ಮಿ)ಗಳನ್ನು ಜಯಿಸಿ.

**ಕ್ಷುತ್ಪಿಪಾಸೇ ಶೋಕಮೋಹೌ ಜರಾಮೃತ್ಯೂ ಷಡೂರ್ಮಯಃ (ಶ್ರೀಧರೀಯ)**

ದೆಂದು ಭಾವಿಸಿ ಯಾವನು ನನ್ನಿಂದಲೇ ಉಪದಿಷ್ಟವಾದ ಅಂತಹ ಧರ್ಮ-ಕರ್ಮಗಳನ್ನು ಪರಿತ್ಯಜಿಸಿ ನನ್ನನ್ನು ಸತತವಾಗಿ ಭಜಿಸುತ್ತಿರುತ್ತಾನೆಯೋ ಅವನೇ ಪರಮಶ್ರೇಷ್ಠನಾದ ಸಂತನು.

**ಜ್ಞಾತ್ವಾಜ್ಞಾತ್ವಾಥ ಯೇ ವೈ ಮಾಂ ಯಾವಾನ್ಯಶ್ಚಾಸ್ಮಿ ಯಾದೃಶಃ ।**
**ಭಜನ್ತ್ಯನನ್ಯಭಾವೇನ ತೇ ಮೇ ಭಕ್ತತಮಾ ಮತಾಃ ॥೩೩॥**

ನಾನು ಯಾರಾಗಿದ್ದೇನೆ? ಎಷ್ಟು ಪ್ರಸಿದ್ಧನಾಗಿದ್ದೇನೆ? ಹೇಗಿ ದ್ದೇನೆ?—ಈ ಎಲ್ಲ ವಿಷಯಗಳನ್ನೂ ತಿಳಿದೋ ತಿಳಿಯದೆಯೋ ಯಾರು ನನ್ನನ್ನು ಅನನ್ಯಭಾವದಿಂದ ಭಜಿಸುವರೋ ಅಂತಹವರೇ ನನ್ನ ಪರಮ ಶ್ರೇಷ್ಠರಾದ ಭಕ್ತರು.*

**ಮಲ್ಲಿಙ್ಗಮದ್ಭಕ್ತಜನದರ್ಶನಸ್ಪರ್ಶನಾರ್ಚನಮ್ ।**
**ಪರಿಚರ್ಯಾ ಸ್ತುತಿಃ ಪ್ರಹ್ವಗುಣಕರ್ಮಾನುಕೀರ್ತನಮ್ ॥೩೪॥**

ಪ್ರಿಯಗೆಳೆಯನೇ! ನನ್ನ ವಿಗ್ರಹ-ಸಾಲಿಗ್ರಾಮಗಳೇ ಮುಂತಾದ ನನ್ನ ರೂಪಚಿಹ್ನೆಗಳ ಮತ್ತು ನನ್ನ ಭಕ್ತಜನರ—ದರ್ಶನ, ಸ್ಪರ್ಶ, ಪೂಜೆ, ಸೇವೆ, ಶುಶ್ರೂಷೆ, ಸ್ತೋತ್ರ, ನಮಸ್ಕಾರ—ಇತ್ಯಾದಿಗಳನ್ನು ಸರ್ವದಾ ಮಾಡುತ್ತಿರಬೇಕು ಮತ್ತು ನನ್ನ ನಾನಾಗುಣ-ಕರ್ಮಗಳ ಕೀರ್ತನವನ್ನೂ ಮಾಡುತ್ತಿರಬೇಕು.

**ಮತ್ಕಥಾಶ್ರವಣೇ ಶ್ರದ್ಧಾ ಮದನುಧ್ಯಾನಮುದ್ಧವ ।**
**ಸರ್ವಲಾಭೋಪಹರಣಂ ದಾಸ್ಯೇನಾತ್ಮನಿವೇದನಮ್ ॥೩೫॥**

**ಮಜ್ಜನ್ಮಕರ್ಮಕಥನಂ ಮಮ ಪರ್ವಾನುಮೋದನಮ್ ।**
**ಗೀತಾತಾಣ್ಡವವಾದಿತ್ರಗೋಷ್ಠೀಭಿರ್ಮದ್ಗೃಹೋತ್ಸವಃ ॥೩೬॥**

---

* ಗೀತೆಯಲ್ಲಿಯೂ ಪರಮಾತ್ಮನ ದಿವ್ಯಸಂದೇಶ :

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋऽಸಿ ಮೇ ॥೬೫॥
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥

ನನ್ನಲ್ಲಿಯೇ ಮನಸ್ಸನ್ನಿಟ್ಟಿರು. ನನ್ನ ಭಕ್ತನಾಗು. ನನ್ನನ್ನೇ ಪೂಜಿಸು. ನನ್ನನ್ನೇ ನಮಸ್ಕರಿಸು. ಹೀಗೆ ಮಾಡಿದರೆ ನನ್ನನ್ನೇ ಹೊಂದುವೆ. ಇದನ್ನು ಆಣೆಯಿಟ್ಟು

ಪ್ರಿಯಸಖನೇ! ನನ್ನ ಕಥಾಪ್ರಸಂಗಗಳನ್ನು ಶ್ರದ್ಧೆಯಿಂದ ಕೇಳಬೇಕು. ನಿರಂತರವಾಗಿ ನನ್ನ ಧ್ಯಾನಮಾಡುತ್ತಿರಬೇಕು. ಲಭಿಸಿದ ಉತ್ತಮವಾದ ವಸ್ತುಗಳೆಲ್ಲವನ್ನೂ ನನಗೆ ಸಮರ್ಪಣಮಾಡಬೇಕು. ದಾಸ್ಯ ಭಾವದಿಂದ ನನಗೆ, ಆತ್ಮನಿವೇದನಮಾಡಿಕೊಳ್ಳಬೇಕು. ನನ್ನ ದಿವ್ಯವಾದ ಜನ್ಮವೃತ್ತಾಂತವನ್ನೂ ಮತ್ತು ಅಲೌಕಿಕವಾದ ಕರ್ಮಗಳನ್ನೂ ಎಲ್ಲರೊಡನೆಯೂ ಯಾವಾಗಲೂ ಹೇಳುತ್ತಿರಬೇಕು. ನನ್ನ ಜನ್ಮೋತ್ಸವವನ್ನು ವಿಜೃಂಭಣೆಯಿಂದ ಹಬ್ಬದಂತೆ ಆಚರಿಸಬೇಕು. ನನ್ನ ಆಲಯಗಳಲ್ಲಿ ಗೀತ-ನೃತ್ಯ-ವಾದ್ಯಾದಿಗಳಿಂದ ಕೂಡಿದ ಉತ್ಸವಗಳನ್ನು ನಡೆಸಬೇಕು.

**ಯಾತ್ರಾ ಬಲಿವಿಧಾನಂ ಚ ಸರ್ವವಾರ್ಷಿಕಪರ್ವಸು ।**
**ವೈದಿಕೀ ತಾನ್ತ್ರಿಕೀ ದೀಕ್ಷಾ ಮದೀಯವ್ರತಧಾರಣಮ್ ॥೩೭॥**

ಸಮಸ್ತವಾದ ವಾರ್ಷಿಕಹಬ್ಬಗಳಲ್ಲಿಯೂ ನನ್ನ ಅರ್ಚಾವಿಗ್ರಹಗಳಿರುವ ದೇವಸ್ಥಾನಗಳಿಗೆ ಯಾತ್ರೆ ಬರಬೇಕು. ವೈದಿಕ ಅಥವಾ ತಾಂತ್ರಿಕಪದ್ಧತಿಗೆ ಅನುಗುಣವಾಗಿ ದೀಕ್ಷೆಯನ್ನು ಕೈಗೊಳ್ಳಬೇಕು. ನನ್ನ ಸಂಬಂಧವಾದ ವ್ರತಗಳನ್ನು ಆಚರಿಸಬೇಕು.

**ಮಮಾರ್ಚಾಸ್ಥಾಪನೇ ಶ್ರದ್ಧಾ ಸ್ವತಃ ಸಂಹತ್ಯ ಚೋದ್ಯಮಃ ।**
**ಉದ್ಯಾನೋಪವನಾಕ್ರೀಡಪುರಮನ್ದಿರಕರ್ಮಣಿ ॥೩೮॥**

ಮಂದಿರಗಳಲ್ಲಿ ನನ್ನ ಅರ್ಚಾವಿಗ್ರಹಗಳನ್ನು ಸ್ಥಾಪಿಸಲು ಶ್ರದ್ಧೆಯನ್ನಿಡಬೇಕು. ಈ ಕಾರ್ಯವನ್ನು ಒಬ್ಬನೇ ಮಾಡಲಾಗದಿದ್ದರೆ ಇತರ ಸಜ್ಜನರ ಸಹಾಯವನ್ನು ಪಡೆದು ಮಾಡಬೇಕು. ದೇವತಾರಾಧನಾರ್ಥವಾಗಿ ಹೂದೋಟ, ಹಣ್ಣಿನ ತೋಟ, ಆಟದ ತೋಟ, ಗೋಪುರ, ಛತ್ರ ಇತ್ಯಾದಿಗಳನ್ನು ನಿರ್ಮಿಸಬೇಕು. ಇವೆಲ್ಲವೂ ಭಕ್ತಿಯ ಲಕ್ಷಣಗಳಾಗಿರುತ್ತವೆ.

**ಸಮ್ಮಾರ್ಜನೋಪಲೇಪಾಭ್ಯಾಂ ಸೇಕಮಣ್ಡಲವರ್ತನೈಃ ।**
**ಗೃಹಶುಶ್ರೂಷಣಂ ಮಹ್ಯಂ ದಾಸವದ್ಯದಮಾಯಯಾ ॥೩೯॥**

---

ಹೇಳುತ್ತೇನೆ. ಹೀಗೆ ಮಾಡುವುದರಿಂದ ನೀನು ನನಗೆ ಪ್ರಿಯನಾಗುವೆ. ಸರ್ವ ಧರ್ಮಗಳನ್ನೂ ಬಿಟ್ಟು ನನ್ನೊಬ್ಬನನ್ನೇ ಶರಣುಹೊಂದು. ನಾನು ನಿನ್ನನ್ನು ಸಕಲ ಪಾಪಗಳಿಂದಲೂ ಬಿಡುಗಡೆಗೊಳಿಸುವೆನು. ಶೋಕಿಸಬೇಡ. (ಅಧ್ಯಾಯ-೧೮)

ನನ್ನ ಮಂದಿರವನ್ನು ಗುಡಿಸಬೇಕು. ಗೋಮಯದಿಂದ (ಸಗಣಿಯ ಬಗ್ಗಡದಿಂದ) ಸಾರಿಸಬೇಕು. ಚಿತ್ರ-ಚಿತ್ರವಾಗಿ ರಂಗವಲ್ಲಿಗಳನ್ನಿಡಬೇಕು. ಹೀಗೆ ಸೇವಕನಂತೆ ಕಪಟವಿಲ್ಲದೆ ನನ್ನ ಆಲಯವನ್ನು ಅಲಂಕರಿಸಬೇಕು.

**ಅಮಾನಿತ್ವಮದಮ್ಭಿತ್ವಂ ಕೃತಸ್ಯಾಪರಿಕೀರ್ತನಮ್ ।**
**ಅಪಿ ದೀಪಾವಲೋಕಂ ಮೇ ನೋಪಯುಞ್ಜ್ಯಾನ್ನಿವೇದಿತಮ್ ॥೪೦॥**

ಗರ್ವಿಷ್ಠನಾಗಿರಬಾರದು. ದಾಂಭಿಕನಾಗಿರಬಾರದು. ತಾನು ಮಾಡಿದ ಒಳ್ಳೆಯ ಕಾರ್ಯಗಳನ್ನು ಮತ್ತೊಬ್ಬರಲ್ಲಿ ಹೇಳಿಕೊಳ್ಳಬಾರದು. ನನಗೆಂದು ಮೀಸಲಾಗಿರುವ ದೀಪವನ್ನು ಕೂಡ ಇತರ ಕಾರ್ಯಗಳಿಗೆ ಉಪಯೋಗಿಸಬಾರದು.*

**ಯದ್ಯದಿಷ್ಟತಮಂ ಲೋಕೇ ಯಚ್ಚಾತಿಪ್ರಿಯಮಾತ್ಮನಃ ।**
**ತತ್ತನ್ನಿವೇದಯೇನ್ಮಹ್ಯಂ ತದಾನನ್ತ್ಯಾಯ ಕಲ್ಪತೇ ॥೪೧॥**

ಲೋಕದಲ್ಲಿ ತನಗೆ ಯಾವ ಯಾವ ಪದಾರ್ಥವು ಇಷ್ಟತಮವಾಗಿರು

---

* ಭಗವಂತನಿಗೆಂದು ಯಾರಾದರೂ ಅರ್ಪಣೆಮಾಡಿರುವ ದೀಪವನ್ನು ಕೂಡ ಇತರ ಕೆಲಸಗಳಿಗೆ ಬಳಸಿಕೊಳ್ಳಬಾರದು–ಎಂಬ ಅರ್ಥವು ಇಲ್ಲಿ ಸ್ವರಸವಾಗಿ ಕಾಣು ವುದು. ಕೆಲವರು ದೇವರಿಗೆಂದು ಹಚ್ಚಿಟ್ಟಿರುವ ದೀಪವನ್ನು ತಮ್ಮ ಅಥವಾ ಇತರರ ಕೆಲಸಗಳಿಗಾಗಿ ಎತ್ತಿಕೊಂಡು ಹೋಗುವುದುಂಟು. ದೇವರ ನೈವೇದ್ಯಕ್ಕೆಂದು ಇಟ್ಟಿ ರುವ ಪ್ರಸಾದಾರ್ಥವಾದ ಅನ್ನ ಮುಂತಾದುವುಗಳನ್ನು ತಾವು ತಿನ್ನುವುದಕ್ಕಾಗಿ ಅಥವಾ ಇತರರಿಗೆ ಕೊಡುವುದಕ್ಕಾಗಿ ಎತ್ತಿಕೊಂಡು ಹೋಗುವುದುಂಟು. ದೈವ ಸ್ವತ್ತನ್ನು ಅನ್ಯಥಾ ಉಪಯೋಗಿಸುವ ಇಂತಹ ಹೇಯಕಾರ್ಯಗಳನ್ನು ಇಲ್ಲಿ ನಿಷೇಧ ಮಾಡಲಾಗಿದೆ. (ಶ್ರೀಧರೀಯ)

ವಿಷ್ಣುವಿಗೆ ತನ್ನಿಂದ ಅಥವಾ ಇತರರಿಂದ ನಿವೇದಿತವಾದ ಭೂಮಿಯೇ ಮುಂತಾದ ಸ್ಥಾವರ ವಸ್ತುಗಳನ್ನು ಉಪಯೋಗಿಸಿಕೊಳ್ಳಬಾರದು ಅಥವಾ ರಾಗದಿಂದ ಉಪ ಯೋಗಿಸಬಾರದು–ಎಂದು ಅರ್ಥಮಾಡಬೇಕು. ಅವನಿಗೆ ನಿವೇದಿತವಾದ ಅನ್ನವನ್ನು ಭಕ್ತಿಯಿಂದ ಸ್ವೀಕರಿಸಬೇಕು. ಏಕೆಂದರೆ : ವಿಷ್ಣುವಿಗೆ ನಿವೇದಿತವಾದ ಅನ್ನವನ್ನು ಭಕ್ತಿಯಿಂದ ಸ್ವೀಕರಿಸಿದರೆ ಮಹಾಪುಣ್ಯ. ವಿಷ್ಣುವಿನಿಗೆ ನಿವೇದಿತವಾದ ಅನ್ನವನ್ನು ಪಿತೃಗಳೇ ಮುಂತಾದ ಇತರ ದೇವತೆಗಳಿಗೆ ನಿವೇದನಮಾಡಿದರೂ ಮಹಾಪುಣ್ಯ. ಆದರೆ ಇತರರಿಗೆ ನಿವೇದನ ಮಾಡಿದ್ದನ್ನು ವಿಷ್ಣುವಿಗೆ ನಿವೇದಿಸಬಾರದು. ಉದಾ

ತ್ತದೆಯೋ ಯಾವು-ಯಾವುದು ಅತಿಪ್ರಿಯವಾಗಿರುತ್ತದೆಯೋ ಅಂತಹ ವಸ್ತುಗಳನ್ನು ತಂದು ನನಗೆ ನಿವೇದನಮಾಡಬೇಕು. ಹೀಗೆ ಮಾಡುವುದರಿಂದ ಅದು ಅನಂತಫಲದಾಯಕವಾಗುತ್ತದೆ.

**ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಮ್ ।**
**ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ ॥೪೨॥**

ಸೌಮ್ಯನೇ! ಉದ್ಧವ! ಸೂರ್ಯ, ಅಗ್ನಿ, ಬ್ರಾಹ್ಮಣ, ಹಸು, ವೈಷ್ಣವ, ಆಕಾಶ, ವಾಯು, ಜಲ, ಭೂಮಿ, ಆತ್ಮ, ಸಮಸ್ತಪ್ರಾಣಿಗಳು–ಇವೆಲ್ಲವೂ ನನ್ನ ಪೂಜಾಸ್ಥಾನಗಳೇ ಆಗಿವೆ. ಇವುಗಳ ಮೂಲಕ ನನ್ನನ್ನು ಪೂಜಿಸಬೇಕು.

**ಸೂರ್ಯೇ ತು ವಿದ್ಯಯಾ ತ್ರಯ್ಯಾ ಹವಿಷಾಗ್ನೌ ಯಜೇತ ಮಾಮ್ ।**
**ಅತಿಥ್ಯೇನ ತು ವಿಪ್ರಾಗ್ರ್ಯೇ ಗೋಷ್ವಙ್ಗ ಯವಸಾದಿನಾ ॥೪೩॥**

---

ಹರಣೆ : ದೇವತಾಂತರಕ್ಕೆ ನಿವೇದನ ಮಾಡಿದ್ದನ್ನು ವಿಷ್ಣುವಿಗೆ ನಿವೇದನ ಮಾಡಬಾರದು–ಎಂಬ ಅರ್ಥವನ್ನು ಗ್ರಹಿಸಬೇಕು.

**ಷಡ್ಭಿರ್ಮಾಸೋಪವಾಸೈಸ್ತು ಯತ್ಫಲಂ ಪರಿಕೀರ್ತಿತಮ್ ।**
**ವಿಷ್ಣೋರ್ನೈವೇದ್ಯಸಿಕ್ಥೇನ ಪುಣ್ಯಂ ತದ್ಭುಞ್ಜತಾಂ ಕಲೌ ॥**

**ಹೃದಿ ರೂಪಂ ಮುಖೇ ನಾಮ ನೈವೇದ್ಯ ಮುದರೇ ಹರೇಃ ।**
**ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ ॥**

**ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಂ ದೇವತಾನ್ತರಮ್ ।**
**ಪಿತೃಭ್ಯಶ್ಚೈವ ತದ್ದೇಯಂ ತದಾನನ್ತ್ಯಾಯ ಕಲ್ಪತೇ ॥**

**ಪಿತೃಶೇಷಂ ತು ಯೋ ದದ್ಯಾದ್ಧರಯೇ ಪರಮಾತ್ಮನೇ ।**
**ರೇತೋಧಾಃ ಪಿತರಸ್ತಸ್ಯ ಭವನ್ತಿ ಕ್ಲೇಶಭಾಗಿನಃ ॥**

ವಿಷ್ಣುವಿಗೋಸ್ಕರ ತನ್ನಿಂದ ಅಥವಾ ಇತರರಿಂದ ನಿವೇದಿತವಾಗಿರುವ ದೀಪ ಪ್ರಕಾಶ–ತಾಳೇಗರೀ ಬೀಸಣಿಗೆಯ ಗಾಳಿ–ಇತ್ಯಾದಿಗಳನ್ನು ತನ್ನ ಕೆಲಸಕ್ಕಾಗಿ ಬಳಸಿಕೊಳ್ಳಬಾರದು. ಭಗವಂತನ ಪೂಜೆಗೇ ಬಳಸಿಕೊಳ್ಳಬೇಕು. (ವೀರರಾಘವೀಯ)

ನಿವೇದಿತವಾದ ಅನ್ನವನ್ನು ಪರಮಾರ್ಥಸಿದ್ಧಿಗಾಗಿ ವೈಷ್ಣವರಿಗಿತ್ತು ತಾನೂ ಭುಂಜಿಸಬೇಕು. (ಸಾರಾರ್ಥದರ್ಶಿನೀ)

**ವೈಷ್ಣವೇ ಬನ್ಧುಸತ್ಕೃತ್ಯಾ ಹೃದಿ ಖೇ ಧ್ಯಾನನಿಷ್ಠಯಾ ।**
**ವಾಯೌ ಮುಖ್ಯಧಿಯಾ ತೋಯೇ ದ್ರವ್ಯೈಸ್ತೋಯಪುರಸ್ಕೃತೈಃ ॥**

**ಸ್ಥಣ್ಡಿಲೇ ಮನ್ತ್ರಹೃದಯೈರ್ಭೋಗೈರಾತ್ಮಾನಮಾತ್ಮನಿ ।**
**ಕ್ಷೇತ್ರಜ್ಞಂ ಸರ್ವಭೂತೇಷು ಸಮತ್ವೇನ ಯಜೇತ ಮಾಮ್ ॥೪೫॥**

ಋಗ್ಯಜುಸ್ಸಾಮವೇದಗಳಲ್ಲಿರುವ ಸೌರಸೂಕ್ತಗಳ ಮೂಲಕವಾಗಿ ಸೂರ್ಯನಲ್ಲಿ ನನ್ನನ್ನು ಪೂಜಿಸಬೇಕು. ಹೋಮ-ಹವನಗಳ ಮೂಲಕವಾಗಿ ಅಗ್ನಿಯಲ್ಲಿ ನನ್ನನ್ನು ಪೂಜಿಸಬೇಕು. ಅತಿಥಿಸತ್ಕಾರದ ಮೂಲಕವಾಗಿ ಶ್ರೇಷ್ಠನಾದ ಬ್ರಾಹ್ಮಣನಲ್ಲಿ ನನ್ನನ್ನು ಪೂಜಿಸಬೇಕು. ಹಸಿರು ಹುಲ್ಲಿನ ಮೂಲಕವಾಗಿ ಗೋವುಗಳಲ್ಲಿ ನನ್ನನ್ನು ಪೂಜಿಸಬೇಕು. ವೈಷ್ಣವನನ್ನು ತನ್ನ ಬಂಧು-ಬಳಗದವರಂತೆಯೇ ಸತ್ಕರಿಸುವುದರ ಮೂಲಕ ವೈಷ್ಣವನಲ್ಲಿ ನನ್ನನ್ನು ಪೂಜಿಸಬೇಕು. ನಿರಂತರಧ್ಯಾನದ ಮೂಲಕವಾಗಿ ಹೃದಯಾಕಾಶದಲ್ಲಿ ನನ್ನನ್ನು ಪೂಜಿಸಬೇಕು. ಮುಖ್ಯಪ್ರಾಣನೆಂದು ಭಾವಿಸಿ ವಾಯುವಿನಲ್ಲಿ ನನ್ನನ್ನು ಪೂಜಿಸಬೇಕು. ಗಂಧ-ಪುಷ್ಪ-ತರ್ಪಣಾದಿಗಳಿಂದ ಜಲದಲ್ಲಿ ನನ್ನನ್ನು ಪೂಜಿಸಬೇಕು. ರಹಸ್ಯವಾದ ಮಂತ್ರಗಳ ಮೂಲಕವಾಗಿ ನ್ಯಾಸ ಮಾಡಿ ಮಣ್ಣಿನ ವೇದಿಕೆಯಲ್ಲಿ ನನ್ನನ್ನು ಪೂಜಿಸಬೇಕು. ಶರೀರದಲ್ಲಿರುವ ಜೀವಗಳಿಗೆ ವಿಷಯೋಪಭೋಗಗಳನ್ನು ಸಮರ್ಪಿಸುವುದರ ಮೂಲಕ ನನ್ನನ್ನು ಪೂಜಿಸಬೇಕು. ಸರ್ವಾಂತರ್ಯಾಮಿಯಾಗಿರುವ ನನ್ನನ್ನು ಎಲ್ಲದರಲ್ಲಿಯೂ ಸಮಭಾವದಿಂದ ಪೂಜಿಸಬೇಕು.

**ಧಿಷ್ಣ್ಯೇಷ್ವೇಷ್ವಿತಿ ಮದ್ರೂಪಂ ಶಙ್ಖಚಕ್ರಗದಾಮ್ಬುಜೈಃ ।**
**ಯುಕ್ತಂ ಚತುರ್ಭುಜಂ ಶಾನ್ತಂ ಧ್ಯಾಯನ್ನರ್ಚೇತ್ ಸಮಾಹಿತಃ ॥**

ಈ ಎಲ್ಲ ಸ್ಥಳಗಳಲ್ಲಿಯೂ ಶಂಖ-ಚಕ್ರ-ಗದಾ-ಪದ್ಮಗಳಿಂದ ಯುಕ್ತವಾದ ನಾಲ್ಕು ಭುಜಗಳಿಂದ ಕೂಡಿ ಶಾಂತಮುಖಭಾವದಿಂದಿರುವ ನನ್ನ ಮೂರ್ತಿಯನ್ನು ಏಕಾಗ್ರಚಿತ್ತನಾಗಿ ಧ್ಯಾನ ಮಾಡುತ್ತಾ ಪೂಜಿಸಬೇಕು.*

---

* ಎಲ್ಲಾ ಸ್ಥಾನಗಳಲ್ಲಿ ಚತುರ್ಭುಜಸ್ವರೂಪಧ್ಯಾನವಿದ್ದರೂ ಗವಾದಿಗಳಲ್ಲಿ ಅಧಿಷ್ಠಾತೃಪ್ರತಿಮೆಯ ಆರಾಧನವೆಂದೂ, ಆಕಾಶಾದಿಗಳಲ್ಲಿ ಸಾಕ್ಷಾತ್ತಾಗಿ ಅಧಿಷ್ಠಾತೃವಿನ ಉಪಾಸನೆಯೆಂದೂ—ಹೀಗೆ ಪೂಜಾಪ್ರಕಾರವು ಎರಡು ವಿಧವೆಂದು ತಿಳಿಯಬೇಕು.
(ದೀಪಿನೀ)

**ಇಷ್ಟಾಪೂರ್ತೇನ ಮಾಮೇವಂ ಯೋ ಯಜೇತ ಸಮಾಹಿತಃ ।**
**ಲಭತೇ ಮಯಿ ಸದ್ಭಕ್ತಿಂ ಮತ್ಸ್ಮೃತಿಃ ಸಾಧುಸೇವಯಾ ॥೪೭॥**

ಯಾವನು ಶಾಂತಮನಸ್ಕನಾಗಿ ಹಿಂದೆ ಹೇಳಿದಂತೆ ಅಗ್ನಿಹೋತ್ರ, ದರ್ಶಪೂರ್ಣಮಾಸ, ಚಾತುರ್ಮಾಸ್ಯ, ಪಶುಯಾಗ, ವೈಶ್ವದೇವ, ಬಲಿ ಹರಣ–ಇವೇ ಮುಂತಾದ ಇಷ್ಟಕರ್ಮಗಳಲ್ಲಿಯೂ, ದೇವಾಲಯ, ಆರಾಮ, ಬಾವಿ, ಹಳ್ಳ, ತಟಾಕ, ಅರವಟ್ಟಿಗೆ, ಅನ್ನಸತ್ರ–ಇವೇ ಮುಂತಾದ ಪೂರ್ತಕರ್ಮಗಳಲ್ಲಿಯೂ ನನ್ನನ್ನು ಆರಾಧಿಸುವನೋ ಅಂತಹವನಿಗೆ ನನ್ನಲ್ಲಿ ದೃಢವಾದ ಭಕ್ತಿಯುಂಟಾಗುವುದು. ಬಳಿಕ ಸತ್ಪುರುಷರ ಸೇವೆಯಿಂದ ನನ್ನ ಜ್ಞಾನವುಂಟಾಗುವುದು.

**ಪ್ರಾಯೇಣ ಭಕ್ತಿಯೋಗೇನ ಸತ್ಸಙ್ಗೇನ ವಿನೋದ್ಧವ ।**
**ನೋಪಾಯೋ ವಿದ್ಯತೇ ಸಧ್ರ್ಯಙ್ ಪ್ರಾಯಣಂ ಹಿ ಸತಾಮಹಮ್ ॥**

ಪ್ರಿಯವಯಸ್ಯನೇ! ಉದ್ಧವ! ಸತ್ಸಂಗ ಮತ್ತು ಭಕ್ತಿಯೋಗವನ್ನು ಏಕಪ್ರಕಾರವಾಗಿ ಸಾಧನೆಮಾಡುತ್ತಿರಬೇಕು. ಇವೆರಡನ್ನು ಬಿಟ್ಟರೆ ಅಗಾಧ ವಾದ ಈ ಸಂಸಾರಸಾಗರವನ್ನು ದಾಟಲು ಯೋಗ್ಯವಾದ ಬೇರೆ ಯಾವ ಉಪಾಯವೂ ಇಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ. ಏಕೆಂದರೆ ಸತ್ಪುರುಷರು ಸದಾಕಾಲದಲ್ಲಿಯೂ ನನ್ನನ್ನೇ ಪರಮಾಶ್ರಯನನ್ನಾಗಿ ಭಾವಿಸುತ್ತಾರೆ. ನಾನೂ ಕೂಡ ಯಾವಾಗಲೂ ಸತ್ಪುರುಷರಿಗೆ ಸೇರಿದವನಾಗಿ ಇದ್ದುಬಿಡುತ್ತೇನೆ."

**ಅಥೈತತ್ ಪರಮಂ ಗುಹ್ಯಂ ಶೃಣ್ವತೋ ಯದುನನ್ದನ ।**
**ಸುಗೋಪ್ಯಮಪಿ ವಕ್ಷ್ಯಾಮಿ ತ್ವಂ ಮೇ ಭೃತ್ಯಃ ಸುಹೃತ್ಸಖಾ ॥೪೯॥**

ಯದುನಂದನನೇ! ನೀನು ನನಗೆ ಸೇವಕನೂ, ಸ್ನೇಹಿತನೂ, ಸುಹೃದನೂ ಆಗಿರುವೆ. ಆದುದರಿಂದ ಅತ್ಯಂತ ಗುಟ್ಟಿನದಾದರೂ ಈ ವಿಷಯವನ್ನು ಕೇಳುತ್ತಿರುವ ನಿನಗೆ ಹೇಳುತ್ತೇನೆ. ಅವಧರಿಸು."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಏಕಾದಶಸ್ಕಂಧದ ೧೧ನೆಯ ಅಧ್ಯಾಯವು ಮುಗಿಯಿತು.

---

# ಸತ್ಸಂಗದ ಮಹಿಮೆ ಕರ್ಮ ಮತ್ತು ಕರ್ಮತ್ಯಾಗದ ವಿಧಿ-ನಿಯಮಗಳು

ಭಗವಂತನು ಹೇಳುತ್ತಾನೆ :

**ನ ರೋಧಯತಿ ಮಾಂ ಯೋಗೋ ನ ಸಾಙ್ಖ್ಯಂ ಧರ್ಮ ಏವ ಚ ।**
**ನ ಸ್ವಾಧ್ಯಾಯಸ್ತಪಸ್ತ್ಯಾಗೋ ನೇಷ್ಟಾಪೂರ್ತಂ ನ ದಕ್ಷಿಣಾ ॥೧॥**

**ವ್ರತಾನಿ ಯಜ್ಞಶ್ಛನ್ದಾಂಸಿ ತೀರ್ಥಾನಿ ನಿಯಮಾ ಯಮಾಃ ।**
**ಯಥಾವರುನ್ಧೇ ಸತ್ಸಙ್ಗಃ ಸರ್ವಸಙ್ಗಾಪಹೋ ಹಿ ಮಾಮ್ ॥೨॥**

"ಸರ್ವಸಂಗವನ್ನೂ ಕಡಿದು ಹಾಕುವ ಸತ್ಸಂಗವು ನನ್ನನ್ನು ವಶಪಡಿಸಿಕೊಂಡಿರುವಂತೆ ಪ್ರಾಣಾಯಾಮಾದಿಯೋಗವಾಗಲೀ, ತತ್ತ್ವವಿವೇಕದಿಂದ ಕೂಡಿದ ಸಾಂಖ್ಯವಾಗಲೀ, ಅಹಿಂಸಾದಿಗಳಿಂದ ಕೂಡಿದ ಧರ್ಮವಾಗಲೀ, ಅಧ್ಯಯನ-ಅಧ್ಯಾಪನಗಳಿಂದ ಕೂಡಿದ ಸ್ವಾಧ್ಯಾಯವಾಗಲೀ, ಚಾಂದ್ರಾಯಣಾದಿ ಕೃಚ್ಛ್ರಗಳಿಂದಕೂಡಿದ ತಪಸ್ಸಾಗಲೀ, ಸಮಸ್ತವನ್ನೂ ಪರಿತ್ಯಜಿಸಿದ ತ್ಯಾಗವಾಗಲೀ, ಬಾವಿ-ಕೊಳ–ಇತ್ಯಾದಿಗಳ ನಿರ್ಮಾಣರೂಪವಾದ ಇಷ್ಟಾಪೂರ್ತಕರ್ಮಗಳಾಗಲೀ, ದಾನ-ದಕ್ಷಿಣೆಗಳಾಗಲೀ, ಉಪವಾಸಾದಿವ್ರತಗಳಾಗಲೀ, ದೇವತಾರಾಧನಗಳಾಗಲೀ, ರಹಸ್ಯಮಂತ್ರಗಳಾಗಲೀ, ಗಂಗಾದಿತೀರ್ಥಗಳಾಗಲೀ, ಯಮ-ನಿಯಮಗಳಾಗಲೀ, ವಶಪಡಿಸಿಕೊಂಡಿರುವುದಿಲ್ಲ. ಇವೆಲ್ಲವನ್ನೂ ಬಿಟ್ಟು ಕೇವಲ ಸತ್ಸಂಗಕ್ಕೇ ನಾನು ಪರವಶನಾಗಿ ಬಿಟ್ಟಿದ್ದೇನೆ.*

---

* ಹೀಗೆ ಶ್ರೀಕೃಷ್ಣನು ಹಲವಾರು ಅಂಗಗಳುಳ್ಳದ್ದೂ, ದೀರ್ಘಕಾಲ ಸಾಧ್ಯವೂ, ದುಷ್ಕರವೂ ಆದ ಭಕ್ತಿಯೋಗವನ್ನುಪದೇಶಿಸಿ, ಅದನ್ನು ತಿಳಿದು ನಡೆಯಿಸುವುದಕ್ಕೆ ಶಕ್ತಿಯಿಲ್ಲದೆ ಖಿನ್ನನಾಗಿ ಕುಳಿತಿದ್ದ ಉದ್ಧವನನ್ನು ಕಂಡು ಆತ್ಮಸಮರ್ಪಣವೆಂಬ ಹೆಸರುಳ್ಳ ಸುಲಭೋಪಾಯವನ್ನು ಉದ್ಧವನಿಗೆ ಉಪದೇಶಿಸುತ್ತಾನೆ.

ಯಂ ಯಂ ಸ್ಪೃಶತಿ ಪಾಣಿಭ್ಯಾಂ ಯಂ ಯಂ ಪಶ್ಯತಿ ಚಕ್ಷುಷಾ ।
ಸ್ಥಾವರಾಣಿ ವಿಮುಚ್ಯನ್ತೇ ಕಿಂ ಪುನರ್ಬಾನ್ಧವಾ ಜನಾಃ ॥

ಸಾಧುಗಳು ಯಾರನ್ನು ಕೈಯಿಂದ ಮುಟ್ಟುವರೋ, ಕಣ್ಣಿನಿಂದ ನೋಡುವರೋ

**ಸತ್ಸಙ್ಗೇನ ಹಿ ದೈತೇಯಾ ಯಾತುಧಾನಾ ಮೃಗಾಃ ಖಗಾಃ ।**
**ಗನ್ಧರ್ವಾಪ್ಸರಸೋ ನಾಗಾಃ ಸಿದ್ಧಾಶ್ಚಾರಣಗುಹ್ಯಕಾಃ ॥೩॥**

**ವಿದ್ಯಾಧರಾ ಮನುಷ್ಯೇಷು ವೈಶ್ಯಾಃ ಶೂದ್ರಾಃ ಸ್ತ್ರಿಯೋಽನ್ತ್ಯಜಾಃ ।**
**ರಜಸ್ತಮಃಪ್ರಕೃತಯಸ್ತಸ್ಮಿಂಸ್ತಂಸ್ತಸ್ಮಿನ್ಯುಗೇಽನಘ ॥೪॥**

ಉದ್ಧವ! ಸತ್ಸಂಗದ ಬಲದಿಂದ ದೈತ್ಯರೂ, ರಾಕ್ಷಸರೂ, ಮೃಗಗಳೂ, ಪಕ್ಷಿಗಳೂ, ಗಂಧರ್ವರೂ, ಅಪ್ಸರೆಯರೂ, ನಾಗರೂ, ಸಿದ್ಧ-ಚಾರಣ-ಗುಹ್ಯಕರೂ, ವಿದ್ಯಾಧರರೂ ನನ್ನ ಪದವಿಯನ್ನು ಪಡೆದಿರುತ್ತಾರೆ. ಅಂತೆಯೇ ಮನುಷ್ಯರಲ್ಲಿ ವೈಶ್ಯ-ಶೂದ್ರರೂ, ಸ್ತ್ರೀಯರೂ, ಅಂತ್ಯಜರೂ ಬೇರೆ-ಬೇರೇ ಯುಗಗಳಲ್ಲಿ ಹುಟ್ಟುವ ರಜೋಗುಣ-ತಮೋಗುಣಪ್ರಧಾನರಾದ ಜೀವಿಗಳೂ ಕೂಡ ಸತ್ಸಂಗದ ಮೂಲಕವಾಗಿ ನನ್ನ ಪರಮಪದವನ್ನು ಸೇರಿರುತ್ತಾರೆ. ವೃತ್ರಾಸುರ, ಕಯಾಧುವಿನ ಮಗನಾದ ಪ್ರಹ್ಲಾದ, ವೃಷಪರ್ವ, ಬಲಿ, ಬಾಣ, ವಾಯು, ವಿಭೀಷಣ, ಸುಗ್ರೀವ, ಹನುಮಂತ, ಜಾಂಬವಂತ, ಗಜೇಂದ್ರ, ಜಟಾಯು, ತುಲಾಧಾರನೆಂಬ ವೈಶ್ಯ, ಧರ್ಮವ್ಯಾಧ, ಕುಬ್ಜೆ, ಗೋಕುಲದಲ್ಲಿದ್ದ ಗೋಪಿಯರು, ಯಜ್ಞದೀಕ್ಷಿತರಾಗಿದ್ದ ವಿಪ್ರರ ಪತ್ನಿಯರು—ಹೀಗೆಯೇ ಇನ್ನೂ ಅನೇಕರು ಸತ್ಸಂಗದಿಂದ ನನ್ನ ದಿವ್ಯಪದವನ್ನು ಸೇರಿದ್ದಾರೆ. ಇವರಲ್ಲಿ ಯಾರೂ ಸಾಂಗವಾಗಿ ವೇದಾಧ್ಯಯನಮಾಡಿದವರಲ್ಲ. ಮಹಾತ್ಮರನ್ನು ಸೇವಿಸಿದವರೂ ಅಲ್ಲ. ವ್ರತೋಪವಾಸಗಳನ್ನು ಮಾಡಿ ದವರೂ ಅಲ್ಲ. ಚಾಂದ್ರಾಯಣವೇ ಮೊದಲಾದ ತಪಸ್ಸನ್ನು ಮಾಡಿದವರೂ ಅಲ್ಲ. ಕೇವಲ ಸತ್ಸಂಗದ ಪ್ರಭಾವದಿಂದಲೇ ವ್ರಜದ ಗೋಪಿಯರೂ, ಹಸುಗಳೂ, ವೃಕ್ಷಗಳೂ, ಮೃಗಗಳೂ, ಇತರ ಮೂರ್ಖಬುದ್ಧಿಯ ಕಾಳಿಯನೇ ಮೊದಲಾದ ನಾಗಗಳೂ, ಸಿದ್ಧರೂ ಬಹಳ ಬೇಗ ನನ್ನ ಪರಮಪದವನ್ನು ಸೇರಿಕೊಂಡುಬಿಟ್ಟರು.

**ಯಂ ನ ಯೋಗೇನ ಸಾಙ್ಖ್ಯೇನ ದಾನವ್ರತತಪೋಽಧ್ವರೈಃ ।**
**ವ್ಯಾಖ್ಯಾಸ್ವಾಧ್ಯಾಯಸಂನ್ಯಾಸೈಃ ಪ್ರಾಪ್ನುಯಾದ್ಯತ್ನವಾನಪಿ ॥೯॥**

---

ಅವರು ಸ್ಥಾವರಗಳಾದರೂ ಮೋಕ್ಷವನ್ನು ಪಡೆಯುವರು. ಹೀಗಿರುವಾಗ ಸಂಬಂಧಿಗಳನ್ನು ಕುರಿತು ಹೇಳುವುದೇನಿದೆ? (ವೀರರಾಘವೀಯ)

ಪ್ರಯತ್ನಶೀಲರಾದ ದೊಡ್ಡ-ದೊಡ್ಡ ಸಾಧಕರು ಕೂಡ ಯೋಗ-ಸಾಂಖ್ಯ-ದಾನ-ವ್ರತ-ತಪಸ್ಸು-ಯಜ್ಞ-ಶ್ರುತಿಗಳ ವ್ಯಾಖ್ಯಾನ-ಸ್ವಾಧ್ಯಾಯ ಮತ್ತು ಸಂನ್ಯಾಸಗಳ ಮೂಲಕವಾಗಿ ನನ್ನನ್ನು ಪಡೆಯಲಾರದೇ ಹೋದರು. ಆದರೆ ಸತ್ಸಂಗದ ಮೂಲಕವಾಗಿ ನನ್ನ ಭಕ್ತರು ಅಂತಹ ನನ್ನನ್ನು ಬಹಳ ಸುಲಭವಾಗಿ ಪಡೆದುಕೊಂಡರು.

ಇದಕ್ಕೆ ಸಾದೃಶ್ಯವಾಗಿ ಗೋಪಿಯರ ಕಥೆಯನ್ನೇ ಹೇಳುವೆನು ; ಕೇಳು:

ಕಂಸನಿಂದ ಪ್ರೇರಿತನಾದ ಅಕ್ರೂರನು ಗೋಕುಲಕ್ಕೆ ಬಂದು ನನ್ನನ್ನು ಮತ್ತು ಬಲರಾಮನನ್ನು ಮಥುರಾಪಟ್ಟಣಕ್ಕೆ ಕರೆದುಕೊಂಡುಹೋದನು. ಗಾಢವಾದ ಪ್ರೀತಿಯಿಂದಾಗಿ ನನ್ನಲ್ಲಿಯೇ ಅನುರಕ್ತಚಿತ್ತರಾಗಿದ್ದ ಗೋಪಿಯರು ನನ್ನ ವಿರಹವೇದನೆಯಿಂದ ತೀವ್ರವಾದ ಮತ್ತು ದುಸ್ಸಹವಾದ ಮನೋವ್ಯಥೆಯುಳ್ಳವರಾದರು. ನನಗಿಂತ ಬೇರೆಯಾದ ಯಾವುದನ್ನೂ ಅವರು ಸುಖವೆಂದು ಭಾವಿಸಲಿಲ್ಲ. ವೃಂದಾವನದಲ್ಲಿ ಪ್ರಿಯತಮನಾದ ನನ್ನೊಡನೆ ಸಂಚರಿಸುತ್ತಾ ವಿಹರಿಸುತ್ತಿದ್ದ ಗೋಪಿಯರಿಗೆ ರಾತ್ರಿಯೆಂಬುದು ಕ್ಷಣದಂತೆ ಕಳೆದುಹೋಗುತ್ತಿದ್ದಿತು. ನಾನಿಲ್ಲದಿದ್ದ ಅವರಿಗೆ ಅದೇ ರಾತ್ರಿಗಳೇ ಕಲ್ಪಸಮಾನವಾದುವು. ಎಷ್ಟು ಹೊತ್ತಾದರೂ ರಾತ್ರಿಯು ಕಳೆಯಲೇ ಇಲ್ಲ ವೆಂದು ಅವರಿಗೆ ಭಾಸವಾಗುತ್ತಿದ್ದಿತು.

**ತಾ ನಾವಿದನ್ಮಯ್ಯನುಷಙ್ಗಬದ್ಧ-**
**ಧಿಯಃ ಸ್ವಮಾತ್ಮಾನಮದಸ್ತಥೇದಮ್ ।**
**ಯಥಾ ಸಮಾಧೌ ಮುನಯೋಽಬ್ಧಿತೋಯೇ**
**ನದ್ಯಃ ಪ್ರವಿಷ್ಟಾ ಇವ ನಾಮರೂಪೇ ॥೧೨॥**

ಯಾವ ರೀತಿಯಲ್ಲಿ ದೊಡ್ಡ-ದೊಡ್ಡ ಋಷಿ-ಮುನಿಗಳು ಸಮಾಧಿಸ್ಥ ರಾದಾಗ ಪರಮಾತ್ಮನಲ್ಲಿಯೇ ಸೇರಿಹೋಗಿ ಹೊರಗಿನ ಮತ್ತು ಒಳಗಿನ ವ್ಯಾಪಾರವಿಲ್ಲದಾಗುವರೋ, ನದಿಗಳು ಸಮುದ್ರವನ್ನು ಸೇರಿ ಅವುಗಳ ನಾಮ ರೂಪಗಳನ್ನು ಕಳೆದುಕೊಳ್ಳುತ್ತವೆಯೋ–ಅದೇ ರೀತಿಯಲ್ಲಿ ಗೋಪಿಯರೂ ಕೂಡ ಪರಮಪ್ರೇಮಭಾವದಿಂದ ನನ್ನಲ್ಲಿಯೇ ತನ್ಮಯರಾಗಿ, ತಮ್ಮವ ರೆಂದು ಹೇಳಿಕೊಳ್ಳುವ ಪತಿ-ಪುತ್ರರನ್ನೂ, ಬಂಧು-ಬಳಗದವರನ್ನೂ, ಇಹ

ಲೋಕ-ಪರಲೋಕಗಳನ್ನೂ ಎಲ್ಲಕ್ಕಿಂತಲೂ ಮಿಗಿಲಾಗಿ ತಮ್ಮ ದೇಹವನ್ನೇ ಮರೆತು ನನ್ನನ್ನು ಧ್ಯಾನಿಸುತ್ತಿದ್ದರು.

**ಮತ್ಕಾಮಾ ರಮಣಂ ಜಾರಮಸ್ವರೂಪವಿದೋಽಬಲಾಃ ।**
**ಬ್ರಹ್ಮ ಮಾಂ ಪರಮಂ ಪ್ರಾಪುಃ ಸಙ್ಗಾಚ್ಛತಸಹಸ್ರಶಃ ॥೧೩॥**

ನನ್ನನ್ನೇ ಕಾಮಿಸುತ್ತಿದ್ದ, ಅಬಲೆಯರಾಗಿದ್ದ ಆ ಗೋಪಿಯರಿಗೆ ನನ್ನ ಸಚ್ಚಿದಾನಂದಸ್ವರೂಪವು ತಿಳಿದಿರಲಿಲ್ಲ. ಅವರು ರತಿಸುಖವನ್ನು ಕೊಡುವ ಜಾರಪುರುಷನೆಂದೇ ನನ್ನನ್ನು ತಿಳಿದಿದ್ದರು. ಆದರೂ ಅವರು ನನ್ನಲ್ಲಿಟ್ಟಿದ್ದ ಪ್ರೇಮಭಾವವು ಅನ್ಯಾದೃಶವಾಗಿದ್ದಿತು. ಅಂತಹ ಅತ್ಯುತ್ಕಟವಾದ ಪ್ರೇಮ ಭಾವದಿಂದಲೂ ಸತ್ಸಂಗದಿಂದಲೂ ನೂರಾರು-ಸಾವಿರಾರು ಗೋಪಿಯರು ಪರಬ್ರಹ್ಮಸ್ವರೂಪನಾದ ನನ್ನನ್ನು ಸೇರಿಬಿಟ್ಟರು.

**ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಮ್ ।**
**ಪ್ರವೃತ್ತಂ ಚ ನಿವೃತ್ತಂ ಚ ಶ್ರೋತವ್ಯಂ ಶ್ರುತಮೇವ ಚ ॥೧೪॥**

ಆದುದರಿಂದ ವಿಧಿ-ನಿಷೇಧರೂಪವಾದ ಶಾಸ್ತ್ರಗಳನ್ನೂ, ಪ್ರವೃತ್ತಿ ಮಾರ್ಗ-ನಿವೃತ್ತಿಮಾರ್ಗಗಳನ್ನೂ, ಕೇಳಿರುವುದನ್ನೂ ಕೇಳಲಿರುವುದನ್ನೂ ಪರಿತ್ಯಜಿಸಿ, ಸಮಸ್ತಪ್ರಾಣಿಗಳಿಗೂ ಆತ್ಮಸ್ವರೂಪನಾಗಿರುವ, ಏಕಮೇವಾ ದ್ವಿತೀಯನಾದ ನನಗೆ ಶರಣಾಗತನಾಗು. ಅನನ್ಯಭಾವದಿಂದ ನೀನು ಶರಣಾಗತನಾದರೆ ನಿನಗೆ ಸಂಸಾರದ ಭೀತಿಯಿರುವುದಿಲ್ಲ."

ಉದ್ಧವನು ಹೇಳುತ್ತಾನೆ :

**ಸಂಶಯಃ ಶೃಣ್ವತೋ ವಾಚಂ ತವ ಯೋಗೇಶ್ವರೇಶ್ವರ ।**
**ನ ನಿವರ್ತತ ಆತ್ಮಸ್ಥೋ ಯೇನ ಭ್ರಾಮ್ಯತಿ ಮೇ ಮನಃ ॥೧೬॥**

"ಯೋಗೇಶ್ವರೇಶ್ವರನೇ! ನಿನ್ನ ಮಾತನ್ನು ಕೇಳುತ್ತಿದ್ದಂತೆಲ್ಲಾ ನನ್ನ ಹೃದ್ಗತವಾಗಿರುವ ಸಂಶಯದ ನಿವಾರಣೆಯಾಗುತ್ತಲೇ ಇಲ್ಲ. ಇದರಿಂದಾಗಿ ನನ್ನ ಮನಸ್ಸು ಭ್ರಮಿಸುತ್ತಿದೆ."

ಭಗವಂತನು ಉತ್ತರಿಸುತ್ತಾನೆ :

**ಸ ಏಷ ಜೀವೋ ವಿವರಪ್ರಸೂತಿಃ**
**ಪ್ರಾಣೇನ ಘೋಷೇಣ ಗುಹಾಂ ಪ್ರವಿಷ್ಟಃ ।**

ಮನೋಮಯಂ ಸೂಕ್ಷ್ಮಮುಪೇತ್ಯ ರೂಪಂ
ಮಾತ್ರಾ ಸ್ವರೋ ವರ್ಣ ಇತಿ ಸ್ಥವಿಷ್ಠಃ ॥೧೭॥

“ಉದ್ಧವ! ಯಾವ ಪರಮಾತ್ಮನು ಪರೋಕ್ಷರೂಪದಲ್ಲಿ ವರ್ಣಿಸಲ್ಪಡುವನೋ ಅವನು ನಿಶ್ಚಯವಾಗಿಯೂ ಪ್ರತ್ಯಕ್ಷನೇ ಆಗಿದ್ದಾನೆ. ಏಕೆಂದರೆ: ಅವನೇ ನಿಖಿಲವಸ್ತುಗಳಿಗೂ ಸತ್ತಾಸ್ಫೂರ್ತಿದಾಯಕನೂ ಜೀವನದಾನಿಯೂ ಆಗಿರುತ್ತಾನೆ. ಮೊದಲು ಅವನು ಅನಾಹತನಾದಸ್ವರೂಪನಾಗಿ ಪರಾವಾಣೀ ಎಂಬ ಹೆಸರಿನ ಪ್ರಾಣದೊಡನೆ ಮೂಲಾಧಾರಚಕ್ರದಲ್ಲಿ ಪ್ರವೇಶಿಸುತ್ತಾನೆ. ಬಳಿಕ ಮಣಿಪೂರಕಚಕ್ರರೂಪವಾಗಿರುವ ನಾಭಿಸ್ಥಾನಕ್ಕೆ ಬಂದು ಪಶ್ಯಂತೀವಾಣಿಯ ಮನೋಮಯಸೂಕ್ಷ್ಮರೂಪವನ್ನು ಧರಿಸುತ್ತಾನೆ. ಅನಂತರ ಕಂಠಪ್ರದೇಶದಲ್ಲಿರುವ ವಿಶುದ್ಧಿಯೆಂಬ ಚಕ್ರವನ್ನು ಪ್ರವೇಶಿಸಿ ಅಲ್ಲಿ ಮಧ್ಯಮಾವಾಣಿಯ ರೂಪದಲ್ಲಿ ಅಭಿವ್ಯಕ್ತನಾಗುತ್ತಾನೆ. ಪುನಃ ಅನುಕ್ರಮವಾಗಿ ಮುಖದಲ್ಲಿ ಪ್ರಕಟವಾಗಿ ಹ್ರಸ್ವದೀರ್ಘಾದಿ ಮಾತ್ರಾರೂಪನಾಗಿಯೂ ಉದಾತ್ತನುದಾತ್ತಾದಿಸ್ವರರೂಪನಾಗಿಯೂ ಅಕಾರಾದಿ ವರ್ಣರೂಪ ನಾಗಿಯೂ ಸ್ಥೂಲವೈಖರೀವಾಣಿಯ ರೂಪವನ್ನು ಗ್ರಹಣ ಮಾಡುತ್ತಾನೆ.*

ಯಥಾನಲಃ ಖೇಽನಿಲಬನ್ಧುರೂಷ್ಮಾ
ಬಲೇನ ದಾರುಣ್ಯಧಿಮಥ್ಯ ಮಾನಃ ।
ಅಣುಃ ಪ್ರಜಾತೋ ಹವಿಷಾ ಸಮಿಧ್ಯತೇ
ತಥೈವ ಮೇ ವ್ಯಕ್ತಿರಿಯಂ ಹಿ ವಾಣೀ ॥೧೮॥

---

* ವಾಕ್ಕುಗಳನ್ನು ಕುರಿತು ಶ್ರುತಿಯು ಹೀಗೆ ಹೇಳುತ್ತದೆ :

1) ಚತ್ವಾರಿ ವಾಕ್ಪರಿಮಿತಾ ಪದಾನಿ । ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ । ಗುಹಾ ತ್ರೀಣಿ ನಿಹಿತಾ ನೇಙ್ಗಯನ್ತಿ । ತುರೀಯಂ ವಾಚೋ ಮನುಷ್ಯಾ ವದನ್ತಿ ॥

ವಾಕ್ಕಿಗೆ ಪರಾ, ಪಶ್ಯನ್ತೀ, ಮಧ್ಯಮಾ, ವೈಖರೀ–ಎಂಬ ನಾಲ್ಕು ಸ್ವರೂಪಗಳುಂಟು. ಅವುಗಳಲ್ಲಿ ಪರಾ, ಪಶ್ಯಂತೀ ಮಧ್ಯಮಾ–ಎಂಬ ಮೂರು ರೂಪಗಳು ಗುಹೆಯೆಂದು ಕರೆಯಲ್ಪಡುವ ಮೂಲಾಧಾರ, ನಾಭಿ, ಹೃದಯಗಳೆಂಬ ಸ್ಥಾನಗಳಲ್ಲಿದ್ದುಕೊಂಡು ತಮ್ಮ ಸ್ವರೂಪವನ್ನು ಹೊರಪಡಿಸುವುದಿಲ್ಲ. ನಾಲ್ಕನೆಯದಾದ ವೈಖರೀರೂಪವನ್ನು ಮನುಷ್ಯರು ಉಚ್ಚರಿಸಬಲ್ಲರೇ ಹೊರತು ಅವುಗಳ ತತ್ತ್ವವನ್ನರಿಯರು.

ಅಗ್ನಿಯು ಆಕಾಶದಲ್ಲಿ ಊಷ್ಮ ಅಥವಾ ವಿದ್ಯುತ್ತಿನ ರೂಪದಲ್ಲಿ ಅವ್ಯಕ್ತವಾಗಿರುತ್ತದೆ. ಬಲಪೂರ್ವಕವಾಗಿ ಕಡೆಗೋಲಿನಿಂದ ಅರಣಿಯನ್ನು ಕಡೆದಾಗ ಸಣ್ಣ ಸಣ್ಣ ಕಿಡಿಗಳ ರೂಪದಲ್ಲಿ ಪ್ರಕಟವಾಗುತ್ತದೆ. ಹಾಗೆ ಸೂಕ್ಷ್ಮವಾಗಿ ಪ್ರಕಟವಾದ ಕಿಡಿಗಳಿಗೆ ಆಹುತಿಯನ್ನು ಹಾಕಿದರೆ ಭಗ್ಗನೆ ಹೊತ್ತಿಕೊಂಡು ಅಗ್ನಿಯು ಪ್ರಚಂಡವಾದ ರೂಪವನ್ನೇ ಧರಿಸುತ್ತದೆ. ಹಾಗೆಯೇ ನನ್ನ ಶಬ್ದಬ್ರಹ್ಮಸ್ವರೂಪದವಾಣಿಯೂ ಕ್ರಮವಾಗಿ ಪರಾ, ಪಶ್ಯಂತೀ, ಮಧ್ಯಮಾ, ವೈಖರೀರೂಪದಿಂದ ಪ್ರಕಟಗೊಳ್ಳುತ್ತದೆ.

**ಏವಂ ಗದಿಃ ಕರ್ಮ ಗತಿರ್ವಿಸರ್ಗೋ**
**ಘ್ರಾಣೋ ರಸೋ ದೃಕ್ಸ್ಪರ್ಶಃ ಶ್ರುತಿಶ್ಚ ।**
**ಸಙ್ಕಲ್ಪವಿಜ್ಞಾನಮಥಾಭಿಮಾನಃ**
**ಸೂತ್ರಂ ರಜಃಸತ್ತ್ವತಮೋವಿಕಾರಃ ॥೧೯॥**

ಹೀಗೆ ನನ್ನಿಂದ ವಾಣಿಯು ಅಭಿವ್ಯಕ್ತವಾದಂತೆ ಮಾತನಾಡುವುದು, ಕೈಯಿಂದ ಕೆಲಸಮಾಡುವುದು, ಕಾಲಿಂದ ನಡೆಯುವುದು, ಪಾಯೂಪಸ್ಥ ಗಳಿಂದ ಮಲಮೂತ್ರಗಳನ್ನು ವಿಸರ್ಜಿಸುವುದು, ಮೂಗಿನಿಂದ ಮೂಸು ವುದು, ನಾಲಿಗೆಯಿಂದ ರಸವನ್ನು ಆಸ್ವಾದಿಸುವುದು, ಕಣ್ಣುಗಳಿಂದ ನೋಡು ವುದು, ಕಿವಿಗಳಿಂದ ಕೇಳುವುದು, ಮನಸ್ಸಿನಿಂದ ಸಂಕಲ್ಪಿಸುವುದು, ಬುದ್ಧಿ

---

2) ಯಾ ಸಾ ಮಿತ್ರಾವರುಣ ಸದನಾದುಚ್ಚರನ್ತೀ ತ್ರಿಷಷ್ಟಿಂ ವರ್ಣಾನನ್ತಃ ಪ್ರಕಟ ಕರಣೈಃ ಪ್ರಾಣಸಙ್ಗಾತ್ಪ್ರಸೂತೇ । ತಾಂ ಪಶ್ಯನ್ತೀಂ ಪ್ರಥಮಮುದಿತಾಂ ಮಧ್ಯಮಾಂ ಬುದ್ಧಿಸಂಸ್ಥಾಂ ವಾಚಂ ವಕ್ತ್ರೇಕರಣ ವಿಶದಾಂ ವೈಖರೀಂ ಚ ಪ್ರಪದ್ಯೇ ॥

ಮಿತ್ರಾವರುಣರೆಂಬ ಅಗ್ನಿಷ್ಟೋಮರಿಗೆ ನೆಲೆಯೆನಿಸಿ ಪ್ರಾಣಸಂಯೋಗವನ್ನು ಪಡೆದ ಮೂಲಾಧಾರಚಕ್ರದಿಂದ ಉದ್ಭವಿಸಿ ಮನೋಬುದ್ಧಿಗಳಿಂದಲೂ ಬಹಿಃ ಪ್ರಕಟನಸಾಧನವಾದ ಬಹಿರಿಂದ್ರಿಯದಿಂದಲೂ ಅರುವತ್ತು ಮೂರು ವರ್ಣಗಳನ್ನು ಸೃಷ್ಟಿಸುವ ವಾಕ್ಕಿನ ಪ್ರಥಮರೂಪಕ್ಕೆ 'ಪರಾ' ಎಂದೂ ಮನಸ್ಸಿನಲ್ಲಿರುವ ವಾಗ್ರೂಪಕ್ಕೆ ಪಶ್ಯಂತಿಯೆಂದೂ, ಉಚ್ಚರಿಸಬೇಕೆಂದು ಬುದ್ಧಿಯಲ್ಲಿ ತೋರುವ ವಾಗ್ರೂಪಕ್ಕೆ ಮಧ್ಯಮೆಯೆಂದೂ ಹೆಸರು. ಸ್ಥಾನಪ್ರಯತ್ನಗಳಿಂದ ನಿರ್ಮಲವಾದುದೇ ವೈಖರಿಯು.

ಯಿಂದ ಜ್ಞಾನ-ವಿಜ್ಞಾನಗಳನ್ನು ತಿಳಿಯುವುದು, ಅಹಂಕಾರದಿಂದ ಅಭಿಮಾನಪಡುವುದು, ಪ್ರಧಾನಕಾರ್ಯವಾದ ಮಹತ್ತತ್ತ್ವ, ತಮೋಗುಣ ರೂಪವಾದ ಇಂದ್ರಿಯಗಳು, ಸತ್ತ್ವಗುಣರೂಪರಾದ ದೇವತೆಗಳು, ತಮೋಗುಣ ರೂಪವಾದ ಪೃಥ್ವಿಯೇ ಮುಂತಾದ ಮಹಾಭೂತಗಳು ಮುಂತಾಗಿ ಜಗತ್ತೆಲ್ಲವೂ ನನ್ನಿಂದ ಅಭಿವ್ಯಕ್ತವಾದ ರೂಪವೆಂದು ತಿಳಿ.

**ಅಯಂ ಹಿ ಜೀವಸ್ತ್ರಿವೃದಬ್ಜಯೋನಿ-**
**ರವ್ಯಕ್ತ ಏಕೋ ವಯಸಾ ಸ ಆದ್ಯಃ ।**
**ವಿಶ್ಲಿಷ್ಟಶಕ್ತಿರ್ಬಹುಧೇವ ಭಾತಿ**
**ಬೀಜಾನಿ ಯೋನಿಂ ಪ್ರತಿಪದ್ಯ ಯದ್ವತ್ ॥೨೦॥**

ಆತ್ಮರೂಪಿಯಾದ ಪರಮೇಶ್ವರನೇ ತ್ರಿಗುಣಾತ್ಮಕವಾದ ಬ್ರಹ್ಮಾಂಡ ಕಮಲದ ಕಾರಣನಾಗಿದ್ದಾನೆ. ಆದಿಪುರುಷನಾದ ಇವನು ಹಿಂದೆ ಅವ್ಯಕ್ತನಾಗಿದ್ದನು. ಕ್ಷೇತ್ರದಲ್ಲಿ ಬಿತ್ತಿದಬೀಜವು ಸಸಿಯಾಗಿ-ಗಿಡವಾಗಿ-ಮರವಾಗಿ-ಫಲ-ಪುಷ್ಪವೇ ಮೊದಲಾದ ಅನೇಕರೂಪಗಳನ್ನು ಧಾರಣೆಮಾಡಿ ಬಹು ರೂಪವಾಗುವಂತೆ ಆದಿಪುರುಷನು ಮಾಯಾಶಕ್ತಿವಿಶಿಷ್ಟನಾಗಿ ವಿಭಜಿಸುವುದರ ಮೂಲಕ ಒಬ್ಬನೇ ಬಹುರೂಪಗಳನ್ನು ಪಡೆದಿರುವಂತೆ ಕಾಣಿಸಿಕೊಳ್ಳುತ್ತಾನೆ.

**ಯಸ್ಮಿನ್ನಿದಂ ಪ್ರೋತಮಶೇಷಮೋತಂ**
**ಪಟೋ ಯಥಾ ತನ್ತುವಿತಾನಸಂಸ್ಥಃ ।**
**ಯ ಏಷ ಸಂಸಾರತರುಃ ಪುರಾಣಃ**
**ಕರ್ಮಾತ್ಮಕಃ ಪುಷ್ಪಫಲೇ ಪ್ರಸೂತೇ ॥೨೧॥**

ನೂಲಿನಿಂದ ನೇಯ್ದ ವಸ್ತ್ರವು ಉದ್ದವಾದ ಎಳೆಗಳ ರೂಪದಿಂದ ಹಾಸಾಗಿಯೂ ಅಡ್ಡವಾದ ಎಳೆಗಳ ರೂಪದಿಂದ ಹೊಕ್ಕಾಗಿಯೂ ಇರುವಂತೆ ಈ ಸಮಸ್ತಜಗತ್ತು ಪರಮಾತ್ಮನಲ್ಲಿ ಹಾಸು-ಹೊಕ್ಕಾಗಿ ಹೆಣೆದುಕೊಂಡಿದೆ. ನೂಲಿಲ್ಲದೆ ವಸ್ತ್ರಕ್ಕೆ ಅಸ್ತಿತ್ವವಿಲ್ಲ. ಆದರೆ ವಸ್ತ್ರವಿಲ್ಲದೆ ನೂಲಿಗೆ ಅಸ್ತಿತ್ವವಿದೆ. ಅದೇ ರೀತಿಯಲ್ಲಿ ಪರಮಾತ್ಮನಿಲ್ಲದೆ ಜಗತ್ತಿಗೆ ಅಸ್ತಿತ್ವವಿಲ್ಲ. ಜಗತ್ತಿಲ್ಲದೆ ಪರಮಾತ್ಮನಿಗೆ ಅಸ್ತಿತ್ವವಿದೆ. ಈ ಜಗತ್ತು ಪರಮಾತ್ಮನ ಪ್ರಕಟ ಸ್ವರೂಪವೇ ಆಗಿದೆ. ಈ ಸಂಸಾರವೃಕ್ಷವು ಅನಾದಿಯೂ ಪ್ರವಾಹರೂಪದಿಂದ

ನಿತ್ಯವೂ ಆಗಿದೆ. ಕರ್ಮದ ಪರಂಪರೆಯೇ ಇದರ ಸ್ವರೂಪವಾಗಿದೆ. ಈ ಸಂಸಾರವೃಕ್ಷವು ಅಪೂರ್ವವಾದ ಸುಖ-ದುಃಖಗಳೆಂಬ ಹೂ-ಹಣ್ಣುಗಳನ್ನು ಬಿಡುತ್ತದೆ.

**ದ್ವೇ ಅಸ್ಯ ಬೀಜೇ ಶತಮೂಲಸ್ತ್ರಿನಾಲಃ**
**ಪಞ್ಚಸ್ಕನ್ಧಃ ಪಞ್ಚರಸಪ್ರಸೂತಿಃ ।**
**ದಶೈಕಶಾಖೋ ದ್ವಿಸುಪರ್ಣನೀಡ-**
**ಸ್ತ್ರಿ ವಲ್ಕಲೋ ದ್ವಿಫಲೋಽರ್ಕಂ ಪ್ರವಿಷ್ಟಃ ॥೨೨॥**

ಈ ಸಂಸಾರವೃಕ್ಷಕ್ಕೆ ಪಾಪ-ಪುಣ್ಯಗಳೆಂಬ ಎರಡು ಬೀಜಗಳಿವೆ. ಕರ್ಮವಾಸನಾರೂಪವಾದ ನೂರಾರು ಬೇರುಗಳು ಈ ಸಂಸಾರವೃಕ್ಷಕ್ಕಿವೆ. ಸತ್ತ್ವ ರಜಸ್ತಮೋಗುಣಗಳು, ಸಂಸಾರವೃಕ್ಷದ ಬುಡದ ಮೂರು ಕವಲು ಗಳು. ಆಕಾಶವೇ ಮೊದಲಾದ ಪಂಚಭೂತಗಳು ಐದು ಕಿರುಕವಲುಗಳು. ಶಬ್ದವೇ ಮೊದಲಾದ ಐದು ವಿಷಯಗಳೇ ಸಂಸಾರವೃಕ್ಷದ ರಸವಾಗಿದೆ. ಹನ್ನೊಂದು ಇಂದ್ರಿಯಗಳು ಈ ವೃಕ್ಷದ ಕಿರುಗೊಂಬೆಗಳಾಗಿವೆ. ಜೀವೇಶ್ವರರು ಎರಡು ಪಕ್ಷಿಗಳ ರೂಪದಲ್ಲಿದ್ದು ಈ ವೃಕ್ಷದಲ್ಲಿ ಗೂಡುಕಟ್ಟಿಕೊಂಡು ವಾಸಮಾಡುತ್ತಿದ್ದಾರೆ. ಈ ಸಂಸಾರವೃಕ್ಷಕ್ಕೆ ವಾತ-ಪಿತ್ತ-ಕಫಗಳೆಂಬ ಮುಬ್ಬಗೆಯಾದ ತೊಗಟೆಗಳಿವೆ. ಈ ವೃಕ್ಷದಲ್ಲಿ ಸುಖ-ದುಃಖಗಳೆಂಬ ಎರಡು ವಿಧವಾದ ಫಲಗಳು ಬಿಡುತ್ತವೆ. ಇದನ್ನು ಭೇದಿಸಲು ತಿಳಿದಿರುವ ಮುಕ್ತರು ಪುನಃ ಸಂಸಾರಚಕ್ರದಲ್ಲಿ ಸಿಕ್ಕಿಹಾಕಿಕೊಳ್ಳುವುದಿಲ್ಲ.

**ಅದನ್ತಿ ಚೈಕಂ ಫಲಮಸ್ಯ ಗೃಧ್ರಾ**
**ಗ್ರಾಮೇಚರಾ ಏಕಮರಣ್ಯವಾಸಾಃ ।**
**ಹಂಸಾ ಯ ಏಕಂ ಬಹುರೂಪಮಿಜ್ಯೈ ೃ-**
**ರ್ಮಾಯಾಮಯಂ ವೇದ ಸ ವೇದ ವೇದಮ್ ॥೨೩॥**

ಈ ಸಂಸಾರವೃಕ್ಷದ ದುಃಖವೆಂಬ ಹಣ್ಣನ್ನು ಗ್ರಾಮ್ಯಸುಖಗಳಲ್ಲಿಯೇ ಆಸಕ್ತರಾಗಿರುವ ಮನುಷ್ಯರೂಪದಲ್ಲಿರುವ ರಣಹದ್ದುಗಳು ತಿನ್ನುತ್ತವೆ. ಮತ್ತೊಂದು ಸುಖರೂಪವಾದ ಹಣ್ಣನ್ನು ಅರಣ್ಯವಾಸಿಗಳಾದ ಪರಮಹಂಸ ರೂಪದ ಹಂಸಪಕ್ಷಿಗಳು ತಿನ್ನುತ್ತವೆ. ಪ್ರಿಯ ಉದ್ಧವನೇ! ವಾಸ್ತವವಾಗಿ ನಾನೊಬ್ಬನೇ ಆಗಿದ್ದೇನೆ. ಅನೇಕ ಪ್ರಕಾರವಾದ ಜಗತ್ತಿನಲ್ಲಿ ಕಾಣುವ ಈ

ರೂಪಗಳೆಲ್ಲವೂ ನನ್ನ ಮಾಯಮಯವಾದ ರೂಪಗಳಾಗಿವೆ. ಯಾವನು ಈ ರಹಸ್ಯವನ್ನು ಗುರುಗಳ ಮೂಲಕವಾಗಿ ಚೆನ್ನಾಗಿ ತಿಳಿಯುತ್ತಾನೆಯೋ ಅವನೇ ವೇದಗಳ ರಹಸ್ಯವನ್ನು ತಿಳಿದವನಾಗುತ್ತಾನೆ.

**ಏವಂ ಗುರೂಪಾಸನಯೈಕಭಕ್ತ್ಯಾ**
**ವಿದ್ಯಾಕುಠಾರೇಣ ಶಿತೇನ ಧೀರಃ ।**
**ವಿವೃಶ್ಚ್ಯ ಜೀವಾಶಯಮಪ್ರಮತ್ತಃ**
**ಸಮ್ಪದ್ಯ ಚಾತ್ಮಾನಮಥ ತ್ಯಜಾಸ್ತ್ರಮ್ ॥೨೪॥**

ಉದ್ಧವ! ನೀನೂ ಕೂಡ ಧೀರನಾಗಿ, ಅಪ್ರಮತ್ತನಾಗಿ ಗುರು ಶುಶ್ರೂಷೆಯಿಂದಲೂ ಏಕಾಂತಭಕ್ತಿಯಿಂದಲೂ ಹರಿತವಾದ ತತ್ತ್ವಜ್ಞಾನ ವೆಂಬ ಕತ್ತಿಯಿಂದ ಜೀವೋಪಾಧಿಯಾದ ಲಿಂಗಶರೀರವನ್ನು ಕತ್ತರಿಸಿ, ಪರ ಮಾತ್ಮನನ್ನು ಹೊಂದಿ, ಕಡೆಯದಾಗಿ ಜ್ಞಾನಸಾಧನವನ್ನೂ ತ್ಯಜಿಸಿಬಿಡು." (ಅಟ್ಟಕ್ಕೆ ಹತ್ತಿದ ಮೇಲೆ ಏಣಿಯಿಂದೇನು ಪ್ರಯೋಜನ? )

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಏಕಾದಶಸ್ಕಂಧದ ೧೨ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೧೩ನೆಯ ಅಧ್ಯಾಯ

## ಹಂಸರೂಪದಲ್ಲಿ ಸನಕಾದಿಗಳಿಗೆ ಮಾಡಿದ ಉಪದೇಶದ ವರ್ಣನೆ

ಭಗವಂತನು ಹೇಳುತ್ತಾನೆ :

**ಸತ್ತ್ವಂ ರಜಸ್ತಮ ಇತಿ ಗುಣಾ ಬುದ್ಧೇರ್ನ ಚಾತ್ಮನಃ ।**
**ಸತ್ತ್ವೇನಾನ್ಯತಮೌ ಹನ್ಯಾತ್ಸತ್ತ್ವಂ ಸತ್ತ್ವೇನ ಚೈವ ಹಿ ॥೧॥**

"ಉದ್ಧವ! ಸತ್ತ್ವರಜಸ್ತಮೋಗುಣಗಳು ಪ್ರಕೃತಿಯ ಪರಿಣಾಮ ವಾದ ಬುದ್ಧಿಯ ಗುಣಗಳೇ ಹೊರತು ಆತ್ಮಧರ್ಮಗಳಲ್ಲ. ಆತ್ಮಧರ್ಮ ಗಳಾಗಿದ್ದರೆ ಅವುಗಳಿಗೆ ನಿವೃತ್ತಿಯೇ ಇರುತ್ತಿರಲಿಲ್ಲ. ಈ ಮೂರು ಗುಣಗಳಲ್ಲಿ ಸತ್ತ್ವಗುಣವನ್ನು ಅನುಕ್ರಮವಾಗಿ ವೃದ್ಧಿಪಡಿಸಿಕೊಂಡು ರಜಸ್ತಮೋ ಗುಣಗಳನ್ನು ನಾಶಮಾಡಬೇಕು. ಉಳಿದುಕೊಳ್ಳುವ ಸತ್ಯ-ದಯೆ ಇತ್ಯಾದಿ

ರೂಪವಾದ ಸತ್ತ್ವಗುಣವನ್ನೂ ಕೂಡ ಉಪಶಾಂತಿರೂಪವಾದ ಶುದ್ಧಸತ್ತ್ವ ಗುಣದಿಂದ ಜಯಿಸಬೇಕು.

**ಸತ್ತ್ವಾದ್ಧರ್ಮೋ ಭವೇದ್ವೃದ್ಧಾತ್ಪುಂಸೋ ಮದ್ಭಕ್ತಿಲಕ್ಷಣಃ ।**
**ಸಾತ್ತ್ವಿಕೋಪಾಸಯಾ ಸತ್ತ್ವಂ ತತೋ ಧರ್ಮಃ ಪ್ರವರ್ತತೇ ॥೨॥**

ಸತ್ತ್ವಗುಣದ ವೃದ್ಧಿಯಾದಾಗ ಜೀವನಿಗೆ ನನ್ನ ಭಕ್ತಿರೂಪವಾದ ಸ್ವಧರ್ಮದ ಪ್ರಾಪ್ತಿಯಾಗುತ್ತದೆ. ನಿರಂತರವಾಗಿ ಸಾತ್ತ್ವಿಕಪದಾರ್ಥಗಳನ್ನೇ ಸೇವಿಸುವುದರಿಂದಲೂ ಸತ್ತ್ವಗುಣದ ವೃದ್ಧಿಯಾಗುತ್ತದೆ. ಬಳಿಕ ನನ್ನ ಭಕ್ತಿರೂಪವಾದ ಸ್ವಧರ್ಮದಲ್ಲಿ ಪ್ರವೃತ್ತಿಯುಂಟಾಗುತ್ತದೆ.

**ಧರ್ಮೋ ರಜಸ್ತಮೋ ಹನ್ಯಾತ್ಸತ್ತ್ವವೃದ್ಧಿರನುತ್ತಮಃ ।**
**ಆಶು ನಶ್ಯತಿ ತನ್ಮೂಲೋ ಹ್ಯಧರ್ಮ ಉಭಯೇ ಹತೇ ॥೩॥**

ಧರ್ಮದ ಪರಿಪಾಲನೆಯಿಂದ ವೃದ್ಧಿಯಾಗುವ ಸತ್ತ್ವಗುಣವು ಸರ್ವಶ್ರೇಷ್ಠವಾದುದು. ಹಾಗೆ ಧರ್ಮಾಚರಣೆಯಿಂದ ವೃದ್ಧಿಹೊಂದಿದ ಸತ್ತ್ವಗುಣವು ರಜಸ್ತಮೋಗುಣಗಳನ್ನು ನಾಶಗೊಳಿಸುತ್ತದೆ. ರಜಸ್ತಮೋ ಗುಣಗಳು ನಾಶವಾದರೆ ಈ ಗುಣಗಳಿಂದ ಉಂಟಾಗುವ ರಾಗ-ದ್ವೇಷಾದಿ ಮೂಲವಾದ ಅಧರ್ಮದ ನಾಶವೂ ಆಗುತ್ತದೆ.

**ಆಗಮೋಽಪಃ ಪ್ರಜಾ ದೇಶಃ ಕಾಲಃ ಕರ್ಮ ಚ ಜನ್ಮ ಚ ।**
**ಧ್ಯಾನಂ ಮನ್ತ್ರೋಽಥ ಸಂಸ್ಕಾರೋ ದಶೈತೇ ಗುಣಹೇತವಃ ॥೪॥**

ಶಾಸ್ತ್ರ, ಜಲ, ಪ್ರಜೆ, ದೇಶ, ಸಮಯ, ಕರ್ಮ, ಜನ್ಮ, ಧ್ಯಾನ, ಮಂತ್ರ ಮತ್ತು ಸಂಸ್ಕಾರ–ಈ ಹತ್ತು ವಸ್ತುಗಳು ಸಾತ್ತ್ವಿಕನಿಗೆ ಸತ್ತ್ವಗುಣವನ್ನು ಹೆಚ್ಚಿಸುತ್ತವೆ. ರಾಜಸಿಕನಿಗೆ ರಜೋಗುಣವನ್ನು ಹೆಚ್ಚಿಸುತ್ತವೆ. ತಾಮಸಿಕನಿಗೆ ತಮೋಗುಣವನ್ನು ಹೆಚ್ಚಿಸುತ್ತವೆ.

**ತತ್ತತ್ ಸಾತ್ತ್ವಿಕಮೇವೈಷಾಂ ಯದ್ಯದ್ವೃದ್ಧಾಃ ಪ್ರಚಕ್ಷತೇ ।**
**ನಿನ್ದನ್ತಿ ತಾಮಸಂ ತತ್ತದ್ರಾಜಸಂ ತದುಪೇಕ್ಷಿತಮ್ ॥೫॥**

ಶಾಸ್ತ್ರಜ್ಞರಾದ ಶಿಷ್ಟರು ಲೋಕದಲ್ಲಿ ಯಾವ ಯಾವ ವಸ್ತುಗಳನ್ನು ಪ್ರಶಂಸಿಸುವರೋ ಅವನ್ನು ಸಾತ್ತ್ವಿಕಪದಾರ್ಥಗಳೆಂದು ತಿಳಿಯಬೇಕು. ಶಾಸ್ತ್ರಜ್ಞರು ನಿಂದಿಸುವ ಪದಾರ್ಥಗಳನ್ನು ತಾಮಸಗುಣದ್ದೆಂದು ತಿಳಿಯ

ಬೇಕು. ಸ್ತುತಿಸದೆಯೂ ನಿಂದಿಸದೆಯೂ ಯಾವ ಪದಾರ್ಥವನ್ನು ಉದಾಸೀನಮಾಡುವರೋ ಅದನ್ನು ರಾಜಸಪದಾರ್ಥವೆಂದು ತಿಳಿಯಬೇಕು.

**ಸಾತ್ತ್ವಿಕಾನ್ಯೇವ ಸೇವೇತ ಪುಮಾನ್ ಸತ್ತ್ವವಿವೃದ್ಧಯೇ ।**
**ತತೋ ಧರ್ಮಸ್ತತೋ ಜ್ಞಾನಂ ಯಾವತ್ ಸ್ಮೃತಿರಪೋಹನಮ್ ॥**

ಸಾತ್ತ್ವಿಕಪದಾರ್ಥಗಳನ್ನೇ ಸೇವಿಸಬೇಕು. ಇಂತಹ ಸಾತ್ತ್ವಿಕ ವಸ್ತುಗಳ ಸೇವನೆಯಿಂದ ಸತ್ತ್ವವೃದ್ಧಿಯೂ, ಭಗವದ್ಭಕ್ತಿರೂಪವಾದ ಧರ್ಮವೂ ಅದರಿಂದ ಆತ್ಮಸಾಕ್ಷಾತ್ಕಾರವೂ, ಸ್ಥೂಲ-ಸೂಕ್ಷ್ಮಶರೀರಗಳಿಗೆ ಕಾರಣವಾದ ಗುಣಗಳ ನಾಶವೂ ಉಂಟಾಗುವುದು.*

**ವೇಣುಸಙ್ಘರ್ಷಜೋ ವಹ್ನಿರ್ದಗ್ಧ್ವಾ ಶಾಮ್ಯತಿ ತದ್ವನಮ್ ।**
**ಏವಂ ಗುಣವ್ಯತ್ಯಯಜೋ ದೇಹಃ ಶಾಮ್ಯತಿ ತತ್ಕ್ರಿಯಃ ॥೭॥**

ಕಾಡಿನಲ್ಲಿ ಬಿದಿರುಮೆಳೆಗಳ ಪರಸ್ಪರ ತಿಕ್ಕಾಟದಿಂದ ಹುಟ್ಟಿದ ಬೆಂಕಿಯು ಬಿದಿರುಮೆಳೆಗಳನ್ನೂ ಸುತ್ತಮುತ್ತಲಿನ ಕಾಡನ್ನೂ ಭಸ್ಮಮಾಡಿ ಹೇಗೆ ಶಾಂತವಾಗುವುದೋ–ಹಾಗೆಯೇ ಮನುಷ್ಯನ ದೇಹದಲ್ಲಿ ವಿಚಾರ ಮಂಥನದಿಂದ ಹುಟ್ಟಿದ ಜ್ಞಾನಾಗ್ನಿಯು ದೇಹಕ್ಕೆ ಕಾರಣವಾದ ಮೂರು ಗುಣಗಳನ್ನೂ ಮತ್ತು ದೇಹವನ್ನೂ ಭಸ್ಮಮಾಡಿ ತಾನೂ ಶಾಂತವಾಗುತ್ತದೆ."

ಉದ್ಧವನು ಹೇಳುತ್ತಾನೆ :

**ವಿದನ್ತಿ ಮರ್ತ್ಯಾಃ ಪ್ರಾಯೇಣ ವಿಷಯಾನ್ ಪದಮಾಪದಾಮ್ ।**
**ತಥಾಪಿ ಭುಞ್ಜತೇ ಕೃಷ್ಣ ತತ್ಕಥಂ ಶ್ವಖರಾಜವತ್ ॥೮॥**

---

* ಹತ್ತು ಪದಾರ್ಥಗಳಲ್ಲಿ ಸಾತ್ತ್ವಿಕ-ರಾಜಸ-ತಾಮಸಗುಣಗಳ ವಿವರಣೆ :

1) ಶಾಸ್ತ್ರಗಳು : ನಿವೃತ್ತಿಪರವಾದ ವೇದಾಂತಾದಿ ಶಾಸ್ತ್ರಗಳು ಸಾತ್ತ್ವಿಕ ಶಾಸ್ತ್ರಗಳು. ಪ್ರವೃತ್ತಿಮಾರ್ಗವನ್ನು ವಿಧಿಸುವ ಶಾಸ್ತ್ರಗಳು ರಾಜಸಶಾಸ್ತ್ರಗಳು. ವಾಮಮಾರ್ಗವನ್ನು ವಿಧಿಸುವ ಶಾಸ್ತ್ರಗಳು ತಾಮಸಮಾರ್ಗಗಳು. 2) ಜಲ ಗಂಗಾದಿ ತೀರ್ಥಗಳು–ಸಾತ್ತ್ವಿಕತೀರ್ಥಗಳು. ಗಂಧೋದಕವೇ ಮುಂತಾದುವು ರಾಜಸಿಕ ಜಲಗಳು. ಮದ್ಯ–ಮುಂತಾದುವು ತಾಮಸಿಕ ಜಲಗಳು. 3) ಪ್ರಜೆಗಳು ಸಾತ್ತ್ವಿಕಗುಣಸಂಪನ್ನರಾದ ಸಂನ್ಯಾಸಿಗಳು, ಸಾಧುಸಂತರು ಸಾತ್ತ್ವಿಕಪ್ರಜೆಗಳು. ಪ್ರವೃತ್ತಿಯ ಮಾರ್ಗಾನುಯಾಯಿಗಳಾದ ಗೃಹಸ್ಥರು ರಾಜಸಪ್ರಜೆಗಳು. ದುರಾಚಾರಿಗಳಾದ ಜನರು ತಾಮಸರು. 4) ಪ್ರದೇಶ : ಸಾತ್ತ್ವಿಕರಿಗೆ ಪ್ರಿಯ

"ಭಗವಂತ! ವಿಷಯೋಪಭೋಗಗಳು ಆಪತ್ತಿಗೆ ತೌರುಮನೆಯಾಗಿದೆಯೆಂದು ಪ್ರಾಯಶಃ ಎಲ್ಲ ಮನುಷ್ಯರೂ ತಿಳಿದಿರುತ್ತಾರೆ. ಆದರೂ ಕೂಡ ನಾಯಿ, ಕತ್ತೆ ಮತ್ತು ಮೇಕೆಗಳಂತೆ ವಿಷಯೋಪಭೋಗಗಳನ್ನು ಸೇವಿಸುತ್ತಲೇ ಇರುವರಲ್ಲವೇ? ಇದಕ್ಕೆ ಕಾರಣವೇನಿರಬಹುದು?"

ಭಗವಂತನು ಹೇಳುತ್ತಾನೆ :

**ಅಹಮಿತ್ಯನ್ಯಥಾಬುದ್ಧಿಃ ಪ್ರಮತ್ತಸ್ಯ ಯಥಾ ಹೃದಿ ।**
**ಉತ್ಸರ್ಪತಿ ರಜೋ ಘೋರಂ ತತೋ ವೈಕಾರಿಕಂ ಮನಃ ॥೯॥**

"ಉದ್ಧವ! ವಿವೇಕವಿಲ್ಲದವನಿಗೆ ದೇಹವೇ ತಾನೆಂಬ ಮಿಥ್ಯಾ ಬುದ್ಧಿಯು ಮನಸ್ಸಿನಲ್ಲಿ ಯಾವಾಗ ಅಂಕುರವಾಗುವುದೋ ಆಗ ಮನಸ್ಸು ಸತ್ತ್ವಗುಣಪ್ರಧಾನವಾಗಿದ್ದರೂ ಅದನ್ನು ಘೋರವಾದ ರಜೋಗುಣವು ಆವರಿಸಿಕೊಳ್ಳುತ್ತದೆ.

**ರಜೋಯುಕ್ತಸ್ಯ ಮನಸಃ ಸಙ್ಕಲ್ಪಃ ಸವಿಕಲ್ಪಕಃ ।**
**ತತಃ ಕಾಮೋ ಗುಣಧ್ಯಾನಾದ್ದುಸ್ಸಹಃ ಸ್ಯಾದ್ಧಿ ದುರ್ಮತೇಃ ॥೧೦॥**

ರಜೋಗುಣಯುಕ್ತವಾದ ಮನಸ್ಸಿನಲ್ಲಿ ವಸ್ತುಸ್ಥಿತಿಗೆ ವಿರುದ್ಧವಾದ ಸಂಕಲ್ಪವು ಹುಟ್ಟಿಕೊಳ್ಳುತ್ತದೆ. ಬಳಿಕ ವಿಷಯೋಪಭೋಗಗಳ ಚಿಂತನೆ

---

ವಾದುದು ಏಕಾಂತಪ್ರದೇಶ. ರಾಜಸಿಗಳಿಗೆ ಪ್ರಿಯವಾದ ರಾಜಬೀದಿಗಳು. ತಾಮಸ ರಿಗೆ ಪ್ರಿಯವಾದ ಜೂಜುಕಟ್ಟೆಗಳು. 5) ಕಾಲ : ಸಾತ್ತ್ವಿಕರ ಧ್ಯಾನಾದಿಗಳಿಗೆ ಅನುಕೂಲವಾದ ಬ್ರಾಹ್ಮಮುಹೂರ್ತ. ರಾಜಸಿಗಳ ಕರ್ಮಾನುಷ್ಠಾನಕ್ಕೆ ಅನುಕೂಲವಾದ ತ್ರಿಸಂಧ್ಯೆಗಳು. ತಾಮಸಿಕರ ಕಾರ್ಯಗಳಿಗೆ ಅನುಕೂಲವಾದ ಅರ್ಧರಾತ್ರ. 6) ಭಜನೆ-ಧ್ಯಾನ– ಇತ್ಯಾದಿಗಳು ಸಾತ್ವಿಕ ಕರ್ಮಗಳು. ನಿತ್ಯನೈಮಿತ್ತಿಕಕರ್ಮಗಳು ; ಯಜ್ಞ-ಯಾದಾದಿಗಳು ರಾಜಸ ಕರ್ಮಗಳು. ಅಭಿಚಾರ-ಮಾಟ-ಮಂತ್ರ ತಾಮಸಕರ್ಮಗಳು. 7) ಸತ್ತ್ವ ಪ್ರಧಾನವಾದದ್ದು ಬ್ರಾಹ್ಮಣಜನ್ಮ. ಸಾತ್ತ್ವಿಕ-ರಾಜಸಗುಣಗಳಿಂದ ಕೂಡಿದ್ದು ಕ್ಷತ್ರಿಯ ಜನ್ಮ. ರಾಜಸ-ತಾಮಸಗಳಿಂದ ಕೂಡಿದ್ದು ವೈಶ್ಯಜನ್ಮ. ತಮೋಗುಣಪ್ರಧಾನವಾದುದು ಶೂದ್ರಜನ್ಮ. 8) ಧ್ಯಾನ : ಶ್ರೀಹರಿಯ ಧ್ಯಾನ (ಸಾತ್ತ್ವಿಕ), ದೇವತಾಂತರಗಳ ಧ್ಯಾನ (ರಾಜಸ), ಭೂತಪ್ರೇತಗಳ ಧ್ಯಾನ (ತಾಮಸ). 9) ಪ್ರಣವ ಮಂತ್ರ (ಸಾತ್ತ್ವಿಕ), ಕರ್ಮಾಂಗ ಮಂತ್ರಗಳು (ರಾಜಸ) ಆಭಿಚಾರಕ ಮಂತ್ರಗಳು (ತಾಮಸ). 10) ಸಂಸ್ಕಾರ : ಆತ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಚಿತ್ತಶುದ್ಧಿ (ಸಾತ್ತ್ವಿಕ), ಷೋಡಶಸಂಸ್ಕಾರಗಳು (ರಾಜಸ), ಸಂಸ್ಕಾರವಿಲ್ಲದೆಯೇ ಇರುವುದು (ತಾಮಸ).

ಯಿಂದ ಮನಸ್ಸು ಕಾಮಾಕ್ರಾಂತವಾಗುತ್ತದೆ. ದುಷ್ಟಬುದ್ಧಿಯವನಿಗೆ ಕಾಮದ ವೇಗವನ್ನು ತಡೆದುಕೊಳ್ಳಲು ದುಸ್ಸಾಧ್ಯವಾಗುತ್ತದೆ.

**ಕರೋತಿ ಕಾಮವಶಗಃ ಕರ್ಮಾಣ್ಯವಿಜಿತೇನ್ದ್ರಿಯಃ ।**
**ದುಃಖೋದರ್ಕಾಣಿ ಸಮ್ಪಶ್ಯನ್ ರಜೋವೇಗವಿಮೋಹಿತಃ ॥೧೧॥**

ಬಳಿಕ ಈ ಅಜ್ಞಾನಿಯು ಕಾಮವಶನಾಗಿ ಇಂದ್ರಿಯಗಳನ್ನು ಜಯಿಸಲಾಗದೆ ಅನೇಕಪ್ರಕಾರವಾದ ಕುತ್ಸಿತಕರ್ಮಗಳನ್ನು ಮಾಡಲು ತೊಡಗುತ್ತಾನೆ. ಈ ಕರ್ಮಗಳ ಅಂತಿಮಫಲವು ದುಃಖವೆಂದು ತಿಳಿದಿದ್ದರೂ ರಜೋಗುಣದ ವೇಗದಿಂದ ವಿಮೋಹಿತನಾದ ಅವನು ಆ ಕರ್ಮಗಳನ್ನು ಬಿಡಲಾಗದೆ ಪುನಃ ಪುನಃ ಮಾಡುತ್ತಲೇ ಇರುತ್ತಾನೆ.

**ರಜಸ್ತಮೋಭ್ಯಾಂ ಯದಪಿ ವಿದ್ವಾನ್ ವಿಕ್ಷಿಪ್ತಧೀಃ ಪುನಃ ।**
**ಅತನ್ದ್ರಿತೋ ಮನೋ ಯುಞ್ಜನ್ದೋಷದೃಷ್ಟಿರ್ನ ಸಜ್ಜತೇ ॥೧೨॥**

ವಿವೇಕಿಯಾದವನ ಸತ್ತ್ವಗುಣಪ್ರಧಾನವಾದ ಮನಸ್ಸುಕೂಡ ಕೆಲವು ವೇಳೆ ರಜಸ್ತಮೋಗುಣಗಳಿಂದ ಆವೃತವಾದರೂ ಅವನು ವಿಷಯಗಳಲ್ಲಿ ದೋಷದೃಷ್ಟಿಯುಳ್ಳವನಾಗಿರುವುದರಿಂದ, ಅತ್ಯಂತಜಾಗರೂಕನಾಗಿ ತನ್ನ ಮನಸ್ಸನ್ನು ರಜಸ್ತಮೋಗುಣಗಳಿಗೆ ಸಂಬಂಧಿಸಿದ ಕಾರ್ಯಗಳಿಂದ ಹಿಂದಕ್ಕೆ ಸೆಳೆದುಕೊಳ್ಳಲು ಪ್ರಯತ್ನಿಸುತ್ತಾನೆ. ಅನುಕ್ರಮವಾದ ಮತ್ತು ನಿರಂತರವಾದ ಸಾಧನೆಯಿಂದ ರಜಸ್ತಮೋಗುಣಗಳನ್ನು ದೂರೀಕರಿಸಿ ವಿಷಯೋಪಭೋಗಗಳಲ್ಲಿ ನಿರಾಸಕ್ತನಾಗುತ್ತಾನೆ.

**ಅಪ್ರಮತ್ತೋಽನುಯುಞ್ಜೀತ ಮನೋ ಮಯ್ಯರ್ಪಯಞ್ಛನೈಃ ।**
**ಅನಿರ್ವಿಣ್ಣೋ ಯಥಾಕಾಲಂ ಜಿತಶ್ವಾಸೋ ಜಿತಾಸನಃ ॥೧೩॥**

ಸಾಧಕನಾದವನು ಆಸನ-ಪ್ರಾಣವಾಯುಗಳನ್ನು ಜಯಿಸಿ ತನ್ನ ಶಕ್ತಿ ಮತ್ತು ಸಮಯಕ್ಕೆ ಅನುಸಾರವಾಗಿ ಅಪ್ರಮತ್ತನಾಗಿ ಮೆಲ್ಲ-ಮೆಲ್ಲನೆ ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಲು ಪ್ರಯತ್ನಿಸಬೇಕು. ಒಂದು ವೇಳೆ ಹಾಗೆ ಮಾಡುವುದು ಕಷ್ಟಸಾಧ್ಯವೆಂದು ಕಂಡು ಬಂದರೂ ಸ್ವಲ್ಪವಾದರೂ ಖೇದಗೊಳ್ಳಬಾರದು. ಇನ್ನೂ ಹೆಚ್ಚಿನ ಉತ್ಸಾಹದಿಂದ ಸಾಧನೆಯನ್ನು ಮುಂದುವರಿಸಬೇಕು.

**ಏತಾವಾನ್ ಯೋಗ ಆದಿಷ್ಟೋ ಮಚ್ಛಿಷ್ಯೈಃ ಸನಕಾದಿಭಿಃ।**
**ಸರ್ವತೋ ಮನ ಆಕೃಷ್ಯ ಮಯ್ಯದ್ಧಾಽವೇಶ್ಯತೇ ಯಥಾ ॥೧೪॥**

ಪ್ರಿಯಸಖನೇ! ನನ್ನ ಶಿಷ್ಯರಾದ ಸನಕಾದಿ ಮಹರ್ಷಿಗಳು ನನ್ನ ಪರಮಪದವನ್ನು ಸೇರಲು ಈ ಒಂದು ಉಪಾಯವನ್ನೇ ಆದೇಶಿಸಿದ್ದಾರೆ. ಸಾಧಕನಾದವನು ತನ್ನ ಮನಸ್ಸನ್ನು ಎಲ್ಲ ಕಡೆಗಳಿಂದಲೂ ಸೆಳೆದುತಂದು ನನ್ನಲ್ಲಿಯೇ ಪೂರ್ಣರೂಪದಿಂದ ನೆಲೆಗೊಳಿಸಬೇಕು."

ಉದ್ಧವನು ಪ್ರಶ್ನಿಸುತ್ತಾನೆ :

**ಯದಾ ತ್ವಂ ಸನಕಾದಿಭ್ಯೋ ಯೇನ ರೂಪೇಣ ಕೇಶವ ।**
**ಯೋಗಮಾದಿಷ್ಟವಾನೇತದ್ರೂಪಮಿಚ್ಛಾಮಿ ವೇದಿತುಮ್ ॥೧೫॥**

"ಭಗವಂತ! ನೀನು ಯಾವ ಸಮಯದಲ್ಲಿ ಯಾವ ರೂಪದಲ್ಲಿ ಸನಕನೇ ಮೊದಲಾದ ಮಹರ್ಷಿಗಳಿಗೆ ಯೋಗದ ಆದೇಶವನ್ನು ನೀಡಿದೆ? ಆ ನಿನ್ನ ದಿವ್ಯರೂಪವನ್ನು ನಾನು ತಿಳಿದುಕೊಳ್ಳಲು ಬಯಸಿದ್ದೇನೆ."

ಭಗವಂತನು ಹೇಳುತ್ತಾನೆ :

"ಉದ್ಧವ! ಬ್ರಹ್ಮನ ಮಾನಸಪುತ್ರರಾದ ಸನಕಾದಿಮಹರ್ಷಿಗಳು ಒಮ್ಮೆ ತಮ್ಮ ತಂದೆಯವರನ್ನು ಯೋಗದ ಸೂಕ್ಷ್ಮವಾದ ಪರಾಕಾಷ್ಠೆ-ಯಾವುದೆಂಬುದನ್ನು ತಿಳಿಯಲು ಹೀಗೆ ಪ್ರಶ್ನಿಸಿದರು :

**ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಭೋ ।**
**ಕಥಮನ್ಯೋನ್ಯಸನ್ತ್ಯಾಗೋ ಮುಮುಕ್ಷೋರತಿತಿತೀರ್ಷೋಃ ॥೧೭॥**

"ತಂದೆಯೇ! ಚಿತ್ತವು ಗುಣಗಳಲ್ಲಿ (ವಿಷಯಗಳಲ್ಲಿ ) ಪ್ರವೇಶಿಸಿರು ತ್ತದೆ. ಅಂತೆಯೇ ವಿಷಯಗಳು ಚಿತ್ತವನ್ನು ಹೊಕ್ಕಿರುತ್ತವೆ. ಒಂದಕ್ಕೊಂದು ಸೇರಿಕೊಂಡುಬಿಟ್ಟಿರುತ್ತವೆ. ಹೀಗಿರುವಾಗ ಸಂಸಾರಸಾಗರವನ್ನು ದಾಟಿ ಮುಕ್ತಿಯನ್ನು ಪಡೆಯಲು ಅಪೇಕ್ಷಿಸುವ ಮನುಷ್ಯನು ಯಾವ ರೀತಿಯಲ್ಲಿ ಚಿತ್ತವನ್ನು ವಿಷಯಗಳಿಂದಲೂ ಅಥವಾ ವಿಷಯಗಳನ್ನು ಚಿತ್ತದಿಂದಲೂ ಬೇರ್ಪಡಿಸಬೇಕು?"

ಶ್ರೀಕೃಷ್ಣನು ಹೇಳುತ್ತಾನೆ :

"ಉದ್ಧವ! ಮಕ್ಕಳಿಂದ ಹೀಗೆ ಪ್ರಶ್ನಿಸಲ್ಪಟ್ಟ ಮಹಾದೇವನಾದ,

ಸ್ವಯಂಭುವಾದ ಮತ್ತು ಪ್ರಾಣಿಗಳ ಸೃಷ್ಟಿಗೆ ಕಾರಣನಾದ ಚತುರ್ಮುಖನು ಎಷ್ಟೇ ಚಿಂತಿಸಿದರೂ, ಪ್ರವೃತ್ತಿಮಾರ್ಗ ಕರ್ಮಗಳನ್ನು ಮಾಡುವುದರಲ್ಲಿಯೇ ನಿಯತವಾದ ಬುದ್ಧಿಯುಳ್ಳವನಾಗಿದ್ದುದರಿಂದ ಪ್ರಶ್ನೆಯ ಮೂಲವೇನೆಂಬುದನ್ನು ತಿಳಿಯಲು ಸಮರ್ಥನಾಗಲಿಲ್ಲ.

ಮಕ್ಕಳ ಪ್ರಶ್ನೆಗೆ ಉತ್ತರಿಸಲು ತೋರದಿದ್ದಾಗ ಬ್ರಹ್ಮನು ಅವರ ಪ್ರಶ್ನೆಯ ಉತ್ತರವನ್ನು ಕಾಣುವ ಆಶಯದಿಂದ ನನ್ನನ್ನು ಸ್ಮರಿಸಿಕೊಂಡನು. ಒಡನೆಯೇ ನಾನು ಹಂಸಪಕ್ಷಿಯ ರೂಪದಿಂದ ಬ್ರಹ್ಮನ ಬಳಿಗೆ ಸಾಗಿದೆನು. ನನ್ನನ್ನು ನೋಡುತ್ತಲೇ ಸನಕಾದಿ ಮಹರ್ಷಿಗಳು ಬ್ರಹ್ಮನನ್ನು ಮುಂದೆಮಾಡಿಕೊಂಡು ನನ್ನ ಬಳಿಗೆ ಬಂದು ನನ್ನ ಕಾಲುಗಳಿಗೆ ನಮಸ್ಕರಿಸಿ ನೀನಾರೆಂದು ಪ್ರಶ್ನಿಸಿದರು. ಉದ್ಧವ! ಪರಮಾರ್ಥತತ್ತ್ವದ ಜಿಜ್ಞಾಸುಗಳಾದ ಸನಕಾದಿಮುನಿಗಳಿಂದ ಪ್ರಶ್ನಿಸಲ್ಪಟ್ಟ ನಾನು ಹೇಗೆ ಉತ್ತರಿಸಿದೆನೆಂಬುದನ್ನು ಹೇಳುವೆನು ; ಕೇಳು :

**ವಸ್ತುನೋ ಯದ್ಯನಾನಾತ್ವಮಾತ್ಮನಃ ಪ್ರಶ್ನ ಈದೃಶಃ ।**
**ಕಥಂ ಘಟೇತ ವೋ ವಿಪ್ರಾ ವಕ್ತುರ್ವಾ ಮೇ ಕ ಆಶ್ರಯಃ ॥೨೨॥**

“ಬ್ರಾಹ್ಮಣಶ್ರೇಷ್ಠರೇ! ಪರಮಾರ್ಥರೂಪವಾದ ವಸ್ತುವು ನಾನಾತ್ವದಿಂದ ಸರ್ವಥಾರಹಿತವಾಗಿದೆಯೆಂದ ಮೇಲೆ ಆತ್ಮನ ಸಂಬಂಧವಾಗಿ ನೀವು ಕೇಳಿರುವ ‘ನೀನು ಯಾರು?’ ಎಂಬ ಪ್ರಶ್ನೆಯು ಹೇಗೆ ಸಂಗತವಾಗು ತ್ತದೆ? (ಆತ್ಮನಿಗೆ ನಾನಾತ್ವವಿಲ್ಲದಾಗ–‘ನೀನು-ನಾನು’ ಎಂಬ ಮಾತೇ ಉದ್ಭವಿಸುವುದಿಲ್ಲ.) ನಿರ್ವಿಶೇಷನಾದ ಆತ್ಮನಲ್ಲಿ ಜಾತಿ-ಗುಣ-ಕರ್ಮ ಮತ್ತು ಸಂಬಂಧ ಇವುಗಳಾವುದೂ ಇಲ್ಲದೇ ಇರುವುದರಿಂದ ನಾನು ತಾನೇ ಯಾವ ಆಧಾರವನ್ನು ಅವಲಂಬಿಸಿ ನಿಮಗೆ ಉತ್ತರವನ್ನು ಕೊಡಲಿ?

**ಪಞ್ಚಾತ್ಮಕೇಷು ಭೂತೇಷು ಸಮಾನೇಷು ಚ ವಸ್ತುತಃ ।**
**ಕೋ ಭವಾನಿತಿ ವಃ ಪ್ರಶ್ನೋ ವಾಚಾರಮ್ಭೋ ಹ್ಯನರ್ಥಕಃ ॥೨೩॥**

ದೇವತೆಗಳು, ಮನುಷ್ಯರು, ಪಶು-ಪಕ್ಷಿಗಳು ಇವೇ ಮುಂತಾಗಿ ಸಕಲವೂ ಪಂಚಭೂತಾತ್ಮಕವಾಗಿಯೇ ಇವೆ. ಮತ್ತು ಪರಮಾರ್ಥರೂಪದಿಂದಲೂ ಅಭಿನ್ನವಾಗಿದೆ. ಹೀಗಿರುವಾಗ 'ಕೋ ಭವಾನ್' ‘ನೀನು

ಯಾರು?' ಎಂಬ ಪ್ರಶ್ನೆಯು ಕೇವಲ ಮಾತಿನ ವ್ಯವಹಾರವಾಗಿರುವುದೇ ಹೊರತು ವಿಚಾರಪೂರ್ವಕವಾದುದಲ್ಲ. ಆದುದರಿಂದ ನಿರರ್ಥಕವಾಗಿದೆ.

**ಮನಸಾ ವಚಸಾ ದೃಷ್ಟ್ಯಾ ಗೃಹ್ಯತೇಽನ್ಯೈರಪೀನ್ದ್ರಿಯೈಃ ।**
**ಅಹಮೇವ ನ ಮತ್ತೋಽನ್ಯದಿತಿ ಬುಧ್ಯಧ್ವಮಞ್ಜಸಾ ॥೨೪॥**

ಮನಸ್ಸಿನಿಂದ, ಮಾತಿನಿಂದ, ದೃಷ್ಟಿಯಿಂದ ಹೀಗೆಯೇ ಇತರ ಇಂದ್ರಿಯಗಳಿಂದಲೂ ಯಾವುದೂ ಗ್ರಹಿಸಲ್ಪಡುತ್ತದೆಯೋ ಆ ಎಲ್ಲವೂ ನಾನೇ ಆಗಿದ್ದೇನೆ. ನನ್ನಿಂದ ಭಿನ್ನವಾದುದು ಯಾವುದೂ ಇಲ್ಲ. ಈ ಸಿದ್ಧಾಂತವನ್ನು ನೀವು ತತ್ತ್ವವಿಚಾರದ ಮೂಲಕವಾಗಿ ತಿಳಿದುಕೊಳ್ಳಿರಿ.

**ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಜಾಃ ।**
**ಜೀವಸ್ಯ ದೇಹ ಉಭಯಂ ಗುಣಾಶ್ಚೇತೋ ಮದಾತ್ಮನಃ ॥೨೫॥**

ಬ್ರಹ್ಮಮಾನಸ ಪುತ್ರರೇ! ಚಿತ್ತವು ಚಿಂತನೆಮಾಡುತ್ತಲೇ ವಿಷಯಾಕಾರವಾಗಿ ಬಿಡುತ್ತದೆ. ಹಾಗೆಯೇ ವಿಷಯಗಳು ಚಿತ್ತದಲ್ಲಿ ಸೇರಿಹೋಗುತ್ತವೆ. (ಶಬ್ದಾದಿವಿಷಯಗಳು ಚಿತ್ತದಲ್ಲಿಯೂ ಚಿತ್ತವು ಶಬ್ದಾದಿವಿಷಯಗಳಲ್ಲಿಯೂ ಪರಸ್ಪರವಾಗಿ ಸೇರಿಹೋಗುತ್ತವೆ.) ಆದರೂ ವಿಷಯ ಮತ್ತು ಚಿತ್ತಗಳು ನನ್ನ ಸ್ವರೂಪಭೂತನಾದ ಜೀವನ ದೇಹವೇ ಆಗಿವೆ. ದೇಹವೇ–ಚಿತ್ತಕ್ಕೂ ವಿಷಯಗಳಿಗೂ ಉಪಾಧಿಯಾಗಿದೆ. ಆದುದರಿಂದ ಆತ್ಮನಿಗೂ–ಚಿತ್ತ ಮತ್ತು ವಿಷಯಗಳಿಗೂ ಯಾವ ಸಂಬಂಧವೂ ಇಲ್ಲ.

**ಗುಣೇಷು ಚಾವಿಶಚ್ಚಿತ್ತಮಭೀಕ್ಷ್ಣಂ ಗುಣಸೇವಯಾ ।**
**ಗುಣಾಶ್ಚ ಚಿತ್ತಪ್ರಭವಾ ಮದ್ರೂಪ ಉಭಯಂ ತ್ಯಜೇತ್ ॥೨೬॥**

ಪುನಃ ಪುನಃ ವಿಷಯಗಳನ್ನು ಸೇವಿಸುತ್ತಲೇ ಇರುವುದರಿಂದ ಚಿತ್ತವು ಯಾವಾಗಲೂ ವಿಷಯಗಳಲ್ಲಿಯೇ ಆಸಕ್ತವಾಗಿರುತ್ತದೆ. ವಿಷಯಗಳು ಕೂಡ ಚಿತ್ತವನ್ನು ನಿರಂತರವಾಗಿ ಪ್ರವೇಶಿಸುತ್ತಿದ್ದು ಚಿತ್ತಮಯವೇ ಆಗಿಬಿಡುತ್ತವೆ. ನನ್ನಲ್ಲಿ ತನ್ಮಯನಾದ ಯೋಗಿಯು ನನ್ನನ್ನು ಸಾಕ್ಷಾತ್ಕರಿಸಿಕೊಂಡು ಚಿತ್ತವನ್ನೂ, ಚಿತ್ತದಲ್ಲಿ ಹುಟ್ಟುವ ವಿಷಯಗಳನ್ನೂ ಎರಡನ್ನೂ ಪರಿತ್ಯಜಿಸಬೇಕು.

**ಜಾಗ್ರತ್ಸ್ವಪ್ನಃ ಸುಷುಪ್ತಂ ಚ ಗುಣತೋ ಬುದ್ಧಿವೃತ್ತಯಃ ।**
**ತಾಸಾಂ ವಿಲಕ್ಷಣೋ ಜೀವಃ ಸಾಕ್ಷಿತ್ವೇನ ವಿನಿಶ್ಚಿತಃ ॥೨೭॥**

ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಮೂರು ಅವಸ್ಥೆಗಳೂ ಸತ್ತ್ವ-ರಜಸ್ತಮೋಗುಣಗಳ ಪರಿಣಾಮವಾಗಿ ನಡೆಯುತ್ತವೆ. ಇವು ಬುದ್ಧಿಯ ವೃತ್ತಿಗಳಾಗಿವೆ. ಇವು ಆತ್ಮನ ಸ್ವಭಾವಗುಣಗಳಲ್ಲ. ಈ ವೃತ್ತಿಗಳಿಗೆ ಜೀವನು ಸಾಕ್ಷಿಭೂತನಾಗಿರುವುದರಿಂದ ಜೀವನು ಇವುಗಳಿಂದ ವಿಲಕ್ಷಣನಾಗಿದ್ದಾನೆ. ಈ ಸಿದ್ಧಾಂತವು ಶ್ರುತಿ-ಯುಕ್ತಿ ಮತ್ತು ಅನುಭವಗಳಿಂದಲೂ ನಿಶ್ಚಯಿಸಲ್ಪಟ್ಟಿದೆ.

**ಯರ್ಹಿ ಸಂಸೃತಿಬನ್ಧೋಽಯಮಾತ್ಮನೋ ಗುಣವೃತ್ತಿದಃ ।**
**ಮಯಿ ತುರ್ಯೇ ಸ್ಥಿತೋ ಜಹ್ಯಾತ್ತ್ಯಾಗಸ್ತದ್ಗುಣಚೇತಸಾಮ್ ॥೨೮॥**

ದೇಹಾತ್ಮಬುದ್ಧಿಯಿಂದುಂಟಾದ ಸಂಸಾರಬಂಧನವೇ ಆತ್ಮನಿಗೆ ಸತ್ತ್ವ-ರಜಸ್ತಮೋ ರೂಪವಾದ ಜಾಗ್ರತ್-ಸ್ವಪ್ನ-ಸುಷುಪ್ತಿ–ಎಂಬ ಅವಸ್ಥೆಗಳ ನ್ನುಂಟುಮಾಡುತ್ತದೆ. ಆದುದರಿಂದ ಸಾಧಕನು ಮೂರು ಅವಸ್ಥೆ ಗಳಿಗಿಂತಲೂ ವಿಲಕ್ಷಣವಾದ ಮತ್ತು ಅವುಗಳಿಂದ ಅನುಗತವಾದ ನನ್ನ ತುರೀಯಾವಸ್ಥೆಯಲ್ಲಿದ್ದು ದೇಹಾತ್ಮಬುದ್ಧಿಯನ್ನು ಪರಿತ್ಯಜಿಸಬೇಕು. ಆಗ ಚಿತ್ತದ ಮತ್ತು ಇದರ ಆಶ್ರಯವನ್ನು ಪಡೆದ ವಿಷಯಗಳ ತ್ಯಾಗವಾಗುತ್ತದೆ.

**ಅಹಙ್ಕಾರಕೃತಂ ಬನ್ಧಮಾತ್ಮನೋಽರ್ಥವಿಪರ್ಯಯಮ್ ।**
**ವಿದ್ವಾನ್ ನಿರ್ವಿದ್ಯ ಸಂಸಾರಚಿನ್ತಾಂ ತುರ್ಯೇ ಸ್ಥಿತಸ್ತ್ಯಜೇತ್ ॥೨೯॥**

ವಿದ್ವಾಂಸನಾದವನು, ಸಂಸಾರಬಂಧನವು ಅಹಂಕಾರದಿಂದುಂಟಾದು ದೆಂಬುದನ್ನೂ, ಜೀವನ ಪರಮಾನಂದಸ್ವರೂಪವನ್ನು ಮರೆಮಾಡತಕ್ಕ ದೆಂಬುದನ್ನೂ, ಅದು ಅತ್ಯಂತದುಃಖಕರವಾದುದೆಂಬುದನ್ನೂ ಮನಗೊಂಡು ವಿರಕ್ತನಾಗಬೇಕು. ಮೂರು ಅವಸ್ಥೆಗಳಲ್ಲೂ ಅನುಗತವಾದ ತುರೀಯಾವಸ್ಥೆ ಯಲ್ಲಿ ಮನಸ್ಸನ್ನು ನೆಲೆಗೊಳಿಸಿ ಸಂಸಾರದ ಚಿಂತೆಯನ್ನು ಬಿಟ್ಟುಬಿಡಬೇಕು.

**ಯಾವನ್ನಾನಾರ್ಥಧೀಃ ಪುಂಸೋ ನ ನಿವರ್ತೇತ ಯುಕ್ತಿಭಿಃ ।**
**ಜಾಗರ್ತ್ಯಪಿ ಸ್ವಪನ್ನಜ್ಞಃ ಸ್ವಪ್ನೇ ಜಾಗರಣಂ ಯಥಾ ॥೩೦॥**

ಎಂದಿನವರೆಗೆ ಮನುಷ್ಯನಿಗೆ ನಾನಾತ್ವದ ಬುದ್ಧಿಯಿರುವುದೋ, ಅಹಂಬುದ್ಧಿಯಿರುವುದೋ, ಮಮತ್ವಬುದ್ಧಿಯಿರುವುದೋ, ಯಾವುದೇ ಯುಕ್ತಿಯಿಂದಲೂ ಈ ಬುದ್ಧಿಯು ಹೋಗುವುದಿಲ್ಲವೋ–ಅಲ್ಲಿಯವರೆಗೂ ಆ ಅಜ್ಞಾನಿಯೂ ಕನಸ್ಸಿನಲ್ಲೂ ತಾನು ಎಚ್ಚರವಾಗಿರುವೆನೆಂದು ಭಾವಿಸಿ ಕೊಳ್ಳುವಂತೆ ಆತನು ಎಚ್ಚರದ ಸ್ಥಿತಿಯಲ್ಲೂ ನಿದ್ರಿಸುವವನಂತೆಯೂ ಇರುತ್ತಾನೆ. ಇದಕ್ಕೆ ಕಾರಣ ಅಜ್ಞಾನ. ಅವನು ಆಧ್ಯಾತ್ಮಿಕವಾಗಿ ಎಚ್ಚರ ಗೊಂಡಿರುವುದಿಲ್ಲ.

**ಅಸತ್ತ್ವಾದಾತ್ಮನೋಽನ್ಯೇಷಾಂ ಭಾವಾನಾಂ ತತ್ಕೃತಾ ಭಿದಾ ।**
**ಗತಯೋ ಹೇತವಶ್ಚಾಸ್ಯ ಮೃಷಾ ಸ್ವಪ್ನದೃಶೋ ಯಥಾ ॥೩೧॥**

ಆತ್ಮನಿಗಿಂತ ಬೇರೆಯವಾದ ದೇಹಾದಿಗಳಿಗೆ ಸಂಬಂಧಿಸಿದ ವರ್ಣಾ ಶ್ರಮಗಳೂ ಅವರು ಮಾಡುವ ಕರ್ಮಗಳಿಂದ ಲಭಿಸುವ ಸ್ವರ್ಗಾದಿ ಫಲ ಗಳೂ ಸ್ವಪ್ನದಲ್ಲಿ ಕಾಣುವಂತೆ ಆತ್ಮನ ವಿಷಯದಲ್ಲಿ ಮಿಥ್ಯೆಯೇ ಸರಿ.

**ಯೋ ಜಾಗರೇ ಬಹಿರನುಕ್ಷಣಧರ್ಮಿಣೋಽರ್ಥಾನ್**
**ಭುಙ್ಕ್ತೇ ಸಮಸ್ತಕರಣೈರ್ಹೃದಿ ತತ್ಸದೃಕ್ಷಾನ್ ।**
**ಸ್ವಪ್ನೇ ಸುಷುಪ್ತ ಉಪಸಂಹರತೇ ಸ ಏಕಃ**
**ಸ್ಮೃತ್ಯನ್ವಯಾತ್ತ್ರಿಗುಣವೃತ್ತಿದೃಗಿನ್ದ್ರಿಯೇಶಃ ॥೩೨॥**

ಯಾವನು ಜಾಗ್ರದವಸ್ಥೆಯಲ್ಲಿ (ಎಚ್ಚರಗೊಂಡಿರುವ ಸಮಯದಲ್ಲಿ) ಸಮಸ್ತವಾದ ಇಂದ್ರಿಯಗಳ ಮೂಲಕವಾಗಿ ಹೊರಗೆ ಕಾಣುವ ಕ್ಷಣ ಭಂಗುರವಾದ ಸಮಸ್ತಪದಾರ್ಥಗಳನ್ನೂ ಅನುಭವಿಸುವನೋ ಅವನೇ ಸ್ವಪ್ನಾವಸ್ಥೆಯಲ್ಲಿ, ಜಾಗ್ರದವಸ್ಥೆಯಲ್ಲಿ ನೋಡಿದ ವಿಷಯ ವಸ್ತುಗಳಿಗೆ ಸಮಾನವಾದ ವಾಸನಾಮಯವಾದ ವಿಷಯದ ವಸ್ತುಗಳ ಅನುಭವವನ್ನು ಹೃದಯದಲ್ಲಿಯೇ ಪಡೆದುಕೊಳ್ಳುತ್ತಾನೆ. ಪುನಃ ಅವನೇ ಸುಷುಪ್ತ್ಯವಸ್ಥೆಯಲ್ಲಿ ಎಲ್ಲ ವಸ್ತುಗಳನ್ನೂ ಲಯಗೊಳಿಸಿದ ಅನುಭವವನ್ನು ಪಡೆಯುತ್ತಾನೆ. ಅರ್ಥಾತ್ ಒಬ್ಬನೇ ಈ ಮೂರು ಪ್ರಕಾರವಾದ ಅನುಭವಗಳನ್ನೂ ಪಡೆದುಕೊಳ್ಳುತ್ತಾನೆ. ಜಾಗ್ರದವಸ್ಥೆಯಲ್ಲಿ ಇಂದ್ರಿಯಗಳ, ಸ್ವಪ್ನಾವಸ್ಥೆ ಯಲ್ಲಿ ಮನಸ್ಸಿನ ಮತ್ತು ಸುಷುಪ್ತ್ಯವಸ್ಥೆಯಲ್ಲಿ ಸಂಸ್ಕೃತವಾದ ಬುದ್ಧಿಯ

ಸ್ವಾಮಿಯೂ ಜೀವಾತ್ಮನೇ ಆಗಿರುವನು. ತ್ರಿಗುಣಮಯವಾದ ಮೂರು ಅವಸ್ಥೆಗಳಿಗೂ ಅವನೇ ಸಾಕ್ಷಿಯಾಗಿದ್ದಾನೆ. 'ಜಾಗ್ರದವಸ್ಥೆಯಲ್ಲಿರುವ ನಾನು ನಿದ್ರಾವಸ್ಥೆಯಲ್ಲಿ ಕನಸ್ಸನ್ನು ಕಂಡೆನು ; ನಾನೇ ಸುಷುಪ್ತಿಯನ್ನು ಅನುಭವಿಸಿದೆನು'–ಎಂಬ ಈ ಸ್ಮರಣೆಯ ಬಲದಿಂದಲೇ ಒಬ್ಬನೇ ಆತ್ಮನು. ಈ ಎಲ್ಲ ಅವಸ್ಥೆಗಳಲ್ಲಿಯೂ ಇರುವನೆಂಬುದು ಸಿದ್ಧವಾಗುತ್ತದೆ.

**ಏವಂ ವಿಮೃಶ್ಯ ಗುಣತೋ ಮನಸಸ್ತ್ರ್ಯವಸ್ಥಾ**
**ಮನ್ಮಾಯಯಾ ಮಯಿ ಕೃತಾ ಇತಿ ನಿಶ್ಚಿತಾರ್ಥಾಃ ।**
**ಸಞ್ಛಿದ್ಯ ಹಾರ್ದಮನುಮಾನಸದುಕ್ತಿತೀಕ್ಷ್ಣ-**
**ಜ್ಞಾನಾಸಿನಾ ಭಜತ ಮಾಖಿಲಸಂಶಯಾಧಿಮ್ ॥೩೩॥**

ಹೀಗೆ ವಿಚಾರಮಾಡಿ ಸತ್ತ್ವ, ರಜಸ್ಸು ಮತ್ತು ತಮಸ್ಸು–ಎಂಬ ಮೂರು ಗುಣಗಳಿಂದ ಮನಸ್ಸಿನಲ್ಲುಂಟಾಗುವ ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಮೂರು ಅವಸ್ಥೆಗಳೂ ನನ್ನ ಮಾಯೆಯಿಂದ ಕಲ್ಪಿತವಾದುವುಗಳೇ ಹೊರತು ಸತ್ಯಗಳಲ್ಲ–ಎಂದು ನಿಶ್ಚಯಿಸಿ ಸಕಲಸಂಶಯಗಳಿಗೂ ಮೂಲ ಭೂತವಾದ ಅಹಂಕಾರವನ್ನು–ಊಹೆ, ಗುರೂಪದೇಶ, ಶ್ರುತಿ, ತೀಕ್ಷ್ಣವಾದ ಜ್ಞಾನವೆಂಬ ಕತ್ತಿ-ಇವುಗಳಿಂದ ಕತ್ತರಿಸಿ ಹೃದಯಗುಹೆಯಲ್ಲಿರುವ ನನ್ನನ್ನು ಧ್ಯಾನಿಸಿರಿ.

**ಈಕ್ಷೇತ ವಿಭ್ರಮಮಿದಂ ಮನಸೋ ವಿಲಾಸಂ**
**ದೃಷ್ಟಂ ವಿನಷ್ಟಮತಿಲೋಲಮಲಾತಚಕ್ರಮ್ ।**
**ವಿಜ್ಞಾನಮೇಕಮುರುಧೇವ ವಿಭಾತಿ ಮಾಯಾ**
**ಸ್ವಪ್ನಸ್ತ್ರಿಧಾ ಗುಣವಿಸರ್ಗಕೃತೋ ವಿಕಲ್ಪಃ ॥೩೪॥**

ಈ ಜಗತ್ತು ಮನಸ್ಸಿನ ವಿಲಾಸವಾಗಿದೆ. ಮನಸ್ಸೆಂಬ ತೆರೆಯ ಮೇಲೆ ಮಾತ್ರವೇ ಕಾಣುವುದಾಗಿದೆ. ಕಾಣುತ್ತಿದ್ದರೂ ನಷ್ಟಪ್ರಾಯವೇ ಆಗಿದೆ. ಪಂಜಿನ ಚಕ್ರದಂತೆ ಚಂಚಲವಾಗಿದ್ದು, ಇದು ಭ್ರಮಮಾತ್ರವಾಗಿದೆ–ಎಂದು ತಿಳಿಯಬೇಕು. ತಿಳಿದವನು-ತಿಳಿಯತಕ್ಕುದು–ಎಂಬ ಭೇದದಿಂದ ರಹಿತವಾದ ಜ್ಞಾನಸ್ವರೂಪವಾದ ಒಂದೇ ಆತ್ಮವು ಅನೇಕಪ್ರಕಾರವಾಗಿರುವಂತೆ ಕಾಣುತ್ತದೆ. ಮೂರು ಗುಣಗಳ ಪರಿಣಾಮದಿಂದುಂಟಾದ ಜಾಗ್ರತ್ತೇ ಮೊದಲಾದ

ಮೂರು ಬಗೆಯ ಅವಸ್ಥೆಗಳು ಸ್ವಪ್ನವಿದ್ದಂತೆ ಬರಿಯ ಮಾಯೆ. ಅಜ್ಞಾನ ಕಲ್ಪಿತವಾದುದು.

**ದೃಷ್ಟಿಂ ತತಃ ಪ್ರತಿನಿವರ್ತ್ಯ ನಿವೃತ್ತತೃಷ್ಣ-**
**ಸ್ತೂಷ್ಣೀಂ ಭವೇನ್ನಿಜಸುಖಾನುಭವೋ ನಿರೀಹಃ ।**
**ಸನ್ದೃಶ್ಯತೇ ಕ್ವ ಚ ಯದೀದಮವಸ್ತುಬುದ್ಧ್ಯಾ**
**ತ್ಯಕ್ತಂ ಭ್ರಮಾಯ ನ ಭವೇತ್ ಸ್ಮೃತಿರಾನಿಪಾತಾತ್ ॥**

ಆದುದರಿಂದ ವಿವೇಕಿಯಾದವನು ದೇಹಾದಿರೂಪವಾದ ದೃಶ್ಯ ಪ್ರಪಂಚದಿಂದ ಮನಸ್ಸನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು. ತೃಷ್ಣಾರಹಿತನಾಗಿ, ವಿಷಯಾಭಿಲಾಷೆಯನ್ನು ತೊರೆದು, ಯಾವವಿಧವಾದ ಅಪೇಕ್ಷೆಯೂ ಇಲ್ಲ ದವನಾಗಿ, ಸ್ವಸ್ವರೂಪವನ್ನು ಕಂಡುಕೊಂಡು ಅನಿರ್ವಾಚ್ಯವಾದ ಆನಂದವನ್ನು ಅನುಭವಿಸಬೇಕು. ಆಹಾರವನ್ನು ತಿನ್ನುವ ಸಮಯದಲ್ಲಿ, ಓಡಾಡುವ ಸಮಯದಲ್ಲಿ , ಕೆಲವು ವೇಳೆ ಈ ದೇಹವೇ ಮೊದಲಾದುವುಗಳಿಂದ ಕೂಡಿದ ಪ್ರಪಂಚದ ಅನುಭವವೂ ಆಗುತ್ತದೆ. ಆದರೂ ಮೊದಲೇ ಪರಮಾತ್ಮನಿಂದ ಅತಿರಿಕ್ತವಾದುದೆಲ್ಲವೂ ತುಚ್ಛವಾದುದು ಎಂಬ ಬುದ್ಧಿಯಿಂದ ತ್ಯಜಿಸಲ್ಪಟ್ಟ ಈ ಜಗತ್ತು ಪುನಃ ಮೋಸಗೊಳಿಸಬಾರದು. ಶರೀರವು ಬಿದ್ದುಹೋಗುವವರೆಗೆ ಸಂಸ್ಕಾರಮಾತ್ರದಿಂದ ಅದರ ಸ್ಮರಣೆಯು ಮಾತ್ರವೇ ಇರುತ್ತದೆ.

**ದೇಹಂ ಚ ನಶ್ವರಮವಸ್ಥಿತಮುತ್ಥಿತಂ ವಾ**
**ಸಿದ್ಧೋ ನ ಪಶ್ಯತಿ ಯತೋಽಧ್ಯಗಮತ್ ಸ್ವರೂಪಮ್ ।**
**ದೈವಾದಪೇತಮುತ ದೈವವಶಾದುಪೇತಂ**
**ವಾಸೋ ಯಥಾ ಪರಿಕೃತಂ ಮದಿರಾಮದಾನ್ಧಃ ॥೩೬॥**

ಯಾವ ರೀತಿಯಲ್ಲಿ ಹೆಂಡವನ್ನು ಕುಡಿದು ಮನುಷ್ಯನು ಮದಮತ್ತ ನಾಗಿ ತಾನುಟ್ಟಿದ್ದ ವಸ್ತ್ರವು ತನ್ನ ಮೇಲಿರುವುದೇ?–ಬಿದ್ದು ಹೋಗಿರು ವುದೇ?–ಎಂಬುದನ್ನೂ ತಿಳಿದಿರುವುದಿಲ್ಲವೋ ಅದೇ ರೀತಿಯಲ್ಲಿ ಸಿದ್ಧ ಪುರುಷನು ಯಾವ ನಶ್ವರವಾದ ಶರೀರದಿಂದ ಸ್ವಸ್ವರೂಪವನ್ನು ಸಾಕ್ಷಾತ್ಕರಿಸಿ ಕೊಂಡನೋ ಅಂತಹ ಉಪಕಾರವೆಸಗಿದ ಶರೀರವು ಕುಳಿತಿರಲಿ-ನಿಂತಿರಲಿ, ಎಲ್ಲಿಗಾದರೂ ಹೋಗಲಿ ; ಎಲ್ಲಿಂದಲಾದರೂ ಬರಲಿ–ಅವನಿಗೆ ಅದರ

ಪರಿವೆಯೇ ಇರುವುದಿಲ್ಲ. ಹುಚ್ಚನಂತೆಯೋ, ಹೆಂಡಕುಡಿದವನಂತೆಯೋ ಇದ್ದುಬಿಡುತ್ತಾನೆ. ಯಾವಾಗಲೂ ಆತ್ಮಾನಂದದಲ್ಲಿಯೇ ಮಗ್ನನಾಗಿರುವ ಅವನಿಗೆ ದೈಹಿಕವ್ಯಾಪಾರದ ಅರಿವೇ ಇರುವುದಿಲ್ಲ.

**ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್**
**ಸ್ವಾರಮ್ಭಕಂ ಪ್ರತಿಸಮೀಕ್ಷತ ಏವ ಸಾಸುಃ ।**
**ತಂ ಸಪ್ರಪಞ್ಚಮಧಿರೂಢಸಮಾಧಿಯೋಗಃ**
**ಸ್ವಾಪ್ನಂ ಪುನರ್ನ ಭಜತೇ ಪ್ರತಿಬುದ್ಧವಸ್ತು ॥೩೭॥**

ಪ್ರಾಣ ಮತ್ತು ಇಂದ್ರಿಯಗಳೊಡನೆ ಈ ಶರೀರವೂ ಪ್ರಾರಬ್ಧ ಕರ್ಮಕ್ಕೆ ಅಧೀನವಾಗಿದೆ. ಆದುದರಿಂದ ತನ್ನ ಹುಟ್ಟಿಗೆ ಕಾರಣವಾದ ಕರ್ಮಫಲವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೂ ಪ್ರಾಣೇಂದ್ರಿಯಾದಿಗಳೊಡನೆ ಭೌತಿಕಶರೀರವು ಇದ್ದೇ ಇರುತ್ತದೆ. ಆದರೆ ಆತ್ಮಸಾಕ್ಷಾತ್ಕಾರಮಾಡಿಕೊಂಡಿರುವ ಮತ್ತು ಸಮಾಧಿಪರ್ಯಂತವಾಗಿ ಯೋಗಾರೂಢನಾಗಿರುವ ಪುರುಷನು–ಸ್ತ್ರೀ, ಪುತ್ರ, ಧನ, ಇವೇ ಮುಂತಾದುವುಗಳಿಂದ ಕೂಡಿದ ಪ್ರಪಂಚವನ್ನು ಮತ್ತು ತಾನು ಹೊಂದಿರುವ ಶರೀರವನ್ನು ಕೂಡ–ಸ್ವಪ್ನವನ್ನು ಕಂಡವನು ಎಚ್ಚರಗೊಂಡನಂತರ ಸ್ವಪ್ನದಲ್ಲಿ ಕಂಡ ವಸ್ತುಗಳನ್ನು ತನ್ನದೆಂದು ಭಾವಿಸದಂತೆ–ತನ್ನವೆಂದು ಭಾವಿಸಿಕೊಳ್ಳುವುದಿಲ್ಲ.

ಬ್ರಹ್ಮಮಾನಸಪುತ್ರರೇ! ನಾನೀಗ ನಿಮಗೆ ಏನು ಹೇಳಿದೆನೋ ಅದು ಸಾಂಖ್ಯ–ಯೋಗಶಾಸ್ತ್ರಗಳ ರಹಸ್ಯವಾಗಿದೆ. ನಿಮಗೆ ಧರ್ಮೋಪದೇಶಮಾಡುವ ಆಶಯದಿಂದ ಬಂದಿರುವ ನಾನು ಯಜ್ಞಪುರುಷನಾದ ನಾರಾಯಣನೆಂದು ತಿಳಿಯಿರಿ. ವಿಪ್ರಶ್ರೇಷ್ಠರೇ! ಯೋಗ, ಸಾಂಖ್ಯ, ಸತ್ಯ, ಋತ (ಮಧುರಭಾಷಣ), ತೇಜಸ್ಸು, ಶ್ರೀ, ಕೀರ್ತಿ ಮತ್ತು ದಮ (ಇಂದ್ರಿಯನಿಗ್ರಹ) ಇವೆಲ್ಲಕ್ಕೂ ನಾನೇ ಪರಮಗತಿಯಾಗಿರುತ್ತೇನೆ. ನಾನು ಸಮಸ್ತಗುಣಗಳಿಂದಲೂ ರಹಿತನಾಗಿದ್ದೇನೆ. ನನಗೆ ಯಾವುದರಲ್ಲಿಯೂ ಅಪೇಕ್ಷಿಯಿಲ್ಲ. ಆದರೂ ಸೌಮ್ಯ, ಅಸಂಗ, ಕಾರುಣ್ಯವೇ ಮೊದಲಾದ ಗುಣಗಳೆಲ್ಲವೂ ನನ್ನನ್ನೇ ಸೇವಿಸುತ್ತವೆ. ಅವುಗಳು ನನ್ನಲ್ಲಿಯೇ ಅಧಿಷ್ಠಿತ

ವಾಗಿವೆ. ಏಕೆಂದರೆ : ನಾನು ಎಲ್ಲರಿಗೂ ಹಿತೈಷಿಯೂ, ಸುಹೃದನೂ, ಪ್ರಿಯತಮನೂ, ಆತ್ಮನೂ ಆಗಿರುತ್ತೇನೆ. ನಿಜವಾಗಿ ಹೇಳುವುದಾದರೆ ನನ್ನಲ್ಲಿ ಅಧಿಷ್ಠಾನಹೊಂದಿರುವ ಅವುಗಳನ್ನು ಗುಣಗಳೆಂದು ಕರೆಯುವುದೂ ಯುಕ್ತವೆನಿಸುವುದಿಲ್ಲ. ಏಕೆಂದರೆ ನನ್ನಲ್ಲಿರುವ ಸೌಮ್ಯಾದಿ ಗುಣಗಳು ಸತ್ವಾದಿಗುಣಗಳ ಪರಿಣಾಮಗಳಲ್ಲ. ಅವುಗಳಂತೆ ಕ್ಷಯಿಸುವುದಿಲ್ಲ. ನಿತ್ಯ ನಿರಂತರವಾಗಿ ನನಲ್ಲಿರುತ್ತವೆ."

ಪ್ರಿಯಸಖನೇ! ಹೀಗೆ ಹೇಳಿ ನಾನು ಬ್ರಹ್ಮಜ್ಞರಲ್ಲಿ ಪ್ರಮುಖರಾದ ಸನಕಾದಿಗಳ ಸಂಶಯವನ್ನು ನಿವಾರಿಸಿದೆನು. ಅನಂತರ ಅವರು ಪರಮ ಭಕ್ತಿಯಿಂದ ನನ್ನನ್ನು ಪೂಜಿಸಿ ಸ್ತೋತ್ರಗಳ ಮೂಲಕವಾಗಿ ನನ್ನ ಮಹಿಮೆಯನ್ನು ಗಾನಮಾಡಿದರು. ಹೀಗೆ ಆ ಮಹರ್ಷಿಗಳು ನನ್ನನ್ನು ಭಕ್ತಿಭಾವದಿಂದ ಚೆನ್ನಾಗಿ ಪೂಜಿಸಿ, ಸ್ತುತಿಸಿದನಂತರ ಚತುರ್ಮುಖನು ನೋಡುತ್ತಿದ್ದಂತೆಯೇ ನಾನು ಅದೃಶ್ಯನಾಗಿ ಪರಂಧಾಮವನ್ನು ಸೇರಿದೆನು."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಏಕಾದಶಸ್ಕಂಧದ ೧೩ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೧೪ನೆಯ ಅಧ್ಯಾಯ

## ಭಕ್ತಿಯೋಗದ ಮಹಿಮೆ : ಧ್ಯಾನವಿಧಿಯ ವರ್ಣನೆ

ಉದ್ಧವನು ಹೇಳುತ್ತಾನೆ :

**ವದನ್ತಿ ಕೃಷ್ಣ ಶ್ರೇಯಾಂಸಿ ಬಹೂನಿ ಬ್ರಹ್ಮವಾದಿನಃ ।**
**ತೇಷಾಂ ವಿಕಲ್ಪಪ್ರಾಧಾನ್ಯಮುತಾಹೋ ಏಕಮುಖ್ಯತಾ ॥೧॥**

**ಭವತೋದಾಹೃತಃ ಸ್ವಾಮಿನ್ ಭಕ್ತಿಯೋಗೋಽನಪೇಕ್ಷಿತಃ ।**
**ನಿರಸ್ಯ ಸರ್ವತಃ ಸಙ್ಗಂ ಯೇನ ತ್ವಯ್ಯಾವಿಶೇನ್ಮನಃ ॥೨॥**

"ಕೃಷ್ಣ! ಮಹಾತ್ಮರಾದ ಬ್ರಹ್ಮವಾದಿಗಳು ಆತ್ಮಕಲ್ಯಾಣಕ್ಕಾಗಿ ಹಲವಾರು ಸಾಧನಗಳನ್ನು ಹೇಳಿರುತ್ತಾರೆ. ಒಂದೊಂದು ಮತದವರೂ ಆತ್ಮಕಲ್ಯಾಣಕ್ಕೆ ತಮ್ಮ ಮತವೇ ಶ್ರೇಷ್ಠವಾದುದೆಂದು ಪ್ರತಿಪಾದಿಸುತ್ತಾರೆ. ಹಾಗಾದರೆ ಎಲ್ಲ ಮತಸಿದ್ಧಾಂತಗಳೂ ಶ್ರೇಷ್ಠವಾದುವುಗಳೇ ಆಗಿವೆಯೇ?

ಅವುಗಳಲ್ಲಿ ಯಾವುದಾದರೂ ಒಂದು ಮಾರ್ಗವು ಮುಖ್ಯವಾದ ಮತ್ತು ಶ್ರೇಷ್ಠವಾದ ಮಾರ್ಗವೆಂದು ಹೇಳಿಸಿಕೊಳ್ಳುತ್ತದೆಯೇ? ನೀನಂತೂ ಅಡಿಗಡಿಗೂ ಸಮಸ್ತವಾದ ಸಂಗವನ್ನೂ ಪರಿತ್ಯಜಿಸಿ ನಿನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸುವ ಭಕ್ತಿಯೋಗವೇ ಸರ್ವಶ್ರೇಷ್ಠವಾದುದೆಂದೂ, ಇದಕ್ಕೆ ಯಾವುದರ ಅಪೇಕ್ಷೆಯೂ ಇಲ್ಲವೆಂದೂ, ಇದು ಸ್ವತಂತ್ರವಾದ ಸಾಧನವೆಂದೂ ಹೇಳುತ್ತಿರುವೆ. ನನ್ನ ಈ ಸಂಶಯವನ್ನೂ ನಿವಾರಿಸು.''

ಭಗವಂತನು ಹೇಳುತ್ತಾನೆ :

“ಪ್ರಿಯಸಖನೇ! ಉದ್ಧವ! ಕಾಲಾನಂತರದಲ್ಲಿ ಪ್ರಳಯವು ಒದಗಿ ಬಂದಾಗ ವೇದವೆಂಬ ಹೆಸರಿನ ವಾಣಿಯು ಮರೆಯಾಗಿಹೋಯಿತು. ಪುನಃ ಸೃಷ್ಟಿಯ ಆರಂಭದಲ್ಲಿ ನನ್ನ ಸಂಕಲ್ಪದಿಂದಲೇ ಅದೇ ವೇದವಾಣಿಯನ್ನು ಬ್ರಹ್ಮನಿಗೆ ಉಪದೇಶಿಸಿದೆನು. ಆ ವೇದವಾಣಿಯಲ್ಲಿ ನನ್ನ ಭಾಗವತ ಧರ್ಮದ ವಿವರಣೆಯಿದೆ. ಬ್ರಹ್ಮನು ಈ ಭಾಗವತಧರ್ಮವನ್ನೇ ತನ್ನ ಮಗನಾದ ಸ್ವಾಯಂಭುವಮನುವಿಗೆ ಉಪದೇಶಿಸಿದನು. ಮನುವಿನಿಂದ ಭೃಗು, ಅಂಗಿರಸ, ಮರೀಚಿ, ಪುಲಹ, ಅತ್ರಿ, ಪುಲಸ್ತ್ಯ ಮತ್ತು ಕ್ರತು–ಎಂಬ ಸಪ್ತರ್ಷಿಗಳು ಈ ಭಾಗವತಧರ್ಮದ ಉಪದೇಶವನ್ನು ಪಡೆದುಕೊಂಡರು. ಅನಂತರ ಈ ಬ್ರಹ್ಮರ್ಷಿಗಳ ಸಂತಾನವಾದ ದೇವತೆಗಳೂ, ದಾನವರೂ, ಗುಹ್ಯಕರೂ, ಮನುಷ್ಯರೂ, ಸಿದ್ಧರೂ, ಗಂಧರ್ವ-ವಿದ್ಯಾಧರರೂ, ಚಾರಣರೂ, ಕಿಂದೇವರೂ, ಕಿನ್ನರರೂ, ನಾಗ-ರಾಕ್ಷಸ-ಕಿಂಪುರುಷರೂ ತಮ್ಮ ಪೂರ್ವಜರಾದ ಭೃಗುವೇ ಮೊದಲಾದ ಬ್ರಹ್ಮರ್ಷಿಗಳಿಂದಲೇ ಈ ವೇದವಾಣಿಯ ಉಪದೇಶವನ್ನು ಪಡೆದರು. ದೇವತೆಗಳೇ ಮುಂತಾದವರ ವಾಸನಾರೂಪವಾದ ಪ್ರಕೃತಿಗಳು ಸತ್ತ್ವರಜಸ್ತಮೋಗುಣಗಳಿಂದ ಹುಟ್ಟಿದುವುಗಳಾದಕಾರಣ ನಾನಾವಿಧಗಳಾಗಿರುವುವು. ಆದುದರಿಂದ ಅವರೆಲ್ಲರೂ ತಮ್ಮ-ತಮ್ಮ ಸ್ವಭಾವಕ್ಕೆ ಅನುಸಾರವಾಗಿ ವೇದವಾಣಿಗೆ ಭಿನ್ನ-ಭಿನ್ನವಾದ ಅರ್ಥಗಳನ್ನು ಮಾಡಿದರು. ಪ್ರಾಣಿಗಳ ಬುದ್ಧಿಗಳು ಅವುಗಳ ಸ್ವಭಾವಕ್ಕೆ ಅನುಸಾರವಾಗಿ ಭಿನ್ನ-ಭಿನ್ನವಾಗಿರುವಂತೆ ವೇದವ್ಯಾಖ್ಯಾನಗಳೂ ಹಲವು ಬಗೆಯಾಗಿ ಮಾಡಲ್ಪಟ್ಟುವು. ಹೀಗೆ ಸ್ವಭಾವಭೇದದಿಂದ ಮತ್ತು ಪರಂಪರಾಗತವಾಗಿ ಬಂದ ಉಪದೇಶದ ಭೇದದಿಂದ ಮನುಷ್ಯರ

ಬುದ್ಧಿಯಲ್ಲಿ ಭಿನ್ನತೆಯುಂಟಾಗುತ್ತದೆ. ಮತ್ತೆ ಕೆಲವರು ಇದಾವುದನ್ನೂ ವಿಚಾರಿಸಹೋಗದೆ ವೇದವಿರುದ್ಧವಾದ ಪಾಖಂಡಮತಾವಲಂಬಿಗಳಾಗಿರುತ್ತಾರೆ. ಭಿನ್ನ-ಭಿನ್ನವಾದ ಈ ವಾಸನೆಗಳಿಗೆ ಮೂಲಕಾರಣವಾದ ನನ್ನ ಮಾಯೆಯಿಂದ ವಿಮೋಹಿತರಾದ ಪುರುಷರು ತಮ್ಮ ಕರ್ಮಾನುಗುಣವಾಗಿ ಮನಸ್ಸಿಗೆ ತೋರಿದಂತೆ ಶ್ರೇಯಸ್ಸಿಗೆ ಸಾಧನವನ್ನು ನಾನಾಪ್ರಕಾರವಾಗಿ ಹೇಳುತ್ತಾರೆ.

**ಧರ್ಮಮೇಕೇ ಯಶಶ್ಚಾನ್ಯೇ ಕಾಮಂ ಸತ್ಯಂ ದಮಂ ಶಮಮ್ ।**
**ಅನ್ಯೇ ವದನ್ತಿ ಸ್ವಾರ್ಥಂ ವಾ ಐಶ್ವರ್ಯಂ ತ್ಯಾಗಭೋಜನಮ್ ॥೧೦॥**

ಪೂರ್ವಮೀಮಾಂಸಕರು ಯಾಗ–ದಾನ–ಇಷ್ಟಾಪೂರ್ತವೇ ಮೊದಲಾದ ಧರ್ಮಕಾರ್ಯಗಳನ್ನು ಶ್ರೇಯಸ್ಕರವೆನ್ನುತ್ತಾರೆ. ಅಲಂಕಾರಶಾಸ್ತ್ರಜ್ಞರು ಕೀರ್ತಿಯನ್ನು ಗಳಿಸುವುದು ಶ್ರೇಯಸ್ಸಿಗೆ ಸಾಧನವೆನ್ನುತ್ತಾರೆ. ವಾತ್ಸ್ಯಾಯನಾದಿ ಮುನಿಗಳು ಕಾಮವನ್ನೇ ಶ್ರೇಯಸ್ಸಿಗೆ ಸಾಧನವೆನ್ನುತ್ತಾರೆ. ಯೋಗಿಗಳು ಸತ್ಯನಿಷ್ಠೆ, ಅಂತರಿಂದ್ರಿಯನಿಗ್ರಹ, ಬಹಿರಿಂದ್ರಿಯ ನಿಗ್ರಹ–ಇವುಗಳನ್ನೇ ಶ್ರೇಯಸ್ಸಿಗೆ ಸಾಧನಗಳೆಂದು ಹೇಳುತ್ತಾರೆ. ನೀತಿ ಶಾಸ್ತ್ರಜ್ಞರು ಸಾಮವೇ ಮೊದಲಾದ ಚತುರುಪಾಯಗಳೇ ಶ್ರೇಯಸ್ಸಿಗೆ ಸಾಧನವೆಂದು ತಿಳಿದು ಐಶ್ವರ್ಯವನ್ನೇ ಪುರುಷಾರ್ಥವೆಂದು ತಿಳಿಯುತ್ತಾರೆ. ತ್ಯಾಗಿಗಳು ತ್ಯಾಗವನ್ನೇ ಶ್ರೇಯಸ್ಸಿಗೆ ಸಾಧನವೆಂದೂ, ಸ್ವಾರ್ಥಿಗಳಾದ ಲೋಕಾಯತಿಕರು ಭೋಗವನ್ನೇ ಶ್ರೇಯಸ್ಸಿಗೆ ಸಾಧನವೆಂದೂ, ಕೆಲವರು ವೈಭವದ ಷಡ್ರಸೋಪೇತನಾದ ಭೋಜನವೇ ಶ್ರೇಯಸ್ಸಿಗೆ ಸಾಧನವೆಂದೂ ಹೇಳುತ್ತಾರೆ.

**ಕೇಚಿದ್ಯಜ್ಞತಪೋದಾನಂ ವ್ರತಾನಿ ನಿಯಮಾನ್ಯಮಾನ್ ।**
**ಆದ್ಯನ್ತವನ್ತ ಏವೈಷಾಂ ಲೋಕಾಃ ಕರ್ಮವಿನಿರ್ಮಿತಾಃ।**
**ದುಃಖೋದರ್ಕಾಸ್ತಮೋನಿಷ್ಠಾಃಕ್ಷುದ್ರಾನನ್ದಾಃಶುಚಾರ್ಪಿತಾಃ ॥೧೧॥**

ಕರ್ಮಯೋಗಿಗಳಾದವರು ಯಜ್ಞ, ತಪಸ್ಸು, ದಾನ, ವ್ರತ, ಯಮ, ನಿಯಮ ಇತ್ಯಾದಿಗಳ ಅನುಷ್ಠಾನವನ್ನೇ ಶ್ರೇಯಸ್ಸಿಗೆ ಸಾಧನವೆನ್ನುತ್ತಾರೆ. ಆದರೆ, ಉದ್ಧವ! ಇವೆಲ್ಲವೂ ಕರ್ಮಗಳಾಗಿವೆ. ಇವುಗಳಿಗೆ

ಫಲಸ್ವರೂಪವಾದ ಯಾವ ಲೋಕಗಳು ಲಭಿಸುವುವೋ ಅವೆಲ್ಲವೂ ಹುಟ್ಟಿ ವಿನಾಶವಾಗತಕ್ಕುವುಗಳು. ಶಾಶ್ವತವಾದುವುಗಳಲ್ಲ. ಕರ್ಮಫಲವು ಮುಗಿದ ನಂತರ ದುಃಖವನ್ನೇ ಕೊಡತಕ್ಕುವುಗಳು. ಮೋಹದಲ್ಲಿ ಕೊನೆಗಾಣತಕ್ಕುವುಗಳು. ಅಲ್ಪರಾದ ಆನಂದದಿಂದ ಯುಕ್ತವಾಗಿ ದುಃಖದಿಂದ ಕೂಡಿರತಕ್ಕುವುಗಳೂ ಆಗಿವೆ.

**ಮಯ್ಯರ್ಪಿತಾತ್ಮನಃ ಸಭ್ಯ ನಿರಪೇಕ್ಷಸ್ಯ ಸರ್ವತಃ ।**
**ಮಯಾಽತ್ಮನಾ ಸುಖಂ ಯತ್ತತ್ಕುತಃ ಸ್ಯಾದ್ವಿಷಯಾತ್ಮನಾಮ್ ॥೧೨॥**

ಸಭ್ಯನೇ! ಯಾವ ಕಡೆಯಿಂದಲೂ ಯಾವುದರ ಅಪೇಕ್ಷೆಯೂ ಇಲ್ಲದೇ ಇರುವ ನನ್ನ ಭಕ್ತನು ನನ್ನಲ್ಲಿಯೇ ತನ್ನ ಮನಸ್ಸನ್ನು ಅರ್ಪಿಸಿ ಆತ್ಮಸ್ವರೂಪನಾದ ನನ್ನಿಂದ ಯಾವ ಆತ್ಮಾನಂದವನ್ನು ಪಡೆಯುವನೋ ಅಂತಹ ಆನಂದವು ವಿಷಯಾಸಕ್ತಚಿತ್ತರಾದ ಪುರುಷರಿಗೆ ಹೇಗೆತಾನೇ ಲಭಿಸೀತು?

**ಅಕಿಞ್ಚನಸ್ಯ ದಾನ್ತಸ್ಯ ಶಾನ್ತಸ್ಯ ಸಮಚೇತಸಃ ।**
**ಮಯಾ ಸನ್ತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ॥೧೩॥**

ನನ್ನದೆಂಬುದು ಯಾವುದೂ ಇಲ್ಲದ ಅಕಿಂಚನನೂ, ಇಂದ್ರಿಯಗಳನ್ನು ಜಯಿಸಿ ಶಾಂತನೂ ಸಮದರ್ಶಿಯೂ ಆಗಿರುವವನೂ, ನನ್ನ ಧ್ಯಾನದಿಂದಲೇ ಸಂತುಷ್ಟವಾದ ಮನಸ್ಸುಳ್ಳವನೂ ಆದ ಭಕ್ತನಿಗೆ ಸಮಸ್ತದಿಕ್ಕುಗಳೂ ಆನಂದಮಯವಾಗಿ ಪರಿಣಮಿಸುತ್ತವೆ.

**ನ ಪಾರಮೇಷ್ಠ್ಯಂ ನ ಮಹೇನ್ದ್ರಧಿಷ್ಣ್ಯಂ**
**ನ ಸಾರ್ವಭೌಮಂ ನ ರಸಾಧಿಪತ್ಯಮ್ ।**
**ನ ಯೋಗಸಿದ್ಧೀರಪುನರ್ಭವಂ ವಾ**
**ಮಯ್ಯರ್ಪಿತಾತ್ಮೇಚ್ಛತಿ ಮದ್ವಿನಾನ್ಯತ್ ॥೧೪॥**

ನನ್ನಲ್ಲಿಯೇ ತನ್ನ ಪೂರ್ಣವಾದ ಮನಸ್ಸನ್ನೂ ಸಮರ್ಪಿಸಿಕೊಂಡಿರುವ ನನ್ನ ಭಕ್ತನು ನನ್ನನ್ನು ಬಿಟ್ಟು ಬ್ರಹ್ಮಪದವಿಯನ್ನೂ ಅಪೇಕ್ಷಿಸುವುದಿಲ್ಲ. ದೇವೇಂದ್ರನ ಲೋಕವನ್ನು ಬಯಸುವುದಿಲ್ಲ. ಚಕ್ರವರ್ತಿಯಾಗಲೂ ಅವನು ಇಚ್ಛಿಸುವುದಿಲ್ಲ. ಯೋಗಸಿದ್ಧಿಯನ್ನೂ ಅಪೇಕ್ಷಿಸುವುದಿಲ್ಲ. ಎಲ್ಲಕ್ಕಿಂತಲೂ

ಮಿಗಿಲಾಗಿ ಮೋಕ್ಷವನ್ನೂ ಅಪೇಕ್ಷಿಸುವುದಿಲ್ಲ. ನನ್ನನ್ನುಳಿದು ಬೇರೇನೂ ಅವನಿಗೆ ಬೇಕಾಗುವುದಿಲ್ಲ.

**ನ ತಥಾ ಮೇ ಪ್ರಿಯತಮ ಆತ್ಮಯೋನಿರ್ನ ಶಙ್ಕರಃ ।**
**ನ ಚ ಸಙ್ಕರ್ಷಣೋ ನ ಶ್ರೀರ್ನೈವಾತ್ಮಾ ಚ ಯಥಾ ಭವಾನ್ ॥೧೫॥**

ಉದ್ಧವ! ಹಾಗೆಯೇ ನನಗೂ ಕೂಡ ನನಗೆ ಅತ್ಯಂತಪ್ರಿಯರಾದ ಬ್ರಹ್ಮನಾಗಲೀ, ಶಂಕರನಾಗಲೀ, ಬಲರಾಮನಾಗಲೀ, ಲಕ್ಷ್ಮೀದೇವಿಯೇ ಆಗಲೀ, ಎಲ್ಲಕ್ಕಿಂತಲೂ ಮಿಗಿಲಾಗಿ ನನ್ನ ದೇಹವೇ ಆಗಲೀ ಭಕ್ತನಾದ ನಿನ್ನಷ್ಟು ಪ್ರಿಯತಮರಲ್ಲ.

**ನಿರಪೇಕ್ಷಂ ಮುನಿಂ ಶಾನ್ತಂ ನಿರ್ವೈರಂ ಸಮದರ್ಶನಮ್ ।**
**ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತ್ಯಂಘ್ರಿರೇಣುಭಿಃ ॥೧೬॥**

ಪ್ರಾಪಂಚಿಕವಾದ ಯಾವ ಅಪೇಕ್ಷೆಯೂ ಇಲ್ಲದ, ಶಾಂತಸ್ವಭಾವದವನಾದ, ಯಾರೊಡನೆಯೂ ವೈರಭಾವವಿಲ್ಲದ, ಎಲ್ಲರಲ್ಲಿಯೂ ಸಮಭಾವದಿಂದಿರುವ ಮುನಿಯನ್ನು ನಾನು ಅನುಸರಿಸಿ ಹೋಗುತ್ತೇನೆ. ಅವನ ಪಾದಧೂಳಿಗಳಿಂದ ಪವಿತ್ರನಾದೇನೆಂಬ ಆಶಯದಿಂದ ಹಾಗೆ ಮಾಡುತ್ತೇನೆ.

**ನಿಷ್ಕಿಞ್ಚನಾ ಮಯ್ಯನುರಕ್ತಚೇತಸಃ**
**ಶಾನ್ತಾ ಮಹಾನ್ತೋಽಖಿಲಜೀವವತ್ಸಲಾಃ ।**
**ಕಾಮೈರನಾಲಬ್ಧಧಿಯೋ ಜುಷನ್ತಿ ಯತ್**
**ತನ್ನೈರಪೇಕ್ಷ್ಯಂ ನ ವಿದುಃ ಸುಖಂ ಮಮ ॥೧೭॥**

ಯಾರು ಸಂಗ್ರಹ-ಪರಿಗ್ರಹಗಳನ್ನು ಮಾಡದೆ ಅಕಿಂಚನರಾಗಿರುವರೋ, ಶರೀರವೇ ಮೊದಲಾದುವುಗಳಲ್ಲಿಯೂ ಅಹಂಕಾರ-ಮಮಕಾರಗಳನ್ನು ಇಟ್ಟುಕೊಂಡಿಲ್ಲವೋ, ನನ್ನಲ್ಲಿಯೇ ಅನುರಕ್ತವಾದ ಮನಸ್ಸುಳ್ಳವರಾಗಿರುವರೋ, ಶಾಂತರಾಗಿರುವರೋ, ಸಮಸ್ತಜೀವಜಂತುಗಳಲ್ಲಿಯೂ ವಾತ್ಸಲ್ಯಭಾವದಿಂದಿರುತ್ತಾ ಮಹಾತ್ಮರೆನಿಸಿಕೊಂಡಿರುವರೋ, ಯಾವುದೇ ವಿಧವಾದ ಕಾಮನೆಗಳೂ ಯಾರ ಬುದ್ಧಿಯನ್ನು ಮುಟ್ಟಲೂ ಅಸಮರ್ಥವಾಗಿವೆಯೋ–ಅಂತಹ ಭಕ್ತರಿಗೆ ಆಗುವ ನನ್ನ ಪರಮಾನಂದಸ್ವರೂಪದ ಅನುಭವವು ಬೇರೆಯವರಿಗೆ ಆಗಲಾರದು.

**ಬಾಧ್ಯಮಾನೋಽಪಿ ಮದ್ಭಕ್ತೋ ವಿಷಯೈರಜಿತೇನ್ದ್ರಿಯಃ ।**
**ಪ್ರಾಯಃ ಪ್ರಗಲ್ಭಯಾ ಭಕ್ತ್ಯಾ ವಿಷಯೈರ್ನಾಭಿಭೂಯತೇ ॥೧೮॥**

ನನ್ನ ಭಕ್ತನು ಜಿತೇಂದ್ರಿಯನಾಗಿರದೆ ವಿಷಯಗಳಿಂದ ಬಾಧಿಸಲ್ಪಡುತ್ತಾ ವಿಷಯಸುಖವನ್ನು ಬಿಡಲಾರದವನಾಗಿದ್ದರೂ ಅವನಿಗೆ ನನ್ನಲ್ಲಿರುವ ಪ್ರಕೃಷ್ಟವಾದ ಭಕ್ತಿಭಾವದಿಂದಾಗಿ ವಿಷಯಗಳಿಂದ ಪರಾಜಿತನಾಗುವುದಿಲ್ಲ. ವಿಷಯಸುಖಗಳನ್ನು ಅನುಭವಿಸುತ್ತಿದ್ದರೂ ಅದರಿಂದ ಅವನು ವಿಮೋಹಿತನಾಗುವುದಿಲ್ಲ.

**ಯಥಾಗ್ನಿಃ ಸುಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ ।**
**ತಥಾ ಮದ್ವಿಷಯಾ ಭಕ್ತಿರುದ್ಧವೈನಾಂಸಿ ಕೃತ್ಸ್ನಶಃ ॥೧೯॥**

ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು ಯಾವ ರೀತಿಯಲ್ಲಿ ಸೌದೆಯ ರಾಶಿಯನ್ನೇ ಸುಟ್ಟು ಭಸ್ಮಮಾಡಿಬಿಡುವುದೋ–ಅದೇ ರೀತಿಯಲ್ಲಿ ನನ್ನ ಸಂಬಂಧವಾದ ಭಕ್ತಿಯು ಸಮಸ್ತ ಪಾಪಗಳನ್ನೂ ಸಮಗ್ರವಾಗಿ ನಿರಸನಗೊಳಿಸುತ್ತದೆ.

**ನ ಸಾಧಯತಿ ಮಾಂ ಯೋಗೋ ನ ಸಾಙ್ಖ್ಯಂ ಧರ್ಮ ಉದ್ಧವ ।**
**ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ॥೨೦॥**

ವೃದ್ಧಿಹೊಂದಿದ ನನ್ನ ಮೇಲಿನ ಭಕ್ತಿಯು ನನ್ನ ಒಲುಮೆಯನ್ನು ಸಾಧಿಸುವಂತೆ–ಯೋಗವಾಗಲೀ, ಸಾಂಖ್ಯವಾಗಲೀ, ಧರ್ಮವಾಗಲೀ, ಸ್ವಾಧ್ಯಾಯವಾಗಲೀ, ತಪಸ್ಸಾಗಲೀ, ತ್ಯಾಗವಾಗಲೀ ನನ್ನ ಒಲುಮೆಯನ್ನು ಸಾಧಿಸಲಾರವು.

**ಭಕ್ತ್ಯಾಹಮೇಕಯಾ ಗ್ರಾಹ್ಯಃ ಶ್ರದ್ಧಯಾಽತ್ಮಾ ಪ್ರಿಯಃ ಸತಾಮ್ ।**
**ಭಕ್ತಿಃ ಪುನಾತಿ ಮನ್ನಿಷ್ಠಾ ಶ್ವಪಾಕಾನಪಿ ಸಮ್ಭವಾತ್ ॥೨೧॥**

ಸಜ್ಜನರಿಗೆ ಪ್ರಿಯನೂ ಮತ್ತು ಅವರ ಆತ್ಮಸ್ವರೂಪನೂ ಆಗಿರುವ ನಾನು ಶ್ರದ್ಧಾಪೂರ್ವಕವಾಗಿ ನನ್ನಲ್ಲಿರಿಸುವ ಭಕ್ತಿಯೊಂದರಿಂದಲೇ ಭಕ್ತನಿಗೆ ಒಲಿಯುತ್ತೇನೆ. ನನ್ನಲ್ಲಿ ಶ್ರದ್ಧಾಪೂರ್ವಕವಾಗಿ ಇಡಲ್ಪಟ್ಟ ಭಕ್ತಿಯು ಚಂಡಾಲರನ್ನೂ ಜಾತಿದೋಷದಿಂದ ಮುಕ್ತಗೊಳಿಸಿ ಪವಿತ್ರಗೊಳಿಸುತ್ತದೆ.

**ಧರ್ಮಃ ಸತ್ಯದಯೋಪೇತೋ ವಿದ್ಯಾ ವಾ ತಪಸಾನ್ವಿತಾ ।**
**ಮದ್ಭಕ್ತ್ಯಾಪೇತಮಾತ್ಮಾನಂ ನ ಸಮ್ಯಕ್ ಪ್ರಪುನಾತಿ ಹಿ ॥೨೨॥**

ಸತ್ಯ ಮತ್ತು ದಯೆ–ಇವುಗಳಿಂದ ಕೂಡಿದ ಧರ್ಮವಾಗಲೀ, ತಪಸ್ಸಿನಿಂದ ಕೂಡಿದ ವಿದ್ಯೆಯಾಗಲೀ ನನ್ನ ಭಕ್ತಿಯಿಂದ ಕೂಡಿರದ ಜೀವನನ್ನು ಚೆನ್ನಾಗಿ ಪವಿತ್ರಗೊಳಿಸಲಾರವು.

**ಕಥಂ ವಿನಾ ರೋಮಹರ್ಷಂ ದ್ರವತಾ ಚೇತಸಾ ವಿನಾ ।**
**ವಿನಾಽನನ್ದಾಶ್ರುಕಲಯಾ ಶುದ್ಧ್ಯೇದ್ಭಕ್ತ್ಯಾ ವಿನಾಽಶಯಃ ॥೨೩॥**

ದೇಹದಲ್ಲಿ ರೋಮಾಂಚನವನ್ನುಂಟುಮಾಡುವ, ಮನಸ್ಸನ್ನು ಕರಗಿಸುವ, ಆನಂದಾಶ್ರುವನ್ನು ಸುರಿಸುವ ಭಕ್ತಿಭಾವವು ಅಂತಃಕರಣದಲ್ಲಿ ಇಲ್ಲದೇ ಇದ್ದಾಗ ಅಂತಹ ಅಂತಃಕರಣವು ಹೇಗೆತಾನೇ ಶುದ್ಧಿಯಾಗುತ್ತದೆ?

**ವಾಗ್ಗದ್ಗದಾ ದ್ರವತೇ ಯಸ್ಯ ಚಿತ್ತಂ**
**ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ ।**
**ವಿಲಜ್ಜ ಉದ್ಗಾಯತಿ ನೃತ್ಯತೇ ಚ**
**ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥೨೪॥**

ಯಾವನ ಮಾತು ಪ್ರೇಮದ ಆವೇಶದಿಂದ ಗದ್ಗದವಾಗುವುದೋ, ಮನಸ್ಸು ಕರಗಿ ನೀರಾಗುವುದೋ, ಯಾವನು ನನ್ನನ್ನು ನೆನೆಸಿಕೊಂಡು ಪದೇ ಪದೇ ಅಳುವನೋ, ಕೆಲವೊಮ್ಮೆ ಯಾವನು ನನ್ನನ್ನು ಕಂಡು ಸಂತೋಷದಿಂದ ಹಿರಿಹಿಗ್ಗುವನೋ, ಯಾವ ನನ್ನ ಪ್ರೇಮೀಭಕ್ತನು ನಾಚಿಕೆಯನ್ನು ಬದಿಗೊತ್ತಿ ಗಟ್ಟಿಯಾಗಿ ಹಾಡುವನೋ, ಕುಣಿದಾಡುವನೋ, ಅಂತಹ ನನ್ನ ಭಕ್ತನು ಜಗತ್ತನ್ನೇ ಪವಿತ್ರಗೊಳಿಸುತ್ತಾನೆ.

**ಯಥಾಗ್ನಿನಾ ಹೇಮ ಮಲಂ ಜಹಾತಿ**
**ಧ್ಮಾತಂ ಪುನಃ ಸ್ವಂ ಭಜತೇ ಚ ರೂಪಮ್ ।**
**ಆತ್ಮಾ ಚ ಕರ್ಮಾನುಶಯಂ ವಿಧೂಯ**
**ಮದ್ಭಕ್ತಿಯೋಗೇನ ಭಜತ್ಯಥೋ ಮಾಮ್ ॥೨೫॥**

ಪುಟಕ್ಕೆ ಹಾಕಿದ ಚಿನ್ನವು ಯಾವ ರೀತಿಯಲ್ಲಿ ತನ್ನಲ್ಲಿದ್ದ ದೋಷವನ್ನು ಕಳೆದುಕೊಂಡು ತನ್ನ ಹಿಂದಿನ ಪರಿಶುದ್ಧವಾದ ರೂಪವನ್ನು ಪಡೆದುಕೊಳ್ಳುತ್ತದೆಯೋ–ಅದೇ ರೀತಿಯಲ್ಲಿ ಜೀವನೂ ಕೂಡ ಭಕ್ತಿಯೋಗದಿಂದ

ತನ್ನಲ್ಲಿರುವ ಕರ್ಮವಾಸನೆಗಳನ್ನು ಕಳೆದುಕೊಂಡು ಪರಿಶುದ್ಧವಾದ ಅಂತಃಕರಣವನ್ನು ಹೊಂದಿ ನನ್ನನ್ನು ಭಜಿಸುತ್ತಾನೆ.

**ಯಥಾ ಯಥಾಽತ್ಮಾ ಪರಿಮೃಜ್ಯತೇಽಸೌ**
**ಮತ್ಪುಣ್ಯಗಾಥಾಶ್ರವಣಾಭಿಧಾನೈಃ ।**
**ತಥಾ ತಥಾ ಪಶ್ಯತಿ ವಸ್ತು ಸೂಕ್ಷ್ಮಂ**
**ಚಕ್ಷುರ್ಯಥೈವಾಂಜನಸಂಪ್ರಯುಕ್ತಮ್ ॥೨೬॥**

ಜಗತ್ಪಾವನಗಳಾದ ನನ್ನ ಚರಿತ್ರೆಗಳ ಶ್ರವಣದಿಂದಲೂ, ಕೀರ್ತನ ದಿಂದಲೂ ಜೀವನು ಪರಿಶುದ್ಧನಾದಂತೆಲ್ಲಾ ಸೂಕ್ಷ್ಮವಸ್ತುಸ್ವರೂಪದ ಆತ್ಮ ಜ್ಞಾನವನ್ನು ಪಡೆಯುವನು. ಅಂಜನದಿಂದ ಲಿಪ್ತವಾದ ಕಣ್ಣುಗಳು ಹೇಗೆ ಸೂಕ್ಷ್ಮವಸ್ತುಗಳನ್ನು ನೋಡಬಲ್ಲವೋ (ಭೂಮಿಯಲ್ಲಡಗಿರುವ ನಿಧಿಯನ್ನು ಕಾಣಬಲ್ಲವೋ) ಅದೇ ರೀತಿಯಲ್ಲಿ ಭಗವಂತನ ಗುಣಗಳ ಶ್ರವಣ-ಕೀರ್ತನ ಗಳಿಂದ ಪರಿಶುದ್ಧನಾದ ಜೀವನು ತನ್ನ ಹೃದಯಗುಹೆಯಲ್ಲಿ ಸೂಕ್ಷ್ಮನಾದ ಪರಮಾತ್ಮನನ್ನು ಕಾಣಬಲ್ಲನು.

**ವಿಷಯಾನ್ ಧ್ಯಾಯತಶ್ಚಿತ್ತಂ ವಿಷಯೇಷು ವಿಷಜ್ಜತೇ ।**
**ಮಾಮನುಸ್ಮರತಶ್ಚಿತ್ತಂ ಮಯ್ಯೇವ ಪ್ರವಿಲೀಯತೇ ॥೨೭॥**

ವಿಷಯೋಪಭೋಗಗಳನ್ನೇ ಚಿಂತಿಸುವವನ ಚಿತ್ತವು ವಿಷಯೋಪ ಭೋಗಗಳಲ್ಲಿಯೇ ಮುಳುಗಿಹೋಗುತ್ತದೆ. ಅಥವಾ ಈ ಹಿಂದೆ ಹೇಳಿರು ವಂತೆ ಚಿತ್ತವೇ ವಿಷಯವಾಗಿ ಬಿಡುತ್ತದೆ. ಅಂತೆಯೇ ನನ್ನನ್ನೇ ಸತತವಾಗಿ ಧ್ಯಾನಮಾಡುವವನ ಮನಸ್ಸು ನನ್ನಲ್ಲಿಯೇ ಲೀನವಾಗಿಬಿಡುತ್ತದೆ.

**ತಸ್ಮಾದಸದಭಿಧ್ಯಾನಂ ಯಥಾ ಸ್ವಪ್ನಮನೋರಥಮ್ ।**
**ಹಿತ್ವಾ ಮಯಿ ಸಮಾಧತ್ಸ್ವ ಮನೋ ಮದ್ಭಾವಭಾವಿತಮ್ ॥೨೮॥**

ಆದುದರಿಂದ ಅಸದ್ವಸ್ತುಗಳ (ಇಲ್ಲದ ಪದಾರ್ಥಗಳ) ಚಿಂತನವು ಕನಸ್ಸಿನಲ್ಲಾಗುವ ಮನೋರಥದಂತೆ ವ್ಯರ್ಥವಾಗುತ್ತದೆ. ಆದುದರಿಂದ ವಿಷಯ ವಸ್ತುಗಳನ್ನು ಚಿಂತಿಸುವುದನ್ನು ಬಿಟ್ಟು ನನ್ನ ಭಕ್ತಿಭಾವದಿಂದ ಪರಿಶುದ್ಧವಾದ ನಿನ್ನ ಮನಸ್ಸನ್ನು ನನ್ನಲ್ಲಿಯೇ ನೆಟ್ಟುಬಿಡು.

**ಸ್ತ್ರೀಣಾಂ ಸ್ತ್ರೀಸಙ್ಗಿನಾಂ ಸಙ್ಗಂ ತ್ಯಕ್ತ್ವಾ ದೂರತ ಆತ್ಮವಾನ್ ।**
**ಕ್ಷೇಮೇ ವಿವಿಕ್ತ ಆಸೀನಶ್ಚಿನ್ತಯೇನ್ಮಾಮತನ್ದ್ರಿತಃ ॥೨೯॥**

ಜಿತೇಂದ್ರಿಯನಾದವನು ಸ್ತ್ರೀಯರ ಸಂಗವನ್ನೂ ಸ್ತ್ರೀಲಂಪಟರ ಸಂಗವನ್ನೂ ದೂರದಿಂದಲೇ ಪರಿತ್ಯಜಿಸಿ, ಅವರು ಹತ್ತಿರಕ್ಕೂ ಸುಳಿಯದಂತೆ ಎಚ್ಚರಿಕೆಯಿಂದಿರುತ್ತಾ, ಭಯರಹಿತವೂ ಕ್ಷೇಮಕರವೂ ಮತ್ತು ಏಕಾಂತವೂ ಆಗಿರುವ ಸ್ಥಳದಲ್ಲಿ ಕುಳಿತು ಆಲಸ್ಯವಿಲ್ಲದೇ ಏಕಾಗ್ರಚಿತ್ತನಾಗಿ ನನ್ನನ್ನು ಧ್ಯಾನಮಾಡಬೇಕು.

**ನ ತಥಾಸ್ಯ ಭವೇತ್ಕ್ಲೇಶೋ ಬನ್ಧಶ್ಚಾನ್ಯಪ್ರಸಙ್ಗತಃ ।**
**ಯೋಷಿತ್ಸಙ್ಗಾದ್ಯಥಾ ಪುಂಸೋ ಯಥಾ ತತ್ಸಙ್ಗಿಸಙ್ಗತಃ ॥೩೦॥**

ಪುರುಷರಿಗೆ ಸ್ತ್ರೀಯರ ಸಹವಾಸದಿಂದಲೂ ಸ್ತ್ರೀಲಂಪಟರ ಸಹವಾಸದಿಂದಲೂ ಯಾವ ರೀತಿಯ ಬಂಧನಕ್ಲೇಶವುಂಟಾಗುವುದೋ ಅಂತಹ ಕ್ಲೇಶವು ಬೇರೆಯವರ ಸಹವಾಸದಿಂದುಂಟಾಗುವುದಿಲ್ಲ. ಆದುದರಿಂದ ಕುತ್ಸಿತಸ್ತ್ರೀಯರ ಸಹವಾಸವನ್ನೂ ಸ್ತ್ರೀಲಂಪಟರ ಸಹವಾಸವನ್ನೂ ಖಂಡಿತ ವಾಗಿಯೂ ಮಾಡಬಾರದು."

ಉದ್ಧವನು ಹೇಳುತ್ತಾನೆ :

**ಯಥಾ ತ್ವಾಮರವಿನ್ದಾಕ್ಷ ಯಾದೃಶಂ ವಾ ಯದಾತ್ಮಕಮ್ ।**
**ಧ್ಯಾಯೇನ್ಮುಮುಕ್ಷುರೇತನ್ಮೇ ಧ್ಯಾನಂ ತ್ವಂ ವಕ್ತುಮರ್ಹಸಿ ॥೩೧॥**

"ಕಮಲಾಕ್ಷನೇ! 'ನನ್ನ ಭಕ್ತನು ಧ್ಯಾನಮಾಡಬೇಕು'–ಎಂದು ಹೇಳಿದೆಯಲ್ಲವೇ? ಮೋಕ್ಷಾಪೇಕ್ಷಿಯು ಆ ಧ್ಯಾನವನ್ನು ಯಾವ ರೀತಿಯಲ್ಲಿ ಮಾಡಬೇಕು? ನಿನ್ನ ಯಾವ ರೂಪವನ್ನು ಧ್ಯಾನಿಸಬೇಕು ಮತ್ತು ಯಾವ ಭಾವನೆಯಿಂದ ಮಾಡಬೇಕು? ದಯಮಾಡಿ ಈ ಧ್ಯಾನದ ಪ್ರಕರಣವನ್ನು ನನಗೆ ವಿಶದವಾಗಿ ಹೇಳು."

ಭಗವಂತನು ಹೇಳುತ್ತಾನೆ :

**ಸಮ ಆಸನ ಆಸೀನಃ ಸಮಕಾಯೋ ಯಥಾಸುಖಮ್ ।**
**ಹಸ್ತಾವುತ್ಸಙ್ಗ ಆಧಾಯ ಸ್ವನಾಸಾಗ್ರಕೃತೇಕ್ಷಣಃ ॥೩೨॥**

"ಪ್ರಿಯಸಖನೇ! ಅತಿ ಎತ್ತರವೂ ಅಲ್ಲದ ಅತಿತಗ್ಗೂ ಅಲ್ಲದ ಸಮ

ವಾದ ಆಸನದಲ್ಲಿ ನೆಟ್ಟಗೆ ಆರಾಮವಾಗಿ ಕುಳಿತುಕೊಳ್ಳಬೇಕು. ಎರಡು ಕೈಗಳನ್ನು ತೊಡೆಗಳ ಮೇಲೆ ಇಟ್ಟುಕೊಳ್ಳಬೇಕು. ಎರಡು ಕಣ್ಣುಗಳ ದೃಷ್ಟಿಯನ್ನು ಕೇಂದ್ರೀಕರಿಸಿ ಮೂಗಿನ ತುದಿಯಲ್ಲಿ ಇರಿಸಬೇಕು.

**ಪ್ರಾಣಸ್ಯ ಶೋಧಯೇನ್ಮಾರ್ಗಂ ಪೂರಕುಮ್ಭಕರೇಚಕೈಃ ।**
**ವಿಪರ್ಯಯೇಣಾಪಿ ಶನೈರಭ್ಯಸೇನ್ನಿರ್ಜಿತೇನ್ದ್ರಿಯಃ ॥೩೩॥**

ಜಿತೇಂದ್ರಿಯನಾದವನು ಸುಖಾಸನದಲ್ಲಿ ಕುಳಿತಬಳಿಕ ಪೂರಕ-ಕುಂಭಕ-ರೇಚಕಕ್ರಮದಿಂದಾಗಲೀ ರೇಚಕ-ಕುಂಭಕ-ಪೂರಕಕ್ರಮದಿಂದಾಗಲೀ ಪ್ರಾಣವಾಯುವಿನ ಸಂಚಾರಮಾರ್ಗವನ್ನು ಶೋಧಿಸುತ್ತಾ ಸ್ವಲ್ಪ-ಸ್ವಲ್ಪವಾಗಿ ಪ್ರಾಣಾಯಾಮವನ್ನು ಅಭ್ಯಾಸಮಾಡಬೇಕು.*

**ಹೃದ್ಯವಿಚ್ಛಿನ್ನಮೋಙ್ಕಾರಂ ಘಣ್ಟಾನಾದಂ ಬಿಸೋರ್ಣವತ್ ।**
**ಪ್ರಾಣೇನೋದೀರ್ಯ ತತ್ರಾಥ ಪುನಃ ಸಂವೇಶಯೇತ್ ಸ್ವರಮ್ ॥**

(ಪ್ರಾಣಾಯಾಮದಲ್ಲಿ ಸಗರ್ಭಪ್ರಾಣಾಯಾಮ-ಅಗರ್ಭಪ್ರಾಣಾಯಾಮ–ಎಂಬ ಎರಡು ವಿಧಗಳಿವೆ. ಇಲ್ಲಿ ಶ್ರೇಷ್ಠವಾದ ಸಗರ್ಭಪ್ರಾಣಾಯಾಮವನ್ನು ಹೇಳಿದೆ.) ಮೂಲಾಧಾರಚಕ್ರವನ್ನು ಆರಂಭಿಸಿ ತಾವರೆ ದಂಟಿನಲ್ಲಿರುವ ಸೂಕ್ಷ್ಮವಾದ ತಂತುವಿನಂತೆ ವಿಚ್ಛಿತ್ತಿಯಿಲ್ಲದೆ ಕಂಚಿನ ಘಂಟಾನಾದಕ್ಕೆ ಸಮಾನವಾಗಿ ಹೃದಯದಲ್ಲಿ ಕೇಳಿಬರುವ ಓಂಕಾರವನ್ನು ಪ್ರಾಣವಾಯುವಿನಿಂದ ಮೆಲ್ಲ-ಮೆಲ್ಲನೆ ಸಹಸ್ರಾರಚಕ್ರದ ಮೇಲ್ಭಾಗದಲ್ಲಿರುವ ದ್ವಾದಶಾಂಶಚಕ್ರಕ್ಕೆ ಸೇರಿಸಿ ಮಾತ್ರಾತೀತವಾದ ಈ ಓಂಕಾರದಲ್ಲಿ ಪುನಃ ಹದಿನೈದನೆಯ ಸ್ವರದ ರೂಪವಾದ ಬಿಂದುವನ್ನು ಇರಿಸಬೇಕು.

---

* ಇಡಯಾಪೂರಯೇದ್ವಾಯುಂ ತ್ಯಜೇತ್ಪಿಙ್ಗಳಯಾ ತತಃ ।
ಪಿಙ್ಗಲಾಪೂರಿತಂ ವಾಯುಮಿಡಯಾ ಚ ಪರಿತ್ಯಜೇತ್ ॥

ಇಡಾನಾಡಿಯಿಂದ (ಎಡಹೊಳ್ಳೆಯಿಂದ) ಗಾಳಿಯನ್ನು ತುಂಬಿಕೊಂಡು ಪಿಂಗಳಾನಾಡಿಯಿಂದ (ಬಲಹೊಳ್ಳೆಯಿಂದ) ಗಾಳಿಯನ್ನು ಹೊರಕ್ಕೆ ಬಿಡಬೇಕು. ಪುನಃ ಬಲಹೊಳ್ಳೆಯಿಂದ ಗಾಳಿಯನ್ನು ತುಂಬಿಕೊಂಡು ಎಡಹೊಳ್ಳೆಯಿಂದ (ಇಡಾನಾಡಿ ಯಿಂದ) ಗಾಳಿಯನ್ನು ಬಿಡಬೇಕು. ಪ್ರಾಣಾಯಾಮದಲ್ಲಿ ಇದೊಂದು ವಿಪರ್ಯಯ ಕ್ರಮ. (ಯೋಗಶಾಸ್ತ್ರ)

**ಏವಂ ಪ್ರಣವಸಂಯುಕ್ತಂ ಪ್ರಾಣಮೇವ ಸಮಭ್ಯಸೇತ್ ।**
**ದಶಕೃತ್ವಸ್ತ್ರಿಷವಣಂ ಮಾಸಾದರ್ವಾಗ್ಜಿತಾನಿಲಃ ॥೩೫॥**

ಈ ರೀತಿಯಾಗಿ ಯಾವನು ಪ್ರಾತಃಕಾಲ-ಮಧ್ಯಾಹ್ನ-ಸಾಯಂಕಾಲ ಈ ಮೂರು ಕಾಲಗಳಲ್ಲಿಯೂ ಹತ್ತು-ಹತ್ತು ಬಾರಿ ಓಂಕಾರಯುಕ್ತವಾದ ಈ ಪ್ರಾಣಾಯಾಮವನ್ನು ಅಭ್ಯಾಸಮಾಡುವನೋ ಅವನು ಒಂದು ಮಾಸ ದೊಳಗಾಗಿ ಪ್ರಾಣವಾಯುವನ್ನು ಜಯಿಸುವನು. ಆತನಿಗೆ ಪ್ರಾಣಾಯಾಮದ ಸಿದ್ಧಿಯಾಗುವುದು.

**ಹೃತ್ಪುಣ್ಡರೀಕಮನ್ತಃಸ್ಥಮೂರ್ಧ್ವನಾಲಮಧೋಮುಖಮ್ ।**
**ಧ್ಯಾತ್ವೋರ್ಧ್ವಮುಖಮುನ್ನಿದ್ರಮಷ್ಟಪತ್ರಂ ಸಕರ್ಣಿಕಮ್ ॥೩೬॥**

ಶರೀರದ ಮಧ್ಯದಲ್ಲಿ ಬಾಳೇಹೂವಿನ ಮೊಗ್ಗಿನಂತೆ ಊರ್ಧ್ವನಾಳ ದಿಂದ ಕೂಡಿ ಅಧೋಮುಖವಾಗಿರುವ ಹೃದಯಕಮಲವನ್ನು, ಮೇಲ್ಮುಖ ವಾಗಿ ಅರಳಿ ಎಂಟು ದಳಗಳುಳ್ಳದ್ದಾಗಿ ಬೀಜಕೋಶದಿಂದ ಯುಕ್ತವಾಗಿದೆ ಯೆಂದು ಭಾವಿಸಿಕೊಂಡು ಧ್ಯಾನಿಸಬೇಕು.

**ಕರ್ಣಿಕಾಯಾಂ ನ್ಯಸೇತ್ಸೂರ್ಯಸೋಮಾಗ್ನೀನುತ್ತರೋತ್ತರಮ್ ।**
**ವಹ್ನಿಮಧ್ಯೇ ಸ್ಮರೇದ್ರೂಪಂ ಮಮೈತದ್ಧ್ಯಾನಮಙ್ಗಲಮ್ ॥೩೭॥**

ಬಳಿಕ ಕಮಲದ ಬೀಜಕೋಶರೂಪವಾದ ಹೃದಯಪೀಠದಲ್ಲಿ ಸೂರ್ಯಮಂಡಲವನ್ನೂ, ಅದರ ಮೇಲೆ ಚಂದ್ರಮಂಡಲವನ್ನೂ, ಅದರ ಮೇಲೆ ಅಗ್ನಿಮಂಡಲವನ್ನೂ ಭಾವಿಸಿಕೊಂಡು ಧ್ಯಾನಮಾಡಬೇಕು. ಅನಂತರ ವಹ್ನಿಮಂಡಲದ ಮಧ್ಯದಲ್ಲಿ ಧ್ಯಾನಕ್ಕೆ ಮಂಗಳರೂಪವಾಗಿರುವ ನನ್ನ ಈ ದಿವ್ಯರೂಪವನ್ನು ಸ್ಮರಿಸಬೇಕು.

**ಸಮಂ ಪ್ರಶಾನ್ತಂ ಸುಮುಖಂ ದೀರ್ಘಚಾರುಚತುರ್ಭುಜಮ್ ।**
**ಸುಚಾರುಸುನ್ದರಗ್ರೀವಂ ಸುಕಪೋಲಂ ಶುಚಿಸ್ಮಿತಮ್ ॥೩೮॥**

**ಸಮಾನಕರ್ಣವಿನ್ಯಸ್ತಸ್ಫುರನ್ಮಕರಕುಣ್ಡಲಮ್ ।**
**ಹೇಮಾಮ್ಬರಂ ಘನಶ್ಯಾಮಂ ಶ್ರೀವತ್ಸಶ್ರೀನಿಕೇತನಮ್ ॥೩೯॥**

**ಶಙ್ಖಚಕ್ರಗದಾಪದ್ಮವನಮಾಲಾವಿಭೂಷಿತಮ್ ।**
**ನೂಪುರೈರ್ವಿಲಸತ್ಪಾದಂ ಕೌಸ್ತುಭಪ್ರಭಯಾ ಯುತಮ್ ॥೪೦॥**

**ದ್ಯುಮತ್ಕಿರೀಟಕಟಕಕಟಿಸೂತ್ರಾಙ್ಗದಾಯುತಮ್ ।**
**ಸರ್ವಾಙ್ಗಸುನ್ದರಂ ಹೃದ್ಯಂ ಪ್ರಸಾದಸುಮುಖೇಕ್ಷಣಮ್ ।**
**ಸುಕುಮಾರಮಭಿಧ್ಯಾಯೇತ್ ಸರ್ವಾಙ್ಗೇಷು ಮನೋ ದಧತ್ ॥೪೧॥**

ಸರ್ವಾಂಗಸುಂದರನಾಗಿ ಕುಂದುಕೊರತೆಗಳಿಲ್ಲದಿರುವ ಅವಯವಗಳನ್ನು ಹೊಂದಿರುವವನಾಗಿ ನನ್ನನ್ನು ಭಾವಿಸಿಕೊಳ್ಳಬೇಕು. ಪ್ರಶಾಂತವಾದ ಮತ್ತು ಸುಂದರವಾದ ಮುಖವಿರುವವನಂತೆ ನನ್ನನ್ನು ಭಾವಿಸಿಕೊಳ್ಳಬೇಕು. ನೀಳವಾಗಿಯೂ, ಸುಂದರವಾಗಿಯೂ ಇರುವ ನಾಲ್ಕು ತೋಳುಗಳನ್ನು ಹೊಂದಿರುವವನನ್ನಾಗಿ ನನ್ನನ್ನು ಹೃದಯಕಮಲಮಧ್ಯದಲ್ಲಿರುವ ಅಗ್ನಿಮಂಡಲದಲ್ಲಿರುವಂತೆ ಭಾವಿಸಿಕೊಳ್ಳಬೇಕು. ಕಡುಚೆಲುವಾದ ಮತ್ತು ಸುಂದರವಾದ ಕಂಠವಿರುವವನನ್ನಾಗಿಯೂ ಸುಂದರವಾದ ಕೆನ್ನೆಗಳು ಮತ್ತು ಶುಭ್ರವಾದ ನಗೆಯುಳ್ಳವವನನ್ನಾಗಿಯೂ ನನ್ನನ್ನು ಭಾವಿಸಿಕೊಳ್ಳಬೇಕು. ಸಮಾನವಾದ ಕಿವಿಗಳಲ್ಲಿ ಧರಿಸಲ್ಪಟ್ಟ ಅತ್ಯಂತಪ್ರಕಾಶಮಾನವಾದ ಕರ್ಣಕುಂಡಲಗಳುಳ್ಳವನೆಂದು ಭಾವಿಸಬೇಕು. ಪೀತಾಂಬರವನ್ನು ಧರಿಸಿರುವವನನ್ನಾಗಿ ಮೇಘದಂತೆ ಶ್ಯಾಮಲವರ್ಣನಾಗಿರುವಂತೆಯೂ, ಶ್ರೀವತ್ಸಚಿಹ್ನೆಯಿಂದ ಕೂಡಿರುವವನಂತೆಯೂ, ವಕ್ಷಃಸ್ಥಳದಲ್ಲಿ ಲಕ್ಷ್ಮೀದೇವಿಯನ್ನು ಧರಿಸಿರುವವನಂತೆಯೂ ನನ್ನನ್ನು ಭಾವಿಸಿಕೊಳ್ಳಬೇಕು. ನಾಲ್ಕು ಕೈಗಳಲ್ಲಿಯೂ ಅನುಕ್ರಮವಾಗಿ ಶಂಖ-ಚಕ್ರ-ಗದೆ-ಪದ್ಮಗಳನ್ನು ಹಿಡಿದು ವನಮಾಲೆಯನ್ನು ಧರಿಸಿರುವವನೆಂದು ನನ್ನನ್ನು ಭಾವಿಸಿಕೊಳ್ಳಬೇಕು. ಕಾಲಂದುಗೆಗಳಿಂದ ಕೂಡಿ ರಮಣೀಯವಾಗಿ ಕಾಣುವ ಪಾದಗಳುಳ್ಳವನೆಂದು ಭಾವಿಸಬೇಕು. ಕಂಠದಲ್ಲಿ ಧರಿಸಿರುವ ಕೌಸ್ತುಭಮಣಿಯ ಪ್ರಭೆಯಿಂದ ಯುಕ್ತನಾಗಿರುವನೆಂದು ಭಾವಿಸಬೇಕು. ಥಳ-ಥಳಿಸುವ ಕಿರೀಟದಿಂದಲೂ, ಕೈಬಳೆಗಳಿಂದಲೂ, ಉಡಿದಾರದಿಂದಲೂ, ತೋಳ್ಬಳೆಗಳಿಂದಲೂ ಸಮಲಂಕೃತನಾಗಿರುವನೆಂದು ಭಾವಿಸಿಕೊಳ್ಳಬೇಕು. ಸರ್ವಾಂಗಸುಂದರನಾಗಿ ಆಹ್ಲಾದಕರನಾಗಿ ಪ್ರಸನ್ನವಾದ ಮುಖದಿಂದಲೂ ಮತ್ತು ನೋಟದಿಂದಲೂ ಕೂಡಿರುವವನನ್ನಾಗಿಯೂ

ಭಾವಿಸಿಕೊಳ್ಳಬೇಕು. ಸುಂದರವಾದ ಮತ್ತು ಕಡುಚೆಲುವನಾದ ಕುಮಾರನೆಂದು ನನ್ನನ್ನು ಭಾವಿಸಿಕೊಂಡು ಮೇಲೆ ವಿವರಿಸಿದ ಎಲ್ಲ ಅಂಗಗಳಲ್ಲಿಯೂ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಮಾಡಬೇಕು.

**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯೋ ಮನಸಾಽಕೃಷ್ಯ ತನ್ಮನಃ ।**
**ಬುದ್ಧ್ಯಾ ಸಾರಥಿನಾ ಧೀರಃ ಪ್ರಣಯೇನ್ಮಯಿ ಸರ್ವತಃ ॥೪೨॥**

ಮನಸ್ಸಿನ ಮೂಲಕವಾಗಿ ಇಂದ್ರಿಯಗಳನ್ನು ವಿಷಯಗಳಿಂದ ಹಿಂದಕ್ಕೆ ತೆಗೆದುಕೊಳ್ಳಬೇಕು. ಇಂದ್ರಿಯಗಳಲ್ಲಿ ವಿಷಯಗಳಿಲ್ಲದಿದ್ದರೆ ಮನಸ್ಸಿನಲ್ಲೂ ವಿಷಯಗಳಿರುವುದಿಲ್ಲ. ಅಂತಹ ನಿರ್ವಿಷಯವಾದ ಮನಸ್ಸನ್ನು ಬುದ್ಧಿಯೆಂಬ ಸಾರಥಿಯ ಮೂಲಕವಾಗಿ ನನ್ನಲ್ಲಿ ಸರ್ವಪ್ರಕಾರದಿಂದಲೂ ನೆಲೆಗೊಳಿಸಬೇಕು.

**ತತ್ಸರ್ವವ್ಯಾಪಕಂ ಚಿತ್ತಮಾಕೃಷ್ಯೈಕತ್ರ ಧಾರಯೇತ್ ।**
**ನಾನ್ಯಾನಿ ಚಿನ್ತಯೇದ್ಭೂಯಃ ಸುಸ್ಮಿತಂ ಭಾವಯೇನ್ಮುಖಮ್ ॥೪೩॥**

ನನ್ನ ಸರ್ವಾಂಗಗಳಲ್ಲಿಯೂ ವ್ಯಾಪಿಸಿದ್ದ ಚಿತ್ತವನ್ನು ಅನುಕ್ರಮ ವಾಗಿ ಒಂದೊಂದೇ ಅಂಗಗಳಿಂದ ಹಿಂದಕ್ಕೆ ತೆಗೆದುಕೊಳ್ಳುತ್ತಾ, ಪುನಃ ಬೇರೆ ಯಾವ ಅಂಗಗಳನ್ನೂ ಧ್ಯಾನಿಸ ಹೋಗದೆ, ಅಂತಿಮವಾಗಿ ಕಿರುನಗೆಯಿಂದ ಕೂಡಿದ ನನ್ನ ಸುಂದರಮುಖಾರವಿಂದವೊಂದನ್ನೇ ಸತತವಾಗಿ ಹೃದಯ ಕಮಲದಲ್ಲಿರುವ ಅಗ್ನಿಮಂಡಲದಲ್ಲಿ ಧ್ಯಾನಮಾಡಬೇಕು.

**ತತ್ರ ಲಬ್ಧಪದಂ ಚಿತ್ತಮಾಕೃಷ್ಯ ವ್ಯೋಮ್ನಿ ಧಾರಯೇತ್ ।**
**ತಚ್ಚ ತ್ಯಕ್ತ್ವಾ ಮದಾರೋಹೋ ನ ಕಿಞ್ಚಿದಪಿ ಚಿನ್ತಯೇತ್ ॥೪೪॥**

ಮನಸ್ಸು, ಕಿರುನಗೆಯ ಮುಖಕಮಲದಲ್ಲಿ ಸುಸ್ಥಿರವಾಗಿ ನಿಂತರೆ ಆ ಮನಸ್ಸನ್ನು ಅಲ್ಲಿಂದ ಸೆಳೆದು ಅವ್ಯಕ್ತವಾದ ಆಕಾಶದಲ್ಲಿ ನೆಲೆಗೊಳಿಸಬೇಕು. ಕಡೆಯದಾಗಿ ಅದನ್ನೂ ತ್ಯಜಿಸಿ ಬೇರೆ ಯಾವುದನ್ನೂ ಚಿಂತಿಸಹೋಗದೆ ಶುದ್ಧಬ್ರಹ್ಮಸ್ವರೂಪವಾದ ನನ್ನಲ್ಲಿ ವಿಲೀನಗೊಳಿಸಬೇಕು.

**ಏವಂ ಸಮಾಹಿತಮತಿರ್ಮಾಮೇವಾತ್ಮಾನಮಾತ್ಮನಿ ।**
**ವಿಚಷ್ಟೇ ಮಯಿ ಸರ್ವಾತ್ಮನ್ ಜ್ಯೋತಿರ್ಜ್ಯೋತಿಷಿ ಸಂಯುತಮ್ ॥**

ಹೀಗೆ ಸಮಾಧಿನಿಷ್ಠನಾದ ಪುರುಷನು ದೀಪವು ದೀಪದಲ್ಲಿ ಸೇರುವ

ಯನ್ನು ಪಡೆಯುವಂತೆ ನನ್ನನ್ನು ತನ್ನಲ್ಲಿಯೂ ತನ್ನನ್ನು ಸರ್ವಾತ್ಮನಾದ ನನ್ನಲ್ಲಿಯೂ ಸೇರಿಸಿಕೊಳ್ಳುವನು.

**ಧ್ಯಾನೇನೇತ್ಥಂ ಸುತೀವ್ರೇಣ ಯುಞ್ಜತೋ ಯೋಗಿನೋ ಮನಃ ।**
**ಸಂಯಾಸ್ಯತ್ಯಾಶು ನಿರ್ವಾಣಂ ದ್ರವ್ಯಜ್ಞಾನಕ್ರಿಯಾಭ್ರಮಃ ॥೪೬॥**

ಯಾವ ಯೋಗಿಯು ಹೀಗೆ ತೀವ್ರತರವಾದ ಭಕ್ತಿಯೋಗದ ಮೂಲಕ ವಾಗಿ ನನ್ನಲ್ಲಿಯೇ ತನ್ನ ಮನಸ್ಸನ್ನು ಸೇರಿಸಿಬಿಡುವನೋ ಅಂತಹವನ ಚಿತ್ತವು ವಸ್ತುವಿನ ಅನೇಕತೆ, ಅದಕ್ಕೆ ಸಂಬಂಧಿಸಿದ ಜ್ಞಾನ, ಅದರ ಪ್ರಾಪ್ತಿಗಾಗಿ ಮಾಡುವ ಕರ್ಮಗಳು–ಇವೆಲ್ಲದರಿಂದಲೂ ನಿವೃತ್ತವಾಗಿ ಶಾಂತಿಯನ್ನು ಹೊಂದುತ್ತದೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಏಕಾದಶಸ್ಕಂಧದ ೧೪ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೧೫ನೆಯ ಅಧ್ಯಾಯ

## ಅಣಿಮಾದಿ ಸಿದ್ಧಿಗಳ ವರ್ಣನೆ

ಭಗವಂತನು ಹೇಳುತ್ತಾನೆ :

**ಜಿತೇನ್ದ್ರಿಯಸ್ಯ ಯುಕ್ತಸ್ಯ ಜಿತಶ್ವಾಸಸ್ಯ ಯೋಗಿನಃ ।**
**ಮಯಿ ಧಾರಯತಶ್ಚೇತ ಉಪತಿಷ್ಠನ್ತಿ ಸಿದ್ಧಯಃ ॥೧॥**

"ಜಿತೇಂದ್ರಿಯನಾಗಿ ಸ್ಥಿರಚಿತ್ತನಾದ, ಪ್ರಾಣಗಳನ್ನು ಜಯಿಸಿ ನನ್ನಲ್ಲೇ ಮನಸ್ಸನ್ನು ನೆಲೆಗೊಳಿಸಿದ ಯೋಗಿಗೆ ಸಿದ್ಧಿಗಳು ಕಿಂಕರರಂತೆ ಬಳಿಯಲ್ಲಿ ಬಂದು ನಿಂತಿರುತ್ತವೆ."

ಉದ್ಧವನು ಪ್ರಶ್ನಿಸುತ್ತಾನೆ :

**ಕಯಾ ಧಾರಣಯಾ ಕಾಸ್ವಿತ್ಕಥಂಸ್ವಿತ್ ಸಿದ್ಧಿರಚ್ಯುತ ।**
**ಕತಿ ವಾ ಸಿದ್ಧಯೋ ಬ್ರೂಹಿ ಯೋಗಿನಾಂ ಸಿದ್ಧಿದೋ ಭವಾನ್ ॥೨॥**

"ಅಚ್ಯುತನೇ! ಯಾವ ಧಾರಣೆಯಿಂದ ಯಾವ ಸಿದ್ಧಿಯುಂಟಾಗು ತ್ತದೆ? ಆ ಸಿದ್ಧಿಯು ಹೇಗಿರುತ್ತದೆ? ಅದರ ಸ್ವರೂಪ-ಲಕ್ಷಣ-ಪ್ರಭಾವ

ಗಳೇನು? ಎಷ್ಟು ಬಗೆಯ ಸಿದ್ಧಿಗಳಿವೆ? ಯೋಗಿಗಳಿಗೆ ಸಿದ್ಧಿಗಳನ್ನು ದಯಪಾಲಿಸುವ ನೀನು ಈ ವಿಷಯವನ್ನು ನನಗೆ ಹೇಳು.''

ಭಗವಂತನು ಹೇಳುತ್ತಾನೆ :

**ಸಿದ್ಧಯೋಽಷ್ಟಾದಶ ಪ್ರೋಕ್ತಾ ಧಾರಣಾಯೋಗಪಾರಗೈಃ ।**
**ತಾಸಾಮಷ್ಟೌ ಮತ್ಪ್ರಧಾನಾ ದಶೈವ ಗುಣಹೇತವಃ ॥೩॥**

"ಪ್ರಿಯಸಖನೇ! ಧಾರಣಾಯೋಗಪಾರಂಗತರಾದ ಮುನಿಗಳು, ಹದಿನೆಂಟು ಬಗೆಯ ಸಿದ್ಧಿಗಳಿವೆಯೆಂದು ಹೇಳುತ್ತಾರೆ. ಅವುಗಳಲ್ಲಿ ಎಂಟು ಸಿದ್ಧಿಗಳು ನನ್ನನ್ನೇ ಪ್ರಧಾನನನ್ನಾಗಿ ಹೊಂದಿರತಕ್ಕುವುಗಳು. ಉಳಿದ ಹತ್ತು ಸಿದ್ಧಿಗಳು ಸತ್ತ್ವಗುಣವಿಕಾಸದಿಂದ ಸಿದ್ಧಿಸತಕ್ಕುವುಗಳು.

**ಅಣಿಮಾ ಮಹಿಮಾ ಮೂರ್ತೇರ್ಲಘಿಮಾ ಪ್ರಾಪ್ತಿರಿನ್ದ್ರಿಯೈಃ ।**
**ಪ್ರಾಕಾಮ್ಯಂ ಶ್ರುತದೃಷ್ಟೇಷು ಶಕ್ತಿಪ್ರೇರಣಮೀಶಿತಾ ॥೪॥**

**ಗುಣೇಷ್ವಸಙ್ಗೋ ವಶಿತಾ ಯತ್ಕಾಮಸ್ತದವಸ್ಯತಿ ।**
**ಏತಾ ಮೇ ಸಿದ್ಧಯಃ ಸೌಮ್ಯ ಅಷ್ಟಾವೌತ್ಪತ್ತಿಕಾ ಮತಾಃ ॥೫॥**

ಅಣಿಮಾ, ಮಹಿಮಾ ಮತ್ತು ಲಘಿಮ ಎಂಬ ಮೂರು ಶರೀರಕ್ಕೆ ಸಂಬಂಧಿಸಿದವುಗಳು. ಪ್ರಾಪ್ತಿ ಎಂಬ ನಾಲ್ಕನೆಯ ಸಿದ್ಧಿಯು ಇಂದ್ರಿಯಗಳಿಗೆ ಸಂಬಂಧಿಸಿದ್ದು. ಲೌಕಿಕ ಮತ್ತು ಪಾರಲೌಕಿಕವಸ್ತುಗಳನ್ನು ಇಚ್ಛಾನುಸಾರವಾಗಿ ಅನುಭವಿಸಲು ಸಾಧ್ಯವಾಗತಕ್ಕುದು ಪ್ರಾಕಾಮ್ಯ-ಎಂಬ ಸಿದ್ಧಿಯಿಂದ. ಮಾಯೆಯನ್ನೂ ಮತ್ತು ಅದರ ಶಕ್ತಿಗಳನ್ನೂ ಇಚ್ಛಾನು ಸಾರವಾಗಿ ಪ್ರೇರಿಸಬಲ್ಲುದು ಈಶಿತಾಸಿದ್ಧಿ. ವಿಷಯಗಳಲ್ಲಿಯೇ ಇದ್ದರೂ ಅವುಗಳಲ್ಲಿ ಅನಾಸಕ್ತನಾಗಿರುವುದು ವಶಿತಾಸಿದ್ಧಿಯಿಂದ. ಅಪೇಕ್ಷಿಸಿದ ಸುಖವನ್ನು ಪಡೆದುಕೊಂಡು ಉಪಭೋಗಿಸಬಹುದಾದ ಸಿದ್ಧಿಗೆ ಕಾಮಾವಸಾಯಿತಾಸಿದ್ಧಿ-ಎಂದು ಹೆಸರು. ಉದ್ಧವ! ಈ ಎಂಟು ಸಿದ್ಧಿಗಳೂ ನನ್ನಲ್ಲಿ ಸ್ವಾಭಾವಿಕವಾಗಿಯೇ ಇರತಕ್ಕುವುಗಳು.*

---

* ಅಮರಸಿಂಹನು 'ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ'-ಎಂದು ಗರಿಮಾ ಎಂಬ ಮೂರನೆಯ ಸಿದ್ಧಿಯನ್ನು ಹೇಳಿರುವನು. ಆದರೂ ಭಗವಂತನು

**ಅನೂರ್ಮಿಮತ್ತ್ವಂ ದೇಹೇಽಸ್ಮಿನ್ದೂರಶ್ರವಣದರ್ಶನಮ್ ।**
**ಮನೋಜವಃ ಕಾಮರೂಪಂ ಪರಕಾಯಪ್ರವೇಶನಮ್ ॥೬॥**

**ಸ್ವಚ್ಛನ್ದಮೃತ್ಯುರ್ದೇವಾನಾಂ ಸಹಕ್ರೀಡಾನುದರ್ಶನಮ್ ।**
**ಯಥಾಸಙ್ಕಲ್ಪಸಂಸಿದ್ಧಿರಾಜ್ಞಾಪ್ರತಿಹತಾಗತಿಃ ॥೭॥**

ಈ ಶರೀರದಲ್ಲಿ ಹಸಿವು-ಬಾಯಾರಿಕೆ, ಶೋಕ-ಮೋಹ, ಮುಪ್ಪು-ಸಾವು ಎಂಬ ಆರು ತರಂಗಗಳಿಗೆ ಅವಕಾಶವಿಲ್ಲದೇ ಇರುವುದಕ್ಕೆ ಅನೂರ್ಮಿತ್ವಸಿದ್ಧಿಯೆಂದು ಹೆಸರು. ದೂರದಲ್ಲಾಗುವ ಶಬ್ದವನ್ನು ಕೇಳು ವುದು ದೂರಶ್ರವಣಸಿದ್ಧಿ. ದೂರದಲ್ಲಿರುವ ವಸ್ತುವನ್ನು ನೋಡುವುದು ದೂರದರ್ಶನಸಿದ್ಧಿ. ಮನೋವೇಗವನ್ನು ಅನುಸರಿಸಿ ಗಮನದ ಸಿದ್ಧಿಯು ಮನೋಜವಸಿದ್ಧಿ. ತನಗೆ ಇಷ್ಟವಾದ ರೂಪಗಳನ್ನು ಪಡೆಯುವುದು ಕಾಮರೂಪಸಿದ್ಧಿ. ಅನ್ಯಶರೀರದಲ್ಲಿ ಪ್ರವೇಶಿಸುವುದು–ಪರಕಾಯಪ್ರವೇಶ ಸಿದ್ಧಿ. ತನ್ನ ಇಚ್ಛೆಗೆ ಅನುಸಾರವಾಗಿ ಮರಣವನ್ನು ಹೊಂದುವುದು ಸ್ವೇಚ್ಛಾಮರಣಸಿದ್ಧಿ. ಅಪ್ಸರೆಯರೊಡನೆ ದೇವತೆಗಳು ಆಡುವ ಕ್ರೀಡೆಗಳನ್ನು ನೋಡುವುದು ಕ್ರೀಡಾನುದರ್ಶನಸಿದ್ಧಿ. ಸಂಕಲ್ಪಾನುಸಾರವಾಗಿ ಬೇಕು ಬೇಕಾದ ವಸ್ತುಗಳನ್ನು ಪಡೆದುಕೊಳ್ಳುವುದು ಸಂಕಲ್ಪಸಿದ್ಧಿ. ಯಾರಿಂದಲೂ ತಡೆಯಲ್ಪಡದೆ ಸಕಲದೇಶಗಳಿಂದಲೂ ಪರಿಪಾಲಿಸಲ್ಪಡುವ ಅಪ್ರತಿಹತವಾದ ಆಜ್ಞೆ–ಆಜ್ಞಾಸಿದ್ಧಿ. ಈ ಹತ್ತು ಸಿದ್ಧಿಗಳೂ ಸತ್ತ್ವಗುಣದ ಆಧಿಕ್ಯದಿಂದ ಸಿದ್ಧಿಸುವುವು.

---

ಇದನ್ನು ಹೇಳದೆ ನಿರತಿಶಯಸುಖರೂಪವಾದ ಎಂಟನೆಯ ಸಿದ್ಧಿಯನ್ನು ಬೇರೆ ಹೇಳಿರುವುದರಿಂದ ಅದೇ ಗ್ರಾಹ್ಯವು. (ವೀರರಾಘವೀಯ)

ಅಮರಸಿಂಹನು ಹೇಳಿರುವ ಎಂಟು ಸಿದ್ಧಿಗಳ ವಿವರಣೆ :

1) ಅಣಿಮಾ–ಪರಮಾಣುವಿನಂತೆ ಬಹಳ ಸೂಕ್ಷ್ಮರೂಪವನ್ನು ಪಡೆಯುವುದು. 2) ಮಹಿಮಾ–ವಿಭುತ್ವ ಪ್ರಾಪ್ತಿ. ಲಘಿಮಾ–ಹತ್ತಿಯಂತೆ ಬಹಳ ಲಘುವಾ ಗುವುದು. 4) ಗರಿಮಾ–ಮೇರುಪರ್ವತದಂತೆ ದೊಡ್ಡದಾಗುವುದು. 5) ಪ್ರಾಪ್ತಿ–ಚಂದ್ರಮಂಡಲಾದಿಗಮನ. 6) ಪ್ರಾಕಾಮ್ಯ–ಸತ್ಯಸಂಕಲ್ಪತ್ವ. 7) ವಶಿತ್ವ ಸಕಲಪ್ರಾಣಿಗಳ ನಿಯಂತ್ರಣ. 8) ಈಶಿತ್ವ–ಸಕಲ ಭೂತಗಳ ಉತ್ಪಾದನೆಯ ಸಾಮರ್ಥ್ಯ.

**ತ್ರಿಕಾಲಜ್ಞತ್ವಮದ್ವಂದ್ವಂ ಪರಚಿತ್ತಾದ್ಯಭಿಜ್ಞತಾ ।**
**ಅಗ್ನ್ಯರ್ಕಾಂಬುವಿಷಾದೀನಾಂ ಪ್ರತಿಷ್ಟಮ್ಭೋಽಪರಾಜಯಃ ॥೮॥**

ಹತ್ತು ಸಿದ್ಧಿಗಳೇ ಅಲ್ಲದೆ ಭೂತ-ಭವಿಷ್ಯದ್ವರ್ತಮಾನಗಳಲ್ಲಿ ಏನಾಗುವುದೆಂಬುದನ್ನು ತಿಳಿಯುವ ತ್ರಿಕಾಲಜ್ಞಾನಸಿದ್ಧಿ. ಶೀತೋಷ್ಣ-ಸುಖ-ದುಃಖಾದಿಗಳನ್ನು ಸಹಿಸಿಕೊಳ್ಳಲು ಸಮರ್ಥವಾದ ಅದ್ವಂದ್ವಸಿದ್ಧಿ. ಇತರರ ಮನಸ್ಸಿನಲ್ಲಿ ಏನಿರುವುದೆಂಬುದನ್ನು ತಿಳಿಯಬಹುದಾದ ಪರಚಿತ್ತಾಭಿಜ್ಞಾಸಿದ್ಧಿ. ಅಗ್ನಿಯ ಸುಡುವಿಕೆಯನ್ನು ತಡೆಯಬಹುದಾದ ಅಗ್ನಿಸ್ತಂಭನಸಿದ್ಧಿ. ಸೂರ್ಯನ ಶಾಖವನ್ನು ತಡೆಯಬಹುದಾದ ಸೂರ್ಯಸ್ತಂಭನಸಿದ್ಧಿ. ನೀರಿನ ಮೇಲೂ ನಡೆದು ಹೋಗಲು ಸಾಧ್ಯವಾಗಬಹುದಾದ ಜಲಸ್ತಂಭನಸಿದ್ಧಿ. ವಿಷವೇ ಮೊದಲಾದುವು ಪರಿಣಾಮವನ್ನುಂಟುಮಾಡದಿರಲು ಸಾಧ್ಯವಾಗುವ ವಿಷಸ್ತಂಭನಸಿದ್ಧಿ. ಶತ್ರುಗಳಿಂದ ಅಥವಾ ಪ್ರತಿವಾದಿಗಳಿಂದ ಯಾವಾಗಲೂ ಸೋಲದೇ ಇರಬಹುದಾದ ಅಪರಾಜಯಸಿದ್ಧಿ. ಇವು ಕ್ಷುದ್ರ ಸಿದ್ಧಿಗಳೆಂದು ಹೇಳಲ್ಪಟ್ಟಿವೆ.

**ಏತಾಶ್ಚೋದ್ದೇಶತಃ ಪ್ರೋಕ್ತಾ ಯೋಗಧಾರಣಸಿದ್ಧಯಃ ।**
**ಯಯಾ ಧಾರಣಯಾ ಯಾ ಸ್ಯಾದ್ಯಥಾ ವಾ ಸ್ಯಾನ್ನಿಬೋಧ ಮೇ ॥**

ಪ್ರಿಯವಯಸ್ಯನೇ! ಉದ್ಧವ! ಯೋಗಧಾರಣೆಮಾಡುವುದರಿಂದ ಸಿದ್ಧಿಗಳು ಸಿದ್ಧಿಸುತ್ತವೆ. ನಾಮ-ನಿರ್ದೇಶಗಳೊಡನೆ ಅವುಗಳ ಸ್ವರೂಪವನ್ನು ನಿನಗೆ ವರ್ಣಿಸಿ ಹೇಳಿದ್ದೇನೆ. ಈಗ ನಾನು ಯಾವ ಧಾರಣೆಯಿಂದ ಯಾವ ಸಿದ್ಧಿಯಾಗುತ್ತದೆ ಮತ್ತು ಯಾವ ರೀತಿಯಲ್ಲಾಗುತ್ತದೆಂಬುದನ್ನು ಹೇಳುತ್ತೇನೆ ; ಗಮನಿಸಿ ಕೇಳು :

**ಭೂತಸೂಕ್ಷ್ಮಾತ್ಮನಿ ಮಯಿ ತನ್ಮಾತ್ರಂ ಧಾರಯೇನ್ಮನಃ ।**
**ಅಣಿಮಾನಮವಾಪ್ನೋತಿ ತನ್ಮಾತ್ರೋಪಾಸಕೋ ಮಮ ॥೧೦॥**

ಉದ್ಧವ! ಪಂಚಭೂತಗಳಲ್ಲಿರುವ ಸೂಕ್ಷ್ಮತಮವಾದ ತನ್ಮಾತ್ರಗಳು ನನ್ನ ಶರೀರಗಳೇ ಆಗಿವೆ. ಯಾವ ಸಾಧಕನು ಕೇವಲ ನನ್ನ ತನ್ಮಾತ್ರ ಶರೀರವನ್ನು ಉಪಾಸನೆಮಾಡುವನೋ, ತನ್ನ ಮನಸ್ಸನ್ನು ಸೂಕ್ಷ್ಮಾಕಾರವಾಗಿಸಿ ಅಲ್ಲಿಯೇ ನೆಲೆಗೊಳಿಸುವನೋ, ನನ್ನ ತನ್ಮಾತ್ರಶರೀರವನ್ನು ಬಿಟ್ಟು

ಬೇರೆ ಯಾವುದನ್ನೂ ಧ್ಯಾನಿಸುವುದಿಲ್ಲವೋ, ಅಂತಹವನಿಗೆ ಕಲ್ಲಿನೊಳಗೂ ಪ್ರವೇಶಿಸಬಹುದಾದ 'ಅಣಿಮಾ'–ಎಂಬ ಸಿದ್ಧಿಯು ಸಿದ್ಧಿಸುತ್ತದೆ.*

**ಮಹತ್ಯಾತ್ಮನ್ಮಯಿ ಪರೇ ಯಥಾಸಂಸ್ಥಂ ಮನೋ ದಧತ್ ।**
**ಮಹಿಮಾನಮವಾಪ್ನೋತಿ ಭೂತಾನಾಂ ಸ ಪೃಥಕ್ ಪೃಥಕ್ ॥೧೧॥**

ಮಹತ್ತತ್ತ್ವರೂಪದಲ್ಲಿಯೂ ನಾನೇ ಪ್ರಕಾಶಿತನಾಗಿದ್ದೇನೆ. ಆ ರೂಪದಲ್ಲಿ ನಾನು ಸಮಸ್ತವಾದ ವ್ಯಾವಹಾರಿಕಜ್ಞಾನಕ್ಕೂ ಕೇಂದ್ರಬಿಂದುವಾಗಿದ್ದೇನೆ. ಯಾವನು ಆ ನನ್ನ ರೂಪದಲ್ಲಿ ತನ್ನ ಮನಸ್ಸನ್ನು ಮಹ ತ್ತತ್ತ್ವಾಕಾರಗೊಳಿಸಿ ತನ್ಮಯವಾಗಿಸುತ್ತಾನೆಯೋ ಅವನು ಮಹಿಮಾ–ಎಂಬ ಸಿದ್ಧಿಯನ್ನು ಪಡೆಯುತ್ತಾನೆ. ಅಂತೆಯೇ ನನ್ನ ಶರೀರಗಳೇ ಆಗಿರುವ ಪೃಥ್ವಿಯೇ ಮೊದಲಾದ ಪಂಚಭೂತಗಳಲ್ಲಿ ಪ್ರತ್ಯೇಕ-ಪ್ರತ್ಯೇಕವಾಗಿ ತನ್ನ ಮನಸ್ಸನ್ನು ಯಾವನು ಲೀನಗೊಳಿಸುವನೋ ಅಂತಹ ಸಾಧಕನು ಆಯಾ ಭೂತಗಳ ಮಹತ್ತ್ವವನ್ನು ಪಡೆದುಕೊಳ್ಳುತ್ತಾನೆ. ಇದೂ ಕೂಡ ಮಹಿಮಾ ಸಿದ್ಧಿಯಲ್ಲೇ ಅಂತರ್ಗತವಾದ ಸಿದ್ಧಿಯಾಗಿದೆ.

**ಪರಮಾಣುಮಯೇ ಚಿತ್ತಂ ಭೂತಾನಾಂ ಮಯಿ ರಞ್ಜಯನ್ ।**
**ಕಾಲಸೂಕ್ಷ್ಮಾರ್ಥತಾಂ ಯೋಗೀ ಲಘಿಮಾನಮವಾಪ್ನುಯಾತ್ ॥೧೨॥**

ಯೋಗಿಯು ವಾಯುವೇ ಮೊದಲಾದ ನಾಲ್ಕು ಮಹಾಭೂತಗಳ ಪರಮಾಣುಗಳನ್ನು ನನ್ನ ರೂಪವೆಂದೇ ಭಾವಿಸಿ ಧ್ಯಾನಮಾಡುತ್ತಾ

---

* **ತನ್ಮಾತ್ರೆ :** ಪಂಚಭೂತಗಳ ಅವ್ಯವಹಿತ ಸೂಕ್ಷ್ಮಾವಸ್ಥೆಯೊಡನೆ ಕೂಡಿದ ದ್ರವ್ಯ. ಉತ್ಕಟಾವಸ್ಥೆಯನ್ನು ಹೊಂದದ, ಸೂಕ್ಷ್ಮವಾದ, ರೂಪಾದಿಗುಣಗಳಿಗೆ ಆಶ್ರಯದ್ರವ್ಯ. ಮೊಸರಿನರೂಪವಾಗಿ ಪರಿಣಮಿಸುವುದಕ್ಕೆ ಆರಂಭಿಸಿದ ಕ್ಷೀರಕ್ಕೆ ಕ್ಷೀರತ್ವಾವಸ್ಥೆ-ದಧಿತ್ವಾವಸ್ಥೆ–ಈ ಎರಡು ಅವಸ್ಥೆಗಳ ಮಧ್ಯಕಾಲದ ಅವಸ್ಥೆ (ಕ್ಷೀರತ್ವಾವಸ್ಥೆಯ ಅವಸಾನ ದಧಿತ್ವಾವಸ್ಥೆಯ ಆರಂಭ–ಈ ಅವಸ್ಥೆ)ಯಂತೆ ತಾಮಸಾಹಂಕಾರಕ್ಕೆ ಅಹಂಕಾರತ್ವಾವಸ್ಥೆ ಭೂತತ್ವಾವಸ್ಥೆ–ಇವುಗಳ ಮಧ್ಯಕಾಲದ ಅವಸ್ಥೆಯು ತನ್ಮಾತ್ರೆಯೆನಿಸುವುದು. ಅದರ ಸಂಬಂಧದಿಂದ ಅಂತಹ ಅವಸ್ಥೆ ಯೊಡನೆ ಕೂಡಿದ ದ್ರವ್ಯವೂ ತನ್ಮಾತ್ರೆಯೆನಿಸಿಕೊಳ್ಳುವುದು. ಅಂತಹ ದ್ರವ್ಯವೇ ಪಂಚಭೂತಗಳಿಗೆ ಉಪಾದಾನ ಕಾರಣವಾಗಿರುವುದು. ಈ ತನ್ಮಾತ್ರೆಗಳು ರೂಪ- ರಸ-ಗಂಧ-ಸ್ಪರ್ಶ ಮತ್ತು ಶಬ್ದಗಳೆಂಬ ಐದು ಬಗೆಯಾಗಿರುತ್ತವೆ.

ಮನಸ್ಸನ್ನೂ ಪರಮಾಣುವಾಗಿಯೇ ಪರಿವರ್ತಿಸಿಕೊಂಡರೆ 'ಲಘಿಮಾ'– ಎಂಬ ಸಿದ್ಧಿಯುಂಟಾಗುತ್ತದೆ. ಆ ಯೋಗಿಯು ಪರಮಾಣುರೂಪವಾದ ಕಾಲದಂತೆ ಅತ್ಯಂತ ಹಗುರವಾದ ವಸ್ತುವಾಗಲು ಸಮರ್ಥನಾಗುತ್ತಾನೆ.

**ಧಾರಯನ್ ಮಯ್ಯಹಂತತ್ತ್ವೇ ಮನೋ ವೈಕಾರಿಕೇಽಖಿಲಮ್ ।**
**ಸರ್ವೇನ್ದ್ರಿಯಾಣಾಮಾತ್ಮತ್ವಂ ಪ್ರಾಪ್ತಿಂ ಪ್ರಾಪ್ನೋತಿ ಮನ್ಮನಾಃ ॥೧೩॥**

ಸಾತ್ತ್ವಿಕಾಹಂಕಾರವನ್ನು ನನ್ನ ಸ್ವರೂಪವೆಂದು ಭಾವಿಸಿ ನನ್ನನ್ನು ಆ ರೂಪದಲ್ಲಿಯೇ ಮನಸ್ಸಿನಲ್ಲಿ ಧಾರಣೆ ಮಾಡುವ ಯೋಗಿಯು ಸಮಸ್ತ ಇಂದ್ರಿಯಗಳಿಗೂ ಅಧಿಷ್ಠಾತೃ (ನಾಯಕ) ವಾಗುತ್ತಾನೆ. ಸಾತ್ತ್ವಿಕಾಹಂಕಾರವನ್ನು ನನ್ನ ಸ್ವರೂಪವೆಂದೇ ಭಾವಿಸಿ ಧ್ಯಾನಿಸುವ ಯೋಗಿಯು ಪ್ರಾಪ್ತಿ ಎಂಬ ಸಿದ್ಧಿಯನ್ನು ಪಡೆಯುತ್ತಾನೆ.

**ಮಹತ್ಯಾತ್ಮನಿ ಯಃ ಸೂತ್ರೇ ಧಾರಯೇನ್ಮಯಿ ಮಾನಸಮ್ ।**
**ಪ್ರಾಕಾಮ್ಯಂ ಪಾರಮೇಷ್ಠ್ಯಂ ಮೇ ವಿನ್ದತೇಽವ್ಯಕ್ತಜನ್ಮನಃ ॥೧೪॥**

ಯಾವ ಯೋಗಿಯು ನನ್ನ ಮಹತ್ತತ್ತ್ವಾಭಿಮಾನಿ ಸೂತ್ರಾತ್ಮನಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸುವನೋ ಅವನು ಅವ್ಯಕ್ತಜನ್ಮನಾದ (ಸೂತ್ರಾತ್ಮನಾದ) ನನ್ನ 'ಪ್ರಾಕಾಮ್ಯ' ಎಂಬ ಹೆಸರಿನ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ. ಇದರಿಂದ ಅವನು ತನ್ನ ಇಚ್ಛಾನುಸಾರವಾಗಿ ಸಮಸ್ತಭೋಗಗಳನ್ನೂ ಪಡೆದುಕೊಳ್ಳುತ್ತಾನೆ.

**ವಿಷ್ಣೌ ತ್ರ್ಯಧೀಶ್ವರೇ ಚಿತ್ತಂ ಧಾರಯೇತ್ಕಾಲವಿಗ್ರಹೇ ।**
**ಸ ಈಶಿತ್ವಮವಾಪ್ನೋತಿ ಕ್ಷೇತ್ರಕ್ಷೇತ್ರಜ್ಞಚೋದನಾಮ್ ॥೧೫॥**

ತ್ರಿಗುಣಾತ್ಮಕವಾದ ಮಾಯೆಗೆ ಈಶ್ವರನಾದ, ಕಾಲಪುರುಷನಾದ, ನನ್ನ ವಿಷ್ಣುರೂಪದಲ್ಲಿ ಯಾವ ಯೋಗಿಯು ಚಿತ್ತವನ್ನು ಧಾರಣೆಮಾಡುವನೋ, ವಿಷ್ಣುಸ್ವರೂಪದಲ್ಲಿಯೇ ಚಿತ್ತವನ್ನಿಟ್ಟು ಧ್ಯಾನಿಸುವನೋ, ಮನಸ್ಸನ್ನು ವಿಷ್ಣುಮಯವನ್ನಾಗಿ ಮಾಡುವನೋ–ಅಂತಹಯೋಗಿಯು ಕ್ಷೇತ್ರಜ್ಞರಾದ ಜೀವರನ್ನೂ ಕ್ಷೇತ್ರಗಳಾದ ಜೀವೋಪಾಧಿಗಳನ್ನೂ (ದೇಹಗಳನ್ನೂ ) ನಿಯಮನಗೊಳಿಸುವ ಈಶಿತ್ವವೆಂಬ ಸಿದ್ಧಿಯನ್ನು ಪಡೆಯುವನು.

**ನಾರಾಯಣೇ ತುರೀಯಾಖ್ಯೇ ಭಗವಚ್ಛಬ್ದಶಬ್ದಿತೇ ।**
**ಮನೋ ಮಯ್ಯಾದಧದ್ಯೋಗೀ ಮದ್ಧರ್ಮಾ ವಶಿತಾಮಿಯಾತ್ ॥೧೬॥**

ಸ್ಥೂಲ-ಸೂಕ್ಷ್ಮ-ಕಾರಣಗಳಾದ ವಿರಾಟ್-ಹಿರಣ್ಯಗರ್ಭ-ಮಾಯೆಯೆಂಬ ಮೂರು ಉಪಾಧಿಗಳಿಂದ ಅತೀತನಾಗಿರುವ ಕಾರಣ ತುರೀಯನೆಂಬ ಹೆಸರು ಪಡೆದಿರುವ, ಷಡ್ಐಶ್ವರ್ಯಸಂಪನ್ನನಾಗಿರುವುದರಿಂದ ಭಗವಚ್ಛಬ್ದವಾಚ್ಯನಾಗಿರುವ ನಾರಾಯಣನಾದ ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ ಮನಸ್ಸನ್ನು ನನ್ನ ರೂಪವನ್ನಾಗಿ ಪರಿವರ್ತನಗೊಳಿಸುವ ಯೋಗಿಯು ನನ್ನ ಧರ್ಮವೇ ಆದ ವಶಿತ್ವವೆಂಬ ಸಿದ್ಧಿಯನ್ನು ಪಡೆಯುತ್ತಾನೆ.*

**ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ ವಿಶದಂ ಮನಃ ।**
**ಪರಮಾನನ್ದಮಾಪ್ನೋತಿ ಯತ್ರ ಕಾಮೋಽವಸೀಯತೇ ॥೧೭॥**

ಉದ್ಧವ! ನಿರ್ಗುಣಬ್ರಹ್ಮವೂ ನಾನೇ ಆಗಿದ್ದೇನೆ. ಯಾವ ಯೋಗಿಯು ತನ್ನ ನಿರ್ಮಲವಾದ ಮನಸ್ಸನ್ನು ನನ್ನ ನಿರ್ಗುಣಸ್ವರೂಪದಲ್ಲಿ ನೆಲೆಗೊಳಿಸುವನೋ ಅವನು ಪರಮಾನಂದಸ್ವರೂಪಿಣಿಯಾದ ಕಾಮಾವಸಾಯಿತಾ–ಎಂಬ ಹೆಸರಿನ ಸಿದ್ಧಿಯನ್ನು ಪಡೆಯುತ್ತಾನೆ. ಈ ಸಿದ್ಧಿಯಿಂದಾಗಿ ಕಾಮನೆಗಳೆಲ್ಲವೂ ನಿರಸನಗೊಂಡು ಬ್ರಹ್ಮಾನಂದವೊಂದೇ ಅನುಭವಕ್ಕೆ ಬರುತ್ತದೆ.

**ಶ್ವೇತದ್ವೀಪಪತೌ ಚಿತ್ತಂ ಶುದ್ಧೇ ಧರ್ಮಮಯೇ ಮಯಿ ।**
**ಧಾರಯನ್ ಶ್ವೇತತಾಂ ಯಾತಿ ಷಡೂರ್ಮಿರಹಿತೋ ನರಃ ॥೧೮॥**

ಶ್ವೇತದ್ವೀಪಕ್ಕೆ ಸ್ವಾಮಿಯಾದ, ಶುದ್ಧಾತ್ಮನಾದ, ಧರ್ಮಮಯನಾದ ನನ್ನ ಸ್ವರೂಪವನ್ನು ಯಾವ ಯೋಗಿಯು ಮನಸ್ಸಿನಿಂದ ಧರಿಸುವನೋ ಅವನು ಹಸಿವು-ಬಾಯಾರಿಕೆ, ಹುಟ್ಟು-ಸಾವು ಮತ್ತು ಶೋಕ-ಮೋಹ

---

* ವಿರಾಟ್ ಹಿರಣ್ಯಗರ್ಭಶ್ಚ ಕಾರಣಂ ಚೇತ್ಯುಪಾಧಯಃ ।
ಈಶಸ್ಯ ಯತ್ತ್ರಿಭಿರ್ಹೀನಂ ತುರೀಯಂ ತತ್ಪದಂ ವಿದುಃ ॥

ಪರಮೇಶ್ವರನಿಗೆ ಸ್ಥೂಲ-ಸೂಕ್ಷ್ಮ-ಕಾರಣಗಳು ಅಥವಾ ವಿರಾಟ್ ಹಿರಣ್ಯಗರ್ಭ–ಮಾಯೆಯೆಂಬ ಮೂರು ಉಪಾಧಿಗಳುಂಟು. ಈ ಮೂರರಿಂದಲೂ ರಹಿತವಾದ ತತ್ತ್ವಕ್ಕೆ ತುರೀಯವೆಂದು ಹೆಸರು.

ಗಳೆಂಬ ಆರು ತರಂಗಗಳಿಂದ ಮುಕ್ತನಾಗಿ ಶುದ್ಧಸತ್ತ್ವಸ್ವರೂಪವನ್ನು ಹೊಂದುತ್ತಾನೆ.

**ಮಯ್ಯಾಕಾಶಾತ್ಮನಿ ಪ್ರಾಣೇ ಮನಸಾ ಘೋಷಮುದ್ವಹನ್ ।**
**ತತ್ರೋಪಲಬ್ಧಾ ಭೂತಾನಾಂ ಹಂಸೋ ವಾಚಃ ಶೃಣೋತ್ಯಸೌ ॥೧೯॥**

ನಾನು ಸಮಷ್ಟಿಪ್ರಾಣರೂಪದ ಆಕಾಶಾತ್ಮನೂ ಆಗಿದ್ದೇನೆ. ಯಾರು ಈ ನನ್ನ ಸ್ವರೂಪದಲ್ಲಿ ಮನಸ್ಸಿನಮೂಲಕವಾಗಿ ಅನಾಹತನಾದವನ್ನು ಧ್ಯಾನಮಾಡುವನೋ ಅಂತಹವನು ದೂರಶ್ರವಣ–ಎಂಬ ಹೆಸರಿನ ಸಿದ್ಧಿಯಿಂದ ಸಂಪನ್ನನಾಗುತ್ತಾನೆ ಮತ್ತು ಆಕಾಶದಲ್ಲಿ ದೊರೆಯುವ ವಿವಿಧ ಪ್ರಾಣಿಗಳ ಮಾತನ್ನು ಕೇಳಲು ಮತ್ತು ಅದನ್ನು ಅರ್ಥಮಾಡಿಕೊಳ್ಳಲು ಸಮರ್ಥನಾಗುತ್ತಾನೆ.

**ಚಕ್ಷುಸ್ತ್ವಷ್ಟರಿ ಸಂಯೋಜ್ಯ ತ್ವಷ್ಟಾರಮಪಿ ಚಕ್ಷುಷಿ ।**
**ಮಾಂ ತತ್ರ ಮನಸಾ ಧ್ಯಾಯನ್ವಿಶ್ವಂ ಪಶ್ಯತಿ ಸೂಕ್ಷ್ಮದೃಕ್ ॥೨೦॥**

ಯೋಗಿಯು ಕಣ್ಣುಗಳನ್ನು ಸೂರ್ಯನಲ್ಲೂ ಸೂರ್ಯನನ್ನು ಕಣ್ಣು ಗಳಲ್ಲೂ ಸಮಾವೇಶಗೊಳಿಸಿ ನನ್ನನ್ನು ಮನಸ್ಸಿನಿಂದ ಧ್ಯಾನಮಾಡುತ್ತಿದ್ದರೆ ಅವನ ದೃಷ್ಟಿಯು ಅತಿಸೂಕ್ಷ್ಮವಾಗುತ್ತದೆ. ಆತನು ದೂರದರ್ಶನವೆಂಬ ಸಿದ್ಧಿಯನ್ನು ಪಡೆಯುತ್ತಾನೆ. ಈ ಸಿದ್ಧಿಯ ಫಲವಾಗಿ ಆ ಯೋಗಿಯು ಕುಳಿತಿದ್ದ ಜಾಗದಿಂದಲೇ ಪ್ರಪಂಚವನ್ನೆಲ್ಲಾ ನೋಡಲು ಸಮರ್ಥನಾಗುತ್ತಾನೆ.

**ಮನೋ ಮಯಿ ಸುಸಂಯೋಜ್ಯ ದೇಹಂ ತದನು ವಾಯುನಾ ।**
**ಮದ್ಧಾರಣಾನುಭಾವೇನ ತತ್ರಾತ್ಮಾ ಯತ್ರ ವೈ ಮನಃ ॥೨೧॥**

ಮನಸ್ಸನ್ನೂ ಮತ್ತು ಶರೀರವನ್ನೂ ಪ್ರಾಣವಾಯುವಿನ ಸಹಿತವಾಗಿ ನನ್ನಲ್ಲಿ ಲೀನಗೊಳಿಸಿ ಧಾರಣೆಮಾಡಿದರೆ ಅದರಿಂದ ಮನೋಜನ–ಎಂಬ ಹೆಸರಿನ ಸಿದ್ಧಿಯು ಪ್ರಾಪ್ತವಾಗುವುದು. ಈ ಸಿದ್ಧಿಯ ಫಲವಾಗಿ ಮನಸ್ಸು ಹೋದಷ್ಟು ವೇಗದಲ್ಲೇ ಶರೀರವೂ ಮನಸ್ಸಿನ ಜೊತೆಯಲ್ಲಿ ಹೋಗುತ್ತದೆ.

**ಯದಾ ಮನ ಉಪಾದಾಯ ಯದ್ಯದ್ರೂಪಂ ಬುಭೂಷತಿ ।**
**ತತ್ತದ್ಭವೇನ್ಮನೋರೂಪಂ ಮದ್ಯೋಗಬಲಮಾಶ್ರಯಃ ॥೨೨॥**

ಯಾವ ಸಮಯದಲ್ಲಿ ಯೋಗಿಯು ಮನಸ್ಸನ್ನು ಉಪಾದಾನಕಾರಣವನ್ನಾಗಿ ಮಾಡಿಕೊಂಡು ತನಗೆ ಇಷ್ಟವಾದ ಯಾವುದೇ ದೇವತೆಗಳ ರೂಪವನ್ನು ಧಾರಣೆಮಾಡಲು ಇಚ್ಛಿಸುವನೋ, ತನ್ನ ಮನಸ್ಸಿಗೆ ಅನುಕೂಲವಾದ ಅಂತಹ ದೇವತೆಯ ರೂಪವನ್ನೇ ಆತನು ಹೊಂದುತ್ತಾನೆ. ಯೋಗಿಯು ತನ್ನ ಮನಸ್ಸನ್ನು ನನ್ನಲ್ಲಿ ಧಾರಣೆಮಾಡಿರುವುದರಿಂದಲೇ ತನಗೆ ಅಪೇಕ್ಷಿತವಾದ ದೇವತಾರೂಪವನ್ನು ಅವನು ಪಡೆದುಕೊಳ್ಳುತ್ತಾನೆ.

**ಪರಕಾಯಂ ವಿಶನ್ಸಿದ್ಧ ಆತ್ಮಾನಂ ತತ್ರ ಭಾವಯೇತ್ ।**
**ಪಿಣ್ಡಂ ಹಿತ್ವಾ ವಿಶೇತ್ಪ್ರಾಣೋ ವಾಯುಭೂತಃ ಷಡಙ್ಘ್ರಿವತ್ ॥೨೩॥**

ಯಾವ ಯೋಗಿಯು ಪರಕಾಯಪ್ರವೇಶವನ್ನು ಮಾಡಲು ಇಚ್ಛಿಸುವನೋ ಆ ಯೋಗಿಯು ತಾನು ಆ ಶರೀರದಲ್ಲಿ ಇದ್ದೇನೆಂದು ಭಾವಿಸಿಕೊಳ್ಳಬೇಕು. ಹೀಗೆ ಭಾವಿಸಿಕೊಳ್ಳುವುದರಿಂದಲೇ ಮನಸ್ಸು ಅವನ ಪ್ರಾಣವಾಯು ರೂಪವನ್ನು ಧರಿಸುತ್ತದೆ. ಒಂದು ಹೂವಿನಿಂದ ಮತ್ತೊಂದು ಹೂವಿಗೆ ಹಾರಿಹೋಗುವ ದುಂಬಿಯಂತೆ ವಾಯುರೂಪವಾದ ಪ್ರಾಣವು ಅಪೇಕ್ಷಿಸಿದ ಶರೀರದೊಳಗೆ ಸೇರಿಕೊಳ್ಳುತ್ತದೆ.

**ಪಾರ್ಷ್ಣ್ಯಾಽಽಪೀಡ್ಯ ಗುದಂ ಪ್ರಾಣಂ ಹೃದುರಃಕಣ್ಠಮೂರ್ಧಸು ।**
**ಆರೋಪ್ಯ ಬ್ರಹ್ಮರನ್ಧ್ರೇಣ ಬ್ರಹ್ಮ ನೀತ್ವೋತ್ಸೃಜೇತ್ತನುಮ್ ॥೨೪॥**

ಯೋಗಿಯಾದವನು ಶರೀರವನ್ನು ಪರಿತ್ಯಾಗಮಾಡಲು ಇಚ್ಛಿಸಿದರೆ ಎಡಗಾಲಿನ ಹಿಮ್ಮಡಿಯಿಂದ ಗುದದ್ವಾರವನ್ನು ತಡೆದು, ಅಲ್ಲಿಂದ ಪ್ರಾಣವಾಯುವನ್ನು ಅನುಕ್ರಮವಾಗಿ ಹೃದಯ, ವಕ್ಷಃಸ್ಥಳ, ಕಂಠ, ಶಿರಸ್ಸುಗಳಿಗೆ ಹತ್ತಿಸಿ, ಬ್ರಹ್ಮರಂಧ್ರದ ಮೂಲಕವಾಗಿ ಪರಬ್ರಹ್ಮವಸ್ತುವಿನಲ್ಲಿ ಲೀನಗೊಳಿಸಿ ಶರೀರವನ್ನು ಪರಿತ್ಯಜಿಸಬೇಕು. (ಇದಕ್ಕೆ ಇಚ್ಛಾಮರಣಸಿದ್ಧಿ ಎಂದು ಹೆಸರು.)

**ವಿಹರಿಷ್ಯನ್ಸುರಾಕ್ರೀಡೇ ಮತ್ಸ್ಥಂ ಸತ್ತ್ವಂ ವಿಭಾವಯೇತ್ ।**
**ವಿಮಾನೇನೋಪತಿಷ್ಠನ್ತಿ ಸತ್ತ್ವವೃತ್ತೀಃ ಸುರಸ್ತ್ರಿಯಃ ॥೨೫॥**

ಯೋಗಿಯೇನಾದರೂ ದೇವತೆಗಳ ವಿಹಾರಸ್ಥಳದಲ್ಲಿ ಕ್ರೀಡಿಸಬೇಕೆಂದು ಬಯಸಿದರೆ ನನ್ನ ಶುದ್ಧಸತ್ತ್ವಮಯಸ್ವರೂಪವನ್ನು ಭಾವಿಸಿಕೊಳ್ಳಬೇಕು.

ಹೀಗೆ ಮಾಡುವುದರಿಂದ ಸತ್ತ್ವಗುಣದ ಅಂಶಸ್ವರೂಪರಾದ ಸುರಸುಂದರಿಯರು ವಿಮಾನಗಳಲ್ಲಿ ಕುಳಿತು ಆ ಯೋಗಿಯ ಬಳಿಗೆ ಬರುತ್ತಾರೆ.

**ಯಥಾ ಸಙ್ಕಲ್ಪಯೇದ್ಬುದ್ಧ್ಯಾ ಯದಾ ವಾ ಮತ್ಪರಃ ಪುಮಾನ್ ।**
**ಮಯಿ ಸತ್ಯೇ ಮನೋ ಯುಞ್ಜನ್ ತಥಾ ತತ್ಸಮುಪಾಶ್ನುತೇ ॥**

ಯಾವ ಯೋಗಿಯು ನನ್ನ ಸತ್ಯಸಂಕಲ್ಪಶರೀರದಲ್ಲಿ ತನ್ನ ಮನಸ್ಸನ್ನು ಸ್ಥಿರಗೊಳಿಸಿರುವನೋ, ಸತ್ಯಸಂಕಲ್ಪಸ್ವರೂಪದ ಧ್ಯಾನದಲ್ಲಿಯೇ ಮಗ್ನನಾಗಿರುವನೋ, ಆತನು ತನ್ನ ಮನಸ್ಸಿನಲ್ಲಿ ಯಾವುದೇ ಸಮಯದಲ್ಲಿ ಯಾವುದೇ ಸಂಕಲ್ಪಮಾಡಿದರೂ ಅದೇ ಕ್ಷಣದಲ್ಲಿಯೇ ಅವನ ಆ ಸಂಕಲ್ಪವು ಸಿದ್ಧಿಸುತ್ತದೆ.

**ಯೋ ವೈ ಮದ್ಭಾವಮಾಪನ್ನ ಈಶಿತುರ್ವಶಿತುಃ ಪುಮಾನ್ ।**
**ಕುತಶ್ಚಿನ್ನ ವಿಹನ್ಯೇತ ತಸ್ಯ ಚಾಜ್ಞಾ ಯಥಾ ಮಮ ॥೨೭॥**

ಈಶಿತ್ವ ಮತ್ತು ವಶಿತ್ವ–ಎಂಬ ಈ ಎರಡು ಸಿದ್ಧಿಗಳಿಗೂ ನಾನೇ ಸ್ವಾಮಿಯಾಗಿದ್ದೇನೆ. ಆದುದರಿಂದ ಯಾವಾಗಲೇ ಆಗಲೀ ಯಾರೇ ಆಗಲೀ ನನ್ನ ಆಜ್ಞೆಯನ್ನು ಉಲ್ಲಂಘಿಸಲಾರರು. ಯಾರು ನನ್ನ ಆ ರೂಪವನ್ನು ಧ್ಯಾನಮಾಡುತ್ತಾ ಅದೇ ಭಾವದಿಂದ ಯುಕ್ತರಾಗಿರುವರೋ ಅಂತಹವರ ಆಜ್ಞೆಯನ್ನೂ ಯಾರೂ ಉಲ್ಲಂಘಿಸಲಾರರು.

**ಮದ್ಭಕ್ತ್ಯಾ ಶುದ್ಧಸತ್ತ್ವಸ್ಯ ಯೋಗಿನೋ ಧಾರಣಾವಿದಃ ।**
**ತಸ್ಯ ತ್ರೈಕಾಲಿಕೀ ಬುದ್ಧಿರ್ಜನ್ಮಮೃತ್ಯೂಪಬೃಂಹಿತಾ ॥೨೮॥**

ಮನಸ್ಸನ್ನು ನನ್ನಲ್ಲಿ ಧಾರಣೆಮಾಡುವ ವಿಧಾನವನ್ನು ಚೆನ್ನಾಗಿ ತಿಳಿದಿರುವ, ನನ್ನಲ್ಲಿಟ್ಟಿರುವ ಅನನ್ಯಭಕ್ತಿಯ ಪ್ರಭಾವದಿಂದ ಶುದ್ಧಸತ್ತ್ವನಾಗಿರುವ ಯೋಗಿಗೆ ತ್ರಿಕಾಲಜ್ಞಾನವುಂಟಾಗುವುದು. ಅವನಿಗೆ ತನ್ನ ಹುಟ್ಟು-ಸಾವುಗಳೂ ತಿಳಿದಿರುತ್ತವೆ.

**ಅಗ್ನ್ಯಾದಿಭಿರ್ನ ಹನ್ಯೇತ ಮುನೇರ್ಯೋಗಮಯಂ ವಪುಃ ।**
**ಮದ್ಯೋಗಶ್ರಾನ್ತಚಿತ್ತಸ್ಯ ಯಾದಸಾಮುದಕಂ ಯಥಾ ॥೨೯॥**

ಯಾವ ರೀತಿಯಲ್ಲಿ ನೀರಿನ ಮೂಲಕವಾಗಿ ನೀರಿನಲ್ಲಿ ವಾಸಮಾಡುವ ಪ್ರಾಣಿಗಳಿಗೆ ವಿನಾಶವುಂಟಾಗುವುದಿಲ್ಲವೋ ಅದೇ ರೀತಿಯಲ್ಲಿ ನನ್ನಲ್ಲಿಯೇ

ಲೀನಗೊಳಿಸಿ ಚೆನ್ನಾಗಿ ಪಳಗಿಸಿದ ಚಿತ್ತವುಳ್ಳ ಯೋಗಿಯ ಯೋಗಮಯ ಶರೀರಕ್ಕೆ ಅಗ್ನಿಯಿಂದಾಗಲೀ ನೀರಿನಿಂದಾಗಲೀ ಯಾವ ವಿಧವಾದ ಬಾಧೆಯೂ ಉಂಟಾಗುವುದಿಲ್ಲ.

**ಮದ್ವಿಭೂತೀರಭಿಧ್ಯಾಯನ್ ಶ್ರೀವತ್ಸಾಸ್ತ್ರವಿಭೂಷಿತಾಃ ।**
**ಧ್ವಜಾತಪತ್ರವ್ಯಜನೈಃ ಸ ಭವೇದಪರಾಜಿತಃ ॥೩೦॥**

ಯಾವ ಯೋಗಿಪುರುಷನು ಶ್ರೀವತ್ಸನೇ ಮೊದಲಾದ ಚಿಹ್ನೆಗಳಿಂದಲೂ ಚಕ್ರವೇ ಮೊದಲಾದ ಆಯುಧಗಳಿಂದಲೂ, ನಾರಾಯಣಾಸ್ತ್ರವೇ ಮೊದಲಾದ ಅಸ್ತ್ರಗಳಿಂದಲೂ ವಿಭೂಷಿತವಾದ, ಧ್ವಜ-ಛತ್ರ-ಚಾಮರ ಗಳಿಂದ ಸಂಪನ್ನವಾದ ನನ್ನ ಅವತಾರಮೂರ್ತಿಗಳನ್ನು ಧ್ಯಾನದ ಮೂಲಕ ವಾಗಿ ಧಾರಣೆಮಾಡುವನೋ ಅಂತಹ ಯೋಗಿಯು ಅಪರಾಜಿತನಾಗುತ್ತಾನೆ. ಯಾರಿಂದಲೂ ಯಾವುದರಲ್ಲಿಯೂ ಪರಾಜಯವನ್ನು ಹೊಂದುವುದಿಲ್ಲ.

**ಉಪಾಸಕಸ್ಯ ಮಾಮೇವಂ ಯೋಗಧಾರಣಯಾ ಮುನೇಃ ।**
**ಸಿದ್ಧಯಃ ಪೂರ್ವಕಥಿತಾ ಉಪತಿಷ್ಠನ್ತ್ಯಶೇಷತಃ ॥೩೧॥**

ಹೀಗೆ ವಿಚಾರಶೀಲನಾದ ಯಾವ ಯೋಗಿಪುರುಷನು ನನ್ನ ಉಪಾಸನೆ ಯನ್ನು ಮಾಡುವನೋ ಮತ್ತು ಯೋಗಧಾರಣೆಯ ಮೂಲಕವಾಗಿ ನನ್ನನ್ನು ಅನವರತವಾಗಿ ಧ್ಯಾನಿಸುವನೋ ಅಂತಹವನ ಬಳಿಯಲ್ಲಿ ನಾನು ವರ್ಣಿಸಿರುವ ಸಿದ್ಧಿಗಳೆಲ್ಲವೂ ಪೂರ್ಣರೂಪದಿಂದ ನಿಂತಿರುತ್ತವೆ.

**ಜಿತೇನ್ದ್ರಿಯಸ್ಯ ದಾನ್ತಸ್ಯ ಜಿತಶ್ವಾಸಾತ್ಮನೋ ಮುನೇಃ ।**
**ಮದ್ಧಾರಣಾಂ ಧಾರಯತಃ ಕಾ ಸಾ ಸಿದ್ಧಿಃ ಸುದುರ್ಲಭಾ ॥೩೨॥**

ಉದ್ಧವ! ಯಾವ ಯೋಗಿಯು ಪ್ರಾಣ-ಮನಸ್ಸು ಮತ್ತು ಇಂದ್ರಿಯ ಗಳನ್ನು ಜಯಿಸಿರುವನೋ, ಸಂಯಮಿಯಾಗಿರುವನೋ, ಧ್ಯಾನದ ಮೂಲಕವಾಗಿ ನನ್ನ ಸ್ವರೂಪವನ್ನೇ ಧಾರಣಮಾಡಿರುವನೋ, ಅಂತಹವನಿಗೆ ದುರ್ಲಭವೆನಿಸಿದ ಯಾವ ಸಿದ್ಧಿಯಿದೆ? ಎಲ್ಲ ಸಿದ್ಧಿಗಳೂ ಅವನಿಗೆ ಬಹಳ ಸುಲಭವಾಗಿಯೇ ಸಿದ್ಧಿಸುತ್ತವೆ.

**ಅನ್ತರಾಯಾನ್ ವದನ್ತ್ಯೇತಾ ಯುಞ್ಜತೋ ಯೋಗಮುತ್ತಮಮ್ ।**
**ಮಯಾ ಸಂಪದ್ಯಮಾನಸ್ಯ ಕಾಲಕ್ಷಪಣಹೇತವಃ ॥೩೩॥**

ಆದರೆ ಭಕ್ತಿಯೋಗ-ಜ್ಞಾನಯೋಗ ಇವೇ ಮುಂತಾದ ಶ್ರೇಷ್ಠವಾದ ಯೋಗಗಳನ್ನು ಅಭ್ಯಾಸಮಾಡುತ್ತಾ ಕೇವಲ ನನ್ನ ಸ್ವರೂಪವನ್ನು ಪಡೆಯಲು ಬಯಸಿರುವ ಯೋಗಿಗೆ ಈ ಸಿದ್ಧಿಗಳೆಲ್ಲವೂ ವಿಘ್ನಕಾರಿಗಳೆಂದು ಬಲ್ಲವರು ಹೇಳುತ್ತಾರೆ. ನನ್ನನ್ನು ಕಂಡುಕೊಳ್ಳುವುದರಲ್ಲಿ ವ್ಯರ್ಥವಾದ ಕಾಲವ್ಯಯಕ್ಕೆ ಈ ಸಿದ್ಧಿಗಳು ಕಾರಣಗಳಾಗುತ್ತವೆ.

**ಜನ್ಮೌಷಧಿತಪೋಮನ್ತ್ರೈರ್ಯಾವತೀರಿಹ ಸಿದ್ಧಯಃ ।**
**ಯೋಗೇನಾಪ್ನೋತಿ ತಾಃ ಸರ್ವಾ ನಾನ್ಯೈರ್ಯೋಗಗತಿಂ ವ್ರಜೇತ್ ॥**

ಜಗತ್ತಿನಲ್ಲಿ ಜನ್ಮ, ಔಷಧಿ, ತಪಸ್ಸು ಮತ್ತು ಮಂತ್ರಾದಿಗಳ ಮೂಲಕವಾಗಿ ಯಾವ ಯಾವ ಸಿದ್ಧಿಗಳನ್ನು ಪಡೆಯಬಹುದೋ ಆ ಎಲ್ಲ ಸಿದ್ಧಿಗಳನ್ನೂ ಯೋಗದ ಧಾರಣೆಯ ಮೂಲಕವಾಗಿ ಪಡೆಯಬಹುದು. ಆದರೆ ಯೋಗದ ಅಂತಿಮಗುರಿಯಾದ ಸಾರೂಪ್ಯ–ಸಾಲೋಕ್ಯಾದಿಗಳ ಪ್ರಾಪ್ತಿಯು ನನ್ನಲ್ಲಿ ಮನಸ್ಸನ್ನು ಧಾರಣಗೊಳಿಸುವುದೊಂದರ ಹೊರತಾಗಿ ಬೇರಾವ ಸಾಧನಗಳಿಂದಲೂ ಸಾಧ್ಯವಾಗುವುದಿಲ್ಲ.*

**ಸರ್ವಾಸಾಮಪಿ ಸಿದ್ಧೀನಾಂ ಹೇತುಃ ಪತಿರಹಂ ಪ್ರಭುಃ ।**
**ಅಹಂ ಯೋಗಸ್ಯ ಸಾಙ್ಖ್ಯಸ್ಯ ಧರ್ಮಸ್ಯ ಬ್ರಹ್ಮವಾದಿನಾಮ್ ॥೩೫॥**

ಉದ್ಧವ! ಸಮಸ್ತ ಸಿದ್ಧಿಗಳಿಗೂ ಕಾರಣನೂ, ಒಡೆಯನೂ ಮತ್ತು ಪ್ರಭುವೂ ನಾನೇ ಆಗಿದ್ದೇನೆ. ಇಷ್ಟು ಮಾತ್ರವಲ್ಲ. ಬ್ರಹ್ಮವಾದಿಗಳು ಹೇಳುವ ಯೋಗವೆಂಬ ಮೋಕ್ಷಕ್ಕೂ ಸಾಂಖ್ಯವೆಂಬ ಜ್ಞಾನಕ್ಕೂ ಧರ್ಮಕ್ಕೂ ನಾನೇ ಏಕಮಾತ್ರನಾದ ಸ್ವಾಮಿಯೂ ಪ್ರಭುವೂ ಆಗಿದ್ದೇನೆ.

**ಅಹಮಾತ್ಮಾಽನ್ತರೋ ಬಾಹ್ಯೋಽನಾವೃತಃ ಸರ್ವದೇಹಿನಾಮ್ ।**
**ಯಥಾ ಭೂತಾನಿ ಭೂತೇಷು ಬಹಿರನ್ತಃ ಸ್ವಯಂ ತಥಾ ॥೩೬॥**

ಆಕಾಶವೇ ಮೊದಲಾದ ಪಂಚಮಹಾಭೂತಗಳು ಪಂಚಭೂತಾತ್ಮಕವಾದ ಪ್ರಾಣಿಗಳನ್ನು ಒಳಗೆ-ಹೊರಗೆ ಮಧ್ಯದಲ್ಲಿ ಹೇಗೆ ವ್ಯಾಪಿಸಿಕೊಂಡಿ

* ಜನ್ಮತಃ ಪಡೆಯಬಹುದಾದ ಸಿದ್ಧಿಗಳೆಂದರೆ ಪಕ್ಷಿಗಳಿಗೆ ಆಕಾಶಸಂಚಾರ. ಮೀನುಗಳಿಗೆ ಜಲಸ್ತಂಭನ (ಜಲವಾಸ) ಇವು ಹುಟ್ಟಿನಿಂದ ಪಡೆಯುವ ಸಿದ್ಧಿಗಳು.

ರುವುವೋ ಹಾಗೆಯೇ ನಾನು ಸಮಸ್ತಪ್ರಾಣಿಗಳ ಆತ್ಮನೂ, ಅಂತರ್ಯಾಮಿಯೂ ಆಗಿದ್ದು ಆವರಣವಿಲ್ಲದವನಾದ ಕಾರಣ ಪ್ರಾಣಿಗಳ ಹೊರಗೂ ಇದ್ದು ಸರ್ವವ್ಯಾಪಕನೂ ಆಗಿದ್ದೇನೆ."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಏಕಾದಶಸ್ಕಂಧದ ೧೫ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೧೬ನೆಯ ಅಧ್ಯಾಯ

## ಭಗವಂತನ ವಿಭೂತಿಗಳ ವರ್ಣನೆ

ಉದ್ಧವನು ಹೇಳುತ್ತಾನೆ :

**ತ್ವಂ ಬ್ರಹ್ಮ ಪರಮಂ ಸಾಕ್ಷಾದನಾದ್ಯನ್ತಮಪಾವೃತಮ್ ।**
**ಸರ್ವೇಷಾಮಪಿ ಭಾವಾನಾಂ ತ್ರಾಣಸ್ಥಿತ್ಯಪ್ಯಯೋದ್ಭವಃ ॥೧॥**

**ಉಚ್ಚಾವಚೇಷು ಭೂತೇಷು ದುರ್ಜ್ಞೇಯಮಕೃತಾತ್ಮಭಿಃ ।**
**ಉಪಾಸತೇ ತ್ವಾಂ ಭಗವನ್ ಯಾಥಾತಥ್ಯೇನ ಬ್ರಾಹ್ಮಣಾಃ ॥೨॥**

"ಭಗವಂತ! ನೀನು ಪರಬ್ರಹ್ಮಪರಮಾತ್ಮನಾಗಿರುವೆ. ನಿನಗೆ ಆದಿ, ಮಧ್ಯ, ಅಂತ್ಯಗಳೆಂಬುವು ಯಾವುವೂ ಇಲ್ಲ. ನೀನು ಆವರಣರೂಪವಾದ ಮಾಯೆಯಿಂದ ರಹಿತನಾಗಿರುವೆ. ಸಮಸ್ತಪ್ರಾಣಿಗಳ ಮತ್ತು ಪದಾರ್ಥಗಳ ಉತ್ಪತ್ತಿ, ಸ್ಥಿತಿ, ಪಾಲನೆ ಮತ್ತು ಪ್ರಳಯಗಳಿಗೆ ಕಾರಣನೂ ನೀನೇ ಆಗಿರುವೆ. ನೀನು ಚಿಕ್ಕದಾದ ಮತ್ತು ದೊಡ್ಡದಾದ ಸಮಸ್ತಪ್ರಾಣಿಗಳಲ್ಲಿಯೂ ಏಕರೂಪನಾಗಿರುವೆ.

ಯಾವ ಮೂರ್ಖರು ತಮ್ಮ ಇಂದ್ರಿಯಗಳನ್ನೂ ಮನಸ್ಸನ್ನೂ ವಶಪಡಿಸಿಕೊಂಡಿಲ್ಲವೋ ಅಂತಹವರು ನಿನ್ನನ್ನು ತಿಳಿಯಲಾರರು. ಬ್ರಹ್ಮವಿದರಾದ ಬ್ರಾಹ್ಮಣರು ನಿನ್ನ ಉಪಾಸನೆಯನ್ನು ಯಥಾವತ್ತಾಗಿ ಮಾಡುತ್ತಾರೆ.

**ಯೇಷು ಯೇಷು ಚ ಭಾವೇಷು ಭಕ್ತ್ಯಾ ತ್ವಾಂ ಪರಮರ್ಷಯಃ ।**
**ಉಪಾಸೀನಾಃ ಪ್ರಪದ್ಯನ್ತೇ ಸಂಸಿದ್ಧಿಂ ತದ್ವದಸ್ವ ಮೇ ॥೩॥**

ದೊಡ್ಡ-ದೊಡ್ಡ ಋಷಿ-ಮಹರ್ಷಿಗಳು ಯಾವ ಯಾವ ರೂಪಗಳಲ್ಲಿ ಮತ್ತು ದಿವ್ಯಶಕ್ತಿಗಳಲ್ಲಿ ಅತ್ಯಂತಭಕ್ತಿಭಾವದಿಂದ ನಿನ್ನನ್ನು ಸೇವಿಸಿ ಸಿದ್ಧಿಯನ್ನು ಪಡೆಯುತ್ತಾರೆಂಬುದನ್ನು ಹೇಳು.

**ಗೂಢಶ್ಚರಸಿ ಭೂತಾತ್ಮಾ ಭೂತಾನಾಂ ಭೂತಭಾವನ ।**
**ನ ತ್ವಾಂ ಪಶ್ಯನ್ತಿ ಭೂತಾನಿ ಪಶ್ಯನ್ತಂ ಮೋಹಿತಾನಿ ತೇ ॥೪॥**

ಸಮಸ್ತಪ್ರಾಣಿಗಳಿಗೂ ಜೀವದಾತನಾದ ಪ್ರಭುವೇ! ಸಕಲಪ್ರಾಣಿಗಳಲ್ಲಿಯೂ ಆತ್ಮಸ್ವರೂಪನಾಗಿರುವ ನೀನು ಆ ಪ್ರಾಣಿಗಳಲ್ಲಿ ನಿಗೂಢನಾಗಿದ್ದರೂ ಪ್ರಾಣಿಗಳ ಅಂತಃಕರಣದಲ್ಲಿಯೇ ಇದ್ದು ನೀನು ಅವುಗಳನ್ನು ನೋಡುತ್ತಿದ್ದರೂ ನಿನ್ನ ಮಾಯೆಯಿಂದ ವಿಮೋಹಿತವಾದ ಆ ಪ್ರಾಣಿಗಳು ನಿನ್ನನ್ನು ಕಾಣಲಾರವು.

**ಯಾಃ ಕಾಶ್ಚ ಭೂಮೌ ದಿವಿ ವೈ ರಸಾಯಾಂ**
**ವಿಭೂತಯೋ ದಿಕ್ಷು ಮಹಾವಿಭೂತೇ ।**
**ತಾ ಮಹ್ಯಮಾಖ್ಯಾಹ್ಯನುಭಾವಿತಾಸ್ತೇ**
**ನಮಾಮಿ ತೇ ತೀರ್ಥಪದಾಂಘ್ರಿಪದ್ಮಮ್ ॥೫॥**

ಅಚಿಂತ್ಯವಾದ ಐಶ್ವರ್ಯದಿಂದ ಸಂಪನ್ನನಾಗಿರುವವನೇ! ಪ್ರಭುವೇ! ಭೂಮಿ, ಸ್ವರ್ಗ, ಪಾತಾಳ, ದಿಕ್ಕುಗಳು, ಉಪದಿಕ್ಕುಗಳು–ಇವುಗಳಲ್ಲಿ ನಿನ್ನ ಪ್ರಭಾವದಿಂದ ಯುಕ್ತವಾದ ಯಾವ ಯಾವ ದಿವ್ಯನೆಲೆಯಾಗಿರುವ ವಿಭೂತಿಗಳಿವೆಯೋ ಅವುಗಳನ್ನು ನನಗೆ ದಯಮಾಡಿ ಹೇಳು. ತೀರ್ಥಗಳಿಗೆ ಸ್ಥಾನಭೂತವಾದ ನಿನ್ನ ಪಾದಕಮಲಗಳಿಗೆ ತಲೆಬಾಗಿ ನಮಸ್ಕರಿಸುತ್ತೇನೆ."

ಭಗವಂತನು ಹೇಳುತ್ತಾನೆ :

"ಪ್ರಶ್ನೆಯ ಮರ್ಮವನ್ನು ತಿಳಿದವರಲ್ಲಿ ಶ್ರೇಷ್ಠನಾಗಿರುವ ಉದ್ಧವನೇ! ಹಿಂದೆ ಕುರುಕ್ಷೇತ್ರದಲ್ಲಿ ಅರ್ಜುನನು ಶತ್ರುಗಳೊಡನೆ ಯುದ್ಧಮಾಡಲಿದ್ದಾಗ ನನ್ನನ್ನು ಕುರಿತು ಇದೇ ಪ್ರಶ್ನೆಯನ್ನೇ ಕೇಳಿದ್ದನು. ರಾಜ್ಯದ ಸಲುವಾಗಿ ಜ್ಞಾತಿಗಳನ್ನು ಸಂಹರಿಸುವುದು. ನಿಂದನೀಯವೆಂಬುದು ಅರ್ಜುನನ ಅಭಿಪ್ರಾಯವಾಗಿದ್ದಿತು. ಸಾಮಾನ್ಯಮನುಷ್ಯರಂತೆಯೇ ಅವನು 'ನಾನು ಕೊಲ್ಲು

ತ್ತೇನೆ. ನನ್ನಿಂದ ಇವನು ಕೊಲ್ಲಲ್ಪಡುತ್ತಾನೆ'–ಎಂಬ ಅಹಂಭಾವನೆಯನ್ನು ಹೊಂದಿದ್ದನು. ರಾಜ್ಯಕ್ಕಾಗಿ ಜ್ಞಾತಿವಧೆಯು ಸಲ್ಲದೆಂದು ಭಾವಿಸಿ ಅವನು ಯುದ್ಧದಿಂದಲೇ ವಿರಮಿಸಿದ್ದನು. ಆ ಸಮಯದಲ್ಲಿ ನಾನು ರಣರಂಗದಲ್ಲಿ ಹಲವಾರು ಯುಕ್ತಿಯುಕ್ತವಾದ ಮಾತುಗಳನ್ನು ಹೇಳಿ ಅವನನ್ನು ಸಮಾಧಾನಗೊಳಿಸಿದ್ದೆನು. ಹಾಗೆ ಮಾತನಾಡುತ್ತಿದ್ದಾಗ ಗೀತೋಪದೇಶದ ಮಧ್ಯದಲ್ಲಿ ನೀನೀಗ ಕೇಳಿದ ಪ್ರಶ್ನೆಯನ್ನೇ ಅರ್ಜುನನೂ ಕೇಳಿದ್ದನು.*

**ಅಹಮಾತ್ಮೋದ್ಧವಾಮೀಷಾಂ ಭೂತಾನಾಂ ಸುಹೃದೀಶ್ವರಃ ।**
**ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯಃ ॥೯॥**

ಉದ್ಧವ! ನಾನು ಈ ಸಮಸ್ತಪ್ರಾಣಿಗಳಿಗೂ ಆತ್ಮನೂ, ಹಿತೈಷಿಯೂ, ಸುಹೃದನೂ, ಈಶ್ವರನೂ, ನಿಯಾಮಕನೂ ಆಗಿದ್ದೇನೆ. ಸಮಸ್ತ ಪ್ರಾಣಿಗಳ ಮತ್ತು ಪದಾರ್ಥಗಳ ರೂಪದಲ್ಲಿ ನಾನೇ ಇದ್ದೇನೆ. ಅವುಗಳ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನೂ ನಾನೇ ಆಗಿದ್ದೇನೆ.

**ಅಹಂ ಗತಿರ್ಗತಿಮತಾಂ ಕಾಲಃ ಕಲಯತಾಮಹಮ್ ।**
**ಗುಣಾನಾಂ ಚಾಪ್ಯಹಂ ಸಾಮ್ಯಂ ಗುಣಿನ್ಯೌತ್ಪತ್ತಿಕೋ ಗುಣಃ ॥೧೦॥**

---

* ಗೀತೆಯಲ್ಲಿ ಅರ್ಜುನನ ಪ್ರಶ್ನೆ :

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ॥೧೬॥**

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ ॥೧೭॥**

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥೧೮॥**

(ಅಧ್ಯಾಯ ೧೦)

ನಿನ್ನ ವಿಭೂತಿಗಳು ದಿವ್ಯವಾಗಿವೆ. ಯಾವ ವಿಭೂತಿಗಳಿಂದ ನೀನು ಸರ್ವಲೋಕಗಳನ್ನೂ ವ್ಯಾಪಿಸಿಕೊಂಡಿರುವೆಯೋ ಅವುಗಳನ್ನು ಒಂದೂ ಬಿಡದಂತೆ ನನಗೆ ಹೇಳು. ಯೋಗಿಯೇ! ನಿನ್ನನ್ನು ಯಾವಾಗಲೂ ಹೇಗೆ ಚಿಂತಿಸಲಿ? ಯಾವ ಯಾವ ವಸ್ತುಗಳಲ್ಲಿ ನಾನು ನಿನ್ನನ್ನು ಚಿಂತಿಸಬೇಕು? ನಿನ್ನ ಯೋಗವನ್ನೂ, ದಿವ್ಯಶಕ್ತಿಯನ್ನೂ ವಿಸ್ತಾರವಾಗಿ ಹೇಳು. ನಿನ್ನ ಅಮೃತವಾಣಿಯನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಾಗುವುದಿಲ್ಲ.

ಗತಿಶೀಲವಾದ ಪದಾರ್ಥಗಳಲ್ಲಿ ಗತಿಯು ನಾನೇ ಆಗಿದ್ದೇನೆ. ಲೆಕ್ಕ ಮಾಡುವವರಲ್ಲಿ (ವಶೀಕರಿಸತಕ್ಕವರಲ್ಲಿ) ಕಾಲಸ್ವರೂಪನು ನಾನಾಗಿದ್ದೇನೆ. ಸತ್ತ್ವರಜಸ್ತಮೋಗುಣಗಳಲ್ಲಿ ನಾನು ಗುಣಸಾಮ್ಯಾವಸ್ಥೆಯಾದ ಪ್ರಕೃತಿ ಸ್ವರೂಪನು. ಗುಣಗಳುಳ್ಳ ವಸ್ತುಗಳಲ್ಲಿ ನಾನು ಸ್ವಾಭಾವಿಕಗುಣ ಸ್ವರೂಪನು.

**ಗುಣಿನಾಮಪ್ಯಹಂ ಸೂತ್ರಂ ಮಹತಾಂ ಚ ಮಹಾನಹಮ್ ।**
**ಸೂಕ್ಷ್ಮಾಣಾಮಪ್ಯಹಂ ಜೀವೋ ದುರ್ಜಯಾನಾಮಹಂ ಮನಃ ॥೧೧॥**

ಸತ್ತ್ವರಜಸ್ತಮೋಗುಣಗಳುಳ್ಳ ವಸ್ತುಗಳಲ್ಲಿ ಸೃಷ್ಟಿಗೆ ಪ್ರಥಮ ಕಾರ್ಯವಾದ ಕ್ರಿಯಾಶಕ್ತಿಯೇ ಪ್ರಧಾನವಾಗಿರುವ ಸೂತ್ರಾತ್ಮನು ನಾನು. ಮಹತ್ತಾದ ವಸ್ತುಗಳಲ್ಲಿ ಜ್ಞಾನಶಕ್ತಿಯೇ ಪ್ರಥಮಕಾರ್ಯವಾಗಿರುವ ಮಹತ್ತತ್ತ್ವವೇ ನಾನು. ಸೂಕ್ಷ್ಮವಸ್ತುಗಳಲ್ಲಿ ಜೀವನು ನಾನಾಗಿದ್ದೇನೆ. ಜಯಿಸಲು ಕಷ್ಟಸಾಧ್ಯವಾದುವುಗಳಲ್ಲಿ ನಾನು ಮನಸ್ಸಾಗಿದ್ದೇನೆ.

**ಹಿರಣ್ಯಗರ್ಭೋ ವೇದಾನಾಂ ಮನ್ತ್ರಾಣಾಂ ಪ್ರಣವಸ್ತ್ರಿವೃತ್ ।**
**ಅಕ್ಷರಾಣಾಮಕಾರೋಽಸ್ಮಿ ಪದಾನಿ ಚ್ಛನ್ದಸಾಮಹಮ್ ॥೧೨॥**

ವೇದಾಧ್ಯಾಪಕರಲ್ಲಿ ನಾನು ಹಿರಣ್ಯಗರ್ಭನಾಗಿದ್ದೇನೆ. ಮಂತ್ರಗಳಲ್ಲಿ ಅ-ಉ-ಮ–ಎಂಬ ಮೂರು ಮಾತ್ರೆಗಳುಳ್ಳ ಓಂಕಾರನಾಗಿದ್ದೇನೆ. ಅಕ್ಷರ ಗಳಲ್ಲಿ ಅಕಾರವಾಗಿದ್ದೇನೆ. ಛಂದಸ್ಸುಗಳಲ್ಲಿ ಗಾಯತ್ರಿಯಾಗಿದ್ದೇನೆ.

**ಇನ್ದ್ರೋಽಹಂ ಸರ್ವದೇವಾನಾಂ ವಸೂನಾಮಸ್ಮಿ ಹವ್ಯವಾಟ್ ।**
**ಆದಿತ್ಯಾನಾಮಹಂ ವಿಷ್ಣೂ ರುದ್ರಾಣಾಂ ನೀಲಲೋಹಿತಃ ॥೧೩॥**

ಸಮಸ್ತದೇವತೆಗಳಲ್ಲಿ ನಾನು ಇಂದ್ರನಾಗಿದ್ದೇನೆ. ಅಷ್ಟವಸುಗಳಲ್ಲಿ ನಾನು ಅಗ್ನಿಯಾಗಿದ್ದೇನೆ. ದ್ವಾದಶಾದಿತ್ಯರಲ್ಲಿ ವಿಷ್ಣುವೂ ಏಕಾದಶರುದ್ರರಲ್ಲಿ ನೀಲಲೋಹಿತನೂ ನಾನಾಗಿದ್ದೇನೆ.

**ಬ್ರಹ್ಮರ್ಷೀಣಾಂ ಭೃಗುರಹಂ ರಾಜರ್ಷೀಣಾಮಹಂ ಮನುಃ ।**
**ದೇವರ್ಷೀಣಾಂ ನಾರದೋಽಹಂ ಹವಿರ್ಧಾನ್ಯಸ್ಮಿ ಧೇನುಷು ॥೧೪॥**

ನಾನು ಬ್ರಹ್ಮರ್ಷಿಗಳಲ್ಲಿ ಭೃಗುವಾಗಿದ್ದೇನೆ. ರಾಜರ್ಷಿಗಳಲ್ಲಿ ಮನುವೂ, ದೇವರ್ಷಿಗಳಲ್ಲಿ ನಾರದನೂ, ಗೋವುಗಳಲ್ಲಿ ಕಾಮಧೇನುವೂ ನಾನಾಗಿದ್ದೇನೆ.

**ಸಿದ್ಧೇಶ್ವರಾಣಾಂ ಕಪಿಲಃ ಸುಪರ್ಣೋಽಹಂ ಪತತ್ರಿಣಾಮ್ ।**
**ಪ್ರಜಾಪತೀನಾಂ ದಕ್ಷೋಽಹಂ ಪಿತೄಣಾಮಹಮರ್ಯಮಾ ॥೧೫॥**

ಸಿದ್ಧೇಶ್ವರರಲ್ಲಿ ಕಪಿಲನೂ, ಪಕ್ಷಿಗಳಲ್ಲಿ ಗರುಡನೂ, ಪ್ರಜಾಪತಿಗಳಲ್ಲಿ ದಕ್ಷಪ್ರಜಾಪತಿಯೂ, ಪಿತೃದೇವತೆಗಳಲ್ಲಿ ಅರ್ಯಮನೂ ನಾನೇ ಆಗಿದ್ದೇನೆ.

**ಮಾಂ ವಿದ್ಧ್ಯುದ್ಧವ ದೈತ್ಯಾನಾಂ ಪ್ರಹ್ರಾದಮಸುರೇಶ್ವರಮ್ ।**
**ಸೋಮಂ ನಕ್ಷತ್ರೌಷಧೀನಾಂ ಧನೇಶಂ ಯಕ್ಷರಕ್ಷಸಾಮ್ ॥೧೬॥**

ಪ್ರಿಯ ಉದ್ಧವನೇ! ದೈತ್ಯರಲ್ಲಿ ದೈತ್ಯರಾಜನಾದ ಪ್ರಹ್ರಾದನು ನಾನು. ನಕ್ಷತ್ರಗಳಲ್ಲಿ ಅವುಗಳಿಗೆ ಅಧಿಪತಿಯಾದ ಚಂದ್ರನು ನಾನು. ಓಷಧಿಗಳಲ್ಲಿ ಸೋಮಲತೆಯು ನಾನು. ಯಕ್ಷ-ರಾಕ್ಷಸರಲ್ಲಿ ಕುಬೇರನು ನಾನೇ ಎಂದು ತಿಳಿ.

**ಐರಾವತಂ ಗಜೇನ್ದ್ರಾಣಾಂ ಯಾದಸಾಂ ವರುಣಂ ಪ್ರಭುಮ್ ।**
**ತಪತಾಂ ದ್ಯುಮತಾಂ ಸೂರ್ಯಂ ಮನುಷ್ಯಾಣಾಂ ಚ ಭೂಪತಿಮ್ ॥**

ಗಜೇಂದ್ರರಲ್ಲಿ ನಾನು ಐರಾವತವಾಗಿದ್ದೇನೆ. ಜಲವಾಸಿಗಳಲ್ಲಿ ಅವುಗಳಿಗೆ ಪ್ರಭುವಾದ ವರುಣನಾಗಿದ್ದೇನೆ. ಸಂತಾಪಗೊಳಿಸುವವರಲ್ಲಿ ಮತ್ತು ಪ್ರಕಾಶಗೊಳಿಸುವವರಲ್ಲಿ ಸೂರ್ಯನು ನಾನಾಗಿದ್ದೇನೆ. ಮನುಷ್ಯರಲ್ಲಿ ರಾಜನು ನಾನಾಗಿದ್ದೇನೆ.

**ಉಚ್ಚೈಃಶ್ರವಾಸ್ತುರಙ್ಗಾಣಾಂ ಧಾತೂನಾಮಸ್ಮಿ ಕಾಞ್ಚನಮ್ ।**
**ಯಮಃ ಸಂಯಮತಾಂ ಚಾಹಂ ಸರ್ಪಾಣಾಮಸ್ಮಿ ವಾಸುಕಿಃ ॥೧೮॥**

ಕುದುರೆಗಳಲ್ಲಿ ನಾನು ಉಚ್ಚೈಃಶ್ರವಸ್ಸೆಂಬ ಕುದುರೆಯಾಗಿದ್ದೇನೆ. ಲೋಹಗಳಲ್ಲಿ ಚಿನ್ನವಾಗಿದ್ದೇನೆ. ದಂಡಿಸತಕ್ಕವರಲ್ಲಿ ನಾನು ಯಮನಾಗಿದ್ದೇನೆ. ಸರ್ಪಗಳಲ್ಲಿ ವಾಸುಕಿಯಾಗಿದ್ದೇನೆ.

**ನಾಗೇನ್ದ್ರಾಣಾಮನನ್ತೋಽಹಂ ಮೃಗೇನ್ದ್ರಃ ಶೃಙ್ಗಿದಂಷ್ಟ್ರಿಣಾಮ್ ।**
**ಆಶ್ರಮಾಣಾಮಹಂ ತುರ್ಯೋ ವರ್ಣಾನಾಂ ಪ್ರಥಮೋಽನಘ ॥೧೯॥**

ನಾಗರಾಜರಲ್ಲಿ ನಾನು ಶೇಷನಾಗನಾಗಿದ್ದೇನೆ. ಕೋಡುಗಳುಳ್ಳ ಮತ್ತು ಕೋರೆದಾಡೆಗಳುಳ್ಳ ಪ್ರಾಣಿಗಳಲ್ಲಿ ನಾನು ಮೃಗರಾಜನಾದ ಸಿಂಹನಾಗಿದ್ದೇನೆ.

ಆಶ್ರಮಗಳಲ್ಲಿ ನಾನು ನಾಲ್ಕನೆಯದಾದ ಸಂನ್ಯಾಸಾಶ್ರಮದ ರೂಪದಲ್ಲಿದ್ದೇನೆ. ವರ್ಣಗಳಲ್ಲಿ ಮೊದಲನೆಯ ವರ್ಣವಾದ ಬ್ರಾಹ್ಮಣವರ್ಣವಾಗಿದ್ದೇನೆ.

**ತೀರ್ಥಾನಾಂ ಸ್ರೋತಸಾಂ ಗಙ್ಗಾ ಸಮುದ್ರಃ ಸರಸಾಮಹಮ್ ।**
**ಆಯುಧಾನಾಂ ಧನುರಹಂ ತ್ರಿಪುರಘ್ನೋ ಧನುಷ್ಮತಾಮ್ ॥೨೦॥**

ನಾನು ತೀರ್ಥಗಳಲ್ಲಿ ಮತ್ತು ನದಿಗಳಲ್ಲಿ ಗಂಗೆಯಾಗಿದ್ದೇನೆ. ಜಲಾಶಯಗಳಲ್ಲಿ ಸಮುದ್ರವಾಗಿದ್ದೇನೆ. ಅಸ್ತ್ರ-ಶಸ್ತ್ರಗಳಲ್ಲಿ ಧನುಸ್ಸಾಗಿದ್ದೇನೆ. ಧನುರ್ಧಾರಿಗಳಲ್ಲಿ ತ್ರಿಪುರಾರಿಯಾದ ಶಂಕರನಾಗಿದ್ದೇನೆ.

**ಧಿಷ್ಣ್ಯಾನಾಮಸ್ಮ್ಯಹಂ ಮೇರುರ್ಗಹನಾನಾಂ ಹಿಮಾಲಯಃ ।**
**ವನಸ್ಪತೀನಾಮಶ್ವತ್ಥ ಓಷಧೀನಾಮಹಂ ಯವಃ ॥೨೧॥**

ನಿವಾಸಸ್ಥಾನಗಳಲ್ಲಿ ನಾನು ಸುಮೇರುಪರ್ವತವಾಗಿದ್ದೇನೆ. ದುರ್ಗಮವಾದ ಸ್ಥಾನಗಳಲ್ಲಿ ಹಿಮಾಲಯವಾಗಿದ್ದೇನೆ. ವನಸ್ಪತಿಗಳಲ್ಲಿ ಅಶ್ವತ್ಥ ವೃಕ್ಷವಾಗಿದ್ದೇನೆ. ಸಸ್ಯಗಳಲ್ಲಿ ಯವಧಾನ್ಯವಾಗಿದ್ದೇನೆ.

**ಪುರೋಧಸಾಂ ವಸಿಷ್ಠೋಽಹಂ ಬ್ರಹ್ಮಿಷ್ಠಾನಾಂ ಬೃಹಸ್ಪತಿಃ ।**
**ಸ್ಕನ್ದೋಽಹಂ ಸರ್ವಸೇನಾನ್ಯಾಮಗ್ರಣ್ಯಾಂ ಭಗವಾನಜಃ ॥೨೨॥**

ನಾನು ಪುರೋಹಿತರಲ್ಲಿ ವಸಿಷ್ಠನಾಗಿದ್ದೇನೆ. ಬ್ರಹ್ಮವಿದರಲ್ಲಿ ಬೃಹಸ್ಪತಿಯಾಗಿದ್ದೇನೆ. ಸೇನಾಧಿಪತಿಗಳಲ್ಲಿ ಸ್ಕಂದನಾಗಿದ್ದೇನೆ. ಸನ್ಮಾರ್ಗ ಪ್ರವರ್ತಕರಲ್ಲಿ ಭಗವಾನ್ ಬ್ರಹ್ಮನಾಗಿದ್ದೇನೆ.

**ಯಜ್ಞಾನಾಂ ಬ್ರಹ್ಮಯಜ್ಞೋಽಹಂ ವ್ರತಾನಾಮವಿಹಿಂಸನಮ್ ।**
**ವಾಯ್ವಗ್ನ್ಯರ್ಕಾಮ್ಬುವಾಗಾತ್ಮಾ ಶುಚೀನಾಮಪ್ಯಹಂ ಶುಚಿಃ ॥೨೩॥**

ಪಂಚಮಹಾಯಜ್ಞಗಳಲ್ಲಿ ಬ್ರಹ್ಮಯಜ್ಞವಾಗಿದ್ದೇನೆ. ವ್ರತಗಳಲ್ಲಿ ಅಹಿಂಸಾವ್ರತವಾಗಿದ್ದೇನೆ. ಶುದ್ಧಿಗೊಳಿಸುವ ಪದಾರ್ಥಗಳಲ್ಲಿ ವಾಯು, ಅಗ್ನಿ, ಸೂರ್ಯ, ಜಲ, ವಾಣಿ ಮತ್ತು ಆತ್ಮರೂಪನೂ ಆಗಿದ್ದೇನೆ.

**ಯೋಗಾನಾಮಾತ್ಮಸಂರೋಧೋ ಮನ್ತ್ರೋಽಸ್ಮಿ ವಿಜಿಗೀಷತಾಮ್ ।**
**ಆನ್ವೀಕ್ಷಿಕೀ ಕೌಶಲಾನಾಂ ವಿಕಲ್ಪಃ ಖ್ಯಾತಿವಾದಿನಾಮ್ ॥೨೪॥**

ಎಂಟು ಪ್ರಕಾರವಾದ ಯೋಗಗಳಲ್ಲಿ ಮನೋನಿರೋಧರೂಪವಾದ ಯೋಗವಾಗಿದ್ದೇನೆ. ಜಯಾಪೇಕ್ಷಿಗಳಲ್ಲಿ ಮಂತ್ರಾಲೋಚನೆಯ ರೂಪದಲ್ಲಿ

ದ್ದೇನೆ. ಆತ್ಮಖ್ಯಾತಿ, ಅನ್ಯಥಾಖ್ಯಾತಿ, ಅಖ್ಯಾತಿ, ಅಸತ್ಖ್ಯಾತಿ, ಅನಿರ್ವಚನೀಯಖ್ಯಾತಿಗಳೆಂಬ ಐದು ಖ್ಯಾತಿಗಳಲ್ಲಿ ವಿಕಲ್ಪರೂಪನು ನಾನಾಗಿದ್ದೇನೆ.

**ಸ್ತ್ರೀಣಾಂ ತು ಶತರೂಪಾಹಂ ಪುಂಸಾಂ ಸ್ವಾಯಮ್ಭುವೋ ಮನುಃ ।**
**ನಾರಾಯಣೋ ಮುನೀನಾಂ ಚ ಕುಮಾರೋ ಬ್ರಹ್ಮಚಾರಿಣಾಮ್ ॥**

ಸ್ತ್ರೀಯರಲ್ಲಿ ನಾನು ಮನುವಿನ ಪತ್ನಿಯಾದ ಶತರೂಪೆಯಾಗಿದ್ದೇನೆ. ಪುರುಷರಲ್ಲಿ ಸ್ವಾಯಂಭುವಮನುವಾಗಿದ್ದೇನೆ. ಮುನೀಶ್ವರರಲ್ಲಿ ನಾರಾಯಣ ಋಷಿಯಾಗಿದ್ದೇನೆ. ಬ್ರಹ್ಮಚಾರಿಗಳಲ್ಲಿ ಸನತ್ಕುಮಾರನಾಗಿದ್ದೇನೆ.

**ಧರ್ಮಾಣಾಮಸ್ಮಿ ಸಂನ್ಯಾಸಃ ಕ್ಷೇಮಾಣಾಮಬಹಿರ್ಮತಿಃ ।**
**ಗುಹ್ಯಾನಾಂ ಸೂನೃತಂ ಮೌನಂ ಮಿಥುನಾನಾಮಜಸ್ತ್ವಹಮ್ ॥೨೬॥**

ಧರ್ಮಗಳಲ್ಲಿ ಪ್ರಾಣಿಗಳಿಗೆ ಅಭಯಪ್ರದವಾದ ಸಂನ್ಯಾಸಧರ್ಮವು ನಾನಾಗಿದ್ದೇನೆ. ನಿರ್ಭಯಸ್ಥಾನಗಳಲ್ಲಿ ಅಂತರ್ಮುಖಿಯ ರೂಪದಲ್ಲಿದ್ದೇನೆ. ಅತ್ಯಂತಗೋಪನೀಯ ರಹಸ್ಯವಿಷಯಗಳಲ್ಲಿ ಪ್ರಿಯವಚನರೂಪನೂ ಮೌನವೂ ಆಗಿದ್ದೇನೆ. ದಂಪತಿಗಳಲ್ಲಿ ಆದಿಮಿಥುನಕ್ಕೆ ಕಾರಣನಾದ ಬ್ರಹ್ಮನೂ ನಾನೇ ಆಗಿದ್ದೇನೆ.

**ಸಂವತ್ಸರೋಽಸ್ಮ್ಯನಿಮಿಷಾಮೃತೂನಾಂ ಮಧುಮಾಧವೌ ।**
**ಮಾಸಾನಾಂ ಮಾರ್ಗಶೀರ್ಷೋಽಹಂ ನಕ್ಷತ್ರಾಣಾಂ ತಥಾಭಿಜಿತ್ ॥**

ಪ್ರಮಾದವೆಸಗದೆ ಜಾಗರೂಕರಾಗಿರುವವರಲ್ಲಿ ನಾನು ಸಂವತ್ಸರರೂಪವಾದ ಕಾಲವಾಗಿದ್ದೇನೆ. ಋತುಗಳಲ್ಲಿ ವಸಂತವೂ, ಮಾಸಗಳಲ್ಲಿ ಮಾರ್ಗಶೀರ್ಷವೂ, ನಕ್ಷತ್ರಗಳಲ್ಲಿ ಅಭಿಜಿತ್ತೂ ನಾನೇ ಆಗಿದ್ದೇನೆ.

**ಅಹಂ ಯುಗಾನಾಂ ಚ ಕೃತಂ ಧೀರಾಣಾಂ ದೇವಲೋಽಸಿತಃ ।**
**ದ್ವೈಪಾಯನೋಽಸ್ಮಿ ವ್ಯಾಸಾನಾಂ ಕವೀನಾಂ ಕಾವ್ಯ ಆತ್ಮವಾನ್ ॥**

ಯುಗಗಳಲ್ಲಿ ನಾನು ಕೃತಯುಗವಾಗಿದ್ದೇನೆ. ಧೀರಯೋಗಿಗಳಲ್ಲಿ ಅಸಿತನೂ, ದೇವಲನೂ ಆಗಿದ್ದೇನೆ. ವ್ಯಾಸರಲ್ಲಿ ದ್ವೈಪಾಯನವ್ಯಾಸನಾಗಿದ್ದೇನೆ. ಕವಿಗಳಲ್ಲಿ ಮಹಾತ್ಮನಾದ ಶುಕ್ರನಾಗಿದ್ದೇನೆ.

**ವಾಸುದೇವೋ ಭಗವತಾಂ ತ್ವಂ ತು ಭಾಗವತೇಷ್ವಹಮ್ ।**
**ಕಿಂಪುರುಷಾಣಾಂ ಹನುಮಾನ್ವಿದ್ಯಾಧ್ರಾಣಾಂ ಸುದರ್ಶನಃ ॥೨೯॥**

ಜಗತ್ತಿನ ಸೃಷ್ಟಿ-ಲಯ, ಪ್ರಾಣಿಗಳ ಹುಟ್ಟು-ಸಾವು, ವಿದ್ಯೆ ಮತ್ತು ಅವಿದ್ಯೆ–ಇವುಗಳನ್ನು ತಿಳಿದಿರುವ ಭಗವಂತರಲ್ಲಿ ನಾನು ವಾಸುದೇವನಾಗಿದ್ದೇನೆ. ಭಗವದ್ಭಕ್ತರಲ್ಲಿ ಪರಮಭಾಗವತನಾದ ನೀನೇ ನನ್ನ ಮಹಾ ವಿಭೂತಿಯು. ಕಿಂಪುರುಷರಲ್ಲಿ ಹನುಮಂತನು ನಾನಾಗಿದ್ದೇನೆ. ವಿದ್ಯಾಧರರಲ್ಲಿ ಸುದರ್ಶನನು ನಾನಾಗಿದ್ದೇನೆ.

**ರತ್ನಾನಾಂ ಪದ್ಮರಾಗೋಽಸ್ಮಿ ಪದ್ಮಕೋಶಃ ಸುಪೇಶಸಾಮ್ ।**
**ಕುಶೋಽಸ್ಮಿ ದರ್ಭಜಾತೀನಾಂ ಗವ್ಯಮಾಜ್ಯಂ ಹವಿಃಷ್ವಹಮ್ ॥೩೦॥**

ರತ್ನಗಳಲ್ಲಿ ಪದ್ಮರಾಗವೂ, ಪರಮಸುಂದರವಸ್ತುಗಳಲ್ಲಿ ಪದ್ಮಕೋಶವೂ, ದರ್ಭೆಗಳಲ್ಲಿ ಕುಶದರ್ಭೆಯೂ, ಹವಿಸ್ಸುಗಳಲ್ಲಿ ಹಸುವಿನ ತುಪ್ಪವೂ ನಾನೇ ಆಗಿದ್ದೇನೆ.

**ವ್ಯವಸಾಯಿನಾಮಹಂ ಲಕ್ಷ್ಮೀಃ ಕಿತವಾನಾಂ ಛಲಗ್ರಹಃ ।**
**ತಿತಿಕ್ಷಾಸ್ಮಿ ತಿತಿಕ್ಷೂಣಾಂ ಸತ್ತ್ವಂ ಸತ್ತ್ವವತಾಮಹಮ್ ॥೩೧॥**

ಉದ್ಯೋಗಶೀಲರಲ್ಲಿ ನಾನು ಲಕ್ಷ್ಮಿಯಾಗಿದ್ದೇನೆ. ವಂಚಕರಲ್ಲಿ ನಾನು ಕಪಟದ್ಯೂತವಾಗಿದ್ದೇನೆ. ಕಷ್ಟಸಹಿಷ್ಣುಗಳಲ್ಲಿ ನಾನು ತಾಳ್ಮೆಯಾಗಿದ್ದೇನೆ. ಸಾತ್ವಿಕರಲ್ಲಿ ನಾನು ಸತ್ತ್ವಗುಣವಾಗಿದ್ದೇನೆ.

**ಓಜಃಸಹೋ ಬಲವತಾಂ ಕರ್ಮಾಹಂ ವಿದ್ಧಿ ಸಾತ್ವತಾಮ್ ।**
**ಸಾತ್ವತಾಂ ನವಮೂರ್ತೀನಾಮಾದಿಮೂರ್ತಿರಹಂ ಪರಾ ॥೩೨॥**

ಬಲಿಷ್ಠರಲ್ಲಿ ನಾನು ಉತ್ಸಾಹ-ಪರಾಕ್ರಮಗಳಾಗಿದ್ದೇನೆ. ಭಗವದ್ಭಕ್ತರಲ್ಲಿ ಭಕ್ತಿಯುತವಾದ ನಿಷ್ಕಾಮಕರ್ಮವಾಗಿದ್ದೇನೆ. ಭಾಗವತರ ನವ ವ್ಯೂಹಾರ್ಚನೆಯಲ್ಲಿ ನಾನು ಮೊದಲನೆಯವನೂ ಮತ್ತು ಶ್ರೇಷ್ಠನೂ ಆದ ವಾಸುದೇವಮೂರ್ತಿಯಾಗಿದ್ದೇನೆ.*

**ವಿಶ್ವಾವಸುಃ ಪೂರ್ವಚಿತ್ತಿರ್ಗನ್ಧರ್ವಾಪ್ಸರಸಾಮಹಮ್ ।**
**ಭೂಧರಣಾಮಹಂ ಸ್ಥೈರ್ಯಂ ಗನ್ಧಮಾತ್ರಮಹಂ ಭುವಃ ॥೩೩॥**

---

* ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣಋಷಿ, ಹಯಗ್ರೀವ, ವರಾಹ, ನಾರಸಿಂಹ, ಬ್ರಹ್ಮಾ ಈ ಒಂಬತ್ತು ಮೂರ್ತಿಗಳ ವ್ಯೂಹಕ್ಕೆ ನವವ್ಯೂಹ–ಎಂದು ಹೆಸರು. ಈ ವ್ಯೂಹದಲ್ಲಿ ಆದಿಮೂರ್ತಿಯೇ ವಾಸುದೇವನು. (ಭಾವಾರ್ಥದೀಪಿಕಾ)

ಗಂಧರ್ವರಲ್ಲಿ ವಿಶ್ವಾವಸುವೂ ಅಪ್ಸರೆಯರಲ್ಲಿ ಪೂರ್ವಚಿತ್ತಿಯೂ ನಾನಾಗಿದ್ದೇನೆ. ಪರ್ವತಗಳಲ್ಲಿ ಸ್ಥಿರತೆಯೂ ಪೃಥ್ವಿಯಲ್ಲಿ ಶುದ್ಧವೂ ಅವಿಕಾರಿಯೂ ಆದ ಗಂಧವೂ ನಾನೇ ಆಗಿದ್ದೇನೆ.

**ಅಪಾಂ ರಸಶ್ಚ ಪರಮಸ್ತೇಜಿಷ್ಠಾನಾಂ ವಿಭಾವಸುಃ ।**
**ಪ್ರಭಾ ಸೂರ್ಯೇನ್ದುತಾರಾಣಾಂ ಶಬ್ದೋऽಹಂ ನಭಸಃ ಪರಃ ॥೩೪॥**

ಜಲದಲ್ಲಿ ರಸವು ನಾನಾಗಿದ್ದೇನೆ. ತೇಜಸ್ವಿಗಳಲ್ಲಿ ಅಗ್ನಿಯಾಗಿದ್ದೇನೆ. ಸೂರ್ಯ-ಚಂದ್ರ-ನಕ್ಷತ್ರಗಳಲ್ಲಿ ಪ್ರಭೆಯಾಗಿದ್ದೇನೆ. ಆಕಾಶದಲ್ಲಿ ಅದರ ಏಕ ಮಾತ್ರಗುಣವಾದ ಶಬ್ದವಾಗಿದ್ದೇನೆ.

**ಬ್ರಹ್ಮಣ್ಯಾನಾಂ ಬಲಿರಹಂ ವೀರಾಣಾಮಹಮರ್ಜುನಃ ।**
**ಭೂತಾನಾಂ ಸ್ಥಿತಿರುತ್ಪತ್ತಿರಹಂ ವೈ ಪ್ರತಿಸಜ ಮಃ ॥೩೫॥**

ಬ್ರಾಹ್ಮಣಭಕ್ತರಲ್ಲಿ ಬಲಿಚಕ್ರವರ್ತಿಯಾಗಿದ್ದೇನೆ. ವೀರರಲ್ಲಿ ಅರ್ಜುನನು ನಾನು. ಪ್ರಾಣಿಗಳಲ್ಲಿ ಅವುಗಳ ಉತ್ಪತ್ತಿ-ಸ್ಥಿತಿ ಮತ್ತು ಲಯಗಳು ನಾನೇ ಆಗಿದ್ದೇನೆ.

---

ನವವ್ಯೂಹ–ವಿಷ್ಣು ನವ ವ್ಯೂಹಾ ಯಸ್ಯ ನವವ್ಯೂಹಃ । ಅಷ್ಟದಳಪದ್ಮದಲ್ಲಿ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಾದಿ ರೂಪದಿಂದಲೂ ಮಧ್ಯೇ ಕೇಸರಸ್ಥಾನದಲ್ಲಿ ಪರವಾಸುದೇವರೂಪದಿಂದಲೂ ಪರಮಾತ್ಮನು ಇರುವುದರಿಂದ ಈ ಹೆಸರು.

(ಶಬ್ದಾರ್ಥಕಲ್ಪದ್ರುಮ)

ನವವ್ಯೂಹದ ವಿವರಣೆ : ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಸೇರಿಸಿ ಭಗವಂತನ ಚತುರ್ವ್ಯೂಹವೆನ್ನುತ್ತಾರೆ. ಇದು ಪ್ರಸಿದ್ಧವಾಗಿದೆ. ಇವರಲ್ಲಿ ವಾಸುದೇವನಲ್ಲಿ ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸುಗಳೆಂಬ ಆರು ಗುಣಗಳೂ ಪೂರ್ಣವಾಗಿವೆ. ಅವನು ತುರೀಯಸ್ಥಿತಿಗೆ ಅಧಿಷ್ಠಾತೃವಾಗಿದ್ದಾನೆ. ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧರೂ ಭಗವಂತನ ಅವತಾರವೇ ಆಗಿದ್ದರೂ ಅವರು ತಮ್ಮ ಸಂಕಲ್ಪದಿಂದ ಕ್ರಮವಾಗಿ ಜೀವತತ್ತ್ವ, ಮನಸ್ತತ್ತ್ವ ಮತ್ತು ಅಹಂಕಾರತತ್ತ್ವಗಳಿಗೆ ಅಭಿಷ್ಠಾತೃಗಳಾಗಿದ್ದಾರೆ. ಸುಷುಪ್ತಿ, ಸ್ವಪ್ನ, ಜಾಗ್ರತ್ ಸ್ಥಿತಿಗಳಿಗೆ ಅಧಿದೇವತೆಗಳಾಗಿದ್ದಾರೆ. ಸಂಕರ್ಷಣನಲ್ಲಿ ಜ್ಞಾನ-ಬಲಗಳೂ, ಪ್ರದ್ಯುಮ್ನನಲ್ಲಿ ಐಶ್ವರ್ಯ-ವೀರ್ಯಗಳೂ, ಅನಿರುದ್ಧನಲ್ಲಿ ಶಕ್ತಿ-ತೇಜಸ್ಸುಗಳೂ ತುಂಬಿವೆ. ಆರು ಗುಣಗಳಿಂದಲೂ ಪರಿಪೂರ್ಣವಾಗಿ ತುರೀಯಸ್ಥಿತಿಗೆ ಅಧಿದೇವತೆಯಾಗಿರುವ ಪರವಾಸುದೇವನ ಸ್ವರೂಪವು ಉಳಿದ ಮೂರು

**ಗತ್ಯುಕ್ತ್ಯುತ್ಸರ್ಗೋಪಾದಾನಮಾನನ್ದಸ್ಪರ್ಶಲಕ್ಷಣಮ್ ।**
**ಆಸ್ವಾದಶ್ರುತ್ಯವಘ್ರಾಣಮಹಂ ಸರ್ವೇನ್ದ್ರಿಯೇನ್ದ್ರಿಯಮ್ ॥೩೬॥**

ಕಾಲನಲ್ಲಿ ಗಮನಶಕ್ತಿ, ವಾಕ್ಕಿನಲ್ಲಿ ಮಾತನಾಡುವಶಕ್ತಿ, ಪಾಯುವಿನಲ್ಲಿ ಮಲವಿಸರ್ಜನಶಕ್ತಿ, ಕೈಯಿನಲ್ಲಿ ಹಿಡಿಯುವಶಕ್ತಿ, ಜನನೇಂದ್ರಿಯದಲ್ಲಿ ಆನಂದೋಪಭೋಗಶಕ್ತಿ, ತ್ವಚೆಯಲ್ಲಿ ಸ್ಪರ್ಶಶಕ್ತಿ, ಕಣ್ಣುಗಳಲ್ಲಿ ದರ್ಶನಶಕ್ತಿ, ನಾಲಿಗೆಯಲ್ಲಿ ರಸಾಸ್ವಾದನೆಯ ಶಕ್ತಿ, ಕಿವಿಗಳಲ್ಲಿ ಶ್ರವಣಶಕ್ತಿ, ಮೂಗಿನಲ್ಲಿ ಆಘ್ರಾಣಿಸುವಶಕ್ತಿ–ಈ ಎಲ್ಲ ಶಕ್ತಿಗಳೂ ನಾನೇ ಆಗಿದ್ದೇನೆ. ಸರ್ವೇಂದ್ರಿಯ ಗಳ ಇಂದ್ರಿಯಶಕ್ತಿಯೂ ನಾನಾಗಿದ್ದೇನೆ.

**ಪೃಥಿವೀ ವಾಯುರಾಕಾಶ ಆಪೋ ಜ್ಯೋತಿರಹಂ ಮಹಾನ್ ।**
**ವಿಕಾರಃ ಪುರುಷೋಽವ್ಯಕ್ತಂ ರಜಃ ಸತ್ತ್ವಂ ತಮಃ ಪರಮ್ ॥೩೭॥**

ಪೃಥಿವೀ, ವಾಯು, ಆಕಾಶ, ಜಲ, ತೇಜಸ್ಸು, ಅಹಂಕಾರ,

---

ವ್ಯೂಹಗಳಿಗಿಂತ ಉನ್ನತಸ್ಥಾನದಲ್ಲಿರುವುದರಿಂದ ಚತುರ್ಮೂರ್ತಿಗಳಲ್ಲಿ ಆತನು ಶ್ರೇಷ್ಠ ವಾದ ಮೂರ್ತಿಯೆಂದು ವ್ಯಾಖ್ಯಾನಿಸುತ್ತೇವೆ. ಮತ್ಸ್ಯಾದಿ ಅವತಾರಗಳೆಲ್ಲವೂ ಅನಿರುದ್ಧಮೂರ್ತಿಯೆಂಬ ಮಹಾಸಮುದ್ರದಿಂದ ಹೊರಬಂದ ಕಾಲುವೆಗಳೇ ಆಗಿವೆ. **ಯಥಾ ವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ ॥** ಇಂತಹ ಅನಿರುದ್ಧಮೂರ್ತಿಗಿಂತಲೂ ವಾಸುದೇವನು ಆದಿಮೂರ್ತಿಯಾಗಿರುವುದರಿಂದ ಅವನು ಅವತಾರಗಳ ಭಗವನ್ಮೂರ್ತಿಗಳಿಗಿಂತಲೂ ಆದ್ಯಮಹಾವಿಭೂತಿಯಾಗಿದ್ದಾನೆ. ಮಿಗಿಲಾಗಿ 1) ಅದು ನಮಗೆ ಹತ್ತಿರದ ಅವತಾರ. 2) ಈ ಅವತಾರದಿಂದ ಭಗವಂತನು ಅಧ್ಯಾತ್ಮ-ಅಧಿದೈವ-ಅಧಿಭೂತ ಎಂಬ ಮೂರು ಕ್ಷೇತ್ರದಲ್ಲಿಯೂ ತನ್ನ ಮಹಿಮೆಯನ್ನು ಪ್ರದರ್ಶನ ಮಾಡಿದ್ದಾನೆ. ಮೂರು ಲೋಕಗಳಲ್ಲಿಯೂ ಸಂಚರಿಸಿ ತನ್ನ ಮಹಿಮೆಯನ್ನು ಎಲ್ಲೆಡೆಯಲ್ಲಿಯೂ ಪ್ರದರ್ಶಿಸಿದ್ದಾನೆ. ಬಾಲಕರು, ತರುಣರು, ಯೋಧರು, ಮಂತ್ರಿಗಳು, ಆಚಾರ್ಯ ಮುಂತಾದ ಎಲ್ಲ ವರ್ಗಗಳಲ್ಲಿಯೂ ಸೇರಿ ಎಲ್ಲದರಲ್ಲಿಯೂ ತನ್ನ ಪ್ರಭಾವವನ್ನು ಬೆಳಗಿಸಿದ್ದಾನೆ. ಆಧಿಭೌತಿಕವಾಗಿ ಕಂಸ-ಶಿಶುಪಾಲಾದಿಗಳನ್ನು ಸಂಹಾರಮಾಡಿದ್ದಾನೆ. ಇಷ್ಟಲ್ಲದೆ ಗೀತಾಜ್ಞಾನೋಪದೇಶದ ಮೂಲಕ ಆಂತರಿಕವಾದ ಅರಿಷಡ್ವರ್ಗವನ್ನೂ ಮತ್ತು ಇವುಗಳಿಗೆ ಮೂಲವಾದ ಶೋಕ-ಮೋಹಗಳನ್ನೂ ಧ್ವಂಸಮಾಡಿದ್ದಾನೆ. ಇಷ್ಟು ಮಹಾವ್ಯಾಪ್ತಿಯು ಬೇರೆ ಯಾವ ಅವತಾರಗಳಿಗೂ ಇಲ್ಲವಾಗಿರುವ ಕಾರಣದಿಂದ ಉಳಿದ ಎಲ್ಲ ಮೂರ್ತಿಗಳಿಗಿಂತಲೂ ಮಿಗಿಲಾಗಿ ವಾಸುದೇವರೂಪವನ್ನು ಭಗವಂತನ ದಿವ್ಯವಿಭೂತಿಯೆಂದು ಕರೆಯಬಹುದು.

ಮಹತ್ತತ್ತ್ವ, ಐದು ಮಹಾಭೂತಗಳು, ಜೀವ, ಅವ್ಯಕ್ತ, ಪ್ರಕೃತಿ, ಸತ್ತ್ವ ರಜಸ್ಸು, ತಮಸ್ಸು–ಇವುಗಳೆಲ್ಲದರಿಂದಲೂ ಆಚೆ ಇರುವ ಬ್ರಹ್ಮ–ಈ ಎಲ್ಲವೂ ನಾನೇ ಆಗಿದ್ದೇನೆ.

**ಅಹಮೇತತ್ಪ್ರಸಙ್ಖ್ಯಾನಂ ಜ್ಞಾನಂ ತತ್ತ್ವವಿನಿಶ್ಚಯಃ ।**
**ಮಯೇಶ್ವರೇಣ ಜೀವೇನ ಗುಣೇನ ಗುಣಿನಾ ವಿನಾ ।**
**ಸರ್ವಾತ್ಮನಾಪಿ ಸರ್ವೇಣ ನ ಭಾವೋ ವಿದ್ಯತೇ ಕ್ವಚಿತ್ ॥೩೮॥**

ಈ ತತ್ತ್ವಗಳ ಗಣನೆಯೂ, ಲಕ್ಷಣಗಳ ಮೂಲಕವಾಗಿ ಅದರ ಜ್ಞಾನವೂ ಮತ್ತು ತತ್ತ್ವಜ್ಞಾನರೂಪವಾದ ಅದರ ಫಲವೂ ನಾನೇ ಆಗಿದ್ದೇನೆ. ನಾನು ಈಶ್ವರನೂ ಆಗಿದ್ದೇನೆ. ಜೀವವೂ* ಆಗಿದ್ದೇನೆ. ಗುಣವೂ ಆಗಿದ್ದೇನೆ. ಗುಣಿಯೂ ಆಗಿದ್ದೇನೆ. ನಾನೇ ಸಮಸ್ತರ ಆತ್ಮಸ್ವರೂಪನೂ ಆಗಿದ್ದೇನೆ. ಎಲ್ಲವೂ ನಾನೇ ಆಗಿದ್ದೇನೆ. ನನ್ನಿಂದ ಅತಿರಿಕ್ತವಾದ ಪದಾರ್ಥವು ಯಾವುದೂ ಇಲ್ಲ. ಎಲ್ಲಿಯೂ ಇಲ್ಲ.

---

ಮತ್ಸ್ಯಾವತಾರದಿಂದ ಕೃಷ್ಣಾವತಾರದವರೆಗಿನ ಒಂಭತ್ತು ಮೂರ್ತಿಗಳಲ್ಲಿ ಮೂಲಭೂತವಾದುದು–ಅಂದರೆ ಸರ್ವಕಾರಣಭೂತವಾದುದು ವಾಸುದೇವ ಮೂರ್ತಿಯೇ. ಉಳಿದ ಮೂರ್ತಿಗಳಲ್ಲಿ ಯಾವ ಸಾಮರ್ಥ್ಯವುಂಟೋ ಅದು ವಾಸು ದೇವಮೂರ್ತಿಯದೇ ಆಗಿದೆ. ವಾಸುದೇವಮೂರ್ತಿಯಿಂದ ಅವಿನಾಭೂತವಾಗಿದೆ. ವಾಸುದೇವನಿಂದ ಪ್ರತ್ಯೇಕವಾದ ಅರ್ಥಾಂತರವಲ್ಲ. (ವೀರರಾಘವೀಯ)

ಉಳಿದ ಅವತಾರಗಳನ್ನು ಮಾಡಿದವನು **ದಶಾಕೃತಿಕೃತೇ ಕೃಷ್ಣಾಯ ತುಭ್ಯಂ ನಮಃ ।** ಎಂಬಂತೆ ಪರವಾಸುದೇವನದೇ ಆಗಿರುವುದರಿಂದ ಅವನು ಎಲ್ಲ ಅವತಾರ ಗಳಿಗೂ ಮೂಲಭೂತನಾದವನು. ಸರ್ವಶ್ರೇಷ್ಠನಾದ ವಿಭೂತಿಪುರುಷ–ಎಂಬ ಅರ್ಥ ವನ್ನು ಗಮನಿಸಬಹುದು. ಕಲ್ಕಿ ಅವತಾರವು ಮುಂದೆ ಆಗುವ ಅವತಾರವಾದ್ದರಿಂದ ಅದನ್ನು ಇಲ್ಲಿ ಪರಿಗಣಿಸಿಲ್ಲ. **ಭಾವಿನ್ಯಾಃ ಕಲ್ಕಿಮೂರ್ತೇಃ ಅವಿವಕ್ಷಯಾ ನವಮೂರ್ತೀನಾಂ ಇತ್ಯುಕ್ತಂ ॥**

---

* ಪರಮಾತ್ಮನು ಜೀವನಿಗೆ ಆತ್ಮಸ್ವರೂಪನಾಗಿರುವುದರಿಂದ ಆತನನ್ನು ಜೀವ ನೆಂದು ಕರೆದಿದೆಯೆಂದು ವಿಶಿಷ್ಟಾದ್ವೈತಿಗಳ ವಿವರಣೆ. 'ಯಸ್ಯಾತ್ಮಾ ಶರೀರಂ'–ಎಂಬ ಶ್ರುತಿಯಂತೆ ಜೀವವು ಪರಮಾತ್ಮನಿಗೆ ಶರೀರಭೂತವಾಗಿರುವುದರಿಂದ ಪರಮಾತ್ಮನನ್ನು ಜೀವನೆಂದೂ ಕರೆಯಲಾಗಿದೆಯೆಂದು ಅವರು ಹೇಳುತ್ತಾರೆ.

**ಸಙ್ಖ್ಯಾನಂ ಪರಮಾಣೂನಾಂ ಕಾಲೇನ ಕ್ರಿಯತೇ ಮಯಾ ।**
**ನ ತಥಾ ಮೇ ವಿಭೂತೀನಾಂ ಸೃಜತೋಽಣ್ಡಾನಿ ಕೋಟಿಶಃ ॥೩೯॥**

ಉದ್ಧವ! ಒಂದು ಸಮಯ ನಾನು ಗಣನೆಮಾಡಲು ತೊಡಗಿದರೆ ಪರಮಾಣುಗಳು ಎಷ್ಟಿವೆಯೆಂಬುದನ್ನು ಹೇಳಬಲ್ಲೆನು. ಆದರೆ ನನ್ನ ವಿಭೂತಿಗಳು ಎಷ್ಟೆಂದು ಎಣಿಕೆಮಾಡಿ ಹೇಳಲು ಶಕ್ಯವಿಲ್ಲ. ಏಕೆಂದರೆ ನಾನು ಕೋಟಿ-ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸುತ್ತಲೇ ಇರುತ್ತೇನೆ.

**ತೇಜಃ ಶ್ರೀಃ ಕೀರ್ತಿರೈಶ್ವರ್ಯಂ ಹ್ರೀಸ್ತ್ಯಾಗಃ ಸೌಭಗಂ ಭಗಃ ।**
**ವೀರ್ಯಂ ತಿತಿಕ್ಷಾ ವಿಜ್ಞಾನಂ ಯತ್ರ ಯತ್ರ ಸ ಮೇಂಽಶಕಃ ॥೪೦॥**

ಎಲ್ಲೆಲ್ಲಿ ತೇಜಸ್ಸು, ಶ್ರೀ (ಕಾಂತಿ), ಕೀರ್ತಿ, ಐಶ್ವರ್ಯ, ಲಜ್ಜೆ, ತ್ಯಾಗ, ಸೌಂದರ್ಯ, ಸೌಭಾಗ್ಯ, ಪರಾಕ್ರಮ, ತಾಳ್ಮೆ ಮತ್ತು ವಿಜ್ಞಾನ–ಇವೇ ಮುಂತಾದ ಶ್ರೇಷ್ಠಗುಣಗಳಿರುತ್ತವೆಯೋ ಅಲ್ಲಲ್ಲಿ ನನ್ನ ಅಂಶವಿರುವುದೆಂದು ತಿಳಿ.

**ಏತಾಸ್ತೇ ಕೀರ್ತಿತಾಃ ಸರ್ವಾಃ ಸಂಕ್ಷೇಪೇಣ ವಿಭೂತಯಃ ।**
**ಮನೋವಿಕಾರಾ ಏವೈತೇ ಯಥಾ ವಾಚಾಭಿಧೀಯತೇ ॥೪೧॥**

ಉದ್ಧವ! ನಿನ್ನ ಪ್ರಶ್ನೆಗೆ ಅನುಸಾರವಾಗಿ ನನ್ನಲ್ಲಿ ಚಿತ್ತವನ್ನು ನೆಲೆಗೊಳಿಸುವುದಕ್ಕಾಗಿ ನಾನು ಸಂಕ್ಷೇಪವಾಗಿ ನನ್ನ ವಿಭೂತಿಗಳ ವರ್ಣನೆಯನ್ನು ಮಾಡಿರುತ್ತೇನೆ. ಇವೆಲ್ಲವೂ ಪರಮಾರ್ಥಗಳಲ್ಲ. ಮನೋವಿಕಾರ ಮಾತ್ರವಾದುವು. ಮಾತಿನ ಮೂಲಕವಾಗಿ ಹೇಳಲು ಬರುವ ಪದಾರ್ಥಗಳು. ಹೀಗೆ ಹೇಳುವುದರಿಂದ ಅದರ ಕಲ್ಪನೆಯು ಸಿಕ್ಕುತ್ತದೆ.

**ವಾಚಂ ಯಚ್ಛ ಮನೋ ಯಚ್ಛ ಪ್ರಾಣಾನ್ಯಚ್ಛೇನ್ದ್ರಿಯಾಣಿ ಚ ।**
**ಆತ್ಮಾನಮಾತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ ॥೪೨॥**

ಪರಮಾರ್ಥವನ್ನು ಸಾಧಿಸಬೇಕಾದರೆ ಮಾತನ್ನು ನಿಯಂತ್ರಿಸು. ಭಗವಂತನಿಗೆ ಸಂಬಂಧಿಸದ ಮಾತುಗಳನ್ನು ಆಡಬೇಡ. ಮನಸ್ಸನ್ನು ನಿಯಂತ್ರಿಸು. ಅದನ್ನು ಯಾವಾಗಲೂ ಭಗವಂತನ ಚರಣಾರವಿಂದಗಳಲ್ಲಿಯೇ ಮಗ್ನವಾಗಿರುವಂತೆ ಮಾಡು. ಪ್ರಾಣಗಳನ್ನು ನಿಯಂತ್ರಿಸು. ಪ್ರಾಣಾಯಾಮ-ಪ್ರತ್ಯಾಹಾರಗಳ ಮೂಲಕವಾಗಿ ಪ್ರಾಣವಾಯುವನ್ನು ವಶಪಡಿ

ಸಿಕೊ. ಇಂದ್ರಿಯಗಳನ್ನು ನಿಯಂತ್ರಿಸು. ಅವುಗಳ ಸ್ವೇಚ್ಛಾವರ್ತನೆಗೆ ಅವಕಾಶಕೊಡಬೇಡ. ಅವು ಹೇಳಿದಂತೆ ಕೇಳಬೇಡ. ಪ್ರಾಪಂಚಿಕವಾದ ಬುದ್ಧಿಯನ್ನು ಸಾತ್ತ್ವಿಕಬುದ್ಧಿಯಿಂದ ನಿಯಂತ್ರಿಸು. ಬುದ್ಧಿಯು ಸಾತ್ತ್ವಿಕ ವಾಗುವಂತೆ ಪಳಗಿಸು. ಹೀಗೆಮಾಡಿದರೆ ಪುನಃ ಹುಟ್ಟು-ಸಾವುಗಳೆಂಬ ಸಂಸಾರಮಾರ್ಗದಲ್ಲಿ ಬೀಳಬೇಕಾಗುವುದಿಲ್ಲ.

**ಯೋ ವೈ ವಾಙ್ಮನಸೀ ಸಮ್ಯಗಸಂಯಚ್ಛನ್ಧಿಯಾ ಯತಿಃ ।**
**ತಸ್ಯ ವ್ರತಂ ತಪೋ ದಾನಂ ಸ್ರವತ್ಯಾಮಘಟಾಮ್ಬುವತ್ ॥೪೩॥**

ಯಾವ ಸಾಧಕನು ಬುದ್ಧಿಯ ಮೂಲಕವಾಗಿ ಮಾತು ಮತ್ತು ಮನಸ್ಸನ್ನು ಸಂಪೂರ್ಣವಾಗಿ ಹತೋಟಿಗೆ ತೆಗೆದುಕೊಳ್ಳುವುದಿಲ್ಲವೋ ಅಂತಹವನು ಮಾಡುವ ವ್ರತ-ತಪಸ್ಸು-ದಾನಗಳ ಫಲಗಳು ಹಸಿಮಡಿಕೆ ಯಲ್ಲಿಟ್ಟ ನೀರಿನಂತೆ ಸೋರಿಹೋಗುತ್ತವೆ.

**ತಸ್ಮಾನ್ಮನೋವಚಃಪ್ರಾಣಾನ್ ನಿಯಚ್ಛೇನ್ಮತ್ಪರಾಯಣಃ ।**
**ಮದ್ಭಕ್ತಿಯುಕ್ತಯಾ ಬುದ್ಧ್ಯಾ ತತಃ ಪರಿಸಮಾಪ್ಯತೇ ॥೪೪॥**

ಆದುದರಿಂದ ನನ್ನನ್ನೇ ಪರಮಾಶ್ರಯನನ್ನಾಗಿ ಭಾವಿಸಿ ಭಕ್ತಿಯುಕ್ತವಾದ ಬುದ್ಧಿಯಿಂದ ಮಾತು-ಮನಸ್ಸು ಮತ್ತು ಪ್ರಾಣಗಳನ್ನು ನಿಯಂತ್ರಿಸಬೇಕು. ಹೀಗೆ ಮಾಡಿದರೆ ಅವನು ಪುನಃ ಬೇರೆ ಏನನ್ನೂ ಮಾಡಬೇಕಾಗುವುದಿಲ್ಲ. ಕೃತಕೃತ್ಯನಾಗಿಬಿಡುತ್ತಾನೆ.”

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಏಕಾದಶಸ್ಕಂಧದ ೧೬ನೆಯ ಅಧ್ಯಾಯವು ಮುಗಿಯಿತು.

---

ಏಕಾದಶಸ್ಕಂಧ ೧೭ನೆಯ ಅಧ್ಯಾಯ

## ವರ್ಣಾಶ್ರಮಧರ್ಮನಿರೂಪಣೆ

ಉದ್ಧವನು ಹೇಳುತ್ತಾನೆ :

**ಯಸ್ತ್ವಯಾಭಿಹಿತಃ ಪೂರ್ವಂ ಧರ್ಮಸ್ತ್ವದ್ಭಕ್ತಿಲಕ್ಷಣಃ ।**
**ವರ್ಣಾಶ್ರಮಾಚಾರವತಾಂ ಸರ್ವೇಷಾಂ ದ್ವಿಪದಾಮಪಿ ॥೧॥**
**ಯಥಾನುಷ್ಠೀಯಮಾನೇನ ತ್ವಯಿ ಭಕ್ತಿರ್ನೃಣಾಂ ಭವೇತ್ ।**
**ಸ್ವಧರ್ಮೇಣಾರವಿನ್ದಾಕ್ಷ ತತ್ಸಮಾಖ್ಯಾತುಮರ್ಹಸಿ ॥೨॥**

“ಕಮಲಾಕ್ಷನೇ! ಹಿಂದೆ ನೀನು ವರ್ಣಾಶ್ರಮಧರ್ಮಗಳನ್ನು ಪರಿಪಾಲಿಸುವವರಿಗೂ ಮತ್ತು ಸಾಮಾನ್ಯಮನುಷ್ಯರಿಗೂ ನಿನ್ನಲ್ಲಿ ಭಕ್ತಿಭಾವವುಂಟಾಗಲು ಕೆಲವು ಧರ್ಮಗಳನ್ನು ಉಪದೇಶಿಸಿದ್ದೆ. (ಬಹಳ ಕಾಲವು ಕಳೆದು ಹೋದ ಕಾರಣ ಅದೀಗ ಪ್ರಚಲಿತವಾಗಿಲ್ಲ.) ಜನರಿಗೆ ನಿನ್ನ ಪಾದಾರವಿಂದಗಳಲ್ಲಿ ಭಕ್ತಿಯುಂಟಾಗಬೇಕಾದರೆ ಅವರು ಎಂತಹ ಧರ್ಮವನ್ನು ಅನುಷ್ಠಾನಮಾಡಬೇಕೆಂಬುದನ್ನು ಈಗ ಪುನಃ ಹೇಳುವ ಕೃಪೆಮಾಡು.

ಪ್ರಭುವೇ! ಮಾಧವ! ಹಿಂದೆ ನೀನು ಹಂಸಾವತಾರವನ್ನು ಮಾಡಿ ಬ್ರಹ್ಮದೇವರಿಗೆ ನಿನ್ನ ಪರಮಧರ್ಮದ ಉಪದೇಶವನ್ನು ಮಾಡಿದ್ದೆ. ( ಈ ವಿಷಯವನ್ನು ನೀನೇ ನನಗೆ ಹೇಳಿರುವೆ) ಶತ್ರುನಾಶಕನೇ! ನೀನು ಆ ನಿನ್ನ ಪರಮಧರ್ಮವನ್ನು ಉಪದೇಶಿಸಿ ಬಹಳ ಕಾಲವು ಕಳೆದು ಹೋಗಿದೆಯಾದ ಕಾರಣ ಪ್ರಾಯಶಃ ಆ ಧರ್ಮವು ಮರ್ತ್ಯಲೋಕದಲ್ಲಿ ಪ್ರಚಲಿತವಾಗಿರಲಾರದು. ಅಚ್ಯುತನೇ! ಭೂಮಂಡಲದಲ್ಲಾಗಲೀ ವೇದ-ವೇದಾಂಗಗಳೇ ಮೂರ್ತಿಮತ್ತಾಗಿ ಬೆಳಗುತ್ತಿರುವ ಬ್ರಹ್ಮನ ಸಭೆಯಲ್ಲಾಗಲೀ ನಿನ್ನೊಬ್ಬನನ್ನು ಬಿಟ್ಟರೆ ಧರ್ಮದ ಉಪದೇಶಕನಾಗಲೀ, ಧರ್ಮದ ಪ್ರವರ್ತಕನಾಗಲೀ, ಧರ್ಮವನ್ನು ರಕ್ಷಿಸುವವನಾಗಲೀ ಬೇರೊಬ್ಬನಿಲ್ಲ. ಈ ಧರ್ಮಕ್ಕೆ ಪ್ರವರ್ತಕನೂ ರಕ್ಷಕನೂ ಮತ್ತು ಉಪದೇಶಕನೂ ನೀನೇ ಆಗಿರುವೆ. ಮೊದಲು ನೀನು ಮಧುವೆಂಬ ರಾಕ್ಷಸನನ್ನು ಸಂಹರಿಸಿ ವೇದಗಳನ್ನು ಹೇಗೆ ರಕ್ಷಿಸಿದೆಯೋ ಹಾಗೆಯೇ ಈಗ ವೇದಧರ್ಮಗಳನ್ನು ಸಂರಕ್ಷಿಸು. ನೀನು ನಿನ್ನ ಲೀಲೆಗಳನ್ನು ಉಪಸಂಹರಿಸಿಕೊಂಡು ಭೂಮಂಡಲವನ್ನು ಬಿಟ್ಟು ಹೊರಟುಹೋದೆಯಾದರೆ ನಿನ್ನೊಡನೆಯೇ ನಷ್ಟವಾಗಿ ಹೋಗುವ ಪರಮಧರ್ಮವನ್ನು ಯಾರು ತಾನೇ ಹೇಳಬಲ್ಲರು?

ಪ್ರಿಯಸಖನೇ! ನೀನು ಸಮಸ್ತಧರ್ಮಗಳ ರಹಸ್ಯಗಳನ್ನೂ ತಿಳಿದವನಾಗಿರುವೆ. ನಿನ್ನ ಪಾದಾರವಿಂದಗಳಲ್ಲಿ ಭಕ್ತಿಯನ್ನು ಹುಟ್ಟಿಸುವ ಆ ಪರಮಧರ್ಮವನ್ನು ವರ್ಣಿಸಿ ಹೇಳು. ಯಾರು, ಯಾವ ವಿಧಾನದಿಂದ ಈ ಧರ್ಮವನ್ನು ಪರಿಪಾಲಿಸಬೇಕೆಂಬುದನ್ನು ಹೇಳುವ ಕೃಪೆ ಮಾಡು.”

ಶ್ರೀಶುಕಮುನಿಗಳು ಹೇಳುತ್ತಾರೆ :

“ಪರೀಕ್ಷಿತಮಹಾರಾಜ! ಸೇವಕರಲ್ಲಿ ಅಗ್ರೇಸರನಾದ ಉದ್ಧವನು

ಹೀಗೆ ಪ್ರಶ್ನಿಸಲು ಭಗವಂತನಾದ ಶ್ರೀಕೃಷ್ಣನು ಅತ್ಯಂತ ಪ್ರಸನ್ನತೆಯಿಂದ ಮನುಷ್ಯರ ಕ್ಷೇಮದ ಸಲುವಾಗಿ ಸನಾತನಧರ್ಮಗಳನ್ನು ಹೇಳಲು ಉಪಕ್ರಮಿಸಿದನು.

"ಪ್ರಿಯ ಉದ್ಧವನೇ! ನೀನು ಕೇಳಿರುವ ಈ ಪ್ರಶ್ನೆಯು ಧರ್ಮ ಮಯವಾಗಿದೆ. ನಾನು ಹೇಳಿರುವ ಧರ್ಮದಿಂದ ವರ್ಣಾಶ್ರಮಧರ್ಮಿಗಳಾದ ಮನುಷ್ಯರಿಗೆ ಪರಮಕಲ್ಯಾಣಸ್ವರೂಪವಾದ ಮೋಕ್ಷವು ದೊರೆಯುತ್ತದೆ. ಆದುದರಿಂದ ಈ ಶ್ರೇಷ್ಠವಾದ ಧರ್ಮವನ್ನು ನಾನು ನಿನಗೆ ಉಪ ದೇಶಿಸುತ್ತೇನೆ. ಸಾವಧಾನಚಿತ್ತನಾಗಿ ಕೇಳು.

ಕಲ್ಪದ ಆದಿಯಲ್ಲಿದ್ದ ಸತ್ಯಯುಗದಲ್ಲಿ ಎಲ್ಲ ಮನುಷ್ಯರಿಗೂ ಹಂಸ-ಎಂಬ ಹೆಸರಿನ ಒಂದೇ ವರ್ಣವಿದ್ದಿತು. ಆ ಯುಗದಲ್ಲಿ ಜನರೆಲ್ಲರೂ ಹುಟ್ಟಿನಿಂದಲೇ ಕೃತಕೃತ್ಯರಾಗಿದ್ದುದರಿಂದ ಆ ಯುಗಕ್ಕೆ ಕೃತಯುಗವೆಂದು ಹೆಸರಾಯಿತು. ಆ ಸಮಯದಲ್ಲಿ ಕೇವಲ ಓಂಕಾರವೇ ವೇದವಾಗಿದ್ದಿತು. ತಪಸ್ಸು, ಶೌಚ, ದಯೆ ಮತ್ತು ಸತ್ಯ–ಎಂಬ ನಾಲ್ಕು ಕಾಲುಗಳಿಂದ ಕೂಡಿದ ವೃಷಭರೂಪಧರನಾದ ಧರ್ಮವೇ ನಾನಾಗಿದ್ದೆನು. ಆ ಸಮಯದಲ್ಲಿ ಪಾಪ ರಹಿತರಾದ ಮತ್ತು ತಪೋನಿಷ್ಠರಾದ ಭಕ್ತಜನರು ಹಂಸಸ್ವರೂಪನಾದ ನನ್ನನ್ನು ಉಪಾಸನೆಮಾಡುತ್ತಿದ್ದರು. ಮಹಾಭಾಗನೇ! ಸತ್ಯಯುಗವು ಮುಗಿದನಂತರ ತ್ರೇತಾಯುಗವು ಪ್ರಾರಂಭವಾಗಲಾಗಿ ನನ್ನ ಹೃದಯದ ಶ್ವಾಸ-ಪ್ರಶ್ವಾಸಗಳ ಮೂಲಕವಾಗಿ ಋಗ್ವೇದ-ಸಾಮವೇದ ಮತ್ತು ಯಜುರ್ವೇದರೂಪವಾದ ಮೂರು ವಿದ್ಯೆಗಳು ಪ್ರಕಟವಾದುವು. ವೇದ ತ್ರಯದಿಂದ ಹುಟ್ಟಿದ ಹೌತ್ರ-ಆಧ್ವರ್ಯವ-ಔದ್ಗಾತ್ರ–ಎಂಬ ಮೂರು ಕ್ರಮಗಳಿಂದ ಕೂಡಿ ನಾನೇ ಯಜ್ಞಪುರುಷನಾದೆನು. ವಿರಾಟ್‌ಪುರುಷನ ಮುಖದಿಂದ ಬ್ರಾಹ್ಮಣನೂ, ಭುಜಗಳಿಂದ ಕ್ಷತ್ರಿಯನೂ, ತೊಡೆಗಳಿಂದ ವೈಶ್ಯನೂ, ಕಾಲುಗಳಿಂದ ಶೂದ್ರನೂ ಹುಟ್ಟಿದರು. ಸ್ವಧರ್ಮ-ಸದಾಚಾರ ಇವುಗಳು ಇವರ ಲಕ್ಷಣಗಳಾಗಿದ್ದುವು. ಉದ್ಧವ! ವಿರಾಟ್‌ಪುರುಷ ನೆಂಬುವನು ಬೇರೆ ಯಾರೂ ಅಲ್ಲ. ನಾನೇ ಆಗಿದ್ದೇನೆ. ನನ್ನ ತೊಡೆ ಗಳಿಂದ ಗೃಹಸ್ಥಾಶ್ರಮವೂ, ಹೃದಯದಿಂದ ಬ್ರಹ್ಮಚರ್ಯಾಶ್ರಮವೂ, ವಕ್ಷಃಸ್ಥಳದಿಂದ ವಾನಪ್ರಸ್ಥಾಶ್ರಮವೂ, ಶಿರಸ್ಸಿನಿಂದ ಸಂನ್ಯಾಸಾಶ್ರಮವೂ

ಹುಟ್ಟಿದುವು. ಪುರುಷರ ಸ್ವಭಾವಗಳು ಅವರವರ ವರ್ಣಾಶ್ರಮಗಳ ಉತ್ಪತ್ತಿಸ್ಥಾನವನ್ನು ಅನುಸರಿಸಿ ಇರುತ್ತಿದ್ದುದರಿಂದ ಉತ್ತಮಸ್ಥಾನದಿಂದ ಹುಟ್ಟಿದವರ ಸ್ವಭಾವವು ಉತ್ತಮವಾಗಿಯೂ ಮಧ್ಯಮಸ್ಥಾನದಿಂದ ಹುಟ್ಟಿದವರ ಸ್ವಭಾವವು ಮಧ್ಯಮವಾಗಿಯೂ ನಿಕೃಷ್ಟಸ್ಥಾನದಿಂದ ಹುಟ್ಟಿದವರ ಸ್ವಭಾವವು ನಿಕೃಷ್ಟವಾಗಿಯೂ ಇರುತ್ತಿದ್ದಿತು.

ಇನ್ನು ಅವರ ಸ್ವಭಾವಾನುಗುಣವಾದ ಧರ್ಮಗಳನ್ನು ಹೇಳುವೆನು ಕೇಳು:

ಅಂತರಿಂದ್ರಿಯ ನಿಗ್ರಹ, ಬಹಿರಿಂದ್ರಿಯ ನಿಗ್ರಹ, ತಪಸ್ಸು, ಪವಿತ್ರತೆ, ಸಂತೋಷ, ಕ್ಷಮಾಶೀಲತೆ, ಸರಳತೆ, ನನ್ನಲ್ಲಿ ಭಕ್ತಿಭಾವ, ದಯೆ, ಸತ್ಯ–ಇವು ಬ್ರಾಹ್ಮಣವರ್ಣದ ಸ್ವಭಾವಗಳು. ತೇಜಸ್ಸು, ಬಲ, ಧೈರ್ಯ, ವೀರ್ಯ, ಕ್ಷಮೆ, ಉದಾರತೆ, ಉದ್ಯೋಗಶೀಲತೆ, ಸ್ಥಿರತೆ, ಬ್ರಾಹ್ಮಣರಲ್ಲಿ ಭಕ್ತಿ ಮತ್ತು ಐಶ್ವರ್ಯಸಂಗ್ರಹ–ಇವು ಕ್ಷತ್ರಿಯನ ಸ್ವಾಭಾವಿಕವಾದ ಗುಣಗಳು. ಆಸ್ತಿಕತೆ, ದಾನಶೀಲತೆ, ದಂಭವಿಲ್ಲದೇ ಇರುವುದು, ಬ್ರಾಹ್ಮಣರ ಸೇವೆ, ಧನಸಂಗ್ರಹದಿಂದ ಸಂತುಷ್ಟಿ–ಇವು ವೈಶ್ಯವರ್ಣದ ಸ್ವಭಾವ ಗುಣಗಳು. ನಿಷ್ಕಾಪಟ್ಯದಿಂದ ದೇವತೆಗಳ, ಬ್ರಾಹ್ಮಣರ ಮತ್ತು ಗೋವುಗಳ ಸೇವೆಮಾಡುವುದು ಮತ್ತು ಅದರಿಂದ ದೊರೆತದ್ದರಲ್ಲಿ ಸಂತೃಪ್ತಿಪಡುವುದು–ಇವುಗಳು ಶೂದ್ರವರ್ಣದ ಸ್ವಭಾವಗುಣಗಳು. ಕೊಳಕುತನ, ಸುಳ್ಳು ಹೇಳುವುದು, ಕಳ್ಳತನ, ನಾಸ್ತಿಕತೆ, ಕಾರಣವಿಲ್ಲದೆ ಕಲಹ, ಕಾಮ, ಕ್ರೋಧ, ದುರಾಶೆ–ಇವೇ ಮೊದಲಾದುವುಗಳು ನಾಲ್ಕು ವರ್ಣಗಳಿಗೂ ಸೇರದ ಪರಮಾಧರ್ಮಿಗಳ ಸ್ವಭಾವಗುಣಗಳಾಗಿವೆ.

**ಅಹಿಂಸಾ ಸತ್ಯಮಸ್ತೇಯಮಕಾಮಕ್ರೋಧಲೋಭತಾ ।**
**ಭೂತಪ್ರಿಯಹಿತೇಹಾ ಚ ಧರ್ಮೋಽಯಂ ಸಾರ್ವವರ್ಣಿಕಃ ॥೨೧॥**

ಮನಸ್ಸಿನಿಂದ, ಮಾತಿನಿಂದ ಮತ್ತು ಶರೀರದಿಂದ ಯಾರೊಬ್ಬರನ್ನೂ ಹಿಂಸಿಸದೇ ಇರುವುದು, ಸತ್ಯನಿಷ್ಠೆ, ಕಳ್ಳತನ ಮಾಡದೇ ಇರುವುದು, ಕಾಮ ಕ್ರೋಧ-ಲೋಭಗಳು ಇಲ್ಲದೇ ಇರುವುದು, ಪ್ರಾಣಿಗಳಿಗೆ ಹಿತವನ್ನುಂಟು ಮಾಡುವುದರಲ್ಲಿ ಅಪೇಕ್ಷೆ–ಇವು ಸರ್ವವರ್ಣಸಾಧಾರಣವಾದ ಧರ್ಮಗಳು. ಬ್ರಾಹ್ಮಣ-ಕ್ಷತ್ರಿಯ ಮತ್ತು ವೈಶ್ಯರು ಗರ್ಭಾಧಾನಾದಿ ಸಂಸ್ಕಾರಕ್ರಮದಿಂದ

ಉಪನಯನಸಂಸ್ಕಾರದಿಂದ ಎರಡನೆಯ ಜನ್ಮವನ್ನು ಪಡೆದು ಜಿತೇಂದ್ರಿಯರಾಗಿ ಗುರುಕುಲದಲ್ಲಿ ವಾಸಮಾಡಬೇಕು. ಆಚಾರ್ಯರು ಕರೆದಾಗ ಅವರ ಬಳಿಗೆ ಹೋಗಿ ವೇದಾಧ್ಯಯನವನ್ನು ಮಾಡಬೇಕು ಮತ್ತು ವೇದಾರ್ಥವನ್ನು ತಿಳಿದುಕೊಳ್ಳಬೇಕು. ವೇದಾಧ್ಯಯನದಲ್ಲಿ ನಿರತನಾದ ವಟುವು ಮೌಂಜಿಯನ್ನು ಧರಿಸಿರಬೇಕು. ಕೃಷ್ಣಾಜಿನವನ್ನೂ, ವರ್ಣಾನುಕ್ರಮವಾದ ಪಲಾಶಾದಿದಂಡಗಳನ್ನೂ, ಅಕ್ಷಮಾಲೆಯನ್ನೂ, ಯಜ್ಞೋಪವೀತವನ್ನೂ, ಕಮಂಡಲುವನ್ನೂ ಧರಿಸಿರಬೇಕು. ಜಟಾಧಾರಿಯಾಗಿರಬೇಕು. ಹಲ್ಲುಜ್ಜುವುದಕ್ಕೂ ಬಟ್ಟೆ ಒಗೆಯುವುದಕ್ಕೂ ಹೆಚ್ಚು ಸಮಯವನ್ನು ಬಳಸಬಾರದು. ಕೆಂಪುಬಣ್ಣದಿಂದ ಕೂಡಿರದ ಆಸನದಲ್ಲಿ ಪವಿತ್ರಪಾಣಿಯಾಗಿ ಕುಳಿತುಕೊಳ್ಳಬೇಕು. ಸ್ನಾನಮಾಡುವಾಗಲೂ, ಭೋಜನಮಾಡುವಾಗಲೂ, ಹೋಮ-ಜಪ ಕಾಲಗಳಲ್ಲಿಯೂ, ಮಲ-ಮೂತ್ರಗಳನ್ನು ವಿಸರ್ಜಿಸುವ ಸಮಯದಲ್ಲಿಯೂ ಮಾತನಾಡಬಾರದು. ಮೌನಿಯಾಗಿರಬೇಕು. ಬ್ರಹ್ಮಚಾರಿಯಾದವನು ಉಗುರುಗಳನ್ನೂ, ಕಂಕುಳಿನ ಮತ್ತು ಗುಹ್ಯಸ್ಥಾನಗಳಲ್ಲಿರುವ ರೋಮಗಳನ್ನೂ ಕತ್ತರಿಸಿಕೊಳ್ಳಬಾರದು.

**ರೇತೋ ನಾವಕಿರೇಜ್ಜಾತು ಬ್ರಹ್ಮವ್ರತಧರಃ ಸ್ವಯಮ್ ।**
**ಅವಕೀರ್ಣೇಽವಗಾಹ್ಯಾಪ್ಸು ಯತಾಸುಸ್ತ್ರಿಪದೀಂ ಜಪೇತ್ ॥೨೫॥**

ಬ್ರಹ್ಮಚರ್ಯವ್ರತವನ್ನು ನಿಷ್ಠೆಯಿಂದ ಪರಿಪಾಲಿಸುತ್ತಿದ್ದು ಯಾವುದೇ ಸಮಯದಲ್ಲಿಯೂ ವೀರ್ಯಸ್ಖಲನವಾಗದಂತೆ ನೋಡಿಕೊಳ್ಳಬೇಕು. ಸ್ವಪ್ನವೇ ಮುಂತಾದ ಕಾರಣಗಳಿಂದ ಅಕಸ್ಮಾತ್ತಾಗಿ ವೀರ್ಯ ಸ್ಖಲನವಾಗಿಬಿಟ್ಟರೆ ವಟುವು ಒಡನೆಯೇ ನೀರಿನಲ್ಲಿ ಮುಳುಗಿ ಸ್ನಾನಮಾಡಿ ಪ್ರಾಣಾಯಾಮಪೂರ್ವಕವಾಗಿ ಗಾಯತ್ರೀಮಂತ್ರವನ್ನು ಜಪಿಸಬೇಕು.

**ಅಗ್ನ್ಯರ್ಕಾಚಾರ್ಯಗೋವಿಪ್ರಗುರುವೃದ್ಧಸುರಾನ್ಶುಚಿಃ ।**
**ಸಮಾಹಿತ ಉಪಾಸೀತ ಸನ್ಧ್ಯೇ ಚ ಯತವಾಗ್ಜಪನ್ ॥೨೬॥**

ಬ್ರಹ್ಮಚಾರಿಯು ಸದಾಶುಚಿಯಾಗಿದ್ದು ಏಕಾಗ್ರಚಿತ್ತನಾಗಿ ಅಗ್ನಿ, ಸೂರ್ಯ, ಆಚಾರ್ಯ, ಗೋವುಗಳು, ಬ್ರಾಹ್ಮಣರು, ಗುರುಗಳು, ವೃದ್ಧರು,

ದೇವತೆಗಳು–ಇವರನ್ನು ಸೇವಿಸುತ್ತಾ ಎರಡು ಸಂಧ್ಯಾಕಾಲಗಳಲ್ಲಿಯೂ ಮೌನದಿಂದಿದ್ದು ಸಂಧ್ಯಾವಂದನೆಯನ್ನು ಆಚರಿಸಬೇಕು.*

**ಆಚಾರ್ಯಂ ಮಾಂ ವಿಜಾನೀಯಾನ್ನಾವಮನ್ಯೇತ ಕರ್ಹಿಚಿತ್ ।**
**ನ ಮರ್ತ್ಯಬುದ್ಧ್ಯಾಸೂಯೇತ ಸರ್ವದೇವಮಯೋ ಗುರುಃ ॥೨೭॥**

ಈಶ್ವರನಾದ ನಾನೇ ಆಚಾರ್ಯನೆಂದು ತಿಳಿಯಬೇಕು. ಆಚಾರ್ಯ ಸ್ವರೂಪದಲ್ಲಿ ನಾನೇ ಇರುವೆನೆಂದು ತಿಳಿಯಬೇಕು. ಆದುದರಿಂದ ಯಾವುದೇ ಕಾರಣದಿಂದಲೂ ಆಚಾರ್ಯನನ್ನು ಅವಮಾನಿಸಬಾರದು. ಸಾಮಾನ್ಯ ಮನುಷ್ಯನ ಬುದ್ಧಿಯನ್ನು ಅನುಸರಿಸಿ ಗುರುವಿನಲ್ಲಿ ದೋಷವೆಣಿಸಬಾರದು. ಗುರುವೆಂದರೆ ಸಕಲದೇವತಾಸ್ವರೂಪನೇ ಆಗಿದ್ದಾನೆ.

**ಸಾಯಂ ಪ್ರಾತರುಪಾನೀಯ ಭೈಕ್ಷ್ಯಂ ತಸ್ಮೈ ನಿವೇದಯೇತ್ ।**
**ಯಚ್ಚಾನ್ಯದಪ್ಯನುಜ್ಞಾತಮುಪಯುಞ್ಜೀತ ಸಂಯತಃ ॥೨೮॥**

ಸಾಯಂಕಾಲಗಳಲ್ಲಿ ಮತ್ತು ಪ್ರಾತಃಕಾಲಗಳಲ್ಲಿ ಭಿಕ್ಷಾನ್ನವನ್ನು ತಂದು ಗುರುವಿಗೆ ಒಪ್ಪಿಸಬೇಕು. ಭಿಕ್ಷಾನ್ನವು ಮಾತ್ರವಲ್ಲದೆ ಬೇರೇನಾದರೂ ದೊರೆತರೂ ಅದನ್ನೂ ಕೂಡ ಬ್ರಹ್ಮಚಾರಿಯು ಗುರುಗಳಿಗೆ ಒಪ್ಪಿಸಬೇಕು. ಅನಂತರ ಗುರುಗಳ ಆಜ್ಞಾನುಸಾರವಾಗಿ ಅತ್ಯಂತ ಸಂಯಮದಿಂದ ಭಿಕ್ಷಾನ್ನವನ್ನು ಯಥೋಚಿತವಾಗಿ ಉಪಯೋಗಿಸಿಕೊಳ್ಳಬೇಕು.

**ಶುಶ್ರೂಷಮಾಣ ಆಚಾರ್ಯಂ ಸದೋಪಾಸೀತ ನೀಚವತ್ ।**
**ಯಾನಶಯ್ಯಾಸನಸ್ಥಾನೈರ್ನಾತಿದೂರೇ ಕೃತಾಞ್ಜಲಿಃ ॥೨೯॥**

ಆಚಾರ್ಯನು ಪ್ರಯಾಣಹೊರಟರೆ ಅವರ ವಸ್ತುಗಳನ್ನು ಹೊತ್ತು ಕೊಂಡು ತಾನೂ ಅವರ ಹಿಂದೆ ಹೋಗಬೇಕು. ಅವರು ಮಲಗಿದರೆ ಅವರಿಗೆ ಸ್ವಲ್ಪದೂರದಲ್ಲಿಯೇ ತಾನೂ ಮಲಗಬೇಕು. ಅವರು ಆಯಾಸಗೊಂಡಿದ್ದರೆ ಅವರ ಬಳಿಯಲ್ಲೇ ಕುಳಿತು ಕೈ-ಕಾಲುಗಳನ್ನು ಅಮುಕುತ್ತಾ ಶುಶ್ರೂಷೆ

* ಆಚಾರ್ಯ–ವೇದವನ್ನು ಹೇಳಿಕೊಡುವವರು. ಗುರು : ಶಾಸ್ತ್ರಗಳನ್ನು ಹೇಳಿ ಕೊಡುವವರು. ಮಂತ್ರವ್ಯಾಖ್ಯಾನ ಮಾಡುವವನು ಆಚಾರ್ಯ. ಬ್ರಹ್ಮಜ್ಞಾನವನ್ನು ಕೊಡುವವನು ಗುರು–ಎಂಬ ವಿವರಣೆಯೂ ಇದೆ.

ಮಾಡಬೇಕು. ಆಚಾರ್ಯರು ಕುಳಿತಿದ್ದರೆ ಅವರ ಆಜ್ಞೆಯನ್ನು ನಿರೀಕ್ಷಿಸುತ್ತಾ ಕೈಜೋಡಿಸಿಕೊಂಡು ಅವರ ಪಕ್ಕದಲ್ಲಿಯೇ ನಿಂತಿರಬೇಕು. ಹೀಗೆ ತಾನು ಅವರ ಶಿಷ್ಯರಲ್ಲಿ ಅತ್ಯಂತಕನಿಷ್ಠನೆಂದು ಭಾವಿಸಿಕೊಂಡು ಅವರ ಸೇವೆಯಲ್ಲಿ ಸದಾ ತತ್ಪರನಾಗಿರಬೇಕು.

ಹೀಗೆ ವಿದ್ಯಾಭ್ಯಾಸವು ಮುಗಿಯುವವರೆಗೂ ಅಖಂಡವಾದ ಬ್ರಹ್ಮ ಚರ್ಯವ್ರತದಿಂದಿರುತ್ತಾ ಶುಶ್ರೂಷಾನಿಯಮವನ್ನು ಪರಿಪಾಲಿಸುತ್ತಾ ಸಕಲ ವಾದ ಸುಖೋಪಭೋಗಗಳಿಂದಲೂ ವರ್ಜಿತನಾಗಿ ಗುರುಕುಲದಲ್ಲಿರಬೇಕು.

**ಯದ್ಯಸೌ ಛಂದಸಾಂ ಲೋಕಮಾರೋಕ್ಷ್ಯನ್ಬ್ರಹ್ಮವಿಷ್ಟಪಮ್ ।**
**ಗುರವೇ ವಿನ್ಯಸೇದ್ದೇಹಂ ಸ್ವಾಧ್ಯಾಯಾರ್ಥಂ ಬೃಹದ್ವ್ರತಃ ॥೩೧॥**

ಒಂದು ವೇಳೆ ಬ್ರಹ್ಮಚಾರಿಯು ವೇದಗಳ ನೆಲೆಯಾದ ಬ್ರಹ್ಮಲೋಕಕ್ಕೆ ಹೋಗಲು ಬಯಸುವುದಾದರೆ ಸಾಂಗೋಪಾಂಗವಾದ ಅಧ್ಯಯನಕ್ಕಾಗಿ ನೈಷ್ಠಿಕಬ್ರಹ್ಮಚರ್ಯವೆಂಬ ಮಹಾವ್ರತವನ್ನು ಕೈಗೊಂಡು ತನ್ನನ್ನು ಸಂಪೂರ್ಣವಾಗಿ ಗುರುವಿನ ಸೇವೆಗಾಗಿಯೇ ಅರ್ಪಿಸಿಕೊಂಡುಬಿಡಬೇಕು. ಆಜೀವಪರ್ಯಂತವಾಗಿ ಗುರುಕುಲದಲ್ಲಿಯೇ ಇದ್ದುಬಿಡಬೇಕು.

**ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷು ಮಾಂ ಪರಮ್ ।**
**ಅಪೃಥಗ್ಧೀರುಪಾಸೀತ ಬ್ರಹ್ಮವರ್ಚಸ್ವ್ಯಕಲ್ಮಷಃ ॥೩೨॥**

ಅಂತಹ ನೈಷ್ಠಿಕಬ್ರಹ್ಮಚರ್ಯದ ಆಚರಣೆಯಿಂದ ಸಕಲಪಾಪಗಳನ್ನೂ ಕಳೆದುಕೊಂಡು ಬ್ರಹ್ಮವರ್ಚಸ್ಸಿನಿಂದ ಸಂಪನ್ನನಾಗುವ ಆ ಶಿಷ್ಯನು ಅಗ್ನಿಯಲ್ಲಿ, ಗುರುವಿನಲ್ಲಿ, ತನ್ನಲ್ಲಿ, ಸಮಸ್ತಪ್ರಾಣಿಗಳಲ್ಲಿಯೂ ಪರಮಪುರುಷನಾದ ನನ್ನನ್ನು ಏಕೀಭಾವದಿಂದ ಕಾಣುತ್ತಾ ಗುರುವಿಗೂ-ತನಗೂ-ನನಗೂ ಯಾವುದೇ ವಿಧವಾದ ವ್ಯತ್ಯಾಸವೂ ಇಲ್ಲವೆಂದು ಭಾವಿಸಿಕೊಂಡು ನನ್ನನ್ನು ಉಪಾಸನೆಮಾಡಬೇಕು.

**ಸ್ತ್ರೀಣಾಂ ನಿರೀಕ್ಷಣಸ್ಪರ್ಶಸಂಲಾಪಕ್ಷ್ವೇಲನಾದಿಕಮ್ ।**
**ಪ್ರಾಣಿನೋ ಮಿಥುನೀಭೂತಾನಗೃಹಸ್ಥೋಽಗ್ರತಸ್ತ್ಯಜೇತ್ ॥೩೩॥**

ಗೃಹಸ್ಥರಲ್ಲದ ಬ್ರಹ್ಮಚಾರೀ, ವಾನಪ್ರಸ್ಥ ಮತ್ತು ಸಂನ್ಯಾಸಿಗಳು ಸ್ತ್ರೀಯರನ್ನು ದಿಟ್ಟಿಸಿನೋಡಬಾರದು. ಅವರನ್ನು ಮುಟ್ಟಬಾರದು.

ಅವರೊಡನೆ ಸಲ್ಲದ ಮಾತುಗಳನ್ನು ಆಡಬಾರದು. ಹಾಸ-ಪರಿಹಾಸಾದಿ ಗಳಲ್ಲಿ ತೊಡಗಬಾರದು. ಮೈಥುನದಲ್ಲಿತೊಡಗಿರುವ ಪ್ರಾಣಿಗಳನ್ನು ಕಣ್ಣೆತ್ತಿಯೂ ನೋಡಬಾರದು.

**ಶೌಚಮಾಚಮನಂ ಸ್ನಾನಂ ಸನ್ಧ್ಯೋಪಾಸನಮಾರ್ಜವಮ್ ।**
**ತೀರ್ಥಸೇವಾ ಜಪೋಽಸ್ಪೃಶ್ಯಾಭಕ್ಷ್ಯಾಸಮ್ಭಾಷ್ಯವರ್ಜನಮ್ ॥೩೪॥**

**ಸರ್ವಾಶ್ರಮಪ್ರಯುಕ್ತೋಽಯಂ ನಿಯಮಃ ಕುಲನನ್ದನ ।**
**ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯಸಂಯಮಃ ॥೩೫॥**

ಉದ್ಧವ! ಶುಚಿತ್ವ, ಆಚಮನ, ಸ್ನಾನ, ಸಂಧ್ಯಾವಂದನೆ, ಸರಳತೆ, ತೀರ್ಥಸೇವನೆ, ಜಪ, ಮುಟ್ಟಬಾರದ ವಸ್ತುಗಳನ್ನು ಮುಟ್ಟದೇ ಇರುವುದು, ತಿನ್ನಬಾರದ ಆಹಾರಪದಾರ್ಥಗಳನ್ನು ತಿನ್ನದೇ ಇರುವುದು, ಆಡಬಾರದ ಮಾತುಗಳನ್ನು ಆಡದೇ ಇರುವುದು, ಸಮಸ್ತಪ್ರಾಣಿಗಳಲ್ಲಿಯೂ ನಾನೇ ಇರುವೆನೆಂದು ಭಾವಿಸಿಕೊಳ್ಳುವುದು, ಮಾತು, ಮನಸ್ಸು ಮತ್ತು ಶರೀರಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದು–ಈ ನಿಯಮಗಳು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಿ–ಎಲ್ಲರಿಗೂ ಸಮಾನವಾಗಿವೆ. ಎಲ್ಲರೂ ಈ ನಿಯಮಗಳನ್ನು ಅಗತ್ಯವಾಗಿ ಪರಿಪಾಲಿಸಬೇಕು.

**ಏವಂ ಬೃಹದ್ವ್ರತಧರೋ ಬ್ರಾಹ್ಮಣೋಽಗ್ನಿರಿವ ಜ್ವಲನ್ ।**
**ಮದ್ಭಕ್ತಸ್ತೀವ್ರತಪಸಾ ದಗ್ಧಕರ್ಮಾಶಯೋಽಮಲಃ ॥೩೬॥**

ಹೀಗೆ ಮಹಾವ್ರತವನ್ನು ಕೈಗೊಂಡ ಬ್ರಾಹ್ಮಣನು ಅಗ್ನಿಯಂತೆ ಅನುಪಮವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಾ ತೀವ್ರವಾದ ಮತ್ತು ದೀರ್ಘಕಾಲದ ತಪಸ್ಸಿನಿಂದ ಕರ್ಮರಾಶಿಯನ್ನು ಸುಟ್ಟುಹಾಕಿ ನಿಷ್ಪಾಪನಾಗಿ ಮತ್ತು ನಿರ್ಮಲನಾಗಿ ನನ್ನ ಭಕ್ತನಾಗಿ ಕಡೆಯಲ್ಲಿ ನನ್ನನ್ನೇ ಸೇರುತ್ತಾನೆ.

**ಅಥಾನನ್ತರಮಾವೇಕ್ಷ್ಯನ್ ಯಥಾ ಜಿಜ್ಞಾಸಿತಾಗಮಃ ।**
**ಗುರವೇ ದಕ್ಷಿಣಾಂ ದತ್ತ್ವಾ ಸ್ನಾಯಾದ್ಗುರ್ವನುಮೋದಿತಃ ॥೩೭॥**

ಉದ್ಧವ! ನೈಷ್ಠಿಕಬ್ರಹ್ಮಚರ್ಯವ್ರತವನ್ನು ಕೈಗೊಳ್ಳಲು ಇಚ್ಛೆ ಯಿಲ್ಲದೆ ಗೃಹಸ್ಥನಾಗುವ ಆಶಯವಿದ್ದರೆ, ವಿಧಿಪೂರ್ವಕವಾಗಿ ವೇದಾ ಧ್ಯಯನವನ್ನು ಸಮಾಪ್ತಗೊಳಿಸಿ, ಆಚಾರ್ಯರಿಗೆ ಗುರುದಕ್ಷಿಣೆಯನ್ನಿತ್ತು

ಅವರ ಅನುಮತಿಯನ್ನು ಪಡೆದುಕೊಂಡು, ಸಮಾವರ್ತನಸಂಸ್ಕಾರವನ್ನು ಮಾಡಿಕೊಂಡು ಸ್ನಾತಕನಾಗಿ ಬ್ರಹ್ಮಚರ್ಯಾಶ್ರಮವನ್ನು ಬಿಡಬೇಕು.

**ಗೃಹಂ ವನಂ ವೋಪವಿಶೇತ್ ಪ್ರವ್ರಜೇದ್ವಾ ದ್ವಿಜೋತ್ತಮಃ ।**
**ಆಶ್ರಮಾದಾಶ್ರಮಂ ಗಚ್ಛೇನ್ನಾನ್ಯಥಾ ಮತ್ಪರಶ್ಚರೇತ್ ॥೩೮॥**

ಬ್ರಹ್ಮಚರ್ಯಾಶ್ರಮವನ್ನು ಬಿಟ್ಟನಂತರ ಮದುವೆಯನ್ನು ಮಾಡಿಕೊಂಡು ಗೃಹಸ್ಥಾಶ್ರಮವನ್ನಾದರೂ ಸ್ವೀಕರಿಸಬಹುದು. ಚಿತ್ತಶುದ್ಧಿಯನ್ನು ಬಯಸಿ ವಾನಪ್ರಸ್ಥಾಶ್ರಮವನ್ನಾದರೂ ಸ್ವೀಕರಿಸಬಹುದು. ಬ್ರಾಹ್ಮಣನು ಚಿತ್ತಶುದ್ಧನೇ ಆಗಿದ್ದರೆ ಬ್ರಹ್ಮಚರ್ಯಾಶ್ರಮದಿಂದ ನೇರವಾಗಿ ಸಂನ್ಯಾಸಾಶ್ರಮವನ್ನೇ ಸ್ವೀಕರಿಸಬಹುದು. ಅಥವಾ ಅನುಕ್ರಮವಾಗಿ ಒಂದು ಆಶ್ರಮದಿಂದ ಮತ್ತೊಂದು ಆಶ್ರಮಕ್ಕೆ ಹೋಗಬಹುದು. ನನ್ನ ಭಕ್ತನಾದವನು ಆಶ್ರಮರಹಿತನಾಗಿ ವ್ಯತ್ಯಸ್ತವಾದ ರೀತಿಯಲ್ಲಿ ವ್ಯವಹರಿಸಬಾರದು.

**ಗೃಹಾರ್ಥೀ ಸದೃಶೀಂ ಭಾರ್ಯಾಮುದ್ವಹೇದಜುಗುಪ್ಸಿತಾಮ್ ।**
**ಯವೀಯಸೀಂ ತು ವಯಸಾ ತಾಂ ಸವರ್ಣಾಮನು ಕ್ರಮಾತ್ ॥೩೯॥**

ಬ್ರಹ್ಮಚರ್ಯಾಶ್ರಮವಾದನಂತರ ಗೃಹಸ್ಥಾಶ್ರಮವನ್ನು ಬಯಸುವ ಬ್ರಹ್ಮಚಾರಿಯು ತನಗೆ ಅನುರೂಪಳಾದ, ಶಾಸ್ತ್ರೀಯಲಕ್ಷಣಗಳಿಂದ ಸಂಪನ್ನಳಾದ ಕುಲೀನೆಯಾದ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು. ತನಗಿಂತ ಚಿಕ್ಕವಳೂ ತನ್ನ ವರ್ಣದವಳೂ ಆದ ಕನ್ಯೆಯನ್ನು ಕ್ರಮಾನುಸಾರ ಮದುವೆಮಾಡಿಕೊಳ್ಳಬೇಕು. (ಸವರ್ಣೆಯನ್ನು ಮದುವೆಯಾದನಂತರ ಇಚ್ಛೆಯಿದ್ದರೆ, ತನಗಿಂತ ಕೆಳವರ್ಣದ ಕನ್ಯೆಯನ್ನು ಅನುಕ್ರಮವಾಗಿ ಮದುವೆಯಾಗಬಹುದು.)

**ಇಜ್ಯಾಧ್ಯಯನದಾನಾನಿ ಸರ್ವೇಷಾಂ ಚ ದ್ವಿಜನ್ಮನಾಮ್ ।**
**ಪ್ರತಿಗ್ರಹೋಽಧ್ಯಾಪನಂ ಚ ಬ್ರಾಹ್ಮಣಸ್ಯೈವ ಯಾಜನಮ್ ॥೪೦॥**

ದ್ವಿಜರಾದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಗೆ ಯಜನ, ಅಧ್ಯಯನ ಮತ್ತು ದಾನ ಈ ಮೂರು ಕರ್ಮಗಳೂ ಸಮಾನವಾಗಿವೆ. ದ್ವಿಜರೆಲ್ಲರೂ ಈ ಮೂರು ಕರ್ಮಗಳನ್ನೂ ಅವಶ್ಯವಾಗಿ ಮಾಡಬೇಕು. ಆದರೆ ಪ್ರತಿಗ್ರಹ,

ಅಧ್ಯಾಪನ ಮತ್ತು ಯಾಜನ ಈ ಮೂರು ಕರ್ಮಗಳು ಬ್ರಾಹ್ಮಣನಿಗೆ ಮಾತ್ರವೇ ಮೀಸಲಾಗಿವೆ.

**ಪ್ರತಿಗ್ರಹಂ ಮನ್ಯಮಾನಸ್ತಪಸ್ತೇಜೋಯಶೋನುದಮ್ ।**
**ಅನ್ಯಾಭ್ಯಾಮೇವ ಜೀವೇತ ಶಿಲೈರ್ವಾ ದೋಷದೃಕ್ ತಯೋಃ ॥೪೧॥**

ದಾನತೆಗೆದುಕೊಳ್ಳುವುದು ತಪಸ್ಸನ್ನೂ, ತೇಜಸ್ಸನ್ನೂ, ಕೀರ್ತಿಯನ್ನೂ ಅಪಹರಿಸುವುದೆಂದೇ ಭಾವಿಸುವುದಾದರೆ ಪ್ರತಿಗ್ರಹವನ್ನು ಬಿಟ್ಟು ಕೇವಲ ಅಧ್ಯಾಪನ-ಯಾಜನಾದಿಗಳಿಂದಲೇ ಬ್ರಾಹ್ಮಣನು ಜೀವನವನ್ನು ನಿರ್ವಹಿಸ ಬಹುದು. ಅಧ್ಯಾಪನ-ಯಾಜನಗಳಲ್ಲಿಯೂ ದೋಷವಿರುವುದೆಂದು ಭಾವಿಸುವುದಾದರೆ ಬ್ರಾಹ್ಮಣನು ಉಂಛಶಿಲ* ವೃತ್ತಿಗಳಿಂದಾದರೂ ಜೀವನ ವನ್ನು ನಿರ್ವಹಿಸಬಹುದು.

**ಬ್ರಾಹ್ಮಣಸ್ಯ ಹಿ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।**
**ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನನ್ತಸುಖಾಯ ಚ ॥೪೨॥**

ಬ್ರಾಹ್ಮಣನ ಶರೀರವು ಅತ್ಯಂತ ದುರ್ಲಭವಾದುದು ಮತ್ತು ಅಮೋಘವಾದುದು. ತುಚ್ಛವಾದ ವಿಷಯೋಪಭೋಗಗಳನ್ನು ಭೋಗಿಸು ವುದಕ್ಕಾಗಿ ಹುಟ್ಟಿದುದಲ್ಲ; ಈ ಬ್ರಾಹ್ಮಣಶರೀರವು ಕಷ್ಟಪಡುವುದಕ್ಕಾ ಗಿಯೂ, ಕಷ್ಟಪಟ್ಟು ಕಠೋರವಾದ ತಪಸ್ಸುಗಳನ್ನು ಆಚರಿಸುವುದಕ್ಕಾಗಿಯೂ, ಅದರ ಫಲವಾಗಿ ಮರಣಾನಂತರದಲ್ಲಿ ಅನಂತವಾದ ಸುಖವನ್ನು ಅನುಭವಿಸುವ ಸಲುವಾಗಿಯೂ ಉತ್ಪತ್ತಿಯಾಗಿದೆ.

**ಶಿಲೋಞ್ಛವೃತ್ತ್ಯಾ ಪರಿತುಷ್ಟಚಿತ್ತೋ**
**ಧರ್ಮಂ ಮಹಾನ್ತಂ ವಿರಜಂ ಜುಷಾಣಃ ।**
**ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠ-**
**ನ್ನಾತಿಪ್ರಸಕ್ತಃ ಸಮುಪೈತಿ ಶಾನ್ತಿಮ್ ॥೪೩॥**

ಯಾವ ಬ್ರಾಹ್ಮಣನು ತನ್ನ ಮಹತ್ತಾದ ಮತ್ತು ಪರಿಶುದ್ಧವಾದ

---

* ಉಞ್ಛಶಿಲ–ಯಜಮಾನನು ಧಾನ್ಯವನ್ನು ತೆಗೆದುಕೊಂಡ ನಂತರ ಕೆಳಗೆ ಬಿದ್ದಿರುವ ಕಾಳುಗಳನ್ನು ಆರಿಸಿಕೊಳ್ಳುವುದು ಉಂಛವೃತ್ತಿ. ಭಿಕ್ಷಾಪಾತ್ರೆಗೆ ಇತರರು ತಾವಾಗಿಯೇ ಅರ್ಪಿಸುವ ಧಾನ್ಯದಿಂದ ಪಂಚಮಹಾಯಜ್ಞಗಳನ್ನು ಮಾಡಿ ಶೇಷವನ್ನು ಸ್ವೀಕರಿಸುವ ವೃತ್ತಿಗೆ ಶಿಲವೃತ್ತಿ–ಎಂದು ಹೆಸರು.

ಧರ್ಮವನ್ನು ನಿಷ್ಕಾಮಭಾವದಿಂದ ಪರಿಪಾಲಿಸುವನೋ, ಶಿಲವೃತ್ತಿ-ಉಂಛವೃತ್ತಿಗಳಿಂದಲೇ ಜೀವನವನ್ನು ನಿರ್ವಹಿಸುವನೋ, ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿರುವವನೋ, ನನ್ನನ್ನು ಬಿಟ್ಟು ಉಳಿದ ಎಲ್ಲರಲ್ಲಿಯೂ ನಿರಾಸಕ್ತನಾಗಿರುವವನೋ ಅಂತಹವನು ಸಂನ್ಯಾಸಿಯಾಗದೆ ಗೃಹಸ್ಥಾಶ್ರಮ ದಲ್ಲಿಯೇ ಇದ್ದರೂ ಪರಮಶಾಂತಿರೂಪವಾದ ನನ್ನ ಪರಮಪದವನ್ನು ಸೇರುತ್ತಾನೆ.

**ಸಮುದ್ಧರನ್ತಿ ಯೇ ವಿಪ್ರಂ ಸೀದನ್ತಂ ಮತ್ಪರಾಯಣಮ್ ।**
**ತಾನುದ್ಧರಿಷ್ಯೇ ನಚಿರಾದಾಪದ್ಭ್ಯೋ ನೌರಿವಾರ್ಣವಾತ್ ॥೪೪॥**

ನನ್ನನ್ನೇ ಪರಮಾಶ್ರಯನನ್ನಾಗಿ ಭಾವಿಸಿರುವ ಬ್ರಾಹ್ಮಣನು ಆಪತ್ತಿನಲ್ಲಿ ಸಿಕ್ಕಿಹಾಕಿಕೊಂಡಾಗ ಆತನನ್ನು ಯಾರು ರಕ್ಷಿಸುವರೋ ಅಂತಹವರನ್ನು ನಾನು–ಸಮುದ್ರದಲ್ಲಿ ಬಿದ್ದಿರುವ ಪ್ರಾಣಿಯನ್ನು ನೌಕೆಯು ರಕ್ಷಿಸು ವಂತೆ–ಬಹಳಬೇಗ ಆಪತ್ತುಗಳಿಂದ ಪಾರುಮಾಡುತ್ತೇನೆ.

**ಸರ್ವಾಃ ಸಮುದ್ಧರೇದ್ರಾಜಾ ಪಿತೇವ ವ್ಯಸನಾತ್ಪ್ರಜಾಃ ।**
**ಆತ್ಮಾನಮಾತ್ಮನಾ ಧೀರೋ ಯಥಾ ಗಜಪತಿರ್ಗಜಾನ್ ॥೪೫॥**

ರಾಜನಾದವನು, ತಂದೆಯಂತೆ ತನ್ನ ಸಮಸ್ತಪ್ರಜೆಗಳನ್ನೂ ಕಷ್ಟಗಳಿಂದ ಉದ್ಧರಿಸಬೇಕು. ಧೀರನಾದ ರಾಜನು ತನ್ನನ್ನು ತಾನೇ ಶತ್ರುಗಳಿಂದ ಸಂರಕ್ಷಿಸಿಕೊಳ್ಳುತ್ತಾ–ಗಜರಾಜನು ಸಮಯದಲ್ಲಿ ಇತರ ಆನೆಗಳನ್ನು ರಕ್ಷಿಸುವಂತೆ–ತನ್ನನ್ನು ರಕ್ಷಿಸಿಕೊಳ್ಳುವುದಲ್ಲದೆ ಪ್ರಜೆಗಳನ್ನೂ ರಕ್ಷಿಸಬೇಕು.

**ಏವಂವಿಧೋ ನರಪತಿರ್ವಿಮಾನೇನಾರ್ಕವರ್ಚಸಾ ।**
**ವಿಧೂಯೇಹಾಶುಭಂ ಕೃತ್ಸ್ನ ಮಿನ್ದ್ರೇಣ ಸಹ ಮೋದತೇ ॥೪೬॥**

ಯಾವ ರಾಜನು ಹೀಗೆ ಪ್ರಜೆಗಳನ್ನು ಆಪತ್ತಿನಿಂದ ರಕ್ಷಿಸುವನೋ ಆತನು ತನ್ನ ಸಮಸ್ತವಾದ ಪಾಪಗಳಿಂದಲೂ ಮುಕ್ತನಾಗಿ, ಅವಸಾನಾ ನಂತರದಲ್ಲಿ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಇಂದ್ರನೊಡನೆ ಕೂಡಿಕೊಂಡು ಸ್ವರ್ಗಸುಖವನ್ನು ಅನುಭವಿಸುತ್ತಾ ಆನಂದತುಂದಿಲನಾಗಿರುತ್ತಾನೆ.

**ಸೀದನ್ವಿಪ್ರೋ ವಣಿಗ್ವೃತ್ತ್ಯಾ ಪಣ್ಯೈರೇವಾಪದಂ ತರೇತ್ ।**
**ಖಡ್ಗೇನ ವಾಽಽಪದಾಕ್ರಾನ್ತೋ ನ ಶ್ವವೃತ್ತ್ಯಾ ಕಥಞ್ಚನ ॥೪೭॥**

ಒಂದು ವೇಳೆ ಬ್ರಾಹ್ಮಣನು ಪರಿಗ್ರಹ-ಅಧ್ಯಾಪನ-ಯಾಜನಗಳಿಂದ ಜೀವನವನ್ನು ನಡೆಸಲು ಅಸಮರ್ಥನಾಗಿ ವಿನಾಶವನ್ನು ಹೊಂದುವ ಪರಿಸ್ಥಿತಿಯುಂಟಾದರೆ ಅಂತಹ ಆಪತ್ತಿನಿಂದ ಪಾರಾಗುವವರೆಗೆ ವೈಶ್ಯವೃತ್ತಿಯನ್ನಾದರೂ (ಕೃಷಿ-ವಾಣಿಜ್ಯಗಳನ್ನಾದರೂ) ಅವಲಂಬಿಸಿ ಜೀವನವನ್ನು ನಿರ್ವಹಿಸಬಹುದು. ವಾಣಿಜ್ಯದಿಂದಲೂ ಜೀವನವನ್ನು ನಿರ್ವಹಿಸುವುದು ಅಸಾಧ್ಯವೆನಿಸಿದರೆ ಖಡ್ಗವನ್ನು ಹಿಡಿದಾದರೂ (ಕ್ಷತ್ರಿಯವೃತ್ತಿಯನ್ನು ಅವಲಂಬಿಸಿಯಾದರೂ) ಜೀವನವನ್ನು ನಿರ್ವಹಿಸಬಹುದು. ಆದರೆ ಶ್ವಾನವೃತ್ತಿಯೆಂದು ಕರೆಯಲ್ಪಡುವ ವೃತ್ತಿಯನ್ನು ಅವಲಂಬಿಸಿ ನೀಚರ ಸೇವೆಯಿಂದ ಜೀವನವನ್ನು ನಿರ್ವಹಿಸಬಾರದು.

**ವೈಶ್ಯವೃತ್ತ್ಯಾ ತು ರಾಜನ್ಯೋ ಜೀವೇನ್ಮೃಗಯಯಾಽಽಪದಿ ।**
**ಚರೇದ್ವಾ ವಿಪ್ರರೂಪೇಣ ನ ಶ್ವವೃತ್ತ್ಯಾ ಕಥಞ್ಚನ ॥೪೮॥**

ಕ್ಷತ್ರಿಯನು ಪ್ರಜಾಪಾಲನದ ಮೂಲಕವಾಗಿ ತನ್ನ ಜೀವನವನ್ನು ನಿರ್ವಹಿಸಲು ಸಾಧ್ಯವಾಗದಿದ್ದಾಗ ಕೆಲವು ಸಮಯದವರೆಗೆ ಮಾತ್ರ ವೈಶ್ಯವೃತ್ತಿಯನ್ನು ಆಶ್ರಯಿಸಿಯಾಗಲೀ, ಮೃಗಗಳನ್ನು ಬೇಟೆಯಾಡುವುದರಿಂದಾಗಲೀ ಬ್ರಾಹ್ಮಣರ ವೇಷವನ್ನು ಧರಿಸಿ ಬ್ರಾಹ್ಮಣರ ವೃತ್ತಿಯನ್ನು (ಭಿಕ್ಷೆಯನ್ನು ) ಅವಲಂಬಿಸಿಯಾಗಲೀ ಜೀವನವನ್ನು ನಿರ್ವಹಿಸಬಹುದು. ಆದರೆ ಸೇವಾವೃತ್ತಿಯನ್ನು ಮಾತ್ರ ಅವಲಂಬಿಸಬಾರದು.

**ಶೂದ್ರವೃತ್ತಿಂ ಭಜೇದ್ವೈಶ್ಯಃ ಶೂದ್ರಃ ಕಾರುಕಟಕ್ರಿಯಾಮ್ ।**
**ಕೃಚ್ಛ್ರಾನ್ಮುಕ್ತೋ ನ ಗರ್ಹ್ಯೇಣ ವೃತ್ತಿಂ ಲಿಪ್ಸೇತ ಕರ್ಮಣಾ ॥೪೯॥**

ವೈಶ್ಯನು ಕೂಡ ತನ್ನದಾದ ವಾಣಿಜ್ಯ ವೃತ್ತಿಯಿಂದ ಜೀವನವನ್ನು ನಿರ್ವಹಿಸಲಾಗದಿದ್ದರೆ ತಾತ್ಕಾಲಿಕವಾಗಿ ಆಪತ್ತಿನ ಪರಿಹಾರವಾಗುವವರೆಗೆ ಶೂದ್ರವೃತ್ತಿಯನ್ನಾದರೂ ಅವಲಂಬಿಸಿ ಸೇವಾವೃತ್ತಿಯಿಂದ ಜೀವನವನ್ನು ನಿರ್ವಹಿಸಬಹುದು. ಅಂತೆಯೇ ಶೂದ್ರನು ಕೂಡ ತನ್ನದಾದ ಸೇವಾವೃತ್ತಿಯಿಂದ ಜೀವನವನ್ನು ನಿರ್ವಹಿಸಲಾಗದಿದ್ದರೆ ಬಡಗಿ, ಕಮ್ಮಾರ, ಅಗಸ

ಇವರ ವೃತ್ತಿಯನ್ನು ಆಶ್ರಯಿಸಿ ಜೀವನವನ್ನು ನಡೆಸಬಹುದು. ಇವೆಲ್ಲವೂ ನಾಲ್ಕುವರ್ಣದವರೂ ಆಪತ್ಕಾಲದಲ್ಲಿ ಆಶ್ರಯಿಸಬಹುದಾದ ವೃತ್ತಿಗಳಾಗಿವೆ. ಆಪತ್ತುಗಳಿಂದ ಪಾರಾದನಂತರ ಯಾವ ವರ್ಣದವರೇ ಆಗಲೀ ನಿಮ್ನವರ್ಣದವರ ವೃತ್ತಿಯನ್ನು ಅವಲಂಬಿಸಿ ಜೀವನವನ್ನು ನಿರ್ವಹಿಸಬಾರದು.

**ವೇದಾಧ್ಯಾಯಸ್ವಧಾಸ್ವಾಹಾಬಲ್ಯನ್ನಾದ್ಯೈರ್ಯಥೋದಯಮ್ ।**
**ದೇವರ್ಷಿಪಿತೃಭೂತಾನಿ ಮದ್ರೂಪಾಣ್ಯನ್ವಹಂ ಯಜೇತ್ ॥೫೦॥**

ಗೃಹಸ್ಥನಾದವನು ಪ್ರತಿನಿತ್ಯವೂ ವೇದಾಧ್ಯಯನರೂಪವಾದ ಬ್ರಹ್ಮಯಜ್ಞವನ್ನೂ, ತರ್ಪಣರೂಪವಾದ ಪಿತೃಯಜ್ಞವನ್ನೂ, ಹವನರೂಪವಾದ ದೇವಯಜ್ಞವನ್ನೂ, ಕಾಕಬಲಿರೂಪವಾದ ಭೂತಯಜ್ಞವನ್ನೂ, ಅನ್ನದಾನರೂಪವಾದ ಅತಿಥಿಯಜ್ಞವನ್ನೂ ಮಾಡುತ್ತಾ ನನ್ನ ಸ್ವರೂಪಭೂತರೇ ಆದ ಋಷಿ-ದೇವ-ಪಿತೃ-ಮನುಷ್ಯರಿಗೂ ಮತ್ತು ಪ್ರಾಣಿಗಳಿಗೂ ಪೂಜೆಯನ್ನು ಸಲ್ಲಿಸಬೇಕು.

**ಯದೃಚ್ಛಯೋಪಪನ್ನೇನ ಶುಕ್ಲೇನೋಪಾರ್ಜಿತೇನ ವಾ ।**
**ಧನೇನಾಪೀಡಯನ್ಭೃತ್ಯಾನ್ ನ್ಯಾಯೇನೈವಾಹರೇತ ತೂನ್ ॥೫೧॥**

ಗೃಹಸ್ಥನಾದವನು ತಮ್ಮ ಸೇವಕವರ್ಗದವರನ್ನಾಗಲೀ, ಪ್ರಜಾವರ್ಗದವರನ್ನಾಗಲೀ ಧನಕ್ಕಾಗಿ ಪೀಡಿಸದೆ, ಭಗವದಿಚ್ಛೆಯಿಂದ ಪ್ರಾಪ್ತವಾದ ಅಥವಾ ತನ್ನ ವೃತ್ತಿಯಿಂದ ಸಂಗ್ರಹಿಸಲ್ಪಟ್ಟ ಶುದ್ಧವಾದ ಧನದಿಂದ ನ್ಯಾಯವಾದ ರೀತಿಯಲ್ಲಿ ಯಜ್ಞಗಳನ್ನು ಮಾಡಬೇಕು.

**ಕುಟುಮ್ಬೇಷು ನ ಸಜ್ಜೇತ ನ ಪ್ರಮಾದ್ಯೇತ್ ಕುಟುಮ್ಬ್ಯಪಿ ।**
**ವಿಪಶ್ಚಿನ್ನಶ್ವರಂ ಪಶ್ಯೇದದೃಷ್ಟಮಪಿ ದೃಷ್ಟವತ್ ॥೫೨॥**

ಕುಟುಂಬಿಯಾದರೂ (ಗೃಹಸ್ಥನಾದರೂ) ಕುಟುಂಬದಲ್ಲಿಯೇ (ಪತ್ನೀ-ಪುತ್ರರಲ್ಲಿಯೇ) ಆಸಕ್ತನಾಗಿರಬಾರದು. ಪ್ರಮತ್ತನಾಗಿರಬಾರದು. ಸದಾ ಜಾಗರೂಕನಾಗಿರಬೇಕು. ವಿದ್ವಾಂಸನಾದವನು–ಈ ಲೋಕದ ಸುಖೋಪಭೋಗಗಳೆಲ್ಲವೂ ನಶ್ವರವಾಗಿರುವಂತೆಯೇ ಸ್ವರ್ಗಲೋಕದ ಸುಖೋಪಭೋಗಗಳೂ ನಶ್ವರವಾದುದೆಂದು ತಿಳಿಯಬೇಕು.

**ಪುತ್ರದಾರಾಪ್ತಬನ್ಧೂನಾಂ ಸಙ್ಗಮಃ ಪಾನ್ಥಸಙ್ಗಮಃ ।**
**ಅನುದೇಹಂ ವಿಯನ್ತ್ಯೇತೇ ಸ್ವಪ್ನೋ ನಿದ್ರಾನುಗೋ ಯಥಾ ॥೫೩॥**

ದಾರಿಹೋಕರು ಆಕಸ್ಮಿಕವಾಗಿ ಸ್ವಲ್ಪ ಹೊತ್ತು ಒಂದೆಡೆಯಲ್ಲಿ ಸೇರಿರುವಂತೆ-ಪತ್ನೀ-ಪುತ್ರ-ಬಂಧು-ಬಳಗದವರು ಕಾಲಕರ್ಮಸಂಯೋಗದಿಂದ ಕೆಲವುಕಾಲದವರೆಗೆ ಜೊತೆಗೂಡಿಕೊಂಡಿರುತ್ತಾರೆ. ಸ್ವಪ್ನದಲ್ಲಿ ಕಾಣುವ ವ್ಯಕ್ತಿಗಳು ನಿದ್ರೆಯು ಕಳೆದೊಡನೆಯೇ ನಾಶಹೊಂದುವಂತೆ ಕುಟುಂಬದ ಜನರು ಕಾಲಾನುಕ್ರಮದಲ್ಲಿ ಒಬ್ಬೊಬ್ಬರಾಗಿ ನಾಶಹೊಂದುತ್ತಾರೆ.

**ಇತ್ಥಂ ಪರಿಮೃಶನ್ಮುಕ್ತೋ ಗೃಹೇಷ್ವತಿಥಿವದ್ವಸನ್ ।**
**ನ ಗೃಹೈರನುಬಧ್ಯೇತ ನಿರ್ಮಮೋ ನಿರಹಙ್ಕೃತಃ ॥೫೪॥**

ಹೀಗೆ ನನ್ನ ಭಕ್ತನು ವಿಚಾರಮಾಡಿ ಮನೆಯಲ್ಲಿ 'ನಾನು-ನನ್ನದು'– ಎಂದು ಯಾವುದನ್ನೂ ಹೇಳಿಕೊಳ್ಳದೆ ಹೊರಗಿನಿಂದ ಬಂದ ಅತಿಥಿಯಂತೆ ಎಲ್ಲರಲ್ಲಿಯೂ ನಿರಾಸಕ್ತನಾಗಿರಬೇಕು. ಪತ್ನೀ-ಪುತ್ರರೆಂಬ ಕುಟುಂಬದ ವ್ಯಾಮೋಹಕ್ಕೆ ಕಟ್ಟುಬೀಳಬಾರದು.

**ಕರ್ಮಭಿರ್ಗೃಹಮೇಧೀಯೈರಿಷ್ಟ್ವಾ ಮಾಮೇರ ಭಕ್ತಿಮಾನ್ ।**
**ತಿಷ್ಠೇದ್ವನಂ ವೋಪವಿಶೇತ್ ಪ್ರಜಾವಾನ್ವಾ ಪರಿವ್ರಜೇತ್ ॥೫೫॥**

ನನ್ನ ಭಕ್ತನಾದ ಗೃಹಸ್ಥನು ಗೃಹಸ್ಥಾಶ್ರಮೋಕ್ತವಾದ ಕರ್ಮಗಳ ಮೂಲಕವಾಗಿ ನನ್ನನ್ನು ಆರಾಧಿಸುತ್ತಾ ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸುತ್ತಾ ಗೃಹಸ್ಥನಾಗಿಯೇ ಇರಬಹುದು. ಪುತ್ರವಂತನಾಗಿದ್ದರೆ ವಾನಪ್ರಸ್ಥಾಶ್ರಮವನ್ನೋ ಸಂನ್ಯಾಸಾಶ್ರಮವನ್ನೋ ಸ್ವೀಕರಿಸಿ ಅರಣ್ಯಕ್ಕಾದರೂ ಹೋಗಬಹುದು.

**ಯಸ್ತ್ವಾಸಕ್ತಮತಿರ್ಗೇಹೇ ಪುತ್ರವಿತ್ತೈಷಣಾತುರಃ ।**
**ಸ್ತ್ರೈಣಃ ಕೃಪಣಧೀರ್ಮೂಢೋ ಮಮಾಹಮಿತಿ ಬಧ್ಯತೇ ॥೫೬॥**

ಯಾವ ಗೃಹಸ್ಥನು ಕುಟುಂಬದಲ್ಲಿಯೇ ಆಸಕ್ತವಾದ ಮನಸ್ಸಿನಿಂದ ಕೂಡಿರುವನೋ ಪುತ್ರರಬಯಕೆ, ಹಣದಬಯಕೆ, ಹೆಂಡಿರಬಯಕೆ–ಎಂಬ ಮೂರು ಬಯಕೆಗಳಿಂದ ಪೀಡಿಸಲ್ಪಡುತ್ತಿರುವನೋ, ಸ್ತ್ರೀಲಂಪಟನಾಗಿರುವನೋ, ಕೃಪಣ ಬುದ್ಧಿಯನ್ನು ಹೊಂದಿರುವನೋ ಅಂತಹಮೂರ್ಖನು

ಎಲ್ಲವನ್ನೂ 'ನಾನು-ನನ್ನದು'–ಎಂದು ಭಾವಿಸಿಕೊಳ್ಳುತ್ತಾ ಸಂಸಾರವೆಂಬ ಪಾಶದಿಂದ ಬಂಧಿಸಲ್ಪಡುತ್ತಾನೆ.

**ಅಹೋ ಮೇ ಪಿತರೌ ವೃದ್ಧೌ ಭಾರ್ಯಾ ಬಾಲಾತ್ಮಜಾಽತ್ಮಜಾಃ ।**
**ಅನಾಥಾ ಮಾಮೃತೇ ದೀನಾಃ ಕಥಂ ಜೀವನ್ತಿ ದುಃಖಿತಾಃ ॥೫೭॥**

ಮೂಢನಾದ ಗೃಹಸ್ಥನು ಹೀಗೆ ಹೇಳಿಕೊಂಡು ಹಲುಬುತ್ತಿರುತ್ತಾನೆ. "ಅಯ್ಯೋ! ನಾನಿಲ್ಲದಿದ್ದರೆ ಮುದುಕರಾಗಿರುವ ನನ್ನ ತಂದೆ-ತಾಯಿಗಳ ಗತಿಯೇನು? ಅವರನ್ನು ನೋಡಿಕೊಳ್ಳುವವರು ಯಾರಿದ್ದಾರೆ? ನನ್ನ ಹೆಂಡತಿಯಂತೂ ಇನ್ನೂ ಚಿಕ್ಕವಳು. ನಾನಿಲ್ಲದಿದ್ದರೆ ಈ ಸಂಸಾರವನ್ನು ಹೇಗೆತಾನೇ ನಿರ್ವಹಿಸುವಳು? ಈ ಚಿಕ್ಕ ಮಕ್ಕಳನ್ನು ಹೇಗೆತಾನೇ ಕಾಪಾಡುವಳು? ನಾನಿಲ್ಲದಿದ್ದರೆ ದುಃಖಪರವಶರಾಗಿ ಅನಾಥರೂ ದೀನರೂ ಆಗುವ ಈ ನನ್ನ ಮಕ್ಕಳು ಹೇಗೆ ತಾನೇ ಜೀವಿಸುವರು?"

**ಏವಂ ಗೃಹಾಶಯಾಕ್ಷಿಪ್ತಹೃದಯೋ ಮೂಢಧೀರಯಮ್ ।**
**ಅತೃಪ್ತಸ್ತಾನನುಧ್ಯಾಯನ್ಮೃತೋಽನ್ಧಂ ವಿಶತೇ ತಮಃ ॥೫೮॥**

ಹೀಗೆ ಮಂಕುಬುದ್ಧಿಯವನಾದ ಗೃಹಸ್ಥನು ಸಂಸಾರವಾಸನೆಯಿಂದ ಅಪಹರಿಸಲ್ಪಟ್ಟ ಬುದ್ಧಿಯುಳ್ಳವನಾಗಿ ಪತ್ನೀ-ಪುತ್ರರನ್ನೇ ಸದಾಕಾಲದಲ್ಲಿಯೂ ಚಿಂತಿಸುತ್ತಾ ಯಾವುದರಲ್ಲಿಯೂ 'ತೃಪ್ತಿ'–ಎಂಬುದನ್ನು ಕಾಣದೆ ಹತಾಶನಾಗಿ ಮರಣಹೊಂದಿ ಅಜ್ಞಾನದ ಕಗ್ಗತ್ತಲೆಯಲ್ಲಿ ಬೀಳುವನು. ಅನಂತರ ತಾಮಸಯೋನಿಯಲ್ಲಿ ಜನ್ಮತಾಳುವನು."

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಏಕಾದಶಸ್ಕಂಧದ ೧೭ನೆಯ ಅಧ್ಯಾಯವು ಮುಗಿಯಿತು.

**ಎಂಟನೆಯ ಸಂಪುಟವು ಮುಗಿಯಿತು.**

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



